# ಮುನ್ನುಡಿ

ಈ ಪುಸ್ತಕದ್ದು ದ್ವೈತೋದ್ದೇಶ. ಇತಿಹಾಸವನ್ನು ಆರ್ಥಿಕ ಸಿದ್ಧಾಂತದ ಮೂಲಕವೂ, ಆರ್ಥಿಕ ಸಿದ್ಧಾಂತವನ್ನು ಇತಿಹಾಸದ ಮೂಲಕವೂ ವಿವರಿಸುವ ಯತ್ನವಿದು. ಈ ಗಂಟು ಮುಖ್ಯ—ಅಲ್ಲದೆ ಅಗತ್ಯ. ಆರ್ಥಿಕ ವಿಚಾರಕ್ಕೆ ಹೆಚ್ಚು ಗಮನವನ್ನೇ ಕೊಡದಿದ್ದರೆ ಇತಿಹಾಸದ ಬೋಧನೆ ಅಪೂರ್ಣ, ಕಳಂಕಪೂರ್ಣ. ಅರ್ಥಶಾಸ್ತ್ರವನ್ನು 'ಭೀಕರ ಶಾಸ್ತ್ರ' ಎನ್ನುವುದುಂಟು. ಅರ್ಥಶಾಸ್ತ್ರವನ್ನು ಇತಿಹಾಸದ ಗಂಧವೇ ಇಲ್ಲದ ರೀತಿಯಲ್ಲಿ ಬೋಧಿಸಿದರೆ, ಅಭ್ಯಾಸ ಮಾಡಿದರೆ, ಇದು ಇನ್ನೂ ಭೀಕರವೆನಿಸೀತು. ರಿಕಾರ್ಡೋವಿನ ಗೇಣಿಯ ನಿಯಮವನ್ನು ಪ್ರತ್ಯೇಕವಾಗಿ ತೆಗೆದುಕೊಂಡದ್ದೇ ಆದರೆ, ಅದು ಬಹು ಕ್ಲಿಷ್ಟ, ನೀರಸ. ಆದರೆ ಅದನ್ನು ಚರಿತ್ರೆಯ ಕುಂದಣದಲ್ಲಿ ಇಟ್ಟು ನೋಡಿ; ಹತ್ತೊಂಬತ್ತನೆಯ ಶತಮಾನದ ಪೂರ್ವಭಾಗದ ಇಂಗ್ಲೆಂಡಿನಲ್ಲಿ ನೆಲದೊಡೆಯರಿಗೂ ಕೈಗಾರಿಕೆ ಧುರೀಣರಿಗೂ ನಡೆದ ಘರ್ಷಣೆಯಲ್ಲಿನ ಒಂದು ಕದನವಿದೆಂಬುದನ್ನು ಗುರುತಿಸಿ; ಆಗ ಈ ನಿಯಮ ಬಹು ಉದ್ರೇಕಕರವೂ ಅರ್ಥಪೂರ್ಣವೂ ಎನಿಸೀತು.

ಈ ಪುಸ್ತಕ ಸಮಗ್ರವೆಂದು ಹೇಳಿಕೊಳ್ಳುವುದಿಲ್ಲ. ಇದು ಆರ್ಥಿಕ ಇತಿಹಾಸವೂ ಅಲ್ಲ, ಅರ್ಥವಿಚಾರದ—ಅರ್ಥಚಿಂತನದ—ಇತಿಹಾಸವೂ ಅಲ್ಲ; ಇವೆರಡರ ಮಿಶ್ರಣ. ಆರ್ಥಿಕ ಸಂಸ್ಥೆಗಳ ಬೆಳವಣಿಗೆಯ ಹಿನ್ನೆಲೆಯಲ್ಲಿ ಕೆಲವು ಸಿದ್ಧಾಂತಗಳು ಏಕೆ ಉದ್ಭವಿಸುವುವು, ಆಗಲೇ ಏಕೆ ಉದ್ಭವಿಸುವುವು, ಸಾಮಾಜಿಕ ಜೀವನದ ಚೌಕಟ್ಟಿನಲ್ಲೇ ಅವು ಹೇಗೆ ಹುಟ್ಟಿಕೊಂಡುವು, ಅವು ಹೇಗೆ ಬೆಳೆದುವು, ಪರಿವರ್ತನೆಗೊಂಡುವು, ಈ ಚೌಕಟ್ಟಿನ ಸ್ವರೂಪ ಬದಲಾದಾಗ ಅವು ಹೇಗೆ ವಿಸರ್ಜಿಸಲ್ಪಟ್ಟುವು—ಎಂಬುದನ್ನು ಈ ಪುಸ್ತಕ ವಿವರಿಸಲು ಯತ್ನಿಸುತ್ತದೆ.

ಈ ಪುಸ್ತಕ ರಚಿಸುವುದರಲ್ಲಿ ನೆರವಾದ ಹಲವರಿಗೆ ನಾನು ಋಣಿ. ವಿವರಿಸಲು ಸಾಧ್ಯವಿಲ್ಲದ ಹಲವು ಬಗೆಯಲ್ಲಿ ಸಹಾಯ ಮಾಡಿದ ನನ್ನ ಪತ್ನಿಗೆ; ಹಸ್ತಪ್ರತಿಯನ್ನು ವಿಮರ್ಶಾತ್ಮಕವಾಗಿ ಓದಿ, ಉತ್ತೇಜಕ ಸಲಹೆ ನೀಡಿದ ಡಾ॥ ಮೆಯರ್ ಷಾಪಿರೋ ಅವರಿಗೆ; ವಸ್ತು, ನಿರ್ಣಯ ಎರಡು ದೃಷ್ಟಿಯಲ್ಲೂ ತಪ್ಪು ಮಾಡಬಹುದಾಗಿದ್ದ ಸಂದರ್ಭಗಳನ್ನು ನಿವಾರಿಸಿ, ರಚನಾತ್ಮಕ ವಿಮರ್ಶೆ ಸಲಹೆಗಳನ್ನು ಉದ್ದಕ್ಕೂ ನೀಡಿದ ಮಿಸ್ ಸಿಬಿಲ್ ಮೇ ಹಾಗೂ ಮಿ॥ ಮೈಕೇಲ್ ರಾಸ್ ಇವರಿಗೆ—ಇವರೆಲ್ಲರಿಗೂ—ನಾನು ಋಣಿ. ಇತಿಹಾಸ ಅರ್ಥಶಾಸ್ತ್ರ ಕ್ಷೇತ್ರಗಳಲ್ಲಿ ತೀವ್ರಸಂಶೋಧನೆ ನಡೆಸಿರುವ, ವಿಶಾಲಜ್ಞಾನ ಪಡೆದಿರುವ, ಮಿಸ್ ಜೇನ್ ಟಾಬ್ರಿಸ್ಕಿ ಅವರ ಅಮೂಲ್ಯ ಸಹಾಯಕ್ಕಾಗಿ ಅವರಿಗೆ ನಾನು ವಿಶೇಷವಾಗಿ ಋಣಿ. ಅವರ ನೆರವು ಇಲ್ಲದಿದ್ದರೆ ಈ ಪುಸ್ತಕ ಬರೆಯುವುದು ಸಾಧ್ಯವಾಗುತ್ತಿರಲಿಲ್ಲ.

ನ್ಯೂಯಾರ್ಕ್,                                                                 ಲಿಯೋ ಹ್ಯೂಬರ್‌ಮನ್

ಜುಲೈ, ೧೯೩೬.

# ಪರಿವಿಡಿ

## ಭಾಗ ಒಂದು

## ಊಳಿಗಮಾನ್ಯ ಪದ್ಧತಿಯಿಂದ ಬಂಡವಾಳ ಪದ್ಧತಿಗೆ



## ಭಾಗ ಎರಡು

## ಬಂಡವಾಳ ಪದ್ಧತಿಯಿಂದ—ಗೆ?

## ೧. ಪ್ರಾರ್ಥನಕಾರರು, ಯೋಧರು—ಮತ್ತು ಕಾರ್ಮಿಕರು

ಬಹು ಹಳೆಯ ಚಲನಚಿತ್ರಗಳನ್ನು ನೀವು ನೋಡಿರಬಹುದು. ಅವುಗಳ ನಿರ್ದೇಶಕರು ವಿಲಕ್ಷಣ ಕೃತ್ಯಗಳನ್ನು ತೆರೆಯ ಮೇಲೆ ತೋರಿಸುತ್ತಿದ್ದರು. ಟ್ಯಾಕ್ಸಿಯಲ್ಲಿ ಕುಳಿತು ಜನ ಓಡಾಡುವುದು, ಎಲ್ಲರೂ ಒಬ್ಬರ ಹಿಂದೊಬ್ಬರು ಹೊರಬಂದು ಟ್ಯಾಕ್ಸಿಯ ಚಾಲಕನಿಗೆ ಹಣವನ್ನೂ ಕೊಡದೆ ಹೊರಟುಹೋಗುವುದು—ಇಂಥ ವಿಚಿತ್ರ ದೃಶ್ಯಗಳನ್ನೆಲ್ಲ ಅವರು ತೋರಿಸುತ್ತಿದ್ದರು. ನಗರದಲ್ಲೆಲ್ಲ ಅವರು ಟ್ಯಾಕ್ಸಿಯಲ್ಲಿ ತಿರುಗುವರು; ತಮಾಷೆ ಅನುಭವಿಸುವರು; ಅಥವಾ ವ್ಯಾಪಾರ ಸ್ಥಳಕ್ಕೆ ಹೋಗುವರು. ಸರಿ, ಅಲ್ಲಿಗೇ ಕೊನೆ. ದುಡ್ಡು ಕೊಡಬೇಕಿಲ್ಲ, ಕಾಸು ಕೊಡಬೇಕಿಲ್ಲ. ಮಧ್ಯಯುಗಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ನೀವು ಓದಿರಬಹುದಲ್ಲವೆ? ವೀರಪುರುಷರೂ ಲಲನಾಮಣಿಯರೂ ಹೊಳೆ ಹೊಳೆಯುವ ಕವಚಗಳನ್ನೂ ಉಡುಪುಗಳನ್ನೂ ತೊಟ್ಟು, ಕ್ರೀಡೆ ಸ್ಪರ್ಧೆಗಳಲ್ಲಿ ನಿರತರಾಗುತ್ತಿದ್ದುದನ್ನು ಕುರಿತ ದೀರ್ಘವರ್ಣನೆಗಳೇ ಈ ಪುಸ್ತಕಗಳ ತುಂಬಾ. ಇವರು ಯಾವಾಗಲೂ ಭವ್ಯ ಭವನಗಳಲ್ಲೇ ವಾಸಿಸುವರು. ತಿನ್ನಲೂ ಕುಡಿಯಲೂ ಕೊರತೆಯಿಲ್ಲ. ಇವಕ್ಕೆಲ್ಲ ಹಣ ತೆರಬೇಕಾಗಿದ್ದವರು ಯಾರು? ಕವಚಗಳೇನು ಮರದಲ್ಲಿ ಬಿಡುತ್ತವೆಯೆ? ಆಹಾರವನ್ನು ಬೆಳೆಯಲೇ ಬೇಕಲ್ಲವೆ? ಈ ಸಸಿಗಳನ್ನು ನಟ್ಟು, ಪೋಷಿಸಿ, ಕಾಯ್ದು, ದುಡಿದು ಬೆಳೆಯುವವರು ಯಾರು? ಇವನ್ನೆಲ್ಲ ಕುರಿತ ವಿಚಾರದ ಪ್ರಸ್ತಾಪ ಈ ಕಾದಂಬರಿಗಳಲ್ಲಿ ಇರುತ್ತಲೇ ಇರಲಿಲ್ಲ. ಆದರೆ ಇದೂ ಆಗಬೇಕು. ಟ್ಯಾಕ್ಸಿಯಲ್ಲಿ ಕುಳಿತು ಸಂಚಾರ ಮಾಡಿದ್ದಕ್ಕೆ ನೀವು ಹೇಗೆ ಹಣ ತೆರಲೇ ಬೇಕೋ, ಹಾಗೆಯೇ, ಈ ಮಧ್ಯಯುಗದ—ಹತ್ತು ಹನ್ನೆರಡನೆಯ ಶತಮಾನಗಳ—ಈ ವೀರಪುರುಷ ಲಲನಾಮಣಿಯರೂ ಅನುಭವಿಸುತ್ತಿದ್ದ ಸುಖಕ್ಕೆ, ಭೋಗ ವಸ್ತುಗಳಿಗೆ ಯಾರಾದರೂ ಹಣ ತೆರಲೇ ಬೇಕಿತ್ತು. ಈ ವೀರಪುರುಷರು ಹೋರಾಟ ನಡಸುತ್ತಿದ್ದಾಗ ಇವರಿಗಾಗಿ ಪ್ರಾರ್ಥನೆ ಪೂಜೆ ನಡಸುತ್ತಿದ್ದ ಪಾದ್ರಿಗಳಿಗೂ ಯಾರಾದರೂ ಆಹಾರ ವಸ್ತ್ರಗಳನ್ನು ಒದಗಿಸಬೇಕಾಗಿತ್ತು. ಈ ಪ್ರಾರ್ಥನಕಾರರು, ವೀರರುಗಳು ಮಾತ್ರವೇ ಅಲ್ಲದೆ, ಆ ಕಾಲದಲ್ಲಿ ಇನ್ನೂ ಒಂದು ಗುಂಪು ಇತ್ತು. ಮಧ್ಯಯುಗದ ಈ ಸಮಾಜದಲ್ಲಿ—ಊಳಿಗಮಾನ್ಯ ಪದ್ಧತಿಯ ಸಮಾಜದಲ್ಲಿ—ಮೂರು ವರ್ಗಗಳಿದ್ದುವು: ಪ್ರಾರ್ಥನಕಾರರು, ಯೋಧರು, ಕಾರ್ಮಿಕರು. ಪುರೋಹಿತ ವರ್ಗಕ್ಕೂ ಕ್ಷತ್ರಿಯ ವರ್ಗಕ್ಕೂ ಅಗತ್ಯವಾದ ವಸ್ತು ಸೇವೆ ಒದಗಿಸುತ್ತಿದ್ದವರು ಕಾರ್ಮಿಕರು, ಶ್ರಮಜೀವಿಗಳು. ಆಗಿನ ಕಾಲದಲ್ಲಿ ಬದುಕಿದ್ದ ಒಬ್ಬ ಲೇಖಕ ಇದರ ಸ್ಪಷ್ಟ ಚಿತ್ರ ಕೊಟ್ಟಿದ್ದಾನೆ. ಆತ ಹೀಗೆ ಬರೆದಿದ್ದಾನೆ:

> "ಸೈನಿಕನು ಪೂಜಕನು ಹೊರೆಯುವರು ಹೊಟ್ಟೆ
> ಜೀತದಾಳಿಗೆ ದುಡಿತ ಇದು ಬಾಳ ಬಟ್ಟೆ."[1]

---

[1] P. Boissonnade, *Life and Work in Medieval Europe (Fifth to Fifteenth Centuries)*, p. 146, Alfred A. Knopf, N.Y., 1927.

ಈ ದುಡಿತವಾದರೂ ಎಂಥದು ? ಕಾರ್ಖಾನೆಯಲ್ಲೆ? ಗಿರಣಿಯಲ್ಲೆ? ಅಲ್ಲ. ಆಗ ಇವು ಇರಲೇ ಇಲ್ಲ. ಆಗ ದುಡಿಮೆಯೆಲ್ಲ ನೆಲದ ಮೇಲೆ. ಆಹಾರಕ್ಕಾಗಿ ಕೃಷಿ, ಬಟ್ಟೆಗೆ ಬೇಕಾದ ಉಣ್ಣೆಗಾಗಿ ಕುರಿಯ ಪೋಷಣೆ. ಬೇಸಾಯ ಆಗಿನ ಮುಖ್ಯ ಕಸಬು. ಇಂದು ನಾವು ನೋಡುತ್ತಿರುವುದಕ್ಕಿಂತ ತುಂಬಾ ಭಿನ್ನವಾದ ರೀತಿಯಲ್ಲಿ ಆಗ ಈ ಕಾರ್ಯ ನಡೆಯುತ್ತಿತ್ತು.

ಪಶ್ಚಿಮ ಹಾಗೂ ಮಧ್ಯ ಯುರೋಪಿನ ನೆಲವೆಲ್ಲ ಕೃಷಿಯ ದೊಡ್ಡ ದೊಡ್ಡ ವಿಭಾಗ ಗಳಾಗಿ ವಿಂಗಡವಾಗಿತ್ತು. ಈ ವಿಭಾಗಗಳಿಗೆ 'ಮೇನರ್' ಅಥವಾ ಜಹಗೀರುಗಳೆಂದು ಹೆಸರು. ಒಂದೊಂದು ಮೇನರಿನಲ್ಲೂ ಒಂದೊಂದು ಹಳ್ಳಿ. ಅದರ ಸುತ್ತಣ ನೂರಾರು ಎಕರೆ ಕೃಷಿಯ ನೆಲವೂ ಇದರಲ್ಲಿ ಸೇರಿತ್ತು. ಈ ನೆಲದಲ್ಲಿ ಆ ಹಳ್ಳಿಯ ಜನರ ದುಡಿತ. ಕೃಷಿಯ ಜಮೀನಿನ ಅಂಚಿನಲ್ಲಿ ವಿಸ್ತಾರವಾದ ಬಯಲು, ಬಂಜರು ನೆಲ, ಕಾಡು, ಗೋಮಾಳ. ಈ ಮೇನರುಗಳ ವಿಸ್ತೀರ್ಣ, ಆಡಳಿತ, ಅಲ್ಲಿನ ಜನರ ನಡುವಣ ಸಂಬಂಧ —ಈ ವಿಚಾರಗಳಲ್ಲಿ ಒಂದೊಂದು ಪ್ರದೇಶದ ಮೇನರು ಒಂದೊಂದು ರೀತಿ ಇರುತ್ತಿತ್ತು. ಆದರೆ ಮುಖ್ಯ ಲಕ್ಷಣಗಳೆಲ್ಲಾ ಒಂದೇ.

ಪ್ರತಿಯೊಂದು ಜಹಗೀರಿಗೂ ಒಬ್ಬ ಪ್ರಭು. ನೆಲವಿಲ್ಲದ ಪ್ರಭುವಿಲ್ಲ, ಪ್ರಭುವಿಲ್ಲದ ನೆಲ ವಿಲ್ಲ—ಎಂಬುದು ಅಂದಿನ ಗಾದೆ. ಮಧ್ಯಯುಗದ ಪ್ರಭುವಿನ—ಶ್ರೀಮಂತನ—ಮನೆಯ ಚಿತ್ರವನ್ನು ನೀವು ಕಂಡಿರಬಹುದು. ಇದನ್ನು ಗುರುತು ಹಿಡಿಯುವುದು ಬಹು ಸುಲಭ. ಅದೊಂದು ದೊಡ್ಡ ದುರ್ಗವಾಗಿರಬಹುದು, ಅಥವಾ ದೊಡ್ಡ ಗ್ರಾಮ ಭವನವಾಗಿರ ಬಹುದು. ಅದರ ಸುತ್ತಲೂ ಒಂದು ಕೋಟೆ. ಕೋಟೆಯ ನಡುವಣ ಮನೆಯಲ್ಲಿ ಪ್ರಭು ವಿನ ವಾಸ. (ಅನೇಕ ವೇಳೆ ಇವನಿಗೆ ಇಂಥ ಹಲವು—ನೂರಾರು—ಮನೆಗಳು ಇರುತ್ತಿ ದ್ದುದೂ ಉಂಟು. ಆಗ ಇವನು ಈ ಮನೆಗಳಿಗೆಲ್ಲಾ ಆಗಿಂದಾಗ್ಗೆ ಭೇಟಿ ಕೊಡುತ್ತಿದ್ದ.) ಇವನು, ಇವನ ಸಂಸಾರ, ಇವನ ಆಳುಗಳು, ಆಸ್ತಿ ನಿರ್ವಹಣೆಯ ಕಾರ್ಯ ನೋಡಿಕೊಳ್ಳು ತ್ತಿದ್ದ ಇವನ ಅಧಿಕಾರಿಗಳು—ಎಲ್ಲರಿಗೂ ಇಲ್ಲಿ ವಾಸ.

ಗೋಮಾಳ, ಬಯಲು, ಕಾಡು, ಬಂಜರು ನೆಲ—ಇವುಗಳನ್ನು ಎಲ್ಲರೂ ಸಾಮಾನ್ಯ ವಾಗಿ ಬಳಸುತ್ತಿದ್ದರು. ಆದರೆ ಬೇಸಾಯದ ನೆಲ ಮಾತ್ರ ಇಬ್ಭಾಗವಾಗಿತ್ತು. ಇದರಲ್ಲಿ ಒಂದು ಭಾಗ—ಒಟ್ಟು ನೆಲದಲ್ಲಿ ಸುಮಾರು ಮೂರರಲ್ಲೊಂದು ಪಾಲು—ಪ್ರಭುವಿಗೆ ಸೇರಿತ್ತು. ಇದಕ್ಕೆ 'ಡಿಮೆಯ್ನ್' ಅಥವಾ ಒಡೆಯನ ನೆಲ ಎಂದು ಹೆಸರು. ಉಳಿದ ಭಾಗ ಗೇಣಿದಾರರ ಕೈಯಲ್ಲಿ. ನೆಲದ ಬೇಸಾಯ ಮಾಡುತ್ತಿದ್ದವರು ಇವರೇ. ಪ್ರತಿಯೊಬ್ಬ ರೈತನ ನೆಲವೆಲ್ಲಾ ಒಂದೇ ಎಡೆ ಇರುತ್ತಿರಲಿಲ್ಲ. ಅದು ಚೂರಾಗಿ ಹರಡಿಹೋಗಿತ್ತು. ಇದು ಈ ಪದ್ಧತಿಯ ಒಂದು ಮುಖ್ಯಲಕ್ಷಣ. ಇದರ ಕಲ್ಪನೆಯನ್ನು ಮುಂದಣ ನಕ್ಷೆಯಿಂದ ಪಡೆಯಬಹುದು.

ಮುಂದಣ ನಕ್ಷೆಯಲ್ಲಿ 'ಎ' ಎಂಬ ಗೇಣಿದಾರನ ನೆಲ ಮೂರು ಚೂರಾಗಿ ಮೂರು ಪ್ರದೇಶಗಳಲ್ಲಿ ಹಂಚಿಹೋಗಿದೆಯೆಂಬುದನ್ನು ಗಮನಿಸಿ. ಇದರಲ್ಲಿ ಯಾವ ಎರಡು ಚೂರೂ ಪಕ್ಕಪಕ್ಕದಲ್ಲಿ ಇಲ್ಲ. 'ಬಿ' ಎಂಬ ಗೇಣಿದಾರನ ನೆಲವೂ ಹೀಗೆಯೇ,




ಉಳಿದವರವೂ ಹೀಗೆಯೇ. ಊಳಿಗ ಮಾನ್ಯ ಪದ್ಧತಿಯ ಆರಂಭದೆಶೆಯಲ್ಲಿ ಪ್ರಭುವಿನ ಡಿಮೆಯ್ನೆಯೂ—ಒಡೆಯನ ನೆಲವೂ—ಹೀಗೆಯೇ ಇತ್ತು. ಅದೂ ಕೂಡ ಇಲ್ಲಲ್ಲಿ ಚೆಲ್ಲಾಡಿದ ಚೂರುಗಳಾಗಿತ್ತು, ಇತರ ರೈತರ ನೆಲಗಳ ನಡುವೆ ಬೆರೆತಿತ್ತು. ಆದರೆ ಕ್ರಮೇಣ ಪ್ರಭುವಿನ ನೆಲವೆಲ್ಲ ಒಟ್ಟಾಗಿ, ಅದು ಒಂದು ಅಖಂಡ ಭೂಭಾಗವಾಗಿ ಹೋಯಿತು.

ತುಂಡು ಬೇಸಾಯ ಆ ಕಾಲದಲ್ಲಿ ಸಾಮಾನ್ಯ. ಇದು ತುಂಬಾ ವ್ಯರ್ಥಕರವಾಗಿದ್ದಿತೆಂದು ಹೇಳಬೇಕಾಗಿಯೇ ಇಲ್ಲ. ಕೆಲವು ನೂರು ವರ್ಷಗಳಾದ ಮೇಲೆ ಈ ಪದ್ಧತಿ ಸಂಪೂರ್ಣವಾಗಿ ನಶಿಸಿ ಹೋಯಿತು. ಸರದಿಯ ಪ್ರಕಾರ ಬೆಳೆ ತೆಗೆಯುವುದರ ವಿಚಾರವಾಗಿ, ಗೊಬ್ಬರದ ವಿಚಾರವಾಗಿ, ನೆಲದಿಂದ ಹೆಚ್ಚು ಫಸಲು ತೆಗೆಯುವ ಇಂಥ ನೂರೆಂಟು ವಿಧಾನಗಳ ವಿಚಾರವಾಗಿ ಅಂದಿನ ರೈತ ತಿಳಿದಿದ್ದುದಕ್ಕಿಂತ ಬಹು ಪಾಲು ಹೆಚ್ಚಾಗಿ ಇಂದು ನಮಗೆ ಗೊತ್ತು. ದ್ವಿಪ್ರದೇಶ ಪದ್ಧತಿಯಿಂದ ತ್ರಿಪ್ರದೇಶ ಪದ್ಧತಿಗೆ ಆದ ಬದಲಾವಣೆಯೇ ಅಂದಿನ ದೊಡ್ಡ ಸುಧಾರಣೆ. ಜಮೀನಿನ ಸಾರ ಕ್ಷಯಿಸಿಹೋಗದ ಹಾಗೆ ಮಾಡಲು ವರ್ಷೇ ವರ್ಷೇ ಸರದಿಯಂತೆ ಯಾವ ಯಾವ ಬೆಳೆ ತೆಗೆಯಬೇಕೆಂಬ ವಿಚಾರ ಆಗಿನ ರೈತರಿಗೆ ಗೊತ್ತಿರಲಿಲ್ಲ. ಆದರೆ ಒಂದೇ ನೆಲದಲ್ಲಿ ಸರ್ವದಾ ಒಂದೇ ಬೆಳೆ ಬಿತ್ತಬಾರದೆಂಬುದನ್ನಂತೂ ಅವರು ಅರಿತಿದ್ದರು. ಆದ್ದರಿಂದ ಈ ವರ್ಷ ಒಂದು ನೆಲದಲ್ಲಿ ಬೆಳೆ ತೆಗೆದರೆ ಮುಂದಣ ವರ್ಷ ಇನ್ನೊಂದು ನೆಲದಲ್ಲಿ ಬಿತ್ತುತ್ತಿದ್ದರು. ಒಂದನೆಯ ನೆಲದಲ್ಲಿ ಆಹಾರ ಧಾನ್ಯವನ್ನು—ಗೋಧಿಯನ್ನು—ಬೆಳೆದರೆ, ಎರಡನೆಯ ಜಮೀನಿನಲ್ಲಿ

ಪಾನೀಯದ ಬೆಳೆ—ರೈ—ಬೆಳೆಯುವರು. ಮೂರನೆಯ ಜಮೀನನ್ನು ಆ ವರ್ಷ ಬೀಳು ಬಿಡುವರು, ಒಂದು ವರ್ಷದ ವಿಶ್ರಾಂತಿಗಾಗಿ ಮಲಗಿಸುವರು. ತ್ರಿಪ್ರದೇಶ ವ್ಯವಸಾಯ ಸುಮಾರು ಈ ರೀತಿ ನಡೆಯುತ್ತಿತ್ತು :

| | ಮೊದಲನೆಯ ವರ್ಷ | ಎರಡನೆಯ ವರ್ಷ | ಮೂರನೆಯ ವರ್ಷ |
|---|---|---|---|
| ಒಂದನೆಯ ಜಮೀನು | ಗೋಧಿ | ಬಾರ್ಲಿ | ವಿಶ್ರಾಂತಿ |
| ಎರಡನೆಯ ಜಮೀನು | ಬಾರ್ಲಿ | ವಿಶ್ರಾಂತಿ | ಗೋಧಿ |
| ಮೂರನೆಯ ಜಮೀನು | ವಿಶ್ರಾಂತಿ | ಗೋಧಿ | ಬಾರ್ಲಿ |

ಅಂತೂ ಮೇನರಿನ ಪದ್ಧತಿಯ ಮುಖ್ಯ ಲಕ್ಷಣಗಳು ಇವು ಎಂದು ಹೇಳಬಹುದು: ಮೊದಲನೆಯದಾಗಿ, ಸಾಗುವಳಿಯ ನೆಲ ಎರಡು ಭಾಗಗಳಾಗಿ ವಿಂಗಡವಾಗಿತ್ತು. ಒಂದು ಭಾಗ ಪ್ರಭುವಿಗೆ ಸೇರಿದ್ದು, ಅವನ ಸುಖಕ್ಕಾಗಿಯೇ ಸಾಗುವಳಿಯಾಗುತ್ತಿದ್ದದ್ದು. ಇನ್ನೊಂದು ಭಾಗ ಅಲ್ಲಿನ ಹಲವಾರು ರೈತರಲ್ಲಿ ಹಂಚಿ ಹೋಗಿತ್ತು. ಎರಡನೆಯದಾಗಿ, ನಾವು ಇಂದು ಕಾಣುತ್ತಿರುವ ರೀತಿಯಲ್ಲಿ, ನೆಲವೆಲ್ಲ ದೊಡ್ಡ ಅಡಕವಾದ ಜಮೀನುಗಳಾಗಿ ಸಾಗುವಳಿ ಆಗುತ್ತಿರಲಿಲ್ಲ. ಹರಡಿ ಹೋದ ಒಂದೊಂದು ಚೂರೂ ಪ್ರತ್ಯೇಕವಾಗಿ ಸಾಗುವಳಿಯಾಗುತ್ತಿತ್ತು. ಮೂರನೆಯ ಮುಖ್ಯ ಲಕ್ಷಣವಿದು: ಗೇಣಿದಾರರು ತಮ್ಮ ಹಿಡುವಳಿಯ ನೆಲವನ್ನಷ್ಟೇ ಬೇಸಾಯ ಮಾಡುತ್ತಿರಲಿಲ್ಲ. ಒಡೆಯನ ನೆಲವನ್ನೂ ಇವರು ಉಳಬೇಕಾಗಿತ್ತು, ಅದರಲ್ಲೂ ಬೆಳೆಯಬೇಕಾಗಿತ್ತು.

ತುಂಬಾ ಹೀನವಾದ ಜೋಪಡಿಯಲ್ಲಿ ರೈತನ ವಾಸ. ಚೆಲ್ಲಾಡಿಹೋದ ನೆಲದ ಚೂರುಗಳಲ್ಲಿ ಅವನ ಬೇಸಾಯ. ಇಂಥ ನೆಲದ ಸರಾಸರಿ ವಿಸ್ತೀರ್ಣ ಇಂಗ್ಲೆಂಡಿನಲ್ಲಿ ಹದಿನೈದು-ಇಪ್ಪತ್ತು ಎಕರೆ, ಫ್ರಾನ್ಸಿನಲ್ಲಿ ನಲವತ್ತು-ಐವತ್ತು ಎಕರೆ. ಇವನ ಕೆಲಸವೂ ಶ್ರಮದಾಯಕ, ದೀರ್ಘ. ಇಷ್ಟು ದುಡಿದರೂ ಕೊನೆಗೆ ಜೀವನಕ್ಕೆ ಹಾಗೂ ಹೀಗೂ ಸಾಕಾಗುವಷ್ಟು ಪ್ರತಿಫಲ. ಅವನದು ದುಃಖದ ಜೀವನ. ಅವನ ಸುಖಕ್ಕೆ ಅಡ್ಡ ಬರುತ್ತಿದ್ದ ಅಂಶವೆಂದರೆ ಸಂಬಳವಿಲ್ಲದ ದುಡಿತ. ವಾರಕ್ಕೆ ಎರಡು ಮೂರು ದಿನ ಅವನು ಪ್ರಭುವಿನ ನೆಲದಲ್ಲಿ ಬಿಟ್ಟಿ ದುಡಿಯಬೇಕು. ಪ್ರಭುವಿಗಾಗಿ ಅವನು ದುಡಿಯಬೇಕಾದದ್ದು ಇಷ್ಟೇ ಅಲ್ಲ. ಕೆಲಸದ ಒತ್ತಡವಿದ್ದಾಗ, ಸುಗ್ಗಿಯ ಸಮಯದಲ್ಲಿ, ಪ್ರಭುವಿನ ನೆಲದ ಫಸಲನ್ನು ಅವನು ಮೊದಲು ಕೊಯ್ಯಬೇಕು. ಪ್ರತಿ ವಾರವೂ ಅವನು ಸಲ್ಲಿಸುತ್ತಿದ್ದ ದುಡಿಮೆಯ ಸೇವೆಯ ಜತೆಗೆ ಪರ್ವಕಾಲದ ಇಂಥ ಸೇವೆ ಬೇರೆ. ಇಷ್ಟಕ್ಕೇ ಮುಗಿಯಿತೆಂದುಕೊಳ್ಳಬೇಡಿ. ಎಲ್ಲ ಸಂದರ್ಭಗಳಲ್ಲೂ ಯಾರ ನೆಲ ಹೆಚ್ಚು ಮುಖ್ಯವೆಂದು ಹೇಳಬೇಕಾಗಿಯೇ ಇರಲಿಲ್ಲ. ಪ್ರಭುವಿನ ನೆಲವನ್ನು ಮೊದಲು ಉಳಬೇಕು, ಅಲ್ಲಿ ಮೊದಲು ಕಾಳು ಚೆಲ್ಲಬೇಕು, ಮೊದಲು ಕೊಯ್ಯಬೇಕು. ಬೆಳೆಯನ್ನು ನಾಶಗೊಳಿಸುವ ಬಿರುಗಾಳಿ ಎದ್ದಿತೆ? ಪ್ರಭುವಿನ ಧಾನ್ಯವನ್ನು ಮೊದಲು ರಕ್ಷಿಸಬೇಕು. ಧಾನ್ಯ ಸಂಗ್ರಹಿಸುವ ಸುಗ್ಗಿಯ ದಿನವೆ? ಹಾಗಾದರೆ ಪ್ರಭುವಿನ ನೆಲದಲ್ಲಿ ಆ ಕೆಲಸ ಮೊದಲು ಸಾಗಲಿ.

ಉಣಲು ಬೇಕಿದ್ದುದಕ್ಕಿಂತ ಹೆಚ್ಚು ಧಾನ್ಯ ಉಳಿದಿದೆಯೇ? ಇದನ್ನು ನೆರೆಯ ಪೇಟೆಯಲ್ಲಿ ಮಾರಬೇಕಾಗಿದೆಯೇ? ಹಾಗಿದ್ದರೆ ರೈತ ಮೊದಲು ಪ್ರಭುವಿನ ಧಾನ್ಯವನ್ನೂ ಅವನ ಮದ್ಯವನ್ನೂ ಪೇಟೆಗೆ ಹೊತ್ತು ಸಾಗಿಸಿ ಮಾರಲಿ. ರಸ್ತೆಯನ್ನೂ ಸೇತುವೆಯನ್ನೂ ದುರಸ್ತು ಮಾಡಬೇಕೆ? ರೈತ ತನ್ನ ಸ್ವಂತ ಕಾರ್ಯ ಬಿಟ್ಟು ಆ ಕೆಲಸ ಮಾಡಬೇಕು. ರೈತನ ಗೋಧಿಯನ್ನು ಗಿರಣಿಯಲ್ಲಿ ಹಿಟ್ಟು ಮಾಡಿಸಬೇಕೆ? ಅವನ ದ್ರಾಕ್ಷಿಯನ್ನು ಹಿಂಡಿಸಬೇಕೆ? ಆಗಬಹುದು. ಆದರೆ ಆ ಗಿರಣಿ ಅಥವಾ ಆ ಹಿಂಡುವ ಯಂತ್ರ ಪ್ರಭುವಿಗೆ ಸೇರಿದ್ದು. ಅದನ್ನು ಉಪಯೋಗಿಸಲು ಹಣ ಕೊಡಬೇಕು. ರೈತನ ಮೇಲೆ ಪ್ರಭು ಏನೇನು ಶುಲ್ಕ ವಿಧಿಸಬಹುದು—ಎಂಬುದಕ್ಕೆ ಮಿತಿಯೇ ಇರಲಿಲ್ಲ. ಈ ವಿಚಾರವಾಗಿ ಹನ್ನೆರಡನೆಯ ಶತಮಾನದ ವೀಕ್ಷಕನೊಬ್ಬ ಈ ರೀತಿ ಹೇಳುತ್ತಾನೆ: "ರೈತ ತನ್ನ ದ್ರಾಕ್ಷಿಯ ಬಳ್ಳಿಯ ಹಣ್ಣಿನ ರಸ ಸವಿಯಲಾರ. ಒಂದು ಚೂರು ಒಳ್ಳೆಯ ಆಹಾರವನ್ನೂ ರುಚಿ ನೋಡಲಾರ. ಅವನಿಗೆ ಕಪ್ಪುರೊಟ್ಟಿ, ಬೆಣ್ಣೆ ಇಷ್ಟು ಉಳಿದರೆ ಅದೇ ಅವನ ಪುಣ್ಯ....

"ಕೊಬ್ಬಿದ ಬಾತೆ? ಕೋಳಿಯೆ? ರೈತನ
ಡಬ್ಬದಿ ಬಿಳಿ ಹಿಟ್ಟಿನ ರೊಟ್ಟಿಯೆ?
ಎಲ್ಲವು ಪ್ರಭುವಿಗೆ ಅವನದೆ ಎಲ್ಲ."[1]

ಹಾಗಾದರೆ ರೈತ ಗುಲಾಮನಾಗಿದ್ದನೆ? ವಾಸ್ತವವಾಗಿ ಹೇಳುವುದಾದರೆ, ಈ ಗೇಣಿದಾರರಲ್ಲಿ ಹಲವರು 'ಸರ್ಫ್ಸ್'—ಜೀತಗಾರರು—ಎನಿಸಿಕೊಳ್ಳುತ್ತಿದ್ದರು. ಲ್ಯಾಟಿನ್ ಭಾಷೆಯ 'ಸರ್ವಸ್' ಎಂಬ ಪದ್ಯದಿಂದ ಬಂದದ್ದು ಈ ಪದ. 'ಸರ್ವಸ್' ಎಂದರೆ 'ಸ್ಲೇವ್' ಅಥವಾ ಗುಲಾಮ. ಆದರೆ 'ಗುಲಾಮ' ಎಂದರೆ ನಮ್ಮ ಮನಸ್ಸಿನಲ್ಲಿ ಯಾವ ಅರ್ಥ ಸ್ಫುರಿಸುತ್ತದೋ ಆ ಅರ್ಥದಲ್ಲಿ ಇವರು ಗುಲಾಮರಾಗಿರಲಿಲ್ಲ. ಆಗಿನ ಕಾಲದಲ್ಲಿ ವೃತ್ತಪತ್ರಿಕೆಗಳಿರಲಿಲ್ಲ. ಇದ್ದಿದ್ದರೂ, ೧೮೨೮ರ ಏಪ್ರಿಲ್ ೧೨ರ 'ಚಾರ್ಲ್ಸ್‌ಟನ್ ಕೋರಿಯರ್' ಪತ್ರಿಕೆಯಲ್ಲಿ ಪ್ರಕಟವಾದ ಜಾಹೀರಾತಿನ ಮಾದರಿಯ ಜಾಹೀರಾತುಗಳು ಪ್ರಕಟವಾಗುತ್ತಿರಲಿಲ್ಲ. 'ಚಾರ್ಲ್ಸ್‌ಟನ್ ಕೋರಿಯರ್'ನಲ್ಲಿ ಪ್ರಕಟವಾದ ಜಾಹೀರಾತನ್ನು ನೋಡಿ :—"ಸುಸಮಯ! ಇಂಥ ಅಮೂಲ್ಯವಾದ ಸಂಸಾರ ಹಿಂದೆಂದೂ ಮಾರಾಟಕ್ಕಿರಲಿಲ್ಲ: ಸುಮಾರು ಮೂವತ್ತೈದು ವರ್ಷದ ಅಡಿಗೆಯವಳು; ಅವಳ ಮಗಳು, ಸುಮಾರು ಹದಿನಾಲ್ಕು ವರ್ಷ; ಮಗ, ಸುಮಾರು ಎಂಟು ವರ್ಷ. ಎಲ್ಲರನ್ನೂ ಒಟ್ಟಿಗೆ—ಅಥವಾ ಪ್ರತ್ಯೇಕವಾಗಿ—ಕೊಳ್ಳುವವರ ಇಚ್ಛೆಯಂತೆ—ಮಾರಾಟ ಮಾಡಲು ಸಿದ್ಧ."

ಒಡೆಯ ತನ್ನಿಚ್ಛೆಯಂತೆ ನೀಗ್ರೋ ಗುಲಾಮರ ಸಂಸಾರವನ್ನು ಹೀಗೆ ಒಡೆಯಬಹುದಾಗಿತ್ತು. ಆದರೆ ಜೀತಗಾರನಿಗಾದರೋ, ತನ್ನ ಸಂಸಾರದ ಅಖಂಡತೆಯನ್ನು

[1] *Ibid.*, p. 146.

ಉಳಿಸಿಕೊಳ್ಳುವ ಹಕ್ಕು ಇತ್ತು. ಮೇನರ್‌ನ ಒಡೆಯನ ಇಚ್ಛೆಯ ಪ್ರಶ್ನೆ ಈ ವಿಷಯದಲ್ಲಿ ಉದ್ಭವಿಸುತ್ತಿರಲಿಲ್ಲ. ಗುಲಾಮನೂ ಒಂದು ಆಸ್ತಿ. ಅವನನ್ನು ಎಲ್ಲಾದರೂ ಕೊಳ್ಳಬಹುದಿತ್ತು, ಮಾರಬಹುದಿತ್ತು. ಆದರೆ ಜೀತಗಾರನನ್ನಾದರೋ ಅವನ ನೆಲದಿಂದ ಪ್ರತ್ಯೇಕಿಸಿ ಮಾರುವುದು ಸಾಧ್ಯವಿರಲಿಲ್ಲ. ಅವನ ಪ್ರಭು ಜಹಗೀರಿನ ಒಡೆತನವನ್ನು ಇನ್ನೊಬ್ಬನಿಗೆ ವರ್ಗಾಯಿಸಬಹುದಿತ್ತು. ಆಗ ಸಹಜವಾಗಿ ಜೀತಗಾರನಿಗೆ ಇನ್ನೊಬ್ಬ ಧಣಿ ಬರುತ್ತಿದ್ದ. ಜೀತಗಾರ ಮಾತ್ರ ಅವನ ಚೂರು ನೆಲದ ಮೇಲೆಯೇ ಇರುತ್ತಿದ್ದ. ಗುಲಾಮನಿಗೂ ಜೀತಗಾರನಿಗೂ ಇದ್ದ ಮುಖ್ಯ ವ್ಯತ್ಯಾಸ ಇದು. ಗುಲಾಮನಿಗೆ ಇಲ್ಲದಿದ್ದ ಒಂದು ರೀತಿಯ ಭದ್ರತೆ ಜೀತಗಾರನಿಗೆ ಇತ್ತು. ಜೀತಗಾರನನ್ನು ಅವನ ಧಣಿ ಹೇಗಾದರೂ ನಡಸಿಕೊಳ್ಳಲಿ. ಅವನಿಗೆ ಅವನ ಸಂಸಾರವಿತ್ತು, ಮನೆಯಿತ್ತು, ಬೇಸಾಯ ಮಾಡಲು ತುಣುಕು ನೆಲವಿತ್ತು. ಜೀತಗಾರನಿಗೆ ಹೀಗೆ ಒಂದು ರೀತಿಯ ಭದ್ರತೆ ಇದ್ದುದರಿಂದಲೇ, ಸ್ವತಂತ್ರರಾಗಿದ್ದೂ ಯಾವುದಾದರೂ ಒಂದು ಕಾರಣದಿಂದ ಹೀನಸ್ಥಿತಿಗೆ ಇಳಿದು ಮನೆ ನೆಲ ಆಹಾರ ಇಲ್ಲದವರು ಕೆಲವರು ತಾವಾಗಿಯೇ ಬಂದು ಜೀತಗಾರರಾಗಿ ಸೇರಿಕೊಳ್ಳಬಯಸುತ್ತಿದ್ದರು ; "ಕತ್ತಿಗೆ ಹಗ್ಗ ಮೂಗಿಗೆ ಕವಡೆ ಕಟ್ಟಿಕೊಂಡು ಪಶುಗಳಂತೆ ದುಡಿಯಲು ಒಪ್ಪುತ್ತಿದ್ದರು."[1]

ಜೀತವಲ್ಲಿಯೂ ಹಲವು ಶ್ರೇಣಿ. ಈ ನಾನಾ ಶ್ರೇಣಿಗಳ ನಡುವಣ ಎಲ್ಲ ಸೂಕ್ಷ್ಮ ವ್ಯತ್ಯಾಸಗಳನ್ನೂ ಸ್ಪಷ್ಟವಾಗಿ ಗುರುತಿಸುವುದು ಚರಿತ್ರಕಾರರಿಗೆ ಕಷ್ಟವಾಗಿದೆ. ಪ್ರಭುವಿನ ಮನೆಗೇ ಶಾಶ್ವತವಾಗಿ ಸೇರಿದ್ದು, ಅವನ ನೆಲದಲ್ಲೇ ದುಡಿಯಬೇಕಾಗಿದ್ದ ಜೀತಗಾರರು ಕೆಲವರು. ಹಳ್ಳಿಯ ಅಂಚಿನಲ್ಲಿ ಎರಡು ಮೂರು ಎಕರೆ ಜಮೀನು ಹೊಂದಿದ್ದ ಬಡ ರೈತರು ಕೆಲವರು. ಒಂದು ಚೂರೂ ನೆಲವಿಲ್ಲದ, ವಾಸಕ್ಕೆ ಗುಡಿಸಲು ಮಾತ್ರ ಹೊಂದಿದ್ದ ಜನರು ಕೆಲವರು. ಪ್ರಭುವಿನ ನೆಲದಲ್ಲಿ ಇವರು ಕೂಲಿಯಾಳುಗಳಂತೆ ದುಡಿಯುತ್ತಿದ್ದರು. ಈ ದುಡಿತಕ್ಕೆ ಪ್ರತಿಯಾಗಿ ಇವರಿಗೆ ಪ್ರಭುವಿನಿಂದ ಆಹಾರ ಸಿಗುತ್ತಿತ್ತು.

ಹೆಚ್ಚಿನ ವ್ಯಕ್ತಿ ಸ್ವಾತಂತ್ರ್ಯ ಹಾಗೂ ಆರ್ಥಿಕ ಸ್ವಾತಂತ್ರ್ಯ ಪಡೆದಿದ್ದ ಜೀತಗಾರರೂ ಇದ್ದರು. ಸ್ವಾತಂತ್ರ್ಯದ ಹಾದಿಯಲ್ಲಿ ಇವರು ಇತರ ಜೀತಗಾರರಿಗಿಂತ ಮುಂದುವರಿದಿದ್ದರು. ಇವರಿಗೆ ಹೆಚ್ಚು ಹಕ್ಕುಗಳೂ ಇದ್ದುವು. ಇವರು ಪ್ರಭುವಿಗಾಗಿ ಅಷ್ಟೊಂದು ದುಡಿಯಬೇಕಾಗಿರಲಿಲ್ಲ. ಇದು ಒಂದು ದೊಡ್ಡ ಅನುಕೂಲ. ಏಕೆಂದರೆ ಇಂಥವರಿಗೆ ತಮ್ಮ ಇತಿಮಿತಿಗಳು ಗೊತ್ತಿದ್ದುವು. ಪ್ರಭುವಿಗೆ ಇಚ್ಛೆ ಬಂದಾಗ, ಇಚ್ಛೆ ಬಂದಂತೆ, ಇವರಿಂದ ಹೊಸ ಹೊಸ ರೀತಿಯಲ್ಲಿ ಕೆಲಸ ಪಡೆಯಲಾಗುತ್ತಿರಲಿಲ್ಲ. ಇವರಲ್ಲಿ ಕೆಲವರಿಗೆ ಪರ್ವ ದಿನಗಳಲ್ಲಿ ಮಾಡಬೇಕಾದ ಕೆಲಸದಿಂದಲೂ ವಿನಾಯಿತಿ ದೊರಕಿತ್ತು. ಪದ್ಧತಿಯ ಪ್ರಕಾರ ಕೆಲಸ ಮಾಡಿದ್ದರೆ ಸಾಕಾಗಿತ್ತು. ಇನ್ನು ಕೆಲವರು ಪ್ರಭುವಿಗಾಗಿ ದುಡಿಯುತ್ತಲೇ ಇರಲಿಲ್ಲ. ಇದಕ್ಕೆ ಪ್ರತಿಯಾಗಿ ತಮ್ಮ ಬೆಳೆಯಲ್ಲಿ ಒಂದು ಪಾಲನ್ನು ಪ್ರಭುವಿಗೆ

[1] *Ibid.*, p. 136.

ಕೊಡುತ್ತಿದ್ದರು. ಮತ್ತೆ ಕೆಲವರು ದುಡಿಮೆಗೆ ಪ್ರತಿಯಾಗಿ ಹಣ ಕೊಡುತ್ತಿದ್ದರು. ಈ ಪದ್ಧತಿ ಕ್ರಮೇಣ ಬೆಳೆದು ಕೊನೆಗೆ ಬಹು ಮುಖ್ಯವಾಯಿತು.

ಇವರಲ್ಲಿ ಕೆಲವರು ಹೆಚ್ಚು–ಕಡಮೆ ಸ್ವತಂತ್ರರಂತೆಯೇ ಸುಖವಾಗಿ ಇದ್ದರು. ತಮ್ಮ ಸ್ವಂತ ಜಮೀನಿನ ಜತೆಗೆ ಪ್ರಭುವಿನ ನೆಲದಲ್ಲೂ ಒಂದು ಭಾಗವನ್ನು ಗೇಣಿಗೆ ಪಡೆಯುತ್ತಿದ್ದರು. ಇವರಲ್ಲದೆ ಕೆಲವರು ಸ್ವತಂತ್ರರಾದ ನೆಲಮೊಡೆಯರೂ ಇದ್ದರು. ಇವರು ದುಡಿಮೆಯನ್ನು ಸಲ್ಲಿಸಬೇಕಾಗಿಯೇ ಇರಲಿಲ್ಲ. ತಮ್ಮ ಅಧೀಶ್ವರರಿಗೆ ತೆರಿಗೆಯನ್ನು ಮಾತ್ರ ಕೊಡುತ್ತಿದ್ದರು. ಹೀಗೆ ಸ್ವತಂತ್ರ, ಅರ್ಧ ಸ್ವತಂತ್ರ ಹಾಗೂ ಜೀತದ ಹಿಡುವಳಿ ಪದ್ಧತಿ ಕ್ರಮೇಣ ಒಂದಕ್ಕೊಂದು ಬೆರೆಯಿತು. ಇವುಗಳ ಪರಸ್ಪರ ವ್ಯತ್ಯಾಸವನ್ನು ಅರಿಯುವುದು ಕಷ್ಟವಾಯಿತು. ಪ್ರತಿಯೊಂದು ವರ್ಗದ ಸ್ಥಿತಿಯೂ ಎಂಥದೆಂಬುದನ್ನು ಸ್ಥಾಪಿಸುವುದು ಕಷ್ಟವಾಯಿತು.

ಈ ಪದ್ಧತಿಯ ಯಾವ ಚಿತ್ರವೂ ನಿರ್ದಿಷ್ಟವಾಗಿರಲಾರದು. ಏಕೆಂದರೆ ಬೇರೆ ಬೇರೆಡೆ ಬೇರೆ ಬೇರೆ ಸ್ಥಿತಿಗಳಿದ್ದುವು. ಈ ಮಧ್ಯಯುಗದ ಅಸ್ವತಂತ್ರ ದುಡಿಮೆಗಾರರ ವಿಚಾರವಾಗಿ ಕೆಲವು ಮೂಲಭೂತ ಅಂಶಗಳಂತೂ ಸ್ಥಿರಪಟ್ಟಿವೆ.

ರೈತರೆಲ್ಲ ಹೆಚ್ಚು ಕಡಮೆ ಅಸ್ವತಂತ್ರರು. ರೈತರು ಇರುವುದು ತಮ್ಮ ಹಿತಕ್ಕಾಗಿ ಎಂಬ ಭಾವನೆಯಿತ್ತು, ಪ್ರಭುಗಳಲ್ಲಿ. ಪ್ರಭುವೂ ಜೀತಗಾರನೂ ಒಂದೇ ಎಂಬ ಪ್ರಶ್ನೆಯೇ ಇರಲಿಲ್ಲ. ಜೀತಗಾರ ನೆಲವನ್ನು ಶೋಷಿಸುತ್ತಿದ್ದ; ಪ್ರಭು ಜೀತಗಾರನನ್ನು ಶೋಷಿಸುತ್ತಿದ್ದ. ಪ್ರಭುವಿನ ದೃಷ್ಟಿಯಲ್ಲಿ ಜೀತಗಾರನಿಗೂ ಅವನ ಆಧಿಪತ್ಯದಲ್ಲಿದ್ದ ದನಕರುವಿಗೂ ವ್ಯತ್ಯಾಸವೇ ಇಲ್ಲ. ಈ ಸೋಜಿಗದ ಸಂಗತಿ ಓದಿ : ಹನ್ನೊಂದನೆಯ ಶತಮಾನದ ಫ್ರಾನ್ಸಿಗೆ ಸಂಬಂಧಿಸಿದ ವಿಚಾರವಿದು : ಆಗ ಫ್ರೆಂಚ್ ರೈತನೊಬ್ಬನ ಮೌಲ್ಯ ಮೂವತ್ತೆಂಟು ಸೌ. ಅದೇ ಕಾಲಕ್ಕೆ ಕುದುರೆಯೊಂದರ ಬೆಲೆ ನೂರು ಸೌ. ತನ್ನ ನೆಲದ ಮೇಲೆ ದುಡಿಯಲು ಎತ್ತುಗಳು ಹೇಗೆ ಬೇಕಿದ್ದುವೋ ಹಾಗೆ ಜೀತಗಾರರೂ ಪ್ರಭುವಿಗೆ ಬೇಕಿದ್ದರು. ಇವರು ಮಾನವ ಪಶುಗಳು. ಎತ್ತುಗಳು ನಷ್ಟವಾದರೆ ಪ್ರಭುವಿಗೆ ಎಂಥ ದುಃಖವೋ ಈ ಜೀತಗಾರರು ನಷ್ಟವಾದರೂ ಅಂಥದೇ ದುಃಖ. ಆದ್ದರಿಂದ ಜೀತಗಾರನನ್ನು ನೆಲದಿಂದ ಬೇರ್ಪಡಿಸಿ ಮಾರುವುದು ಸಾಧ್ಯವಿರಲಿಲ್ಲ. ಅಂತೆಯೇ ಜೀತಗಾರನೂ ನೆಲ ಬಿಟ್ಟಿರುವಂತಿರಲಿಲ್ಲ. "ಅವನು ಹೊಂದಿದ್ದ ನೆಲಕ್ಕೆ 'ಟೆನ್ಯೂರ್' ಅಥವಾ 'ಹಿಡುವಳಿ' ಎಂದು ಹೆಸರು. 'ಹಿಡಿತ' ಎಂಬ ಅರ್ಥದ ಲ್ಯಾಟಿನ್ ಭಾಷೆಯ ಪದದಿಂದ ಬಂದದ್ದು ಈ ಇಂಗ್ಲಿಷ್ ಪದ. ಆದರೆ ಶಾಸನದ ಪ್ರಕಾರ 'ಹಿಡುವಳಿ'ಯೇ ಜೀತಗಾರನನ್ನು ಹಿಡಿದಿತ್ತು; ಜೀತಗಾರ ಹಿಡುವಳಿಯನ್ನು ಹಿಡಿದಿರಲಿಲ್ಲ."[1] ಜೀತಗಾರನೇನಾದರೂ ಅಲ್ಲಿಂದ ಓಡಿ ಹೋಗಲು ಯತ್ನಿಸಿ ಸಿಕ್ಕಿಬಿದ್ದರೆ ಅವನಿಗೆ ತುಂಬಾ ಕಠಿಣ ಶಿಕ್ಷೆ ವಿಧಿಸಲ್ಪಡುತ್ತಿತ್ತು. ಅಲ್ಲದೆ ಅವನು ಹಿಂತಿರುಗಲೇ ಬೇಕಾಗಿತ್ತೆಂಬುದರಲ್ಲಿ ಸಂಶಯವೇ ಇಲ್ಲ. ಬ್ರಾಡ್‌ಫರ್ಡ್

---

[1] J. W. Thompson, *An Economic & Social History of the Middle Ages 300-1300*, p. 730. The Century Company, N.Y., 1928.

ಮೇನರಿನ ನ್ಯಾಯಾಲಯದ ೧೩೪೯–೫೦ರ ಕಾಲಕ್ಕೆ ಸಂಬಂಧಿಸಿದ ಕಡತದಲ್ಲಿ ಈ ಮಾತುಗಳಿವೆ: "ಪ್ರಭುವಿನ ದಾಸಿಯಾದ ವಿಲಿಯಂ ಚೈಲ್ಡ್‌ಯಾಂಗಳ ಮಗಳು ಆಲಿಸಳು ಯಾರ್ಕ್ ಎಂಬಲ್ಲಿರುವಳೆಂದು ಮನವಿ ಬಂದಿದೆ. ಆದ್ದರಿಂದ ಅವಳು ಬಂಧಿಸಲ್ಪಡಲಿ."[1]

ಪ್ರಭುವಿಗೆ ತನ್ನ ಜೀತಗಾರರನ್ನು ಕಳೆದುಕೊಳ್ಳಲು ಇಷ್ಟವಿರಲಿಲ್ಲ. ಆದ್ದರಿಂದ ಜೀತಗಾರರಾಗಲಿ ಅವರ ಮಕ್ಕಳಾಗಲಿ ತಮ್ಮ ಸ್ಥಳದ ಹೊರಗೆ ಪ್ರಭುವಿನ ವಿಶಿಷ್ಟ ಒಪ್ಪಿಗೆಯಿಲ್ಲದೆ ಮದುವೆ ಆಗಬಾರದೆಂಬ ಕಟ್ಟುಪಾಡಿತ್ತು. ಜೀತಗಾರ ಸತ್ತಾಗ ಅವನ ಹಿಡುವಳಿಯನ್ನು ಅವನ ಉತ್ತರಾಧಿಕಾರಿ ಪಡೆಯಬಹುದಾಗಿತ್ತು. ಇದಕ್ಕೂ ಶುಲ್ಕ ತೆರಬೇಕಾಗಿತ್ತು. ಹಿಂದೆ ಹೇಳಿದ ನ್ಯಾಯಾಲಯದ ಕಡತದಲ್ಲಿರುವ ಇಂಥ ಒಂದು ಪ್ರಸಂಗದ ವಿವರವನ್ನೋದಿ: "ಎಂಟು ಎಕರೆ ಗುತ್ತು ನೆಲ ಹೊಂದಿದ್ದ, ರಿಚರ್ಡನ ಮಗ ರೋಜರನ ಮಗನಾದ ರಾಬರ್ಟ್ ಮರಣ ಹೊಂದಿದಾನೆ. ಅವನ ಸೋದರನೂ ಉತ್ತರಾಧಿಕಾರಿಯೂ ಆದ ಜಾನನು ಮೇನರಿನ ಪದ್ಧತಿಯಂತೆ ಈ ನೆಲವನ್ನು ತನಗಾಗಿ ಹಾಗೂ ತನ್ನ ಉತ್ತರಾಧಿಕಾರಿಗಳಿಗಾಗಿ ಪಡೆದಿದ್ದಾನೆ. ಈ ಹಕ್ಕು ಪಡೆಯುವುದಕ್ಕಾಗಿ ಇವನು ಪ್ರಭುವಿಗೆ ಮೂರು ಷಿಲ್ಲಿಂಗುಗಳ ದಂಡ ತೆರಬೇಕು."[2]

ಮೇಲೆ ಉದ್ಧರಿಸಿರುವ ವಾಕ್ಯದಲ್ಲಿ ಎರಡು ಪದಗಳನ್ನು ಗಮನಿಸಿ: "ಮೇನರಿನ ಪದ್ಧತಿಯಂತೆ" ಎಂಬುವು ಈ ಪದಗಳು. ಈ ಪದಗಳಿಂದ ಊಳಿಗಮಾನ್ಯ ವ್ಯವಸ್ಥೆಯ ತಿರುಳನ್ನರಿಯಬಹುದು. ಇಪ್ಪತ್ತನೆಯ ಶತಮಾನದಲ್ಲಿ ಶಾಸನಗಳಿಗೆ ಏನು ಬಲ ಇದೆಯೋ ಅಷ್ಟೇ ಬಲ ಅಂದು—ಮಧ್ಯಯುಗದಲ್ಲಿ—ಪದ್ಧತಿಗೆ ಇತ್ತು. ಪ್ರತಿಯೊಂದನ್ನೂ ಒಂದು ಕ್ರಮಕ್ಕೆ ಒಳಪಡಿಸುವಷ್ಟು ಶಕ್ತವಾದ ಸರಕಾರ ಅಂದು ಇರಲಿಲ್ಲ. ಮೇಲಿನಿಂದ ಕೆಳಗಿನವರೆಗೆ ಪರಸ್ಪರ ಕರ್ತವ್ಯಗಳ, ಸೇವೆಗಳ ಅಸ್ತಿಭಾರದ ಮೇಲೆ ನಿಂತಿತ್ತು, ಇಡೀ ವ್ಯವಸ್ಥೆ. ನೆಲವನ್ನು ಹೊಂದಿದ್ದ ಮಾತ್ರಕ್ಕೇ ಅದನ್ನು ಏನು ಬೇಕಾದರೂ ಮಾಡಬಹುದೆಂಬ ಅಧಿಕಾರವೇನೂ ಇರಲಿಲ್ಲ. ನೆಲದ ಸ್ವಾಮ್ಯದ ಜತೆಗೇ ಇತರರ ಬಗ್ಗೆ ಕೆಲವು ಕರ್ತವ್ಯಗಳೂ ಬರುತ್ತಿದ್ದುವು. ಇವನ್ನು ನಿರ್ವಹಿಸಲೇ ಬೇಕಾಗಿತ್ತು. ಇವನ್ನು ನಿರ್ವಹಿಸದಿದ್ದರೆ ನೆಲದ ಒಡೆತನ ತಪ್ಪುತ್ತಿತ್ತು. ಜೀತಗಾರ ತನ್ನ ಪ್ರಭುವಿಗೆ ಕೆಲವು ಸೇವೆ ಸಲ್ಲಿಸಬೇಕಿತ್ತು. ಪ್ರಭುವಿಗೂ ಜೀತಗಾರನಿಗೆ ಸಂಬಂಧಿಸಿದಂತೆ ಕೆಲವು ಕರ್ತವ್ಯಗಳಿದ್ದುವು. ಉದಾಹರಣೆಗೆ, ಯುದ್ಧಕಾಲದಲ್ಲಿ ಅವನು ಜೀತಗಾರನಿಗೆ ರಕ್ಷಣೆ ನೀಡಬೇಕಿತ್ತು. ಈ ಕರ್ತವ್ಯಗಳೆಲ್ಲ ಪದ್ಧತಿಗೆ ಅನುಸಾರವಾಗಿ—ಸಂಪ್ರದಾಯಾನುಸಾರವಾಗಿ—ಅಂಗೀಕೃತವಾಗಿ ಜಾರಿಗೆ ಬಂದಿದ್ದುವು. ಇಂದಿನ ಶಾಸನಭಂಗ ಪ್ರಸಂಗಗಳಂತೆ ಅಂದೂ ಕೂಡ ಈ ಪದ್ಧತಿ ಮುರಿಯುತ್ತಿದ್ದ ಸಂದರ್ಭಗಳೂ ಉಂಟು. ಇಬ್ಬರು ಜೀತಗಾರರ ನಡುವಣ ವ್ಯಾಜ್ಯದ ತೀರ್ಮಾನ ಪ್ರಭುವಿನ ನ್ಯಾಯಾಲಯದಲ್ಲಿ. ಇದು ಸಂಪ್ರದಾಯ. ಜೀತಗಾರನಿಗೂ ಪ್ರಭುವಿಗೂ

---

[1] *English Economic History, Select Documents*, p. 72. Compiled & Edited by A. E. Bland, P. A. Brown, and R. H. Tawney. G. Bell & Sons, London, 1914.

[2] *Ibid.*, p. 66.

ನಡುವೆ ವ್ಯಾಜ್ಯ ಉದ್ಭವಿಸಿದರೆ ಅದರ ತೀರ್ಮಾನ ಪ್ರಭುವಿನಂತೆಯೇ—ಎಂಬುದು ಸ್ವಯಂ ಸಿದ್ಧ. ಏಕೆಂದರೆ ಅವನೇ ಈ ವ್ಯಾಜ್ಯದ ತೀರ್ಪುಗಾರ. ಆದರೆ ಪ್ರಭು ಪದೇ ಪದೇ ಸಂಪ್ರದಾಯದ ಕಟ್ಟುಗಳನ್ನು ಮುರಿದಾಗ ಅವನ ಅಧಿಪತಿ ಅವನಿಂದ ವಿವರಣೆ ಕೇಳಿದ ಸಂದರ್ಭಗಳೂ ಉಲ್ಲೇಖವಾಗಿವೆ. ಮುಖ್ಯವಾಗಿ ಇಂಗ್ಲೆಂಡಿನಲ್ಲಿ ಹೀಗಿತ್ತು. ಅಲ್ಲಿ ದೊರೆಯ ನ್ಯಾಯಾಸ್ಥಾನದಲ್ಲಿ ರೈತರ ದೂರಿನ ವಿಚಾರಣೆಗೂ ಅವಕಾಶವಿತ್ತು.

ಒಬ್ಬ ಪ್ರಭುವಿಗೂ ಇನ್ನೊಬ್ಬ ಪ್ರಭುವಿಗೂ ನಡುವೆ ವ್ಯಾಜ್ಯ ಬಂದರೆ ಏನಾಗುತ್ತಿತ್ತು? ಈ ಪ್ರಶ್ನೆಗೆ ದೊರಕುವ ಉತ್ತರದಿಂದ ಈ ಊಳಿಗಮಾನ್ಯ ಪದ್ಧತಿಯನ್ನು ಕುರಿತ ಇನ್ನೊಂದು ಸ್ವಾರಸ್ಯಕರ ಸಂಗತಿ ಸ್ಪಷ್ಟಪಡುತ್ತದೆ. ಮೇನರಿನ ಪ್ರಭುವೂ ಜೀತಗಾರನಂತೆಯೇ. ಅವನಿಗೂ ನೆಲದ ಮೇಲೆ ಪರಮಾಧಿಕಾರವಿರಲಿಲ್ಲ. ಅವನೂ ಅವನ ಮೇಲ್ಪಟ್ಟ ಪ್ರಭುವಿನ ಬಾಡಿಗೆದಾರ. ಜೀತಗಾರ, ಅರ್ಧಸ್ವತಂತ್ರ ರೈತ, ಸ್ವತಂತ್ರ ರೈತ—ಇವರ ಹಿಡುವಳಿಯ ಹಕ್ಕು ಪ್ರಭುವಿನಿಂದ. ಪ್ರಭುವಿಗೆ ಇದು ದತ್ತವಾಗಿದ್ದದ್ದು ಅವನ ಮೇಲ್ಪಟ್ಟ ಶ್ರೀಮಂತನಿಂದ. ಶ್ರೀಮಂತನಿಗೆ ಈ ಹಕ್ಕು ದೊರೆತಿದ್ದದ್ದು ದೊರೆಯಿಂದ. ಕೆಲವು ವೇಳೆ ಈ ಸರಪಳಿ ಇನ್ನೂ ಮುಂದೆ ಹೋಗುತ್ತಿತ್ತು. ಒಬ್ಬ ದೊರೆ ಇನ್ನೊಬ್ಬ ದೊರೆಯಿಂದ ಈ ಹಕ್ಕು ಪಡೆದಿದ್ದ. ಈ ಆಧಿಪತ್ಯದ ಹೆಣಿಗೆಯನ್ನು ಕುರಿತ ವಿವರಣೆ ಇಂಗ್ಲೆಂಡಿನ ನ್ಯಾಯಾಲಯವೊಂದರ ೧೨೭೯ನೆಯ ಇಸವಿಯ ಕಡತವೊಂದರಲ್ಲಿ ಈ ರೀತಿ ಉಲ್ಲೇಖವಾಗಿದೆ: "ಸೆಂಟ್ ಜರ್ಮೇನಿನ ರೋಜರ್ ಮೂರು ಪೆನ್ನಿ ಶುಲ್ಕ ಕೊಟ್ಟು ಬೆಡ್‌ಫರ್ಡಿನ ರಾಬರ್ಟನಿಂದ ಒಂದು ಜಮೀನು ಪಡೆದಿದ್ದಾನೆ. ರಾಬರ್ಟನು ರಿಚರ್ಡ್ ಹಿಲ್‌ಚೆಸ್ಟರಿನಿಂದ ಆರು ಪೆನ್ನಿಯ ಶುಲ್ಕ ಕೊಟ್ಟು ಈ ಹಕ್ಕು ಪಡೆದಿದ್ದಾನೆ. ರಿಚರ್ಡನಿಗೆ ಅಲಾನ್ ಡೀ ಚಾರ್ಟರಿಸ್‌ನಿಂದ ವರ್ಷಕ್ಕೆ ಎರಡು ಪೆನ್ನಿಯ ಶುಲ್ಕದ ಮೇಲೆ ಇದು ದತ್ತವಾಗಿದೆ: ಅಲಾನ್‌ಗೆ ಇದು ಬಟ್ಲರ್ ವಿಲಿಯಂನಿಂದ ಬಂದಿದೆ, ವಿಲಿಯಂಗೆ ಲಾರ್ಡ್ ಗಿಲ್ಬರ್ಟ್ ಡೀ ನೆವಿಲ್‌ನಿಂದ, ಗಿಲ್ಬರ್ಟನಿಗೆ ಲೇಡಿ ಡೆವೋರ್ಗಿಲಾ ಡಿ ಬಲಿಯಾಲ್‌ಳಿಂದ, ಅವಳಿಗೆ ಸ್ಕಾಟ್ಲೆಂಡಿನ ದೊರೆಯಿಂದ, ಸ್ಕಾಟ್ಲೆಂಡಿನ ದೊರೆಗೆ ಇಂಗ್ಲೆಂಡಿನ ರಾಜನಿಂದ."[1]

ಅಲಾನ್ ಆಗಲಿ, ವಿಲಿಯಂ ಆಗಲಿ, ಗಿಲ್ಬರ್ಟ್ ಆಗಲಿ, ಈ ಸಾಲಿನ ಇತರರಲ್ಲಿ ಯಾರೇ ಆಗಲಿ, ಈ ಒಂದು ಜಮೀನಿನ ಹಿಡುವಳಿ ಮಾತ್ರ ಹೊಂದಿದ್ದುದಾಗಿ ಅರ್ಥವಲ್ಲ. ಜಹಗೀರಿಯನ್ನೆ ತೆಗೆದುಕೊಳ್ಳಿ. ಒಬ್ಬ ಪ್ರಭುವಿಗೆ ಒಂದೇ ಜಹಗೀರು ಇರಬಹುದು, ಅಥವಾ ಇಂಥ ಹಲವು ಜಹಗೀರುಗಳು ಸೇರಿದ ಕ್ಷೇತ್ರವಿರಬಹುದು. ಈ ದೊಡ್ಡ ಕ್ಷೇತ್ರವೂ ಕೂಡ ಇದಕ್ಕೂ ದೊಡ್ಡ ಪ್ರದೇಶದ ಉಂಬಳಿಯ ಭಾಗವಾಗಿರಬಹುದು. ಕೆಲವು ಪ್ರಭುಗಳಿಗೆ ಹಲವು ಜಹಗೀರುಗಳಿದ್ದುವು. ಇನ್ನು ಕೆಲವರಿಗೆ ಹಲವು ದೊಡ್ಡ ಕ್ಷೇತ್ರಗಳೇ ಇದ್ದುವು. ಮತ್ತೆ ಕೆಲವರು ಇದಕ್ಕೂ ದೊಡ್ಡ ಪ್ರದೇಶಗಳ ಉಂಬಳಿಗಳನ್ನೇ ಪಡೆದಿದ್ದರು. ಇಂಗ್ಲೆಂಡಿನಲ್ಲಿ ಒಬ್ಬ ಧನಿಕ

---

[1] *Translations and Reprints from the Original Sources of European History*, vol. IV, Section III, p. 22, Series for 1897. Department of History of the University of Pennsylvania, Philadelphia, 1898.

ಬ್ಯಾರನ್ನನಿಗೆ—ರಾಜಮಾನ್ಯನಿಗೆ—ಇಂಥ ಸುಮಾರು ೭೯೦ ಆಸ್ತಿಗಳಿದ್ದುವು. ಇಟಲಿಯಲ್ಲಿ ಕೆಲವು ದೊಡ್ಡ ಪ್ರಭುಗಳಿಗೆ ೧೦೦೦೦ಕ್ಕೂ ಹೆಚ್ಚು ಜಹಗೀರುಗಳಿದ್ದುವು. ರಾಜನ ವಿಷಯ ವಂತೂ ಹೇಳಬೇಕಾದುದೇ ಇಲ್ಲ. ಎಲ್ಲ ನೆಲಕ್ಕೂ ಅವನೇ ಒಡೆಯ—ಸಾಂಕೇತಿಕವಾಗಿ. ದೇಶದ ವಿವಿಧ ಭಾಗಗಳಲ್ಲಿ ಅವನಿಗೆ ಹಲವು ದೊಡ್ಡ ಜಮೀನುಗಳಿದ್ದುವು. ಶ್ರೀಮಂತ ರಾಗಲಿ, ಸಾಮಾನ್ಯ ಸ್ವತಂತ್ರ ಜನರೇ ಆಗಲಿ, ರಾಜನಿಂದ ನೇರವಾಗಿ ನೆಲದ ಹಕ್ಕು ಪಡೆ ದಿದ್ದರೆ ಅವರನ್ನು ಪ್ರಧಾನ ಗೇಣಿದಾರರೆಂದು ಕರೆಯುತ್ತಿದ್ದರು.

ಕಾಲಕ್ರಮೇಣ ದೊಡ್ಡ ದೊಡ್ಡ ಜಮೀನುಗಳು ಸಣ್ಣ ಸಣ್ಣ ಹಿಡುವಳಿಗಳಾಗಿ ತುಂಡಾ ದುವು. ವಿವಿಧ ಶ್ರೇಣಿಗಳ ಶ್ರೀಮಂತರು ಒಡೆತನ ಪಡೆದರು. ಪ್ರತಿಯೊಬ್ಬ ಪ್ರಭುವೂ ಆದಷ್ಟು ಹೆಚ್ಚುಮಂದಿ ಸಾಮಂತರನ್ನು ಹೊಂದಿರಬೇಕಾದುದು ಅಗತ್ಯವೆನಿಸಿತು. ಹೀಗೆ ಮಾಡಲು ಇದ್ದುದು ಒಂದೇ ಮಾರ್ಗ: ಪ್ರತಿಯೊಬ್ಬ ಶ್ರೀಮಂತನೂ ತನ್ನ ನೆಲದಲ್ಲಿ ಒಂದು ಭಾಗವನ್ನು ಇತರರಿಗೆ ಉಂಬಳಿಯಾಗಿ ಕೊಡುವುದು.

ಇಂದು ನಾವು ಬಳಸುವ ನಾನಾ ಪದಾರ್ಥಗಳನ್ನು ತಯಾರಿಸಲು ಹಲವು ಸಾಧನಗಳು ಅಗತ್ಯ. ಭೂಮಿ, ಕಾರ್ಖಾನೆ, ಗಿರಣಿ, ಗಣಿ, ರೈಲು, ಜಹಜು, ನಾನಾ ರೀತಿಯ ಯಂತ್ರ —ಎಲ್ಲವೂ ಬೇಕು. ಇವುಗಳಲ್ಲಿ ಎಷ್ಟು ಸಾಧನಗಳು ಒಬ್ಬನ ಬಳಿ ಇವೆಯೆಂಬುದರ ಮೇಲಿಂದ ಅವನು ಶ್ರೀಮಂತನೇ, ಅಲ್ಲವೇ ಎಂಬುದನ್ನು ನಿರ್ಣಯಿಸುತ್ತೇವೆ. ಆದರೆ ಊಳಿಗಮಾನ್ಯ ಪದ್ಧತಿಯ ಕಾಲದಲ್ಲಿ ಈ ನಿರ್ಣಯವಾಗುತ್ತಿದ್ದುದು ಬೇರೆ ರೀತಿಯಾಗಿ. ನಮಗೆ ಅಗತ್ಯವಾದ ಪದಾರ್ಥಗಳಲ್ಲಿ ಹೆಚ್ಚು ಕಡಮೆ ಎಲ್ಲವೂ ನೆಲದಿಂದಲೇ ಉತ್ಪತ್ತಿ ಯಾಗುತ್ತಿದ್ದುವು. ಆದ್ದರಿಂದ ಒಬ್ಬ ಮನುಷ್ಯನ ಐಶ್ವರ್ಯವನ್ನು ಅಳೆಯುತ್ತಿದ್ದುದು ಅವನು ಎಷ್ಟು ಭೂಮಿ ಹೊಂದಿದ್ದನೆಂಬುದರ ಮೇಲಿಂದ, ಆದ್ದರಿಂದ ಆಗ ಪದೇ ಪದೇ ನೆಲಕ್ಕಾಗಿ ಕಚ್ಚಾಟ ಆಗುತ್ತಿತ್ತು. ಆದ್ದರಿಂದ ಊಳಿಗ ಮಾನ್ಯ ಪದ್ಧತಿಯ ಯುಗ, ಕಾಳಗಗಳ ಯುಗವೆಂದರೆ ಸೋಜಿಗವೇನಲ್ಲ. ಕಾಳಗದಲ್ಲಿ ಗೆಲ್ಲುವುದಕ್ಕೆ ಇದ್ದ ಉಪಾಯ ವೆಂದರೆ ಆದಷ್ಟು ಹೆಚ್ಚು ಜನ ನಿಮ್ಮ ಪಕ್ಷ ಹಿಡಿಯುವಂತೆ ಮಾಡುವುದು; ನಿಮ್ಮ ನೆರವಿ ಗಾಗಿ ಯೋಧರ ನೇಮಕ ಮಾಡಿಕೊಳ್ಳುವುದು. ಊಳಿಗಮಾನ್ಯ ಪದ್ಧತಿಯ ಪ್ರಭುಗಳು ಯೋಧರಿಗೆ ನೆಲ ಹಂಚುವುದರ ಮೂಲಕ ಈ ಉದ್ದೇಶ ಸಾಧಿಸಿಕೊಂಡರು. ಈ ನೆಲಕ್ಕೆ ಪ್ರತಿಯಾಗಿ ಅವರು ಪ್ರಭುವಿಗೆ ಸ್ವಲ್ಪ ಶುಲ್ಕ ತೆರಬೇಕು, ಅಗತ್ಯವಾದ ನೆರವು ನೀಡಬೇಕು. ಇದು ಒಡಂಬಡಿಕೆ. ೧೨೦೦ನೆಯ ಇಸವಿಗೆ ಸಂಬಂಧಿಸಿದ, ಹಳೆಯ ಫ್ರೆಂಚ್ ದಸ್ತೈವ ಜೊಂದರಲ್ಲಿ ಹೀಗೆ ಇದೆ: "ಟ್ರಾಯ್‌ನ ಕೌಂಟ್ (ಅಧಿಪತಿ) ಥೈಬಾ ಆದ ನಾನು ಜಾಹೀರು ಪಡಿಸುವುದೇನೆಂದರೆ—ಜೋಸ್‌ಲಿನ್ ಡಿ ಅವಲಾ ಮತ್ತು ಅವನ ಉತ್ತರಾಧಿಕಾರಿಗಳಿಗೆ ಗಿಲ್ಲೆನ್‌ಕೋರ್ಟ್ ಎಂಬ ಜಹಗೀರಿಯನ್ನು ಕೊಟ್ಟಿದ್ದೇನೆ. ಈ ಜೋಸ್‌ಲಿನ್ನನು ಈ ಕಾರಣದಿಂದ ನನ್ನ ಅನುಚರನಾಗಿದ್ದಾನೆ."[1]

---

[1] J. H. Robinson, *Readings in European History*, vol. I, p. 177. Ginn and Company, Boston, 1904.

ಈ ಶ್ರೀಮಂತನ ಅನುಚರನಾದ ಜೋಸ್‌ಲಿನ್ನನ ಹಲವು ಕರ್ತವ್ಯಗಳಲ್ಲಿ ಬಹುಶಃ ಇದೂ ಒಂದು : ಅವನ ಪ್ರಭುವಿಗೆ ಸೇನಾ ನೆರವು ನೀಡುವುದು. ಬಹುಶಃ ಅವನು ಸುಸಜ್ಜಿತವಾದ ಒಂದು ಸೈನ್ಯವನ್ನೇ ಒಂದು ನಿಗದಿಯಾದ ಕಾಲಕ್ಕೆ ಒದಗಿಸಬೇಕಾಗಿದ್ದಿರಬಹುದು. ಇಂಗ್ಲೆಂಡ್ ಅಥವಾ ಫ್ರಾನ್ಸಿನಲ್ಲಿ ಒಬ್ಬ ಯೋಧನ ಸೇವೆಯ ಅವಧಿ ಸಾಮಾನ್ಯವಾಗಿ ನಲವತ್ತು ದಿನ. ಈ ಅವಧಿಯ ಪೂರ್ಣವಾಗಲ್ಲದಿದ್ದರೆ ಅರ್ಧ, ಕಾಲು ಅಥವಾ ಯಾವುದಾದರೂ ಭಾಗದಷ್ಟು ಕಾಲ ಸೇವೆ ಸಲ್ಲಿಸುವುದಾಗಿ ಒಡಂಬಡಿಕೆ ಮಾಡಿಕೊಳ್ಳಬಹುದಾಗಿತ್ತು. ೧೨೭೨ರಲ್ಲಿ ಫ್ರಾನ್ಸಿನ ದೊರೆ ಯುದ್ಧ ನಿರತನಾಗಿದ್ದ. ಆಗ ಅವನು ತನ್ನ ಯೋಧ ಗೇಣಿದಾರರನ್ನು ಸೈನ್ಯಕ್ಕೆ ಕರಸಿಕೊಂಡ. ಕೆಲವರು ಬಂದು, ತಮಗೆ ಗೊತ್ತಾದ ಅವಧಿಯ ಸೇವೆ ಸಲ್ಲಿಸಿದರು. ಇನ್ನು ಕೆಲವರು ತಮ್ಮ ಬದಲು ಬೇರೆಯವರನ್ನು ಕಳಿಸಿದರು. "ಯೋಧ ರೆಜಿನಾಲ್ಡ್ ಟ್ರೆಹಾನ್, ಸ್ವಯಂ ಅವನೇ ಬಂದಿದ್ದಾನೆ. ಅವನು ಸೈನ್ಯ ಸೇರಲಿ. ಯೋಧ ವಿಲಿಯಂ ಡೀ ಕಾಯ್ನರ್, ತನಗೆ ಪ್ರತಿಯಾಗಿ ಹತ್ತು ದಿನಗಳ ಅವಧಿಗೆ ಥಾಮಸ್ ಕೊಕೇನನ್ನು ಕಳಿಸಿದ್ದಾನೆ. ಜಾನ್ ಡೀ ಚಾಂಟಿಲ್ಯೂ ತನ್ನ ನಿಗದಿಯ ಹತ್ತು ದಿನಗಳ ಸೇವೆ ಸಲ್ಲಿಸಲೊಪ್ಪಿದ್ದಾನೆ; ಅಲ್ಲದೆ ನಲವತ್ತು ದಿನಗಳ ಸೇವೆ ಸಲ್ಲಿಸಬೇಕಾಗಿರುವ ಗೋಡಾರ್ಡಸ್ ಗೊಡಾರ್ಡ್‌ವಿಲ್ಲೆಯ ಪರವಾಗಿಯೂ ಬಂದಿದ್ದಾನೆ."[1]

ರಾಜಮನೆತನದವರೂ ಶ್ರೀಮಂತರೂ ಸೈನಿಕ ಸೇವೆ ಸಲ್ಲಿಸಿದ್ದಕ್ಕೆ ಪ್ರತಿಯಾಗಿ ಪಡೆದ ನೆಲವನ್ನು ಇದೇ ರೀತಿ, ಇಂಥವೇ ಷರತ್ತುಗಳಿಗೆ ಅನುಸಾರವಾಗಿ, ಇತರರಿಗೂ ಉಂಬಳಿ ಕೊಡುತ್ತಿದ್ದರು. ಇವರು ಸಾಮಾನ್ಯವಾಗಿ ತಮಗಾಗಿ ಉಳಿಸಿಕೊಳ್ಳುತ್ತಿದ್ದ ಹಕ್ಕು, ಮಾಡಬೇಕಾಗಿದ್ದ ಕರ್ತವ್ಯ, ಇವು ಒಂದೆಡೆಯಿಂದ ಇನ್ನೊಂದೆಡೆಗೆ ವ್ಯತ್ಯಾಸವಾಗುತ್ತಿದ್ದುವು. ಆದರೆ ಸ್ಥೂಲವಾಗಿ ಅವು ಯೂರೋಪಿನ ಪಶ್ಚಿಮ ಹಾಗೂ ಮಧ್ಯಭಾಗಗಳಲ್ಲಿ ಒಂದೇ ರೀತಿಯಾಗಿದ್ದುವು. ಗೇಣಿದಾರರು ತಮಗೆ ಇಷ್ಟಬಂದಂತೆ ನೆಲವನ್ನು ವಿನಿಯೋಗ ಮಾಡುವಂತಿರಲಿಲ್ಲ. ತಮ್ಮ ಅಧಿಪತಿಯ ಒಪ್ಪಿಗೆ ಪಡೆದು, ಅವನಿಗೆ ಕಾಣಿಕೆ ಒಪ್ಪಿಸಿ, ಅನಂತರ ಇನ್ನೊಬ್ಬರಿಗೆ ಅದನ್ನು ವರ್ಗಾಯಿಸಬೇಕಾಗಿತ್ತು. ಮೇನರಿನಲ್ಲಿರುವ ಜೀತಗಾರನ ಉತ್ತರಾಧಿಕಾರಿ ಪಿತ್ರಾರ್ಜಿತವಾದ ಹಕ್ಕನ್ನು ಪಡೆಯಲು ಹೇಗೆ ಪ್ರಭುವಿಗೆ ತೆರಿಗೆ ಒಪ್ಪಿಸಬೇಕಾಗಿತ್ತೋ ಹಾಗೆ ಪ್ರಭುವಿನ ಉತ್ತರಾಧಿಕಾರಿಯೂ ಅವನ ಅಧಿಪತಿಗೆ ತೆರಿಗೆ ಕೊಡಬೇಕಾಗಿತ್ತು. ಒಬ್ಬ ಗೇಣಿದಾರ ಸತ್ತಾಗ ಅವನ ಉತ್ತರಾಧಿಕಾರಿ ಇನ್ನೂ ವಯಸ್ಕನಾಗಿರದಿದ್ದರೆ ಆಗ ಅವನು ಪ್ರಾಪ್ತ ವಯಸ್ಕನಾಗುವ ವರೆಗೂ ಅವನ ಹಕ್ಕು ಅಧಿಪತಿಯ ಕೈಯಲ್ಲಿರುತ್ತಿತ್ತು. ಜಮೀನು ಹಿಡುವಳಿಯ ನಿಯಮಗಳಿಗೆ ಅನುಸಾರವಾಗಿ ಅವನು ತನ್ನ ಕರ್ತವ್ಯಗಳನ್ನು ನಿರ್ವಹಿಸಲಾರನೆಂಬ ಕಾರಣದಿಂದ ಅಧಿಪತಿಯೇ ಇದರ ಹೊಣೆ ಹೊರುತ್ತಿದ್ದ. ಈ ಸಮಯದಲ್ಲಿ ಈ ನೆಲದಿಂದ ಬರುತ್ತಿದ್ದ ವರಮಾನವೆಲ್ಲ ಅಧಿಪತಿಗೇ—ಎಂದು ಹೇಳಬೇಕಾಗಿಯೇ ಇಲ್ಲ.

[1] *Translations and Reprints, op. cit.*, p. 31.

ಉತ್ತರಾಧಿಕಾರಿಣಿಗಳು ಮದುವೆಯಾಗಬೇಕಾದರೆ ಪ್ರಭುವಿನ ಒಪ್ಪಿಗೆ ಪಡೆಯ ಬೇಕಿತ್ತು. ನೆವರ್ಸ್‌ನ ಶ್ರೀಮಂತೆ ೧೨೨೧ರಲ್ಲಿ ಹೇಳಿಕೊಂಡ ಆತ್ಮವೃತ್ತಾಂತ ಸ್ವಾರಸ್ಯ ವಾಗಿದೆ: "ನೆವರ್ಸ್‌ನ ಶ್ರೀಮಂತೆ ಮಾಟಿಲ್ಡಾ ಆದ ನಾನು ಈ ಕಾಗದವನ್ನು ನೋಡತಕ್ಕ ಸಮಸ್ತರಿಗೂ ತಿಳಿಯಪಡಿಸುವುದೇನೆಂದರೆ—ನನ್ನ ಅತ್ಯಂತ ಪ್ರೀತಿಯ ಪ್ರಭು ಫಿಲಿಪ್ಪನ ಪವಿತ್ರ ಸುವಾರ್ತೆಯ ಆಣೆಯಿಟ್ಟು ಹೇಳುತ್ತೇನೆ: ದೇವರ ದಯೆಯನ್ನೂ ಫ್ರಾನ್ಸಿನ ಮಹಾರಾಜರ ಕೃಪೆಯನ್ನೂ ಮುಂದಿಟ್ಟು ಹೇಳುತ್ತೇನೆ. ಪ್ರಭುವಿಗೆ ನಾನು ಒಳ್ಳೆಯ ಹಾಗೂ ನಿಷ್ಠಾವಂತ ಸೇವೆ ಸಲ್ಲಿಸುತ್ತೇನೆಂದೂ, ಅವನ ಒಪ್ಪಿಗೆ ಹಾಗೂ ಆಶೀರ್ವಾದ ವಿಲ್ಲದೆ ನಾನು ಯಾರನ್ನೂ ಮದುವೆಯಾಗುವುದಿಲ್ಲವೆಂದೂ ಆಣೆಯಿಡುತ್ತೇನೆ."[1]

ವಿಧವೆ ಮದುವೆ ಮಾಡಿಕೊಳ್ಳಬೇಕಾದರೆ ಅವಳು ತನ್ನ ಪ್ರಭುವಿಗೆ ದಂಡ ತೆರ ಬೇಕಾಗಿತ್ತು. ಇಂಗ್ಲಿಷ್ ಚರಿತ್ರೆಗೆ ಸಂಬಂಧಿಸಿದ ೧೩೧೬ರ ಒಂದು ಕಡತದಲ್ಲಿ ಬರೆದಿರು ವುದನ್ನೋದಿ: "ರಾಜನೇ ಮುಂತಾದವರಿಗೆ ಶರಣು. ನಮ್ಮ ಪ್ರಧಾನ ಗೇಣಿದಾರನಾಗಿದ್ದ ದಿವಂಗತ ಸೈಮನ್ ಡಾರ್ಸೆಸ್‌ನ ಪತ್ನಿ ಜೋನಳ ಪರವಾಗಿ ನೂರು ಷಿಲ್ಲಿಂಗುಗಳ ದಂಡವನ್ನು ನಮಗೆ ಸಲ್ಲಿಸಿರುವುದರಿಂದ, ಈಕೆಯು ತನ್ನಿಚ್ಛೆ ಬಂದವನನ್ನು ಮದುವೆ ಯಾಗಲು ಅಪ್ಪಣೆ ಕೊಟ್ಟಿದೆ. ಈಕೆಯನ್ನು ಮದುವೆಯಾಗುವವನು ನಮ್ಮ ಅಧೀನ ದಲ್ಲಿಯೇ ಇರತಕ್ಕದ್ದೆಂಬ ಷರತ್ತನ್ನೂ ವಿಧಿಸಿದೆ."[2]

ವಿಧವೆ ಮತ್ತೆ ವಿವಾಹವಾಗಲಿಚ್ಛಿಸದಿದ್ದರೆ, ಅವಳು ವಿವಾಹವಾಗಬೇಕೆಂದು ಪ್ರಭು ಒತ್ತಾಯಪಡಿಸದಿರಬೇಕೆಂದಿದ್ದರೆ, ಅದಕ್ಕೂ ಆಕೆ ಹಣ ತೆರಬೇಕಾಗಿತ್ತು. "ವಾರ್ವಿಕ್‌ನ ಶ್ರೀಮಂತೆ ಆಲಿಸಳು ತನಗೆ ಇಷ್ಟವಿರುವ ವರೆಗೂ ವಿಧವೆಯಾಗಿಯೇ ಉಳಿಯಗೊಡ ಬೇಕೆಂದೂ, ಮದುವೆಯಾಗಬೇಕೆಂದು ದೊರೆ ಒತ್ತಾಯಪಡಿಸದಿರಬೇಕೆಂದೂ ಒಂದು ಸಾವಿರ ಪೌಂಡುಗಳನ್ನೂ ಹತ್ತು ಸವಾರಿ ಕುದುರೆಗಳನ್ನೂ ಕೊಟ್ಟಿದ್ದಾಳೆ."[3]

ಒಡೆಯ ಕೊಟ್ಟ ನೆಲ ಹಾಗೂ ರಕ್ಷಣೆಗೆ ಪ್ರತಿಯಾಗಿ ಭೃತ್ಯ ಸಲ್ಲಿಸಬೇಕಾಗಿದ್ದ ಈ ಕರ್ತವ್ಯಗಳ ಜತೆಗೆ ಇನ್ನೂ ಕೆಲವು ಇದ್ದುವು. ಪ್ರಭುವನ್ನು ಶತ್ರುಗಳು ಸೆರೆಹಿಡಿದು, ಹಣ ಕೊಡುವವರೆಗೂ ಬಿಡುವುದಿಲ್ಲವೆಂದು ಹೇಳಿದರೆ, ಅವನ ಬಿಡುಗಡೆಗಾಗಿ ಹಣ ಕೊಡಲು ಅಧೀನರೆಲ್ಲಾ ಸಹಾಯ ಮಾಡಬೇಕು. ಪ್ರಭುವಿನ ಮಗನಿಗೆ ವೀರಪದವಿ ಬಂದರೆ—ಬಹುಶಃ ಈ ಘಟನೆಯ ಸಮಾರಂಭ ಆಚರಿಸುವ ವೆಚ್ಚಕ್ಕಾಗಿ—ಅವನ ಅಧೀನರೆಲ್ಲಾ ಸಹಾಯಮಾಡುವುದು ಪದ್ಧತಿ. ೧೨೫೪ರಲ್ಲಿ ನಡೆದ ಒಂದು ಘಟನೆ ಸ್ವಾರಸ್ಯವಾಗಿದೆ. ರಾಜನ ಮಗನಿಗೆ ವೀರಪದವಿ ದೊರೆತಾಗ, ಇದಕ್ಕಾಗಿ ಹಣ ಕೊಡುವು ದಿಲ್ಲವೆಂದು ಬಾಲ್ಡ್‌ವಿನ್ ಎಂಬುವನು ವಾದ ಹೂಡಿದ; ಏಕೆಂದರೆ ಇವನು ರಾಜನಿಗೆ ನೇರವಾಗಿ ಅಧೀನನಾಗಿರಲಿಲ್ಲ. ಇವನು ತನ್ನ ವಾದದಲ್ಲಿ ಗೆದ್ದ. ಈ ವಿಚಾರದಲ್ಲಿ

---

[1] *Translations and Reprints, op. cit.*, p. 24.

[2] Bland, Brown and Tawney, *op. cit.*, p. 29.

[3] *Translations and Reprints, op. cit.*, p. 26.

ಇಂಗ್ಲೆಂಡಿನ ಖಜಾನೆಯ ಲಿಖಿತ ಈ ರೀತಿ ಇದೆ: "ಬಾಲ್ಡ್ವಿನ್ ಡೀ ಫ್ರಿವಿಲ್ ಎಂಬುವನು ನೇರವಾಗಿ ರಾಜನಿಂದ ಹಿಡುವಳಿ ಪಡೆದಿಲ್ಲದಿದ್ದರೆ, ಇವನೇ ಹೇಳಿರುವಂತೆ ಇವನು ಅಲೆಕ್ಸಾಂಡರ್ ಡೀ ಅಬಿಟೂಟನಿಂದಲೂ, ಅಲೆಕ್ಸಾಂಡರನು ವಿಲಿಯಂ ಡೀ ಬ್ಯೂಚಾಪನಿಂದಲೂ, ವಿಲಿಯಮನು ವಾರ್ಸೆಸ್ಟರಿನ ಬಿಷಪ್‌ನಿಂದಲೂ, ಬಿಷಪ್ ರಾಜನಿಂದಲೂ ಅಧಿಕಾರ ಪಡೆದಿರುವುದು ಸತ್ಯವಾಗಿದ್ದರೆ, ರಾಜನ ಮಗನಿಗೆ ವೀರಪದವಿ ದೊರಕಿಸಿ ಕೊಡುವುದಕ್ಕಾಗಿ ವಿಧಾಯಕ ಶುಲ್ಕ ಕೊಡದಿದ್ದುದಕ್ಕಾಗಿ ಈತನ ಆಸ್ತಿ ಜಫ್ತಿ ಮಾಡಬೇಕೆಂಬ ಆಜ್ಞೆಯಿಂದ ವಿನಾಯಿತಿ ಕೊಟ್ಟಿದೆ."[1]

ಬಾಲ್ಡ್ವಿನ್ನನಿಗೂ ರಾಜನಿಗೂ ನಡುವೆ ಹಲವು ಪ್ರಭುಗಳ ಸರಪಳಿಯೇ ಇದ್ದುದನ್ನು ಗಮನಿಸಿ. ಇವರಲ್ಲೊಬ್ಬ ವಾರ್ಸೆಸ್ಟರಿನ ಬಿಷಪ್—ಕ್ರೈಸ್ತ ಧರ್ಮಾಧಿಪತಿ—ಆಗಿದ್ದುದನ್ನೂ ಗಮನಿಸಿ. ಇದು ಒಂದು ಮುಖ್ಯ ಅಂಶ. ಏಕೆಂದರೆ ಚರ್ಚೂ ಕೂಡ ಈ ಊಳಿಗಮಾನ್ಯ ಪದ್ಧತಿಯ ಒಂದು ಅವಿಭಾಜ್ಯ ಅಂಗವಾಗಿತ್ತು—ಎಂಬುದನ್ನು ಇದು ಸ್ಪಷ್ಟಪಡಿಸುತ್ತದೆ. ಚರ್ಚು ಈ ವ್ಯವಸ್ಥೆಯ ಗೋಪುರದ ತುದಿಯಲ್ಲಿದ್ದ ರಾಜನಷ್ಟು ಮುಖ್ಯವಾಗಿ ಇದ್ದಿಲ್ಲದಿರಬಹುದು. ಆದರೆ ಇತರ ವಿಧಗಳಲ್ಲಿ ಇದು ಇನ್ನೂ ಹೆಚ್ಚು ಪ್ರಾಮುಖ್ಯ ಹೊಂದಿತ್ತು. ಚರ್ಚು ಇಡೀ ಕ್ರೈಸ್ತ ಜಗತ್ತನ್ನು ಆವರಿಸಿದ್ದ ಸಂಸ್ಥೆ. ಎಂಥ ರಾಜಗದ್ದುಗೆಗಿಂತಲೂ ಇದು ಹೆಚ್ಚು ಶಕ್ತವೂ, ಹೆಚ್ಚು ವಿಶಾಲವೂ, ಹೆಚ್ಚು ಪುರಾತನವೂ, ಅವಿಚ್ಛಿನ್ನವೂ ಆಗಿತ್ತು. ಅದು ಧಾರ್ಮಿಕ ಯುಗ. ಆದ್ದರಿಂದ ಚರ್ಚು ಸಹಜವಾಗಿ ಪಾರಮಾರ್ಥಿಕ ಅಧಿಕಾರವನ್ನೂ ಪ್ರತಿಷ್ಠೆಯನ್ನೂ ಹೊಂದಿತ್ತು. ಅಷ್ಟೇ ಅಲ್ಲದೆ ಅದು ಸಂಪತ್ತನ್ನೂ ಹೊಂದಿತ್ತು, ಆಗ ಸಂಪತ್ತಿಗಿದ್ದ ಒಂದೇ ಒಂದು ರೂಪದಲ್ಲಿ—ಭೂಮಿಯ ರೂಪದಲ್ಲಿ. ಊಳಿಗಮಾನ್ಯ ಪದ್ಧತಿಯ ಕಾಲದಲ್ಲಿ ಅತಿ ಹೆಚ್ಚಿನ ಭೂ ಸ್ವಾಮ್ಯವಿದ್ದುದು ಚರ್ಚಿಗೆ. ತಾವು ನಡಸುತ್ತಿದ್ದ ಜೀವನದ ವಿಚಾರವಾಗಿ ಹೇಸಿ, ಸಾಯುವ ಮುನ್ನ ದೇವರ ಒಲುಮೆ ಗಳಿಸುವ ಇಚ್ಛೆ ಹೊಂದಿದ್ದವರು ಚರ್ಚಿಗೆ ನೆಲ ದತ್ತಿ ಬಿಡುತ್ತಿದ್ದರು. ರೋಗಿಗಳನ್ನೂ ಬಡವರನ್ನೂ ನೋಡಿಕೊಳ್ಳುವ ಸ್ತುತ್ಯ ಕಾರ್ಯವನ್ನು ಚರ್ಚು ನಡಸುತ್ತಿರುವುದೆಂದು ಮೆಚ್ಚಿ, ಈ ಕಾರ್ಯ ಮುನ್ನಡೆಯಲೆಂಬ ಸದುದ್ದೇಶದಿಂದಲೂ ಜನರು ಚರ್ಚಿಗೆ ಭೂಮಿ ಕೊಡುತ್ತಿದ್ದರು. ಕೆಲವರು ಶ್ರೀಮಂತರು ಯುದ್ಧದಲ್ಲಿ ಜಯ ಗಳಿಸಿದಾಗ, ಸೋತ ಶ್ರೀಮಂತನ ನೆಲವನ್ನೆಲ್ಲ ಪಡೆದಾಗ, ಇದರಲ್ಲೊಂದು ಭಾಗವನ್ನು ಚರ್ಚಿಗೆ ಕೊಡುವ ಸಂಪ್ರದಾಯ ಇಟ್ಟುಕೊಂಡಿದ್ದರು. ಹೀಗೆ—ಇನ್ನೂ ನಾನಾ ಮಾರ್ಗಗಳಿಂದ—ಚರ್ಚು ಭೂಮಿ ಗಳಿಸಿತು. ಕೊನೆಗೆ ಪಶ್ಚಿಮ ಯೂರೋಪಿನ ಒಟ್ಟು ನೆಲದ ಮೂರನೆಯ ಒಂದರಿಂದ ಅರ್ಧದ ವರೆಗಿನ ಭಾಗದ ಒಡೆತನ ಚರ್ಚಿಗೆ ಬಂತು.

ಕೌಂಟುಗಳು ಡ್ಯೂಕುಗಳೇ ಮುಂತಾದ ಶ್ರೀಮಂತರಂತೆ ಕ್ರೈಸ್ತ ಧರ್ಮಾಧಿಪತಿಗಳೂ ಮಠಾಧಿಪತಿಗಳೂ—ಬಿಷಪ್ಪರೂ ಆಬಟ್ಟರೂ—ಈ ಊಳಿಗಮಾನ್ಯ ಪದ್ಧತಿಯಲ್ಲಿ ಸ್ಥಾನ ಹೊಂದಿದ್ದರು. ೧೧೬೭ರಲ್ಲಿ ಬ್ಯೂವೇಸಿನ ಬಿಷಪ್ಪನಿಗೆ ಉಂಬಳಿ ಕೊಟ್ಟ ವಿಚಾರವನ್ನೋದಿ:

[1] *Translations and Reprints, op. cit.*, p. 21.

"ದೇವರ ಆಶೀರ್ವಾದದಿಂದ ಫ್ರಾನ್ಸಿನ ದೊರೆಯಾದ ನಾನು, ಲೂಯಿ, ಈಗ ಇರುವವರಿಗೂ ಮುಂದೆ ಬರುವವರಿಗೂ ತಿಳಿಯಪಡಿಸುವುದೇನೆಂದರೆ—ಮಾಂಟೀಯಲ್ಲಿ, ನಮ್ಮ ಸಮ್ಮುಖದಲ್ಲಿ, ಷಾಂಪೇನಿನ ಕೌಂಟ್ ಹೆನ್ರಿಯು ಸ್ಯಾವಿನಿಯ ಉಂಬಳಿಯನ್ನು ಬ್ಯೂವೇಸಿನ ಬಿಷಪ್ಪನಾದ ಬಾರ್ತಲೋಮಿಯೋವಿಗೂ ಆತನ ಉತ್ತರಾಧಿಕಾರಿಗಳಿಗೂ ಕೊಟ್ಟಿದ್ದಾನೆ. ಈ ಕೊಡುಗೆಗೆ ಪ್ರತಿಯಾಗಿ ಈ ಬಿಷಪ್ಪನು ಕೌಂಟ್ ಹೆನ್ರಿಗೆ ಒಬ್ಬ ಯೋಧನನ್ನು ಕೊಡಲೊಪ್ಪಿದ್ದಾನೆ; ಮತ್ತು ನ್ಯಾಯ, ಆರಾಧನೆ ಇವುಗಳನ್ನು ನಡಸಿ ಕೊಡಲೂ ಒಪ್ಪಿದ್ದಾನೆ. ಈತನ ಅನಂತರ ಬರುವ ಬಿಷಪ್ಪರೂ ಇದೇ ರೀತಿ ನಡಸಿಕೊಂಡು ಬರುವರೆಂದೂ ಒಪ್ಪಿದ್ದಾನೆ."[1]

ಮೇಲ್ಪಟ್ಟ ಪ್ರಭುವಿನಿಂದ ಚರ್ಚು ಭೂಮಿ ಪಡೆಯುತ್ತಿದ್ದುದಷ್ಟೇ ಅಲ್ಲ; ತಾನೂ ಅಧಿಪತಿಯಂತೆ ವರ್ತಿಸುತ್ತಿತ್ತು : "ವಿಲಿಯಂ ಮಾಡಿಟನ ಮಗನಾದ ರಾಬರ್ಟನಿಗೆ ಆಬಟ್ ಫಾರಿಷಿಯಸ್ಸು ವೆಸ್ಟನ್ನಿನಲ್ಲಿ ಜಮೀನನ್ನು ಉಂಬಳಿಯಾಗಿ ಕೊಟ್ಟಿದ್ದಾನೆ. ಪ್ರತಿಯಾಗಿ ರಾಬರ್ಟನು ಈ ಕರ್ತವ್ಯಗಳನ್ನು ನಿರ್ವಹಿಸಬೇಕು : ಆಬಿಂಗ್ಟನ್ನಿನ ಚರ್ಚು ಯೋಧರ ದಿನವನ್ನು ಆಚರಿಸಿದಾಗಲೆಲ್ಲ ಇವನು ಯೋಧನ ಸೇವೆಯಲ್ಲಿ ಅರ್ಧವನ್ನು ಈ ಚರ್ಚಿಗೆ ಸಲ್ಲಿಸಬೇಕು."[2]

ಊಳಿಗಮಾನ್ಯ ಪದ್ಧತಿಯ ಆರಂಭದೆಸೆಯಲ್ಲಿ ಚರ್ಚು ಪ್ರಗತಿಪರ ಜೀವಂತ ಶಕ್ತಿಯಾಗಿತ್ತು. ರೋಮನ್ ಚಕ್ರಾಧಿಪತ್ಯದ ಸಂಸ್ಕೃತಿಯ ಬಹುಭಾಗವನ್ನು ಇದು ಊರ್ಜಿತಪಡಿಸಿತ್ತು, ಜ್ಞಾನಕ್ಕೆ ಪ್ರೋತ್ಸಾಹ ನೀಡುತ್ತಿತ್ತು. ಇದು ಹಲವು ಶಾಲೆಗಳನ್ನು ಸ್ಥಾಪಿಸಿತ್ತು. ದರಿದ್ರರ ಸೇವೆ, ಅನಾಥ ಶಿಶು ಪೋಷಣೆ, ರುಗ್ಣಾಲಯ ಸ್ಥಾಪನೆ ಮುಂತಾದ ನಾನಾ ರೀತಿಯಲ್ಲಿ ಇದು ಸೇವಾಕಾರ್ಯ ಕೈಕೊಂಡಿತ್ತು. ಒಟ್ಟಿನಲ್ಲಿ ಈ ಕ್ರೈಸ್ತ ವೈದಿಕ ಪ್ರಭುಗಳು ತಮ್ಮ ಜಮೀನಿನ ಆಡಳಿತವನ್ನು ಇತರ ಶ್ರೀಮಂತರಿಗಿಂತ ಚೆನ್ನಾಗಿ ನಡಸುತ್ತಿದ್ದರು. ಅವರು ಪಡೆಯುತ್ತಿದ್ದುದಕ್ಕಿಂತ ಹೆಚ್ಚಾಗಿ ತಮ್ಮ ನೆಲದಿಂದ ಫಸಲು ತೆಗೆಯುತ್ತಿದ್ದರು.

ಆದರೆ ಈ ಚಿತ್ರಕ್ಕೆ ಇನ್ನೊಂದು ಬದಿಯೂ ಇತ್ತು. ಶ್ರೀಮಂತರು ಹೆಚ್ಚು ಹೆಚ್ಚು ಬೆಂಬಲಿಗರನ್ನು ಪಡೆಯುವ ಉದ್ದೇಶದಿಂದ ತಮ್ಮ ನೆಲವನ್ನು ವಿಭಜಿಸುತ್ತಿದ್ದರು. ಇವರ ನೆಲ ಸಣ್ಣದಾಗುತ್ತಿದ್ದಂತೆ ಚರ್ಚಿನ ವಶಕ್ಕೆ ಹೆಚ್ಚು ಹೆಚ್ಚು ನೆಲ ಬರುತ್ತಿತ್ತು. ಪೂಜಾರಿಗಳು ಮದುವೆ ಮಾಡಿಕೊಳ್ಳಬಾರದೆಂಬ ನಿಯಮ ಜಾರಿಗೆ ಬಂದುದಕ್ಕೆ ಚರ್ಚಿನ ಆಸ್ತಿ ಕರಗಬಾರದೆಂದು ಇದರ ಮುಖ್ಯಸ್ಥರು ಯೋಚಿಸಿದುದೂ ಒಂದು ಕಾರಣ. ಇವರು ಮದುವೆ ಮಾಡಿಕೊಳ್ಳಲು ಅವಕಾಶ ಕೊಟ್ಟಿದ್ದರೆ ಆಗ ಚರ್ಚಿನ ಆಸ್ತಿ ಈ ಅಧಿಕಾರಿಗಳ ಮಕ್ಕಳಿಗೆ ಹೋಗುತ್ತಿತ್ತು. ಪ್ರತಿಯೊಬ್ಬನೂ ಚರ್ಚಿಗೆ ತನ್ನ ವರಮಾನದ ಹತ್ತರಲ್ಲೊಂದು ಪಾಲನ್ನು ತೆರಿಗೆಯಾಗಿ ಕೊಡುತ್ತಿದ್ದುದೂ ಚರ್ಚಿನ ಆಸ್ತಿ ಬೆಳೆಯಲು ಕಾರಣ.[3] ಒಬ್ಬ

---

[1] J. H. Robinson, *op. cit.*, vol. I, p. 178.

[2] *Ibid.*

[3] cf. J. W. Thompson, *op. cit.*, pp. 656 ff.

ಪ್ರಸಿದ್ಧ ಇತಿಹಾಸಕಾರ ಈ ವಿಚಾರವಾಗಿ ಹೀಗೆ ಹೇಳುತ್ತಾನೆ: "ಇಂದಿನ ಯುಗದಲ್ಲಿ ಎಂದೂ ಕೇಳಿಲ್ಲದಷ್ಟು ಭಾರವಾದ ತೆರಿಗೆಯನ್ನು—ದಶಾಂಶ ತೆರಿಗೆಯನ್ನು—ಅಂದು ಚರ್ಚು ವಿಧಿಸಿತ್ತು. ಭೂಕಂದಾಯ, ವರಮಾನ ತೆರಿಗೆ, ಮರಣ ತೆರಿಗೆ—ಇವೆಲ್ಲ ಇದರಲ್ಲಿ ಸೇರಿದ್ದುವು .... ರೈತರಿಗೂ ಕಸಬುದಾರರಿಗೂ ಮಾತ್ರವೇ ಅಲ್ಲ, ಕಡು ಬಡವರಿಗೂ ಇದು ತಪ್ಪಿದ್ದಲ್ಲ. ಅವರೂ ತಮ್ಮ ವರಮಾನದ ಹತ್ತರಲ್ಲೊಂದು ಪಾಲು ತೆರಬೇಕಾಗಿತ್ತು. ಕತ್ತರಿಸಿದ ಉಣ್ಣೆ, ರಸ್ತೆಯ ಬದಿಯಲ್ಲಿ ಹೆರೆದ ಹುಲ್ಲು—ಎಲ್ಲಕ್ಕೂ ಈ ಕರ ತೆರಬೇಕು. ರೈತ ತನ್ನ ಫಸಲಿನ ಮೇಲೆ ಕರ ಕೊಡುವ ಮೊದಲು ಅದರ ಮೌಲ್ಯದಿಂದ ಬೇಸಾಯದ ವೆಚ್ಚಗಳನ್ನೂ ಕಳೆಯುವಂತಿರಲಿಲ್ಲ. ಒಟ್ಟು ಫಸಲಿನ ಮೇಲೆ ತೆರಿಗೆಯ ಲೆಕ್ಕ; ಖರ್ಚು ಕಳೆದು ಉಳಿದದ್ದರ ಮೇಲಲ್ಲ. ಹಾಗೇನಾದರೂ ಆತ ಮಾಡಿದನೋ, ಅವನಿಗೆ ನರಕ ಶತಸ್ಸಿದ್ಧ."[1]

ಚರ್ಚು ಹೀಗೆ ಅಗಾಧವಾಗಿ ಸಂಪತ್ತು ಗಳಿಸಿದಂತೆಲ್ಲ ಇದರ ಪಾರಮಾರ್ಥಿಕ ಪ್ರಾಧಾನ್ಯಕ್ಕಿಂತ ಆರ್ಥಿಕ ಪ್ರಾಬಲ್ಯ ಹೆಚ್ಚಿತು. ಸಾಮಾನ್ಯ ಭೂಸ್ವಾಮಿಗಳಿಗಿಂತ ಇದು ಉತ್ತಮವಾಗಿರುವುದಿರಲಿ, ಕೆಲವು ಸಂದರ್ಭಗಳಲ್ಲಿ ಅವರಿಗಿಂತ ಅಧಮವಾಗಿತ್ತು—ಎಂದು ಹಲವು ಚರಿತ್ರಕಾರರ ಮತ: "ಸೆಂಟ್ ಲೂಯಿಯ ರಾಜ್ಯಭಾರದ ಕಾಲದಲ್ಲಿ ನಾಟರ್‌ಡೇಂ ಡೀ ಪ್ಯಾರಿಸಿನ ಕ್ರೈಸ್ತ ಸನ್ಯಾಸಿ ಸಭೆಯ ದಬ್ಬಾಳಿಕೆ ಎಷ್ಟೊಂದು ಹೆಚ್ಚಾಗಿತ್ತೆಂದರೆ, ಈ ಸನ್ಯಾಸಿಗಳು ಹೀಗೆ ಮಾಡಬಾರದೆಂದು ರಾಣಿ ಬ್ಲಾನ್‌ಷೇ ಇವರನ್ನು ಅತ್ಯಂತ ವಿನಮ್ರಳಾಗಿ ಕೇಳಿಕೊಂಡಳು. ಇದಕ್ಕೆ ಆ ಸನ್ಯಾಸಿಗಳ ಹಮ್ಮಿನ ಉತ್ತರವೂ ಬಂತು: ತಮ್ಮ ಜೀತಗಾರರನ್ನು ಮನಬಂದಂತೆ ಉಪವಾಸ ಕೆಡವಲು ತಮಗೆ ಬಾಧ್ಯತೆಯುಂಟೆಂದು ಉತ್ತರಿಸಿದರು ಅವರು."[2]

ಚರ್ಚು ಮಾಡುತ್ತಿದ್ದ ಅಲ್ಪಸ್ವಲ್ಪ ಧರ್ಮಕಾರ್ಯವನ್ನೇ ಜನರು ಅತಿಯಾಗಿ ಭಾವಿಸುತ್ತಿದ್ದುದೂ ಸಾಮಾನ್ಯ. ಹೀಗೆಂದು ಕೆಲವು ಚರಿತ್ರಕಾರರ ಮತ. ಚರ್ಚು ಬಡವರಿಗೂ ರೋಗಿಗಳಿಗೂ ಉಪಕಾರ ಮಾಡುತ್ತಿದ್ದುದು ನಿಜ. ಆದರೆ ಚರ್ಚು ಅತ್ಯಂತ ಶ್ರೀಮಂತ ಹಾಗೂ ಬಲಾಢ್ಯ ನೆಲದೊಡೆಯನಾಗಿತ್ತು. ಈ ದೃಷ್ಟಿಯಿಂದ ಇದು ಈ ಕ್ಷೇತ್ರದಲ್ಲಿ ಎಷ್ಟು ಕೆಲಸ ಮಾಡಬಹುದಿತ್ತೋ ಅಷ್ಟು ಮಾಡಲಿಲ್ಲ, ಸಾಮಾನ್ಯ ಶ್ರೀಮಂತರು ಮಾಡುತ್ತಿದ್ದಷ್ಟೂ ಮಾಡಲಿಲ್ಲ. ತನ್ನ ಧರ್ಮ ಕಾರ್ಯಕ್ಕಾಗಿ ಅದು ಶ್ರೀಮಂತರಿಂದ ಸಹಾಯವನ್ನು ನಿರೀಕ್ಷಿಸಿತ್ತು. ಆದರೆ ತನ್ನ ಆಸ್ತಿ ಕರಗದಂತೆ ಅದು ಎಚ್ಚರಿಕೆಯನ್ನೂ ವಹಿಸಿತ್ತು. ಇದು ಹಾಗಿರಲಿ. ಚರ್ಚು ತನ್ನ ಜೀತಗಾರರನ್ನು ಅಷ್ಟೊಂದು ದುಡಿಸದಿದ್ದರೆ, ರೈತರನ್ನು ಅಷ್ಟೊಂದು ಶೋಷಿಸದಿದ್ದರೆ, ದಾನ ಧರ್ಮಗಳಿಗೆ ಇಷ್ಟೊಂದು ಅಗತ್ಯವೇ ಇರುತ್ತಿರಲಿಲ್ಲ. ಇದು ಈ ವಿಮರ್ಶಕರ ಅಭಿಮತ.

ಚರ್ಚು, ಶ್ರೀಮಂತಿಕೆ ಇವೇ ಅಂದಿನ ಆಡಳಿತವರ್ಗಗಳು. ನೆಲವನ್ನೂ ಅದರೊಡನೆ

---

[1] G. G. Coulton, quoted in J. W. Thompson, *op. cit.*, p. 652.

[2] *Ibid.*, p. 681.

ಅಧಿಕಾರವನ್ನೂ ಇವು ಕಸಿದುಕೊಂಡುವು. ಚರ್ಚು 'ಧಾರ್ಮಿಕ' ಬೆಂಬಲ ನೀಡಿತು; ಶ್ರೀಮಂತಿಕೆ ಸೇನಾ ರಕ್ಷಣೆ ನೀಡಿತು. ಇದಕ್ಕೆ ಪ್ರತಿಯಾಗಿ ಇವು ಶ್ರಮಜೀವಿ ವರ್ಗದಿಂದ ದುಡಿಮೆಯ ರೂಪದಲ್ಲಿ ಪ್ರತಿಫಲ ಪಡೆದುವು. ಆ ಕಾಲದ ನಿಷ್ಣಾತ ಚರಿತ್ರಕಾರನಾದ ಪ್ರೊಫೆಸರ್ ಬಾಯ್ಸನೇಡ್ ಈ ವಿಚಾರವಾಗಿ ಸಂಗ್ರಹವಾಗಿ ಹೀಗೆ ಹೇಳಿದ್ದಾನೆ: "ಊಳಿಗ ಮಾನ್ಯಪದ್ಧತಿ ಅಂತಿಮವಾಗಿ ಈ ವ್ಯವಸ್ಥೆಯ ಮೇಲೆ ನಿಂತಿತ್ತು: ರಕ್ಷಣೆಯ ಸೋಗಿನಲ್ಲಿ ವಿರಾಮ ಜೀವಿಗಳು ಶ್ರಮಜೀವಿಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಅನುವಾಗಿದ್ದ ವ್ಯವಸ್ಥೆಯಿದು. ಈ ವ್ಯವಸ್ಥೆಯ ಪ್ರಕಾರ ನೆಲ ಸಲ್ಲುತ್ತಿದ್ದುದು ಉಳುವವರಿಗಲ್ಲ, ಇದನ್ನು ಕಸಿದುಕೊಳ್ಳುವ ಶಕ್ತಿ ಯಾರಿಗಿತ್ತೋ ಅವರಿಗೆ. ಇದು ಈ ವ್ಯವಸ್ಥೆಯ ನ್ಯಾಯದ ರೀತಿ."[1]

---

[1] P. Boissonnade, *op. cit.*, p. 131.

## ೨. ವ್ಯಾಪಾರಿಯ ಆಗಮನ

ಇಂದಿನ ಕಾಲದಲ್ಲಿ ಎಲ್ಲೋ ಕೆಲವು ಮಂದಿ ಧನಿಕರು ಚಿನ್ನ ಬೆಳ್ಳಿ ತುಂಬಿದ ಪೆಟ್ಟಿಗೆಗಳನ್ನು ಹೊಂದಿರುತ್ತಾರೆ. ಹಣ ಇರುವವರು ಅದನ್ನು ತಮ್ಮ ಬಳಿ ಇಟ್ಟುಕೊಳ್ಳಲು ಇಚ್ಛಿಸುವುದಿಲ್ಲ. ಅದು ತಮಗಾಗಿ ಕೆಲಸ ಮಾಡಬೇಕು—ಎಂಬುದು ಇವರ ಇಚ್ಛೆ. ಆದ್ದರಿಂದ ಅದನ್ನು ಲಾಭದಾಯಕ ಕ್ಷೇತ್ರಗಳಲ್ಲಿ ಹೂಡಲು—ವಿನಿಯೋಗಿಸಲು—ಅವಕಾಶಗಳನ್ನು ಇವರು ಹುಡುಕುತ್ತಿರುತ್ತಾರೆ. ಪರಮಾವಧಿ ವರಮಾನವನ್ನು, ಅತಿ ಹೆಚ್ಚಿನ ಬಡ್ಡಿಯನ್ನು, ದೊರಕಿಸಿಕೊಡುವ ಮಾರ್ಗಗಳನ್ನು ಅನ್ವೇಷಿಸುತ್ತಿರುತ್ತಾರೆ. ಇವರ ಹಣ ಯಾವುದಾದರೂ ವ್ಯಾಪಾರದಲ್ಲಿ ವಿನಿಯೋಗವಾಗಬಹುದು. ಇದರಿಂದ ಉಕ್ಕಿನ ಕಂಪೆನಿಯ ಷೇರು ಕೊಳ್ಳಬಹುದು, ಸರಕಾರಿ ಸಾಲಪತ್ರ ಕೊಳ್ಳಬಹುದು; ಅಥವಾ ಇಂಥ ಅನೇಕ ಮಾರ್ಗಗಳಲ್ಲಿ ಇದು ಉಪಯುಕ್ತವಾಗಬಹುದು. ಹೆಚ್ಚು ಸಂಪತ್ತು ತರುವ ಸಲುವಾಗಿ ಇರುವ ಸಂಪತ್ತನ್ನು ವಿನಿಯೋಗಿಸಲು ಇಂದು ಸಹಸ್ರಾರು ಮಾರ್ಗಗಳುಂಟು.

ಆದರೆ ಮಧ್ಯಯುಗದ ಪ್ರಾರಂಭದೆಶೆಯಲ್ಲಿ ಧನಿಕರಿಗೆ ಇಂಥ ಅವಕಾಶಗಳಿರಲಿಲ್ಲ. ಎಲ್ಲೋ ಕೆಲವರ ಬಳಿ ಹಣವಿರುತ್ತಿತ್ತು. ಹಣವಿದ್ದವರೂ ಅದನ್ನು ಉಪಯೋಗಿಸುವಂತಿರಲಿಲ್ಲ. ಚರ್ಚಿನ ಬೊಕ್ಕಸದಲ್ಲಿ ಚಿನ್ನ ಬೆಳ್ಳಿಗಳ ಗಟ್ಟಿಗಳೇ ತುಂಬಿದ್ದುವು. ಇವನ್ನು ಅದು ಭದ್ರವಾದ ಪೆಟ್ಟಿಗೆಗಳಲ್ಲಿ ಇಡುತ್ತಿತ್ತು; ಅಥವಾ ಇವುಗಳಿಂದ ಧ್ಯಾನಪೀಠಕ್ಕಾಗಿ ಒಡವೆ ಕೊಳ್ಳುತ್ತಿತ್ತು. ಅದರ ಐಶ್ವರ್ಯ ಅಗಾಧ. ಆದರೆ ಅದೆಲ್ಲ ನಿರುಪಯುಕ್ತ ಬಂಡವಾಳ. ಇಂದಿನಂತೆ ಅಂದು ಅದನ್ನು ಹೆಚ್ಚು ಸಂಪತ್ತಿನ ಸಂಪಾದನೆಗಾಗಿ ಸತತವಾಗಿ ದುಡಿಯಹಚ್ಚುವುದು ಸಾಧ್ಯವಿರಲಿಲ್ಲ. ಚರ್ಚಿನ ಹಣವನ್ನು ಹೆಚ್ಚು ಸಂಪತ್ತಿನ ಸಂಪಾದನೆಗಾಗಿ ಅಂದು ಉಪಯೋಗಿಸುವುದು ಸಾಧ್ಯವಿರಲಿಲ್ಲ. ಏಕೆಂದರೆ ಅದಕ್ಕೆ ಉಪಯುಕ್ತ ಕ್ಷೇತ್ರವೇ ಇರಲಿಲ್ಲ. ಶ್ರೀಮಂತರು ಹೊಂದಿದ್ದ ಎಲ್ಲ ರೀತಿಯ ಧನಕ್ಕೂ ಇದೇ ಗತಿ. ವಸೂಲಾದ ತೆರಿಗೆಯು, ದಂಡದ ಹಣವನ್ನು ಈ ಶ್ರೀಮಂತರು ವ್ಯಾಪಾರದಲ್ಲಿ ವಿನಿಯೋಗಿಸುವುದು ಸಾಧ್ಯವಿರಲಿಲ್ಲ. ಏಕೆಂದರೆ ಆಗಿನ ಕಾಲದಲ್ಲಿ ನಡೆಯುತ್ತಿದ್ದ ವ್ಯಾಪಾರ ಬಹು ಕಡಮೆ. ಪ್ರಾರ್ಥನಕಾರರೂ ಯೋಧರೂ ಹೊಂದಿದ್ದ ಬಂಡವಾಳವೆಲ್ಲ ಕ್ರಿಯಾಹೀನವೂ ಸ್ಥಿರವೂ ಜಡವೂ ಅನುತ್ಪಾದಕವೂ ಆಗಿತ್ತು.

ದಿನದಿನವೂ ಪದಾರ್ಥ ಕೊಳ್ಳಲು ಹಣ ಬೇಕಿರಲಿಲ್ಲವೆ? ಇಲ್ಲ. ಏಕೆಂದರೆ ಅಂದು ಪ್ರಾಯಿಕವಾಗಿ ಏನನ್ನೂ ಕೊಳ್ಳುತ್ತಲೇ ಇರಲಿಲ್ಲವೆನ್ನಬಹುದು. ಬಹುಶಃ ಸ್ವಲ್ಪ ಉಪ್ಪು, ಸ್ವಲ್ಪ ಕಬ್ಬಿಣ—ಇವಿಷ್ಟೇ ಕೊಳ್ಳಬೇಕಾಗಿದ್ದದ್ದು. ಉಳಿದದ್ದೆಲ್ಲ—ಜನಕ್ಕೆ ಬೇಕಾಗಿದ್ದ ಆಹಾರ ಬಟ್ಟೆ ಎಲ್ಲ—ಮೇನರಿನಲ್ಲೇ ಸಿಕ್ಕುತ್ತಿತ್ತು. ಊಳಿಗಮಾನ್ಯ ಪದ್ಧತಿಯ ಸಮಾಜದ ಆರಂಭ ಕಾಲದಲ್ಲಿ ಹಣದ ಹೆಚ್ಚು ಬಳಕೆ ಇಲ್ಲದೆಯೇ ಆರ್ಥಿಕ ಜೀವನ ಸಾಗುತ್ತಿತ್ತು. ಅನುಭೋಗದ ಅರ್ಥವ್ಯವಸ್ಥೆ ಅದು. ಪ್ರತಿಯೊಂದು ಗ್ರಾಮವೂ ಪ್ರಾಯಿಕವಾಗಿ

ಸ್ವಸಂಪೂರ್ಣವಾಗಿತ್ತು. ನಿಮ್ಮ ಹೊಸ ಮೇಲಂಗಿಗೆ ಏನು ಕೊಟ್ಟಿರಿ?—ಎಂದು ಯಾರಾದರೂ ಕೇಳಿದರೆ ಅದಕ್ಕೆ ನೀವೇನು ಹೇಳುವಿರಿ? ಇಷ್ಟು ರೂಪಾಯಿ, ಇಷ್ಟು ನಯಾಪೈಸಾ—ಎಂದೇ ನೀವು ಅದರ ಬೆಲೆ ಹೇಳುವಿರಿ. ಆದರೆ ಮಧ್ಯಯುಗದ ಆದಿಕಾಲದಲ್ಲಿ ನೀವು ಇದ್ದಿದ್ದರೆ, ನಿಮಗೆ ಆಗ ಈ ಪ್ರಶ್ನೆ ಹಾಕಿದ್ದಿದ್ದರೆ ಆಗ ನೀವು ಸಾಮಾನ್ಯವಾಗಿ ಕೊಡುತ್ತಿದ್ದ ಉತ್ತರವೇ ಬೇರೆ. 'ನಾನೇ ಇದನ್ನು ತಯಾರಿಸಿದೆ,' ಎಂದೇ ನೀವು ಹೇಳುತ್ತಿದ್ದಿರಿ. ಜೀತಗಾರನೂ ಅವನ ಸಂಸಾರದವರೂ ತಮ್ಮ ಆಹಾರವನ್ನು ತಾವೇ ಬೆಳೆದುಕೊಳ್ಳುತ್ತಿದ್ದರು, ತಮಗೆ ಬೇಕಾಗಿದ್ದ ಪೀಠೋಪಕರಣವೇ ಮುಂತಾದವನ್ನು ತಮ್ಮ ಕೈಯಿಂದಲೇ ತಯಾರಿಸಿಕೊಳ್ಳುತ್ತಿದ್ದರು. ಮೇನರಿನ ಪ್ರಭು ತನಗೆ ಬೇಕಾದ ಪದಾರ್ಥಗಳನ್ನು ತಯಾರಿಸಲು ಒಳ್ಳೆಯ ಕೆಲಸಗಾರರನ್ನೆಲ್ಲ ತನ್ನ ಆಡಳಿತದೊಳಗೆ ಜಮಾಯಿಸಿಕೊಳ್ಳುತ್ತಿದ್ದ. ಹೀಗೆ ಮೇನರಿನ ಗ್ರಾಮ ಹೆಚ್ಚು-ಕಡಮೆ ಸ್ವಸಂಪೂರ್ಣವಾಗಿತ್ತು. ಅದು ತನಗೆ ಬೇಕಾದ ಪದಾರ್ಥಗಳನ್ನು ತಾನೇ ತಯಾರಿಸಿಕೊಳ್ಳುತ್ತಿತ್ತು, ಅವನ್ನೇ ಬಳಸುತ್ತಿತ್ತು.

ಪದಾರ್ಥಗಳ ವಿನಿಮಯವೂ ನಡೆಯುತ್ತಿತ್ತು. ನಿಮ್ಮ ಮೇಲಂಗಿಯ ವಿಚಾರವನ್ನೇ ತೆಗೆದುಕೊಳ್ಳಿ. ಇವನ್ನು ತಯಾರಿಸಲು ಬೇಕಾದ ಉಣ್ಣೆ ನಿಮ್ಮಲ್ಲಿರಲಿಲ್ಲ—ಎಂದಿಟ್ಟುಕೊಳ್ಳಿ. ಅಥವಾ ಮೇಲಂಗಿಯನ್ನು ತಯಾರಿಸಲು ಸಾಕಷ್ಟು ಸಮಯ ಹಾಗೂ ಕೌಶಲ ಹೊಂದಿದವರು ನಿಮ್ಮ ಸಂಸಾರದಲ್ಲಿ ಯಾರೂ ಇಲ್ಲದಿರಬಹುದು. ಆಗ ಹಿಂದೆ ಕೇಳಿದ ಪ್ರಶ್ನೆಗೆ ನಿಮ್ಮಿಂದ ಬರುವ ಉತ್ತರ ಇದು : "ಈ ಮೇಲಂಗಿಗೆ ನಾನು ಐದು ಗ್ಯಾಲನ್ ಮದ್ಯಕೊಟ್ಟೆ." ಈ ವ್ಯವಹಾರ ನಡೆದದ್ದು ಬಹುಶಃ ವಾರದ ಸಂತೆಯಲ್ಲಿ. ಈ ಸಂತೆ ಸೇರುತ್ತಿದ್ದುದು ಕ್ರೈಸ್ತ ಸನ್ಯಾಸಿಯ ಮಠದ ಅಥವಾ ಪ್ರಭುವಿನ ಭವನದ ಹೊರ ಮಾಳದಲ್ಲಿ. ಅಥವಾ ನೀವು ಇದನ್ನು ಹತ್ತಿರದ ಪಟ್ಟಣದಲ್ಲಿ ಪಡೆದಿರಬಹುದು. ಈ ಪೇಟೆಗಳೂ ಸಂತೆಗಳೂ ಬಿಷಪ್‌ನ ಅಥವಾ ಪ್ರಭುವಿನ ಆಡಳಿತದಲ್ಲಿದ್ದುವು. ಇವರ ಜೀತಗಾರರೋ ಕೆಲಸಗಾರರೋ ತಯಾರಿಸಿದ ಪದಾರ್ಥಗಳೂ, ಜೀತಗಾರರ ಬಳಕೆಗೆ ಆಗಿ ಮಿಕ್ಕ ವಸ್ತುಗಳೂ ಈ ಸ್ಥಳದಲ್ಲಿ ವಿನಿಮಯವಾಗುತ್ತಿದ್ದುವು. ಆದರೆ ಆಗುತ್ತಿದ್ದ ವ್ಯಾಪಾರದ ಪ್ರಮಾಣ ಬಹು ಅಲ್ಪ. ಆದ್ದರಿಂದ ಹೆಚ್ಚು ಉತ್ಪತ್ತಿಯ—ಹಳ್ಳಿಗೆ ಆಗಿಯೂ ಧಾರಾಳವಾಗಿ ಉಳಿಯುವಷ್ಟು ಉತ್ಪತ್ತಿಯ—ಅಗತ್ಯವಿರಲಿಲ್ಲ. ತಾವು ಉತ್ಪಾದಿಸುವ ಪದಾರ್ಥಕ್ಕೆ ಸ್ಥಿರವಾದ ಗಿರಾಕಿ ಇದೆಯೆಂಬ ನಂಬಿಕೆ ಉದಿಸಿದಾಗಲೇ ಜನರು ತಮಗೆ ಅಗತ್ಯವಿದ್ದುದಕ್ಕಿಂತ ಹೆಚ್ಚು ಪ್ರಮಾಣದಲ್ಲಿ ಪದಾರ್ಥ ತಯಾರಿಸುವರು. ಈ ಗಿರಾಕಿ ಇಲ್ಲದಾಗ, ಹೆಚ್ಚುವರಿ ಉತ್ಪತ್ತಿಮಾಡಲು ಬೇಕಾದ ಉತ್ತೇಜಕ ಇರುವುದಿಲ್ಲ. ಆದ್ದರಿಂದ ವಾರದ ಸಂತೆಗಳಲ್ಲಿ ನಡೆಯುತ್ತಿದ್ದ ವ್ಯಾಪಾರ ಎಂದೂ ಹೆಚ್ಚಾಗಿರುತ್ತಿರಲಿಲ್ಲ; ಅಲ್ಲದೆ ಬಹುತೇಕ ಇದು ಸ್ಥಳೀಯ. ಈ ವ್ಯಾಪಾರ ಹೆಚ್ಚು ವ್ಯಾಪಕವಾಗದಿದ್ದುದಕ್ಕೆ ಇನ್ನೊಂದು ಅಡಚಣೆಯೆಂದರೆ ರಸ್ತೆಗಳ ಅಸಮರ್ಪಕ ಸ್ಥಿತಿ. ಇವು ಬಹು ಕಿರಿದಾಗಿದ್ದುವು; ಹಳ್ಳತಿಟ್ಟುಗಳಿಂದ ಕೂಡಿದ್ದುವು. ಇವುಗಳಲ್ಲಿ ಮಣ್ಣು ತುಂಬಿತ್ತು. ಸಂಚಾರಕ್ಕೆ ಇವು ಅಯೋಗ್ಯವಾಗಿದ್ದುವು. ಇವುಗಳ ಜತೆಗೆ ಇಬ್ಬಗೆಯ ಕಳ್ಳರ ಹಾವಳಿ ಬೇರೆ: ಸಾಮಾನ್ಯ ಡಕಾಯಿತರ ಜತೆಗೆ

ಶ್ರೀಮಂತರೂ ದರೋಡೆಕೋರರಾಗಿದ್ದರು. ಇವರು ವರ್ತಕರನ್ನು ತಡೆದು ನಿಲ್ಲಿಸಿ, ಆ ಅಸಹ್ಯಕರ ರಸ್ತೆಗಳಲ್ಲಿ ಸಂಚಾರ ಮಾಡುತ್ತಿದ್ದುದಕ್ಕೆ ಪ್ರತಿಯಾಗಿ ಸುಂಕ ವಸೂಲು ಮಾಡುತ್ತಿದ್ದರು. ಆ ರಸ್ತೆಗಳು ಈ ಪ್ರಭುಗಳದು! ಈ ಪ್ರಭುಗಳ ಸುಂಕವಸೂಲಿ ಅಂದಿಗೆ ಸಾಮಾನ್ಯವಾಗಿತ್ತು. "ಹನ್ನೊಂದನೆಯ ಶತಮಾನದಲ್ಲಿ ಓಡೋ ಆಫ್ ಟೂರ್ಸ್ ಎಂಬವನು ಲೊಯ್ರ್ ನದಿಯ ಮೇಲೆ ಸೇತುವೆ ನಿರ್ಮಿಸಿ, ಅದರ ಮೇಲೆ ಯಾರು ಬೇಕಾದರೂ ಪುಕ್ಕಟೆಯಾಗಿ ಸಂಚಾರಮಾಡಬಹುದೆಂದು ಹೇಳಿದಾಗ, ಇವನ ಚರ್ಯೆ ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡಿ"ತಂತೆ![1] ವ್ಯಾಪಾರ ಇನ್ನೂ ಹಲವು ತೊಂದರೆಗಳನ್ನೆದುರಿಸ ಬೇಕಾಗಿತ್ತು. ಹಣದ ಅಭಾವ ಒಂದು. ಇದ್ದ ಅಲ್ಪ ಹಣವೂ ಒಂದೇ ರೀತಿಯದಲ್ಲ. ಒಂದೊಂದು ಕಡೆ ಒಂದೊಂದು ನಾಣ್ಯ ಪದ್ಧತಿ. ತೂಕ ಅಳತೆ ಕೂಡ ಸ್ಥಳದಿಂದ ಸ್ಥಳಕ್ಕೆ ಬದಲಾಗುತ್ತಿದ್ದುವು. ದೂರದ ಸ್ಥಳಗಳಿಗೆ ಪದಾರ್ಥ ಸಾಗಿಸುವುದು ಈ ಸಂದರ್ಭಗಳಲ್ಲಿ ಸಹಜವಾಗಿಯೇ ಬಹು ಕ್ಲೇಶಕರ, ಅಪಾಯಕರ, ಕಷ್ಟಕರ, ಘಾಬರಿ ಹುಟ್ಟಿಸುವಷ್ಟು ದುಬಾರಿ ಖರ್ಚಿನದು. ಈ ಎಲ್ಲ ಕಾರಣಗಳಿಂದ ಮಧ್ಯಯುಗದ ಸ್ಥಳೀಯ ಪೇಟೆಗಳಲ್ಲಿ ಆಗುತ್ತಿದ್ದ ವ್ಯಾಪಾರ ಅಲ್ಪ.

ಆದರೆ ಇದು ಹೀಗೆ ಅಲ್ಪವಾಗಿಯೇ ಉಳಿಯಲಿಲ್ಲ. ಕ್ರಮೇಣ ಇದು ಬೆಳೆಯುತ್ತಾ ನಡೆದು, ಕೊನೆಗೆ ಮಧ್ಯಯುಗದ ಇಡೀ ಜೀವನಕ್ರಮದ ಮೇಲೆಯೇ ಅದ್ಭುತ ಪರಿಣಾಮ ಬೀರುವಂತಾಯಿತು. ಹನ್ನೊಂದನೆಯ ಶತಮಾನದಲ್ಲಿ ವಾಣಿಜ್ಯ ದಾಪುಗಾಲಿನಲ್ಲಿ ಮುನ್ನಡೆಯಿತು. ಈ ಅಗಾಧ ಪ್ರಗತಿಯಿಂದ ಹನ್ನೆರಡನೆಯ ಶತಮಾನದಲ್ಲಿ ಪಶ್ಚಿಮ ಯೂರೋಪಿನ ಸ್ವರೂಪವೇ ಬದಲಾಯಿತು.

ಕ್ರೈಸ್ತ ಪುಣ್ಯಭೂಮಿಯಾದ ಪ್ಯಾಲೆಸ್ಟೈನನ್ನು ಮುಸ್ಲಿಮರಿಂದ ಹಿಂದಕ್ಕೆ ಕಿತ್ತು ಕೊಳ್ಳಲು ಕ್ರೈಸ್ತರು ಪದೇ ಪದೇ ಕೈಕೊಂಡ ದಂಡಯಾತ್ರೆಗಳಿಂದ ವ್ಯಾಪಾರಕ್ಕೆ ಬೇಕಾದಷ್ಟು ಪ್ರೋತ್ಸಾಹ ದೊರಕಿತು. ಹತ್ತಾರು ಸಹಸ್ರ ಯೂರೋಪಿಯನ್ನರು ಖಂಡಾಂತರ ಪ್ರಯಾಣಮಾಡಿ ನೆಲಜಲಗಳನ್ನು ಹಾಯ್ದು ಮುಸ್ಲಿಮರಿಂದ ತಮ್ಮ ಪವಿತ್ರಭೂಮಿಯನ್ನು ಪಡೆದುಕೊಳ್ಳಲು ಯತ್ನಿಸಿದರು. ದಾರಿಯುದ್ದಕ್ಕೂ ಅವರಿಗೆ ಪದಾರ್ಥಗಳ ಸರಬರಾಯಿ ಆಗಬೇಕಿತ್ತು. ಅವರ ಅಗತ್ಯಗಳನ್ನು ಪೂರೈಸಲು ವ್ಯಾಪಾರಿಗಳೂ ಅವರೊಡನೆ ಸಾಗಿದರು. ತಮ್ಮ ಪೌರ್ವಾತ್ಯ ಪ್ರಯಾಣದಿಂದ ಹಿಂದಿರುಗಿದ ಈ 'ಕ್ರುಸೇಡರು'ಗಳು—'ಧರ್ಮಯೋಧ'ಗಳು—ತಾವು ನೋಡಿ ಭೋಗಿಸಿದ ವಿಚಿತ್ರವಾದ ಹಾಗೂ ಆಕರ್ಷಕವಾದ ಆಹಾರ ವಸನಗಳ ಅಪೇಕ್ಷೆಯನ್ನು ತಮ್ಮೊಡನೆ ತಂದರು. ಅವರ ಈ ಅಪೇಕ್ಷೆಯಿಂದ ಈ ಪದಾರ್ಥಗಳಿಗೆ ಗಿರಾಕಿ ಹುಟ್ಟಿತು. ಅಲ್ಲದೆ ಹತ್ತನೆಯ ಶತಮಾನ ದಿಂದೀಚೆಗೆ ಜನಸಂಖ್ಯೆ ತೀವ್ರವಾಗಿ ಹೆಚ್ಚಿತು. ಈ ಹೆಚ್ಚಿನ ಜನಕ್ಕೆ ಹೆಚ್ಚಿನ ಪದಾರ್ಥಗಳ ಅಗತ್ಯ ಒದಗಿ ಬಂತು. ಈ ಅಧಿಕ ಜನರಲ್ಲಿ ಕೆಲವರಿಗೆ ಭೂಮಿ ಇರಲಿಲ್ಲ. ಧಾರ್ಮಿಕ ಯುದ್ಧಗಳಿಂದ ಇವರು ತಮ್ಮ ಸ್ಥಿತಿ ಉತ್ತಮಪಡಿಸಿಕೊಳ್ಳಬಹುದೆಂದು ಬಗೆದರು.

---

[1] J. W. Thompson, *op. cit.*, p. 710.

ಮೆಡಿಟರೇನಿಯನ್ ತೀರದ ಮುಸ್ಲಿಮರ ವಿರುದ್ಧ, ಪೂರ್ವ ಯೂರೋಪಿನ ಬುಡಕಟ್ಟು ಗಳ ವಿರುದ್ಧ ನಡೆಯುತ್ತಿದ್ದ ಗಡಿಕಾಳಗಗಳನ್ನೂ ಕೂಡ ಇವರು ಹಲವು ಸಾರಿ ಧಾರ್ಮಿಕ ಯುದ್ಧವೆಂಬ ಮರ್ಯಾದೆಯ ಹೆಸರಿನಿಂದ ಕರೆಯುತ್ತಿದ್ದರು. ನಿಜಕ್ಕೂ ಇವು ಅಂಥ ಯುದ್ಧಗಳಾಗಿರಲಿಲ್ಲ. ನೆಲದ ಲೂಟಿಯ ಕದನಗಳು ಇವು. ಈ ಕೊಳ್ಳೆಯ ದಂಡಯಾತ್ರೆಗಳ ಮೇಲೆ ಚರ್ಚು ಗೌರವದ ತೆರೆ ಹಾಕಿತು. ಕ್ರಿಸ್ತ ವಾಣಿಯನ್ನು ಹಬ್ಬಿಸಲೋ, ನಾಸ್ತಿಕ ರನ್ನು ತೊಲಗಿಸಲೋ, ಪವಿತ್ರಭೂಮಿಯನ್ನು ರಕ್ಷಿಸಲೋ ಈ ಯುದ್ಧಗಳು ನಡೆಯುತ್ತಿವೆ ಯೆಂಬ ಕಲ್ಪನೆ ಬರುವಂತೆ ಚರ್ಚು ಮಾಡಿತು.[1]

ಬಹು ಹಿಂದಿನ ಕಾಲದಿಂದಲೂ ಪವಿತ್ರಭೂಮಿಗೆ ಯಾತ್ರೆ ಏರ್ಪಡುತ್ತಿದ್ದುದುಂಟು. ಎಂಟರಿಂದ ಹತ್ತನೆಯ ಶತಮಾನದ ವರೆಗೆ ಇಂಥ ೩೪ ಯಾತ್ರೆಗಳೂ, ಹನ್ನೊಂದನೆಯ ಶತಮಾನದಲ್ಲಿ ೧೧೭ ಯಾತ್ರೆಗಳೂ ಏರ್ಪಟ್ಟಿದ್ದುವು. ಪವಿತ್ರ ಭೂಮಿಯನ್ನು ಅನ್ಯಾ ಕ್ರಮಣದಿಂದ ಪಾರುಮಾಡುವ ಇಚ್ಛೆಯೇನೋ ನಿಜವಾಗಿತ್ತು. ಯಾವ ದ್ವೇಷವೂ ಇಲ್ಲದ ಹಲವರು ಇದಕ್ಕೆ ಬೆಂಬಲ ನೀಡಿದರು. ಆದರೆ ಧಾರ್ಮಿಕ ಯುದ್ಧದ ಚಳವಳಿಯ ನಿಜವಾದ ಶಕ್ತಿಗೂ ಇದನ್ನು ನಡಸುತ್ತಿದ್ದ ತೀವ್ರತೆಗೂ ಬೆಂಬಲವಾಗಿದ್ದ ಮುಖ್ಯ ಪ್ರೇರಣೆಯೇ ಬೇರೆ. ಕೆಲವು ಗುಂಪುಗಳು ತಮಗೆ ಇದರಿಂದ ದೊರಕುತ್ತಿದ್ದ ಅನುಕೂಲ ಗಳಿಂದ ಈ ಚಳವಳಿಗೆ ಪ್ರೋತ್ಸಾಹ ನೀಡುತ್ತಿದ್ದುವು.

ಮೊದಲನೆಯದಾಗಿ ಚರ್ಚನ್ನು ತೆಗೆದುಕೊಳ್ಳಿ. ಇದಕ್ಕೆ ಪ್ರಾಮಾಣಿಕ ಧಾರ್ಮಿಕ ಉದ್ದೇಶವೇನೋ ಇತ್ತು. ಅದು ಕದನ ಕುತೂಹಲಿಗಳ ಕಾಲವೆಂಬುದನ್ನೂ ಇದು ಕಂಡು ಕೊಂಡಿತ್ತು. ಆದ್ದರಿಂದ ಇದು ಯುದ್ಧಪ್ರಿಯರ ಹಿಂಸಾತ್ಮಕ ಭಾವೋದ್ರೇಕಗಳನ್ನು ಇತರ ದೇಶಗಳೆಡೆಗೆ ಹೊರಳಿಸಿ, ಅಲ್ಲಿ ಈ ಯೋಧರು ಜಯ ಗಳಿಸಿದರೆ ಅಲ್ಲಿನ ಜನರನ್ನು ಕ್ರೈಸ್ತ ಮತಕ್ಕೆ ಪರಿವರ್ತಿಸಬಹುದೆಂಬ ಭಾವನೆ ಇದಕ್ಕೆ ಹೊಳೆಯಿತು. ೧೦೯೫ ರಲ್ಲಿ ಫ್ರಾನ್ಸಿನ ಕ್ಲೆರ್‌ಮಾಂಟ್‌ಗೆ ಎರಡನೆಯ ಪೋಪ್‌ಗುರು—ಕ್ರೈಸ್ತ ಮಠದ ಅಧ್ಯಕ್ಷ— ಅರ್ಬನ್ ಬಂದ. ಇವನ ಭಾಷಣ ಕೇಳಬಯಸಿದ ಎಲ್ಲರಿಗೂ ಸ್ಥಳ ಒದಗಿಸುವಂಥ ದೊಡ್ಡ ಭವನ ಯಾವುದೂ ಇರಲಿಲ್ಲವಾದ್ದರಿಂದ ಈತ ಮೈದಾನದಲ್ಲಿ ನಿಂತು ಭಾಷಣ ಮಾಡಿದ. ಧಾರ್ಮಿಕ ಯುದ್ಧ ಆರಂಭಿಸಬೇಕೆಂಬುದು ಈ ಭಾಷಣದ ತಿರುಳು. ಈ ಭಾಷಣದ ಮಾತುಗಳಿವು: "ಆಸ್ತಿಕರ ವಿರುದ್ಧ ವೈಯಕ್ತಿಕ ಹೋರಾಟ ನಡಸುವ ದುಷ್ಟ ಚಟ ಹೊಂದಿರುವವರೆಲ್ಲ ತಮ್ಮ ಶಕ್ತಿಯನ್ನು ನಾಸ್ತಿಕರ ವಿರುದ್ಧ ತಿರುಗಿಸಲಿ. ಅವರ ವಿರುದ್ಧ ಹೋರಾಡಲಿ .... ಇದುವರೆಗೂ ದರೋಡೆಕೋರರಾಗಿದ್ದವರೆಲ್ಲ ಈಗ ಸಿಪಾಯಿಗಳಾಗಲಿ. ತಮ್ಮ ಸೋದರರ ವಿರುದ್ಧ, ಬಂಧುಗಳ ವಿರುದ್ಧ ಸೆಣಸುತ್ತಿದ್ದವರೆಲ್ಲ ಅನಾಗರಿಕರ ವಿರುದ್ಧ ಹೋರಾಡಲಿ. ಇದು ಕರ್ತವ್ಯ. ಕೂಲಿ ಕಡಿಮೆಯೆಂದು ಹೋರಾಡುತ್ತಿದ್ದವರೆಲ್ಲ ಈ ಯುದ್ಧದಲ್ಲಿ ಭಾಗವಹಿಸಿ ಶಾಶ್ವತ ರೀತಿಯ ಪ್ರತಿಫಲ ಪಡೆಯಲಿ .... "[2] ಚರ್ಚು ತನ್ನ

[1] Cf. H. W. C. Davis, *Medieval Europe*, pp. 184-187. Thornton Butterworth, Ltd. London, 11th edition, 1930.

[2] J. H. Robinson, *op. cit.*, p. 314, footnote.

ಅಧಿಕಾರವನ್ನು ವಿಸ್ತರಿಸಲು ಇಚ್ಛಿಸಿತು. ಕ್ರೈಸ್ತ ಪ್ರಭುತ್ವ ವಿಸ್ತಾರವಾದಂತೆಲ್ಲಾ ಚರ್ಚಿನ ಅಧಿಕಾರವೂ ಐಶ್ವರ್ಯವೂ ಹೆಚ್ಚಿದುವು.

ಎರಡನೆಯದಾಗಿ, ಏಷ್ಯದಲ್ಲಿದ್ದ ಮುಸ್ಲಿಂ ಅಧಿಕಾರಕೇಂದ್ರದ ಬಳಿಯೇ, ಕಾನ್‌ಸ್ಟಾಂಟಿನೋಪಲನ್ನು ರಾಜಧಾನಿಯಾಗಿ ಪಡೆದಿದ್ದ ಬಿಸಾಂಟೈನ್ ಎಂಬ ಚರ್ಚು ಚಕ್ರಾಧಿಪತ್ಯವೂ ಇದ್ದುವು. ಧಾರ್ಮಿಕ ಯುದ್ಧಗಳಿಂದ ತನ್ನ ಅಧಿಕಾರ ಹರಡುವುದು ಸಾಧ್ಯವೆಂದು ರೋಮಿನ ಚರ್ಚು ಭಾವಿಸಿದರೆ, ಮುಸ್ಲಿಮರು ತಮ್ಮ ಆಧಿಪತ್ಯದೊಳಕ್ಕೆ ಬರದಂತೆ ತಡೆಯುವುದು ಈ ಯುದ್ಧಗಳಿಂದ ಸಾಧ್ಯವೆಂದು ಬಿಸಾಂಟೈನ್ ಚರ್ಚು ಭಾವಿಸಿತು.

ಮೂರನೆಯದಾಗಿ, ಕೊಳ್ಳೆ ಹೊಡೆಯ ಬಯಸುತ್ತಿದ್ದ ಅಥವಾ ಋಣಭಾರ ಹೊತ್ತಿದ್ದ ಶ್ರೀಮಂತರೂ ಯೋಧರೂ ಇದ್ದರು. ಹೆಚ್ಚು ಪಿತ್ರಾರ್ಜಿತ ಆಸ್ತಿ ಹೊಂದಿಲ್ಲದ, ಅಥವಾ ಆಸ್ತಿಯೇ ಇಲ್ಲದ, ಕಿರಿಯರೂ ಇದ್ದರು. ನೆಲವನ್ನೂ ಐಶ್ವರ್ಯವನ್ನೂ ಪಡೆಯಲು ಈ ಧಾರ್ಮಿಕ ಯುದ್ಧಗಳು ಒಳ್ಳೆಯ ಅವಕಾಶವೆಂದು ಇವರು ಬಗೆದರು.

ನಾಲ್ಕನೆಯದಾಗಿ, ಇಟಲಿಯ ವೆನಿಸ್, ಜಿನೋವಾ, ಪಿಸಾ ಮುಂತಾದ ನಗರಗಳೂ ಈ ಕದನಗಳಿಗೆ ಬೆಂಬಲ ನೀಡಿದುವು. ವೆನಿಸ್ಸು ಯಾವಾಗಲೂ ವ್ಯಾಪಾರದ ನಗರ. ದ್ವೀಪಸ್ತೋಮದ ಮೇಲೆ ಸ್ಥಾಪಿತವಾದ ಯಾವ ನಗರವಾಗಲಿ, ವ್ಯಾಪಾರಕೇಂದ್ರವಾಗಲೇ ಬೇಕು ತಾನೆ? ನಗರದ ಬೀದಿಗಳೆಲ್ಲಾ ಕಾಲುವೆಗಳೇ ಆದಾಗ, ಅಲ್ಲಿನ ಜನರು ನೆಲದ ಮೇಲೆ ಹೇಗೋ ಜಲದ ಮೇಲೂ ಅಷ್ಟೇ ಸುಲಭವಾಗಿ ಸಾಗಬಲ್ಲರೆಂದು ನಿರೀಕ್ಷಿಸುವುದು ಸಹಜವಲ್ಲವೆ? ವೆನಿಸ್ ನಗರದ ಜನರ ವಿಚಾರದಲ್ಲಿ ಇದು ನಿಜವಾಗಿತ್ತು. ವ್ಯಾಪಾರ ಪೂರ್ವಾಭಿಮುಖವಾಗಿದ್ದ ಕಾಲದಲ್ಲಿ ವೆನಿಸ್ ನಗರ ಒಳ್ಳೆಯ ಪ್ರಮುಖ ಪ್ರದೇಶದಲ್ಲಿತ್ತು; ಮೆಡಿಟರೇನಿಯನ್ ಸಮುದ್ರದ ಮುಖ ಪ್ರದೇಶದಲ್ಲಿತ್ತು. ಭೂಪಟದ ಮೇಲೆ ಒಮ್ಮೆ ನೋಟ ಹರಿಸಿದರೆ ಸಾಕು: ವೆನಿಸ್ಸೂ, ಇಟಲಿಯ ಇತರ ನಗರಗಳೂ ಏಕೆ ಅಷ್ಟೊಂದು ಮುಖ್ಯ ವ್ಯಾಪಾರ ಕೇಂದ್ರಗಳಾದುವೆಂಬುದು ವೇದ್ಯವಾಗುತ್ತದೆ. ಭೂಪಟದಿಂದ ವ್ಯಕ್ತವಾಗದ, ಆದರೂ ನಿಜವಾಗಿದ್ದ, ಇನ್ನೊಂದು ಸಂಗತಿಯುಂಟು: ಪಶ್ಚಿಮ ಯೂರೋಪು ಪ್ರತ್ಯೇಕವಾಗಿದ್ದಾಗಲೂ ವೆನಿಸ್ಸು ಮಾತ್ರ ಕಾನ್‌ಸ್ಟಾಂಟಿನೋಪಲಿಗೂ ಪೂರ್ವದೇಶಗಳಿಗೂ ಅಂಟಿಕೊಂಡೇ ಇತ್ತು. ಮೆಡಿಟರೇನಿಯನ್ ಪ್ರದೇಶದಲ್ಲಿ ಕಾನ್‌ಸ್ಟಾಂಟಿನೋಪಲು ಕೆಲವು ವರ್ಷಗಳ ಕಾಲ ಅತ್ಯಂತ ದೊಡ್ಡ ನಗರವಾಗಿದ್ದುದರಿಂದ ಈ ಸಂಪರ್ಕದಿಂದ ವೆನಿಸ್ಸಿಗೆ ಅನುಕೂಲವೇ ಆಯಿತು. ಪೂರ್ವದ ಸಂಬಾರ, ರೇಷ್ಮೆ, ಮಸ್ಲಿನ್, ಔಷಧ, ಜಮಖಾನ ಇವೆಲ್ಲವನ್ನೂ ವೆನಿಸ್ಸಿನ ಜನರು ತಮ್ಮ ಅಧೀನದಲ್ಲಿದ್ದ ಒಳಮಾರ್ಗಗಳ ಮೂಲಕ ಯೂರೋಪಿಗೆ ಸಾಗಿಸುವುದು ಇದರಿಂದ ಸಾಧ್ಯವಾಯಿತು. ವೆನಿಸ್, ಜಿನೋವಾ, ಪಿಸಾ ಇವು ಮೂಲತಃ ವ್ಯಾಪಾರಿ ನಗರಗಳಾಗಿದ್ದುದರಿಂದ ಇವು ಏಷ್ಯಾ ಮೈನರಿನ ತೀರ ಪ್ರದೇಶದ ನಗರಗಳೊಡನೆ ಕೆಲವು ವ್ಯಾಪಾರಾನುಕೂಲಗಳನ್ನು ಬಯಸಿದುವು. ಈ ನಗರಗಳಲ್ಲಿ ದ್ವೇಷಿಗಳಾದ ಮುಸ್ಲಿಮರು, ಕ್ರಿಸ್ತನ ಶತ್ರುಗಳು,

ವಾಸಿಸುತ್ತಿದ್ದರು. ಆದರೆ ವೆನಿಸ್ಸಿನ ಜನರಿಗೆ ಇದರಿಂದೇನಾಗಬೇಕು ? ಅವರ ಆಸಕ್ತಿ ಬೇರೆ. ಈ ಧಾರ್ಮಿಕ ಯುದ್ಧಗಳಿಂದ ಈ ನಗರಗಳಿಗೆ ಹಿರಿಯ ಅವಕಾಶ ಲಭಿಸಿತು. ವ್ಯಾಪಾರ ಸೌಲಭ್ಯ ಪಡೆಯಲು ಇವರಿಗೆ ಈ ಕದನಗಳು ಅವಕಾಶ ಒದಗಿಸಿದುವು. ಆದ್ದರಿಂದ ತೃತೀಯ ಧಾರ್ಮಿಕ ಯುದ್ಧದ ಉದ್ದೇಶ ಪವಿತ್ರಭೂಮಿಯನ್ನು ಮತ್ತೆ ಪಡೆಯುವುದಾಗಿರಲಿಲ್ಲ; ಇಟಲಿಯ ನಗರಗಳಿಗೆ ವ್ಯಾಪಾರ ಸೌಲಭ್ಯ ದೊರಕಿಸಿಕೊಳ್ಳುವುದೇ ಆಗಿತ್ತು. ಧಾರ್ಮಿಕ ಯುದ್ಧಗಳಿಗೆ ಬೇಕಾಗಿದ್ದುದು ಜೆರೂಸಲೇಂ ಅಲ್ಲ, ತೀರಪ್ರದೇಶದ ವ್ಯಾಪಾರಸ್ಥಳಗಳು.

ನಾಲ್ಕನೆಯ ಧಾರ್ಮಿಕ ಯುದ್ಧ ಆರಂಭವಾದುದು ೧೨೦೧ರಲ್ಲಿ. ಆಗ ವೆನಿಸ್ಸು ಬಹು ಮುಖ್ಯವಾದ ಹಾಗೂ ಲಾಭಪ್ರದವಾದ ಪಾತ್ರ ವಹಿಸಿತು. ಧರ್ಮಯೋಧಿಗಳನ್ನು—ಕ್ರುಸೇಡರುಗಳನ್ನು—ಸಾಗಿಸಲು ನೆರವು ಬೇಡಲು ವೆನಿಸ್ಸಿನ ಪ್ರಧಾನ ದಂಡಾಧಿಕಾರಿಯ ಬಳಿಗೆ ಬಂದ ಆರು ಮಂದಿ ದೂತರಲ್ಲಿ ವಿಲ್ಲೆ ಹಾರ್ಡ್ವಿನ್ನನೂ ಒಬ್ಬ. ಆ ವರ್ಷದ ಮಾರ್ಚಿ ತಿಂಗಳಲ್ಲಿ ಮಾಡಿಕೊಂಡ ಒಡಂಬಡಿಕೆಯ ವಿಚಾರವಾಗಿ ಅವನು ಹೀಗೆ ಹೇಳಿದ್ದಾನೆ :—

" 'ಫ್ರಾನ್ಸಿನ ಸಿಲುಬೆ ಸ್ವೀಕರಿಸಿರುವ ಶ್ರೀಮಂತ ಬ್ಯಾರನ್‌ಗಳ—ರಾಜಮಾನ್ಯರ—ಪರವಾಗಿ ನಾವು ಬಂದಿದ್ದೇವೆ .... ತಮಗೆ ಇವರು ಮಾಡುವ ಪ್ರಾರ್ಥನೆ ಇದು : ದೇವರ ಹೆಸರಿನಲ್ಲಿ ಇವರಿಗೆ ಸಂಚಾರ ಸೌಕರ್ಯವನ್ನೂ ಯುದ್ಧನೌಕೆಗಳನ್ನೂ ಒದಗಿಸಿಕೊಡಬೇಕು.'

" 'ಇದಕ್ಕೇನು ಷರತ್ತು—ನೀವು ಒಪ್ಪುವಂಥದು ?' ಎಂದು ಕೇಳಿದ, ಆ ದಂಡಾಧಿಕಾರಿ.

" 'ನೀವು ಸೂಚಿಸಿರುವ ಯಾವ ಷರತ್ತುಗಳಾದರೂ ಸರಿ. ಆದರೆ ಇವುಗಳನ್ನು ನಮ್ಮ ರಾಜಮಾನ್ಯರು ಪೂರೈಸುವಂತಿರಬೇಕು,' ಎಂದರು ದೂತರು.

" 'ನಿಮಗೆ ೪೫೦೦ ಕುದುರೆಗಳನ್ನೂ ೯೦೦೦ ಬೆಂಗಾವಲು ಪಡೆಯನ್ನೂ ಸಾಗಿಸಲು ಹಡಗುಗಳನ್ನೂ, ೪೫೦೦ ಯೋಧರನ್ನೂ ೨೦೦೦ ಕಾಲಾಳುಗಳನ್ನೂ ಸಾಗಿಸಲು ಹಡಗುಗಳನ್ನೂ ಕೊಡುತ್ತೇವೆ. ಈ ಎಲ್ಲ ಕುದುರೆಗಳಿಗೂ ಜನರಿಗೂ ಒಂಬತ್ತು ತಿಂಗಳ ಗ್ರಾಸ ಒದಗಿಸಲೂ ಒಪ್ಪಿಗೆ ಇದೆ. ಕನಿಷ್ಠಪಕ್ಷ ಇಷ್ಟನ್ನು ನಾವು ಮಾಡುವೆವು. ಇದಕ್ಕೆ ಪ್ರತಿಯಾಗಿ ಕುದುರೆಯೊಂದಕ್ಕೆ ನಾಲ್ಕು ಮಾರ್ಕ್‌ನಂತೆಯೂ, ಮನುಷ್ಯನಿಗೆ ಎರಡು ಮಾರ್ಕ್‌ನಂತೆಯೂ ಹಣ ಕೊಡಬೇಕು . . . .

" 'ಇಷ್ಟೇ ಅಲ್ಲ, ಇವುಗಳ ಜತೆಗೆ ನಾವು ಐವತ್ತು ಸಶಸ್ತ್ರ ತೆರಪುದೋಣಿಗಳನ್ನೂ ಸೇರಿಸಿ ಕೊಡುವೆವು—ಇದು ಉಚಿತ, ನಮ್ಮ ದೈವಭಕ್ತಿ ಸೂಚಿಸುವುದಕ್ಕಾಗಿ. ನಮ್ಮ ನಿಮ್ಮ ಮೈತ್ರಿ ಇರುವವರೆಗೂ, ನಾವು ಗೆದ್ದ ಭೂಮಿಯಲ್ಲೂ ಹಣದಲ್ಲೂ ನಮಗೆ ಅರ್ಧ, ನಿಮಗೆ ಅರ್ಧ.'

"ದೂತರು ಹೇಳಿದರು, 'ಪ್ರಭೂ, ಈ ಒಪ್ಪಂದದ ಷರತ್ತಿಗೆ ನಮ್ಮ ಸಮ್ಮತಿ.' "[1]

ಈ ಒಪ್ಪಂದದಿಂದ ಒಂದು ವಿಚಾರ ವೇದ್ಯವಾಗುತ್ತದೆ. ವೆನಿಸ್ಸಿಗರು ಧಾರ್ಮಿಕ

---

[1] *Translations and Reprints, op. cit.*, vol. III, Section I, Series for 1896.

ಯುದ್ಧಕ್ಕೆ ಸಹಾಯಮಾಡಲು ಸಿದ್ಧರಿದ್ದರೂ, ಈ ಮಹೋದ್ದೇಶದ ಉತ್ಸಾಹದಲ್ಲಿ ಅವರು ಕೊಳ್ಳೆಯಲ್ಲಿ ಭಾಗಿಗಳಾಗುವ ಅಂಶಕ್ಕೂ ಕುರುಡರಾಗಿರಲಿಲ್ಲ. ಅವರು ಹಿರಿಯ ವ್ಯಾಪಾರಿಗಳು. ಧರ್ಮದ ದೃಷ್ಟಿಯಿಂದ ನೋಡುವುದಾದರೆ, ಈ ಯುದ್ಧಗಳ ಪರಿಣಾಮ ಬಹು ಅಲ್ಪ ಕಾಲದ್ದಾಗಿತ್ತು. ಏಕೆಂದರೆ, ಕೊನೆಗೂ ಮುಸ್ಲಿಮರು ಜೆರುಸಲೇಮನ್ನು ಮತ್ತೆ ಪಡೆದರು. ವ್ಯಾಪಾರದ ದೃಷ್ಟಿಯಿಂದ ಈ ಧಾರ್ಮಿಕ ಯುದ್ಧಗಳ ಪರಿಣಾಮ ಬಹು ಮುಖ್ಯವಾದದ್ದಾಗಿತ್ತು. ಇವು ಪ್ರಾರ್ಥನಕಾರರನ್ನೂ ಯೋಧರನ್ನೂ ಕಾರ್ಮಿಕರನ್ನೂ, ವರ್ಧಿಷ್ಣು ವ್ಯಾಪಾರಿವರ್ಗವನ್ನೂ ಯೂರೋಪ್ ಖಂಡದಲ್ಲೆಲ್ಲಾ ಹರಡಿ, ಪಶ್ಚಿಮ ಯೂರೋಪನ್ನು ಊಳಿಗಮಾನ್ಯ ಪದ್ಧತಿಯ ಯುಗದ ನಿದ್ರೆಯಿಂದ ಎಚ್ಚರಗೊಳಿಸಿದುವು ; ಇವು ವಿದೇಶಿ ವಸ್ತುಗಳಿಗೆ ಗಿರಾಕಿ ಹೆಚ್ಚಿಸಿದುವು ; ಮೆಡಿಟರೇನಿಯನ್ ವ್ಯಾಪಾರ ಮಾರ್ಗವನ್ನು ಮುಸ್ಲಿಮರ ಕೈಯಿಂದ ಕಸಿದುಕೊಂಡುವು. ಹಿಂದಣ ಕಾಲದಲ್ಲಿದ್ದಂತೆ ಮತ್ತೆ ಪೂರ್ವ ಪಶ್ಚಿಮಗಳ ನಡುವಣ ಮುಖ್ಯ ಮಾರ್ಗವನ್ನಾಗಿ ಇದನ್ನು ಪರಿವರ್ತಿಸಿದುವು.

ಹನ್ನೊಂದು ಹನ್ನೆರಡನೆಯ ಶತಮಾನಗಳಲ್ಲಿ ದಕ್ಷಿಣದಲ್ಲಿ ಮೆಡಿಟರೇನಿಯನ್ ಸಮುದ್ರದ ಮೇಲಣ ವ್ಯಾಪಾರ ಪುನರುಜ್ಜೀವನಗೊಂಡಂತೆ ಉತ್ತರ ಸಮುದ್ರಗಳಲ್ಲೂ ವ್ಯಾಪಾರದ ಸಾಧ್ಯತೆ ಸ್ಪಷ್ಟವಾಯಿತು. ಮೊಟ್ಟ ಮೊದಲಿಗೆ ಅಲ್ಲಿ ವ್ಯಾಪಾರ ನಿಜವಾಗಿಯೂ ಕುದುರಿತು.

ಉತ್ತರ ಸಮುದ್ರದ ಮೇಲೂ ಬಾಲ್ಟಿಕ್ ಸಮುದ್ರದ ಮೇಲೂ ಹಡಗುಗಳು ಸಂಚರಿಸಲಾರಂಭಿಸಿದುವು ; ಸ್ಥಳದಿಂದ ಸ್ಥಳಕ್ಕೆ ಧಾವಿಸಿ, ಮೀನು, ಮರದ ದಿಮ್ಮಿ, ಚರಬಿ, ಚರ್ಮ, ತೊಗಲು, ತುಪ್ಪುಳು ಇವನ್ನು ಸಂಗ್ರಹಿಸಹತ್ತಿದವು. ಉತ್ತರದ ಸಮುದ್ರ ತೀರದ ಒಂದು ವ್ಯಾಪಾರ ಕೇಂದ್ರವೆಂದರೆ ಫ್ಲಾಂಡರ್ಸಿನ ಬ್ರೂಜಿಸ್ ನಗರ. ದಕ್ಷಿಣದಲ್ಲಿ ವೆನಿಸ್ಸು ಯೂರೋಪಿಗೂ ಪೂರ್ವದೇಶಗಳಿಗೂ ಸಂಪರ್ಕ ಕಲ್ಪಿಸಿದ್ದಂತೆ, ಬ್ರೂಜಿಸ್ಸು ರಷ್ಯಾ, ಸ್ಕ್ಯಾಂಡಿನೇವಿಯಾಗಳೊಡನೆ ಸಂಪರ್ಕ ಏರ್ಪಡಿಸಿತ್ತು. ಎರಡು ಧ್ರುವಗಳಂತೆ ದೂರ ದೂರ ಇದ್ದ ಈ ಎರಡು ಕೇಂದ್ರಗಳೂ ಒಂದನ್ನೊಂದು ಕೂಡುವುದು ಮಾತ್ರ ಉಳಿದಿತ್ತು : ಉತ್ತರದ ಭಾರವಾದ ಅವಶ್ಯ ವಸ್ತುಗಳನ್ನು ಪೂರ್ವದ ಹೆಚ್ಚು ಬೆಲೆಯ ಭೋಗ ವಸ್ತುಗಳಿಗಾಗಿ ಸುಲಭ ವಿನಿಮಯ ಮಾಡುವುದು ಸಾಧ್ಯವಾಗಲು ಈ ಎರಡು ಕೇಂದ್ರಗಳು ಕೂಡುವ ಸ್ಥಳವೊಂದು ಬೇಕಾಗಿತ್ತು. ವಾಣಿಜ್ಯಕ್ಕೊಂದು ವಿಶಿಷ್ಟ ಗುಣವಿದೆ. ಅದು ಒಮ್ಮೆ ಸರಿಯಾಗಿ ಆರಂಭವಾದರೆ ಸಾಕು. ಬೆಟ್ಟದ ಮೇಲಿಂದ ಉರುಳುವ ಹಿಮದ ಚೆಂಡು ಉದ್ದಕ್ಕೂ ಹೆಚ್ಚು ಹಿಮ ಶೇಖರಿಸಿಕೊಳ್ಳುತ್ತಾ ಗಾತ್ರದಲ್ಲಿ ಬೆಳೆಯುತ್ತದೆ. ಹೀಗೆ ಬಹು ಬೇಗ ವಾಣಿಜ್ಯ ಬೆಳೆದು, ಅನತಿ ಕಾಲದಲ್ಲೇ ಇಂಥ ಒಂದು ವ್ಯಾಪಾರ ಕೇಂದ್ರ— ಉತ್ತರ ಪೂರ್ವಗಳು ಕೂಡುವ ಸ್ಥಳ—ಸ್ಥಾಪಿತವಾಯಿತು. ಉತ್ತರದ ಪದಾರ್ಥಗಳನ್ನು ಸಾಗಿಸುತ್ತಿದ್ದ ವ್ಯಾಪಾರಿಗಳು ದಕ್ಷಿಣದಿಂದ ಆಲ್ಪ್ಸ್ ಪರ್ವತವನ್ನು ದಾಟಿ ಬಂದಿದ್ದವರನ್ನು ಷಾಂಪೇನಿನ ಮೈದಾನದಲ್ಲಿ ಭೇಟಿಯಾದರು. ಇಲ್ಲಿ ಹಲವು ನಗರಗಳಲ್ಲಿ ದೊಡ್ಡ ದೊಡ್ಡ ಪರಿಷೆಗಳು ನಡೆಯುತ್ತಿದ್ದುವು. ಇವುಗಳಲ್ಲಿ ಮುಖ್ಯವಾದವು ಲಾನಿ, ಪ್ರಾವಿನ್ಸ್,

ಬಾರ್–ಸುರ್–ಆಬೇ ಮತ್ತು ಟ್ರಾಯ್. (ಟ್ರಾಯ್ ತೂಕ ಬಳಕೆಗೆ ಬಂದುದು ಈ ನಗರದ ಹೆಸರಿನಲ್ಲಿ. ಹಲವು ಶತಮಾನಗಳ ಹಿಂದೆ ದೊಡ್ಡ ದೊಡ್ಡ ಪರಿಷೆಗಳಲ್ಲಿ ಟ್ರಾಯ್‌ನಲ್ಲಿ ಬಳಸುತ್ತಿದ್ದ ಬಟ್ಟುಗಳನ್ನೇ ಉಪಯೋಗಿಸುತ್ತಿದ್ದರು.)

ಇಂದು ವ್ಯಾಪಾರ ಸಂತತವಾಗಿ, ನಮ್ಮ ಸುತ್ತಲೂ, ನಡೆಯುತ್ತಿದೆ. ನಮ್ಮ ಸಾರಿಗೆ ಸಾಧನ ಇಂದು ಎಷ್ಟು ಸಮರ್ಪಕವಾಗಿ ಅಭಿವೃದ್ಧಿ ಹೊಂದಿದೆಯೆಂದರೆ, ಭೂಮಿಯ ದೂರದ ಮೂಲೆ ಮೂಲೆಗಳಿಂದ ಪದಾರ್ಥಗಳು ಸತತವಾಗಿ ನಮ್ಮ ದೊಡ್ಡ ನಗರಗಳಿಗೆ ಹರಿದು ಬರುತ್ತಿರುತ್ತವೆ. ನೀವು ನಾವು ಈಗ ಮಾಡಬೇಕಾದುದಿಷ್ಟೆ: ಅಂಗಡಿಗೆ ಹೋಗಿ ಬೇಕಾದದ್ದನ್ನು ಆರಿಸಿಕೊಳ್ಳುವುದು. ಆದರೆ ಹನ್ನೆರಡು ಹದಿಮೂರನೆಯ ಶತಮಾನಗಳಲ್ಲಿ ಸಾರಿಗೆ ಸಾಧನ ಅಷ್ಟೊಂದು ಬೆಳೆದಿರಲಿಲ್ಲ; ವರ್ಷವಿಡೀ ಅಂಗಡಿ ತೆರೆದಿದ್ದು, ಪ್ರತಿದಿನವೂ ಪದಾರ್ಥ ಮಾರುವುದು ಅಗತ್ಯವೆನಿಸುವಷ್ಟು ಗಿರಾಕಿ ಯಾವಾಗಲೂ ಇರುತ್ತಿರಲಿಲ್ಲ. ಆದ್ದರಿಂದ ಹಲವು ನಗರಗಳಲ್ಲಿ ಶಾಶ್ವತವಾದ ವ್ಯಾಪಾರವಿರಲಿಲ್ಲ. ಇಂಗ್ಲೆಂಡ್, ಫ್ರಾನ್ಸ್, ಬೆಲ್ಜಿಯಂ, ಜರ್ಮನಿ, ಇಟಲಿ ಇವುಗಳಲ್ಲಿ ನಡೆಯುತ್ತಿದ್ದ ನಿಯತಕಾಲಿಕ ಪರಿಷೆಗಳು ಶಾಶ್ವತವಾದ ನಿರಂತರವಾದ ವ್ಯಾಪಾರದ ಮೊದಲ ಹಂತಗಳಾಗಿದ್ದವು. ತಮ್ಮ ಸರಳವಾದ ಅಗತ್ಯಗಳನ್ನು ಪೂರೈಸಿಕೊಳ್ಳಲು ವಾರದ ಸಂತೆಗಳನ್ನೇ ಅವಲಂಬಿಸಿದ್ದ ಸ್ಥಳಗಳು ಕ್ರಮೇಣ ಪ್ರಬುದ್ಧ ವ್ಯಾಪಾರಾವಕಾಶಗಳನ್ನು ಬಳಸಿಕೊಳ್ಳಲು ಈ ಸಂತೆಗಳು ಸಾಲದು ವೆಂದು ಕಂಡುಕೊಂಡವು. ಫ್ರಾನ್ಸಿನ ಪಾಯ್ ಇಂಥ ಸ್ಥಳಗಳಲ್ಲೊಂದು. ಇಲ್ಲಿನ ಜನ ವಾರ ಕ್ಕೊಂದು ಸಂತೆಯನ್ನೂ ವರ್ಷಕ್ಕೆರಡು ಪರಿಷೆಗಳನ್ನೂ ನಡಸಲು ರಾಜನನ್ನು ಕೇಳಿ ಕೊಂಡರು. ಇದನ್ನು ಕುರಿತ ರಾಜನ ಕಾಗದದ ಒಂದು ಭಾಗದ ಒಕ್ಕಣೆ ಈ ರೀತಿ ಇದೆ: "ನಮ್ಮ ಪ್ರೀತಿಯ ಕ್ಯಾನಾಪಲ್ ಹಾಗೂ ಪಾಯ್‌ನ ಸಿನ್ಯೂರ್ ಜಿಹಾನ್ ಡೀ ಕ್ವೀಕ್ರಿಯ ವಿನೀತ ಪ್ರಾರ್ಥನೆ ನಮಗೆ ತಲುಪಿದೆ. ಈ ಹಳ್ಳಿಯೂ ಪಾಯ್ ಸುತ್ತಣ ಪ್ರದೇಶವೂ ಒಳ್ಳೆಯ ಹಾಗೂ ಫಲವತ್ತಾದ ನಾಡಿನಲ್ಲಿ ಸ್ಥಾಪಿತವಾಗಿದ್ದು, ಜನಭರಿತ ವಾಗಿದೆಯೆಂದೂ, ಹಲವು ವ್ಯಾಪಾರಿಗಳೂ ಸುತ್ತ ಮುತ್ತಣ ನಾನಾ ವಸ್ತುಗಳೂ ಈ ಮೂಲಕ ಸಾಗುವುದು ವಾಡಿಕೆಯಾಗಿದೆಯೆಂದೂ, ಆದ್ದರಿಂದ ಇಲ್ಲಿ ವರ್ಷಕ್ಕೆ ಎರಡು ಪರಿಷೆಗಳನ್ನೂ ವಾರವಾರವೂ ಸಂತೆಯನ್ನೂ ನಡಸುವುದು ಸೂಕ್ತವೂ ಅಗತ್ಯವೂ ಆಗಿದೆ ಯೆಂದೂ ಹೇಳಿರುವುದನ್ನು ಗಮನಿಸಿದ್ದೇವೆ. ಈ ಕಾರಣದಿಂದ ನಾವು ಇಲ್ಲಿ ವರ್ಷಕ್ಕೆ ಎರಡು ಪರಿಷೆಗಳೂ ವಾರಕ್ಕೊಂದು ಸಂತೆಯೂ ನಡೆಯತಕ್ಕದೆಂದೂ, ಇವನ್ನು ರಚಿಸಿ ಸ್ಥಾಪಿಸಿದ್ದೇವೆಂದೂ ತಿಳಿಸುತ್ತೇವೆ."[1] ಇನ್ನೊಂದು ವಿಷಯ: ಷಾಂಪೇನಿನ ಮುಖ್ಯ ಪರಿಷೆಗಳಲ್ಲಿ ಒಂದು ಮುಗಿದೊಡನೆಯೇ ಇನ್ನೊಂದು ಆರಂಭವಾಗಿ, ವರ್ಷವೆಲ್ಲಾ ಯಾವು ದಾದರೂ ಒಂದು ಪರಿಷೆ ನಡೆಯುವಂತೆ ಇವು ಏರ್ಪಾಡಾಗಿದ್ದುವು. ವರ್ತಕರು ತಮ್ಮ ಸರಕುಗಳೊಡನೆ ಪರಿಷೆಯಿಂದ ಪರಿಷೆಗೆ ಸಾಗುತ್ತಿದ್ದರು.

---

[1] A. Thierry, *Recueil des Monuments Inédits de l'histoire du tiers état*, **vol. III, p. 643. Paris, 1856.**

ಮಧ್ಯಯುಗದ ಆರಂಭಕಾಲದಲ್ಲಿ ವಾರವಾರವೂ ನಡೆಯುತ್ತಿದ್ದ ಸ್ಥಳೀಯ ಸಂತೆಗಳಿಗೂ ಹನ್ನೆರಡನೆಯ ಶತಮಾನದಿಂದ ಹದಿನೈದನೆಯ ಶತಮಾನದ ವರೆಗಿನ ಈ ದೊಡ್ಡ ಪರಿಷೆಗಳಿಗೂ ಇದ್ದ ವ್ಯತ್ಯಾಸವನ್ನು ಗಮನಿಸುವುದು ಮುಖ್ಯ. ಸಂತೆಗಳು ಸಣ್ಣವು. ಸ್ಥಳೀಯ ಪದಾರ್ಥಗಳು ಮಾತ್ರ ಅಲ್ಲಿಗೆ ಬರುತ್ತಿದ್ದುವು. ಇವು ಬಹುತೇಕ ವ್ಯವಸಾಯ ವಸ್ತುಗಳು. ಆದರೆ ಪರಿಷೆಗಳು ದೊಡ್ಡವು. ಆಗ ಗೊತ್ತಿದ್ದ ಪ್ರಪಂಚದ ಎಲ್ಲ ಭಾಗಗಳಿಂದ ಬಂದ ವಸ್ತುಗಳ ಸಗಟು ವ್ಯಾಪಾರ ಇಲ್ಲಿ ನಡೆಯುತ್ತಿತ್ತು. ಪದಾರ್ಥ ವಿತರಣೆಯ ಕೇಂದ್ರವೇ ಪರಿಷೆ. ಇಲ್ಲಿಗೆ ಬರುತ್ತಿದ್ದವರು ಸಣ್ಣ ಸಂಚಾರಿ ಮಾರಾಟಗಾರರಲ್ಲ, ಸ್ಥಳೀಯ ಕೆಲಸಗಾರರಲ್ಲ. ದೊಡ್ಡ ವ್ಯಾಪಾರಿಗಳು ಇಲ್ಲಿಗೆ ಬಂದು, ಪೂರ್ವ ಪಶ್ಚಿಮಗಳಿಂದಲೂ ಉತ್ತರ ದಕ್ಷಿಣಗಳಿಂದಲೂ ಬಂದಿದ್ದ ವಿದೇಶಿ ಸರಕನ್ನು ಕೊಂಡು ಮಾರುತ್ತಿದ್ದರು.

ಷಾಂಪೇನಿನ ಪರಿಷೆಗಳನ್ನು ಕುರಿತ ಈ ಘೋಷಣೆಯನ್ನು ನೋಡಿ: "ವರ್ತಕರ ಎಲ್ಲ ಸಂಘಗಳು, ಬಿಡಿ ವರ್ತಕರು, ಇಟಲಿಯವರು, ಆಲ್ಪ್ಸ್‌ನವರು, ಫ್ಲಾರೆನ್ಸಿಗರು, ಮಿಲಾನರು, ಲಕ್ಷಿನವರು, ಜಿನೋವನ್ನರು, ವೆನಿಸಿಗರು, ಜರ್ಮನರು, ಪ್ರೊವೆಂಕಲರು—ಎಲ್ಲ ದೇಶಗಳ ಜನರು, ನಮ್ಮ ರಾಜ್ಯಕ್ಕೆ ಸೇರದವರು, ಎಲ್ಲರೂ—ಇಲ್ಲಿ ವ್ಯಾಪಾರ ಮಾಡಲೂ, ಈ ಪರಿಷೆಗಳ ಸೌಲಭ್ಯಗಳನ್ನೂ ಸತ್ಸಂಪ್ರದಾಯಗಳನ್ನೂ ಅನುಭವಿಸಲೂ ಬಯಸಿದ್ದೇ ಆದರೆ, ಅಂಥವರು ಇಲ್ಲಿಗೆ ಸುರಕ್ಷಿತವಾಗಿ ಬರಬಹುದು, ಇಲ್ಲಿರಬಹುದು, ಇಲ್ಲಿಂದ ಹೋಗಬಹುದು. ಅವರಿಗೂ ಅವರ ಸರಕುಗಳಿಗೂ ಅವರ ಮಾರ್ಗದರ್ಶಿಗಳಿಗೂ ರಕ್ಷಣೆ ದೊರಕುವುದು. ಇನ್ನು ಮುಂದೆ ನಾವು ಇವರನ್ನು ಇವರ ಸರಕುಗಳೊಡನೆ ಸದಾ ಸ್ವಾಗತಿಸುವೆವು, ಸರಕಿನ ಮುಟ್ಟುಗೋಲು, ಬಂಧನ, ಅಡಚಣೆ ಇವುಗಳ ಭಯವಿಲ್ಲದೆ ಇವರು ವ್ಯವಹರಿಸಬಹುದು. ಪರಿಷೆಗಳ ರಕ್ಷಕರ ಅಂಕೆಗೆ ಇವರು ಒಳಗಾಗಿದ್ದರೆ ಸಾಕು . . . ."[1]

ಎಲ್ಲೆಲ್ಲಿಂದಲೂ ತಮ್ಮ ಪರಿಷೆಗಳಿಗೆ ಬರಬೇಕೆಂದು ಆಹ್ವಾನ ನೀಡಿರುವುದಷ್ಟೇ ಅಲ್ಲ. ಪರಿಷೆಗಳಿಗೆ ಬರುವಾಗಲೂ, ಇಲ್ಲಿಂದ ಹೋಗುವಾಗಲೂ ಮಾರ್ಗದಲ್ಲಿ ಅವರಿಗೆ ರಕ್ಷಣೆಯ ಭರವಸೆಯನ್ನು ಕೂಡ ಷಾಂಪೇನಿನ ಅಧಿಪತಿ ನೀಡಿರುವುದನ್ನು ಗಮನಿಸಿ. ದರೋಡೆಕೋರರು ರಸ್ತೆಯ ಉದ್ದಕ್ಕೂ ಇದ್ದ ಕಾಲದಲ್ಲಿ ಈ ರಕ್ಷಣೆಯ ಭರವಸೆ ಎಷ್ಟೊಂದು ಮುಖ್ಯವಾಗಿತ್ತೆಂಬುದನ್ನು ಊಹಿಸಬಲ್ಲಿರಿ. ಮಾರ್ಗ ಮಧ್ಯದಲ್ಲಿ ಊಳಿಗಮಾನ್ಯ ಪದ್ಧತಿಯ ಪ್ರಭುಗಳು ಸುಂಕ ಕೇಳಿ ಹಿಂಸೆಪಡಿಸದಂತೆ ವಿನಾಯಿತಿಯೂ ಇವರಿಗೆ ಹಲವು ವೇಳೆ ದೊರಕುತ್ತಿತ್ತು. ಪರಿಷೆ ನಡೆಯುತ್ತಿದ್ದ ಪ್ರಾಂತದ ಪ್ರಭುವಿನಿಂದ ಈ ಎಲ್ಲ ವ್ಯವಸ್ಥೆಯ ಏರ್ಪಾಡೂ ಆಗಿತ್ತು. ರಸ್ತೆಯಲ್ಲಿ ದರೋಡೆಕೋರರು ಈ ವರ್ತಕಗುಂಪಿನ ಮೇಲೆ ಎರಗಿದರೆ ಏನಾಗುತ್ತಿತ್ತು ? ಯಾವ ಪ್ರಾಂತದಲ್ಲಿ ಈ ದರೋಡೆ ನಡೆಯಿತೋ ಆ ಪ್ರಾಂತದ ವರ್ತಕರು ಪರಿಷೆಗಳಿಗೆ ಬರದಂತೆ ಪ್ರತಿಬಂಧಕವೇರ್ಪಡುತ್ತಿತ್ತು. ಇದು

---

[1] *Ordonnances des Roys de France de la Troisième Race. Recueillies pa. ordre chronologique*, vol. II, p. 309. A paris de l'imprimerie royale, 1729.

ನಿಜಕ್ಕೂ ಬಹು ದೊಡ್ಡ ಶಿಕ್ಷೆ. ಏಕೆಂದರೆ ಇದರಿಂದ ಆ ಪ್ರದೇಶದ ವಾಣಿಜ್ಯವೇ ನಿಂತು ಹೋಗುತ್ತಿತ್ತು.

ಪರಿಷೆ ನಡೆಯುತ್ತಿದ್ದ ನಗರದ ಪ್ರಭು ಈ ಎಲ್ಲ ವಿಶೇಷ ವ್ಯವಸ್ಥೆ ಮಾಡಬೇಕಾದ ಅಗತ್ಯವಾದರೂ ಏನಿತ್ತು? ಕಾರಣ ಸುಸ್ಪಷ್ಟ: ಪರಿಷೆಯಿಂದ ಅವನ ಗ್ರಾಮಕ್ಕೆ—ಅವನಿಗೂ ಕೂಡ—ಐಶ್ವರ್ಯ ಬರುತ್ತಿತ್ತು. ಪರಿಷೆಯಲ್ಲಿ ವ್ಯಾಪಾರ ಮಾಡುತ್ತಿದ್ದ ವರ್ತಕರು ತಮಗೆ ದೊರಕುತ್ತಿದ್ದ ಸೌಲಭ್ಯಗಳಿಗಾಗಿ ಅವನಿಗೆ ಶುಲ್ಕ ಕೊಡುತ್ತಿದ್ದರು. ಪರಿಷೆಯನ್ನು ಪ್ರವೇಶಿಸಲೂ, ಅಲ್ಲಿಂದ ನಿರ್ಗಮಿಸಲೂ, ಪದಾರ್ಥ ದಾಸ್ತಾನು ಮಾಡಲೂ ಸುಂಕ ಕೊಡಬೇಕಾಗಿತ್ತು. ಮಾರಾಟ ತೆರಿಗೆ, ಮಳಿಗೆ ತೆರಿಗೆ ಇವೂ ಇದ್ದುವು. ವರ್ತಕರು ಈ ಶುಲ್ಕ ಕೊಡಲು ನಿರಾಕರಿಸುತ್ತಿರಲಿಲ್ಲ. ಏಕೆಂದರೆ ಈ ಶುಲ್ಕಗಳೆಲ್ಲ ಪ್ರಸಿದ್ಧವಾಗಿದ್ದುವು, ಇವು ತೆರಲಾರದಷ್ಟು ಹೊರೆಯಾಗಿರಲಿಲ್ಲ.

ಈ ಪರಿಷೆಗಳು ಎಷ್ಟು ದೊಡ್ಡವಾಗಿದ್ದುವೆಂದರೆ, ಇವಕ್ಕೆ ನಗರದ ಸಾಮಾನ್ಯ ರಕ್ಷಕರು ಸಾಲುತ್ತಿರಲಿಲ್ಲ. ಪರಿಷೆಗಳಿಗೆ ಪ್ರತ್ಯೇಕವಾದ ಪೋಲೀಸರ, ವಿಶೇಷ ರಕ್ಷಕರ, ನ್ಯಾಯಾಲಯಗಳ ವ್ಯವಸ್ಥೆ ಇತ್ತು. ತಕರಾರು ಉದ್ಭವಿಸಿದಾಗ ಪರಿಷೆಯ ಪೋಲೀಸರು ಇದನ್ನು ತಮ್ಮ ವಶಕ್ಕೆ ತೆಗೆದುಕೊಂಡು, ಪರಿಷೆಯ ನ್ಯಾಯಾಲಯಗಳಲ್ಲಿ ತೀರ್ಮಾನ ಮಾಡಿಸುತ್ತಿದ್ದರು. ಪ್ರತಿಯೊಂದನ್ನೂ ಎಚ್ಚರಿಕೆಯಿಂದ, ದಕ್ಷತೆಯಿಂದ ವ್ಯವಸ್ಥೆಗೊಳಿಸಿತ್ತು.

ಪರಿಷೆಗಳ ಕಲಾಪಗಳೆಲ್ಲಾ ಸಾಮಾನ್ಯವಾಗಿ ಒಂದೇ ಬಗೆ. ಮೊದಲ ಕೆಲವು ದಿನಗಳಲ್ಲಿ ಸಕಲಸಿದ್ಧತೆ: ಸರಕುಗಳ ಕಟ್ಟು ಬಿಚ್ಚಿ, ಅಂಗಡಿಗಳನ್ನು ತೆರೆದು, ಸಾಮಾನುಗಳನ್ನು ಜೋಡಿಸಿ, ಶುಲ್ಕಗಳನ್ನು ತೆತ್ತು—ಈ ರೀತಿ ಎಲ್ಲ ಕಾರ್ಯಭಾರಗಳೂ ಮುಗಿದ ಮೇಲೆ ಪರಿಷೆ ಆರಂಭ. ಅಂಗಡಿಯಿಂದ ಅಂಗಡಿಗೆ ಚಲಿಸುತ್ತಿದ್ದ ಜನರಿಗೆ ಮನೋರಂಜನೆ ನೀಡಲು ಹತ್ತಾರು ಮಂದಿ ನಡಸುತ್ತಿದ್ದ ವಿನೋದ ಪ್ರದರ್ಶನಗಳ ನಡುವೆ ವ್ಯಾಪಾರ ಸಾಗುತ್ತಿತ್ತು. ಎಲ್ಲ ಬಗೆಯ ವಸ್ತುಗಳ ಎಡೆಬಿಡದ ವ್ಯಾಪಾರ ಸಾಗುತ್ತಿತ್ತು. ಆದರೆ ಬಟ್ಟೆ, ಚರ್ಮ, ತೊಗಲು ಮುಂತಾದ ವಿಶೇಷ ಪದಾರ್ಥಗಳ ಮಾರಾಟಕ್ಕೆ ಕೆಲವು ದಿನಗಳು ಮೀಸಲಾಗಿದ್ದುವು.

ಲಿಲ್ಲೆ ಎಂಬಲ್ಲಿ ನಡೆದ ಪರಿಷೆಯನ್ನು ಕುರಿತ ೧೪೬೩ರ ಸಾಕ್ಷ್ಯ ಪತ್ರವೊಂದರಲ್ಲಿರುವ ಉಲ್ಲೇಖದಿಂದ ಈ ದೊಡ್ಡ ವ್ಯಾಪಾರ ಕೇಂದ್ರಗಳನ್ನು ಕುರಿತ ಇನ್ನೊಂದು ಮುಖ್ಯ ಲಕ್ಷಣವನ್ನರಿಯಬಹುದು: "ನಮ್ಮ ನಗರವಾದ ಲಿಲ್ಲೆಯಲ್ಲಿ—ಪರಿಷೆಯ ಯಾವ ಸ್ಥಳದಲ್ಲಾದರೂ—ಹಣದ ವಿನಿಮಯ ಮಾಡಬಯಸುವವರಿಗಾಗಿ ಹಣ ವಿನಿಮಯ ಕೇಂದ್ರ ಸ್ಥಾಪಿಸಿ, ಅಲ್ಲಿ ಈ ಕಾರ್ಯ ನಡಸಲು ಜೊಹಾನ್ ಲ್ಯಾನ್ಸ್ ಟೇ ಎಂಬವನಿಗೆ ನಾವು ಅತ್ಯಂತ ಅನುಗ್ರಹಪೂರ್ವಕವಾಗಿ ಅಧಿಕಾರ ದಯಪಾಲಿಸಿದ್ದೇವೆ. ಇವನಿಗೆ ಇಷ್ಟವಿರುವಷ್ಟು ಕಾಲ ಈ ವಹಿವಾಟು ನಡಸಬಹುದೆಂದು ಅಧಿಕಾರ ಕೊಟ್ಟಿದ್ದೇವೆ. ಈ ಹಕ್ಕಿಗೆ ಪ್ರತಿಯಾಗಿ ಇವನು ನಮಗೆ ಲಿಲ್ಲೆಯಲ್ಲಿರುವ ಹಣ ವಸೂಲಿಗನ ಹಸ್ತ ವರ್ಷಂಪ್ರತಿ ಪ್ಯಾರಿಸಿನ ಇಪ್ಪತ್ತು ಲಿವ್ರೆ ಶುಲ್ಕ ತೆರತಕ್ಕದ್ದು."[1]

[1] S. Poignant, *La Foire de Lille*, p. 179. E. Raoust, Lille, 1932.

ಈ ಧನವಿನಿಮಯಕಾರರು ಪರಿಷೆಯಲ್ಲಿ ಎಷ್ಟೊಂದು ಮುಖ್ಯವಾಗಿದ್ದರೆಂದರೆ, ಬಟ್ಟೆ ತೊಗಲು ಮುಂತಾದುವನ್ನು ಮಾರಲು ವಿಶೇಷ ದಿನಗಳು ಮೀಸಲಾಗಿದ್ದಂತೆಯೇ ಹಣದ ವಿನಿಮಯಕ್ಕಾಗಿಯೂ ಪರಿಷೆಯ ಕೊನೆಯ ದಿನಗಳು ಮೀಸಲಾಗಿದ್ದುವು. ಆದ್ದರಿಂದ ಪರಿಷೆಗಳು ವ್ಯಾಪಾರದ ದೃಷ್ಟಿಯಿಂದಲೇ ಅಲ್ಲದೆ, ಅಲ್ಲಿ ನಡೆಯುತ್ತಿದ್ದ ಹಣದ ವ್ಯವಹಾರದ ದೆಸೆಯಿಂದಲೂ ಬಹು ಮುಖ್ಯವಾಗಿದ್ದುವು. ಪರಿಷೆಯ ಮಧ್ಯದಲ್ಲಿ — ಧನವಿನಿಮಯಕಾರರ ಮಳಿಗೆಯಲ್ಲಿ—ನಾನಾ ತೆರನಾದ ನಾಣ್ಯಗಳ ತೂಕ, ಮೌಲ್ಯನಿರ್ಣಯ, ವಿನಿಮಯ ಮುಂತಾದ ಕಾರ್ಯಗಳು ಜರುಗುತ್ತಿದ್ದುವು, ಸಾಲಗಳ ಸಂಧಾನ ನಡೆಯುತ್ತಿತ್ತು, ಹಳೆಯ ಸಾಲಗಳ ತೀರುವೆಯಾಗುತ್ತಿತ್ತು, ನಂಬಿಕೆ ಪತ್ರಗಳ ಪಾವತಿಯಾಗುತ್ತಿತ್ತು, ಹುಂಡಿಗಳು ಧಾರಾಳವಾಗಿ ಚಲಾವಣೆಯಾಗುತ್ತಿದ್ದುವು. ಆ ಕಾಲದ ಬ್ಯಾಂಕರುಗಳು ಅದ್ಭುತ ಪ್ರಮಾಣದ ಹಣದ ವಹಿವಾಟುಗಳನ್ನು ಇಲ್ಲಿ ನಡಸುತ್ತಿದ್ದರು. ಲಂಡನ್ನಿನಿಂದ ಲೆವಾಂಟಿನ ವರೆಗೆ ಇಡೀ ಖಂಡದ ಉದ್ದಗಲಕ್ಕೂ ಹಬ್ಬಿದ್ದ ವ್ಯಾಪಾರವನ್ನೆಲ್ಲ ಆವರಿಸಿತ್ತು—ಇವರ ವಹಿವಾಟು. ಪೋಪರು, ಚಕ್ರಾಧಿಪತಿಗಳು, ರಾಜರು, ಅರಸು ಪೀಳಿಗೆಯವರು, ಆಧಿಪತ್ಯಗಳು, ನಗರಗಳು—ಎಲ್ಲವನ್ನೂ ಎಲ್ಲರನ್ನೂ ಆವರಿಸಿತ್ತು ಇವರ ವ್ಯವಹಾರ. ಹಣದ ವ್ಯವಹಾರ ಎಷ್ಟೊಂದು ಪ್ರಭಾವಶಾಲಿಯಾಗಿತ್ತೆಂದರೆ, ಇದೇ ಒಂದು ಪ್ರತ್ಯೇಕ ಉದ್ಯೋಗವಾಗಿ ಪರಿಣಮಿಸಿತು.

ಇದೊಂದು ಬಹು ಮುಖ್ಯ ಅಂಶ. ಏಕೆಂದರೆ ಹಳೆಯ ಸಹಜ ಆರ್ಥಿಕ ವ್ಯವಸ್ಥೆ—ಹಣದ ಬಳಕೆ ಇಲ್ಲದೆಯೇ ಆರ್ಥಿಕ ಜೀವನ ಸಾಗುತ್ತಿದ್ದ ವ್ಯವಸ್ಥೆ—ವ್ಯಾಪಾರದ ಬೆಳೆವಣಿಗೆಯ ಫಲವಾಗಿ ವ್ಯತ್ಯಾಸಗೊಂಡಿತು. ಮಧ್ಯಯುಗದ ಪೂರ್ವಕಾಲದಲ್ಲಿ ನಡೆಯುತ್ತಿದ್ದ ಪದಾರ್ಥಗಳ ಅದಲುಬದಲಿನ ವ್ಯವಸ್ಥೆಯಲ್ಲಿದ್ದ ಅನುಕೂಲಗಳು ಹಲವು. ನಿಮ್ಮಲ್ಲಿದ್ದ ಐದು ಗ್ಯಾಲನ್ ಮದ್ಯವನ್ನು ಮೇಲಂಗಿಗಾಗಿ ವಿನಿಮಯ ಮಾಡುವುದು ಹೇಳುವಷ್ಟು ಸುಲಭವಾಗಿರಲಿಲ್ಲ. ನೀವು ಬಯಸಿದುದನ್ನು ಹೊಂದಿದ್ದ, ನೀವು ಹೊಂದಿದ್ದುದನ್ನು ಬಯಸಿದ್ದ ವ್ಯಕ್ತಿಯನ್ನು ನೀವು ಹುಡುಕಿಕೊಂಡು ಹೋಗಬೇಕಿತ್ತು. ಇದರ ಬದಲು ಹಣವನ್ನು ಮಧ್ಯವರ್ತಿಯಾಗಿ ತೊಡಗಿಸಿದಾಗ ಏನಾಗುವುದು, ಬಲ್ಲಿರಾ? ಎಲ್ಲರೂ—ಅವರಿಗೆ ಬೇಕಾದುದು ಯಾವುದಾದರೂ ಇರಲಿ—ಹಣ ಸ್ವೀಕರಿಸುವರು. ಏಕೆಂದರೆ ಇದನ್ನು ಯಾವ ಪದಾರ್ಥಕ್ಕೆ ಬೇಕಾದರೂ ಪ್ರತಿಯಾಗಿ ಕೊಡಬಹುದು. ಆಗ ನೀವು ಮಾಡಬೇಕಾದುದಿಷ್ಟೆ: ನಿಮ್ಮ ಮದ್ಯವನ್ನು ಹಣಕ್ಕೆ ಮಾರಿ; ಆ ಹಣದಿಂದ ಮೇಲಂಗಿಯನ್ನು ಕೊಳ್ಳಿರಿ. ಹಿಂದಣ ಒಂದೇ ವಿನಿಮಯ ವ್ಯವಹಾರದ ಬದಲು ಈಗ ಹಣದ ಮಧ್ಯಸ್ಥಿಕೆಯಿಂದ ಎರಡು ವ್ಯವಹಾರಗಳನ್ನು ನಡಸಬೇಕಾಯಿತು, ನಿಜ. ಆದರೆ ಕಾಲ ಶ್ರಮಗಳ ಉಳಿತಾಯವಾಗಿದೆ. ಹಣದ ಬಳಕೆಯಿಂದ ಪದಾರ್ಥಗಳ ವಿನಿಮಯ ಸುಲಭವಾಗಿದೆ, ವ್ಯಾಪಾರ ಕುದುರಿದೆ. ವ್ಯಾಪಾರ ಬೆಳೆದಂತೆ ಹಣದ ವಹಿವಾಟಿನ ಮೇಲೂ ಪರಿಣಾಮವುಂಟಾಗುತ್ತದೆ. ಇದು ಹೆಚ್ಚುತ್ತದೆ. ಪೇಟೆಯೇ ಇಲ್ಲದ ಅರ್ಥ ವ್ಯವಸ್ಥೆ ಹೋಯಿತು; ಹನ್ನೆರಡನೆಯ ಶತಮಾನದ ಅನಂತರ ಹಲವು ಪೇಟೆಗಳ ಅರ್ಥವ್ಯವಸ್ಥೆಯಾಗಿ ಪರಿವರ್ತನೆ

ಹೊಂದಿತು. ವಾಣಿಜ್ಯದ ವೃದ್ಧಿಯೊಂದಿಗೆ ಮಧ್ಯಯುಗದ ಪೂರ್ವ ಕಾಲದ ಮೇನರಿನ—ಜಹಗೀರಿಯ—ಸಹಜ ಸ್ವಾವಲಂಬಿ ಅರ್ಥವ್ಯವಸ್ಥೆ ಬದಲಾಯಿತು ; ವಿಸ್ತರಿಸುತ್ತಿರುವ ವ್ಯಾಪಾರಪ್ರಪಂಚದ ಹಣದ ಅರ್ಥವ್ಯವಸ್ಥೆಯಾಗಿ ಪರಿವರ್ತನೆ ಹೊಂದಿತು.

# ೩. ನಗರಾಭಿಮುಖ ಗಮನ

ಆಗೀಗ ಹನಿಯಾಗಿ ನಡೆಯುತ್ತಿದ್ದ ವ್ಯಾಪಾರ ವಿಶಾಲವಾದ ಪ್ರವಾಹವಾದಾಗ, ವಾಣಿಜ್ಯ ವ್ಯವಸಾಯ ಕೈಗಾರಿಕೆಗಳ ಒಂದೊಂದು ಸಣ್ಣ ಕವಲೂ ಪ್ರೋತ್ಸಾಹ ಹೊಂದಿ ಬೆಳೆಯಿತು. ವ್ಯಾಪಾರದ ಬೆಳವಣಿಗೆಯ ಮುಖ್ಯ ಪರಿಣಾಮಗಳಲ್ಲೊಂದೆಂದರೆ ನಗರಗಳ ಬೆಳವಣಿಗೆ.

ವ್ಯಾಪಾರ ಹೀಗೆ ವರ್ಧಿಸುವ ಮುನ್ನವೂ ಒಂದು ರೀತಿಯ ನಗರಗಳು ಇದ್ದುವು, ನಿಜ. ದೇಶದ ಸೇನಾಕೇಂದ್ರಗಳೂ ನ್ಯಾಯಕೇಂದ್ರಗಳೂ ರಾಜಧಾನಿಗಳೂ ಆಗಿದ್ದುವು ಇವು. ಇವುಗಳಿಗೆ ಜನ ಸಂತತವಾಗಿ ಬಂದು ಹೋಗುತ್ತಿದ್ದರು. ವಾಸ್ತವವಾಗಿ ಅವು ಗ್ರಾಮಾಂತರ ನಗರಗಳಾಗಿದ್ದುವು. ಅವುಗಳಿಗೇ ವಿಶಿಷ್ಟವಾದ ಹಕ್ಕು ಬಾಧ್ಯತೆಗಳಾಗಲಿ ನಗರಾಡಳಿತವಾಗಲಿ ಇರಲಿಲ್ಲ. ಆದರೆ ವ್ಯಾಪಾರದ ಬೆಳವಣಿಗೆಯೊಂದಿಗೆ ಪ್ರವರ್ಧಮಾನ ಹೊಂದಿದ ಹೊಸ ನಗರಗಳೂ, ಹೊಸ ಉತ್ತೇಜನದಿಂದ ಹೊಸ ಜೀವ ತಳೆದ ಹಳೆಯ ಪಟ್ಟಣಗಳೂ ಹೊಸ ಸ್ವರೂಪ ಪಡೆದುವು.

ವಾಣಿಜ್ಯ ಶೀಘ್ರವಾಗಿ ಬೆಳೆದಲ್ಲೆಲ್ಲ ಪಟ್ಟಣಗಳೂ ಬೆಳೆದುವು. ಮಧ್ಯಯುಗದಲ್ಲಿ ಇಟಲಿ ಹಾಗೂ ನೆದರ್ಲೆಂಡ್ಸ್‌ನಲ್ಲಿ ಪಟ್ಟಣಗಳು ಹೀಗೆ ಬೆಳೆದುದೂ, ಇವು ಮೊದಲು ಇಲ್ಲಿ ಕಾಣಿಸಿಕೊಂಡುದೂ ಸಹಜವೇ. ವ್ಯಾಪಾರ ವೃದ್ಧಿಯಾದಂತೆಲ್ಲಾ ಪಟ್ಟಣಗಳೂ ಅಧಿಕ ಸಂಖ್ಯೆಯಲ್ಲಿ ಬೆಳೆದುವು. ಎರಡು ರಸ್ತೆ ಕೂಡುವ ಎಡೆಯಲ್ಲಿ, ನದಿಯ ಮುಖದಲ್ಲಿ, ನೆಲದ ಇಳಿಜಾರು ಅನುಕೂಲವಾಗಿದ್ದೆಡೆಯಲ್ಲಿ ಪಟ್ಟಣಗಳು ಬೆಳೆದುವು. ವ್ಯಾಪಾರಿಗಳು ಅರಸುತ್ತಿದ್ದ ಎಡೆಗಳೂ ಇಂಥವೇ. ಮೇಲಾಗಿ ಇಂಥ ಎಡೆಗಳಲ್ಲಿ ಸಾಮಾನ್ಯವಾಗಿ ಕ್ರಿಸ್ತ ದೇವಾಲಯವೂ ಇರುತ್ತಿತ್ತು, ಕಷ್ಟಕಾಲದಲ್ಲಿ ರಕ್ಷಣೆ ನೀಡುವ ಬರ್ಗ್ ಎಂಬ ಕೋಟೆಯ ಪ್ರದೇಶವೂ ಇರುತ್ತಿದ್ದುದುಂಟು. ತಮ್ಮ ದೀರ್ಘ ಪ್ರಯಾಣದ ನಡುವೆ ವಿಶ್ರಾಂತಿ ಬಯಸಿಯೋ, ನದಿಯ ಹಿಮಗಡ್ಡೆ ಕರಗಲೆಂದೋ, ಕೆಸರು ರಸ್ತೆ ಮತ್ತೆ ಸಂಚಾರಕ್ಕೆ ಅರ್ಹವಾಗಲೆಂದೋ ತಂಗಲಿಚ್ಛಿಸುತ್ತಿದ್ದ ಪ್ರವಾಸಿ ವ್ಯಾಪಾರಿಗಳಿಗೆ ಸುತ್ತುಕೋಟೆಯೋ ಕ್ರಿಸ್ತದೇವಾಲಯವೋ ಬಹಳ ಅನುಕೂಲವಾಗಿರುತ್ತಿದ್ದುದು ಸಹಜವೇ. ಇಂಥ ಸ್ಥಳಗಳಲ್ಲಿ ಹೆಚ್ಚು ಹೆಚ್ಚು ವ್ಯಾಪಾರಿಗಳು ಸೇರಿದಂತೆಲ್ಲ ಫೋಬುರ್ಗ್—ಹೊರಗಣ ಬರ್ಗ್—ಹೊರ ಊರು—ರಚಿತವಾಯಿತು. ಕ್ರಮೇಣ ಈ ಹೊರಕೋಟೆ ಹಳೆಯ ಬರ್ಗಿಗಿಂತಲೂ ಹೆಚ್ಚು ಮುಖ್ಯವಾಯಿತು. ಅನಂತರ ವರ್ತಕರು ಇನ್ನೊಂದು ಹೆಜ್ಜೆ ಮುಂದೆ ಹೋದರು. ಈ ವರ್ತಕರು ರಕ್ಷಣೆ ಬಯಸಿದರು. ತಮ್ಮ ಪಟ್ಟಣದ ಸುತ್ತ ರಕ್ಷಣೆಯ ಗೋಡೆ ಕಟ್ಟಿಕೊಂಡರು. ಈ ಗೋಡೆಗಳು ಬಹುಶಃ ಅಮೆರಿಕದ ವಲಸೆಗಾರರು ಕಟ್ಟಿಕೊಂಡ ದಸಿ ಬೇಲಿಗಳಂತಿದ್ದುವು. ಹಳೆಯ ಗೋಡೆಗಳು ಆಗ ಅನಗತ್ಯವೆನಿಸಿದುವು. ಅವು ಕ್ರಮೇಣ ಬಿದ್ದೂಹೋದುವು. ಹಳೆಯ ಬರ್ಗು ಹೊರಕ್ಕೆ ಬೆಳೆಯಲಿಲ್ಲ; ಬದಲಾಗಿ ಹೊಸ ಹೊರ

ಊರಿನಲ್ಲಿ ಅಂತರ್ಗತವಾಯಿತು. ಹೊಸ ಹೊರ ಊರು—ಫೋ ಬುರ್ಗ್—ಚಟುವಟಿಕೆ ಯಿಂದ ತುಂಬಿತ್ತು. ಜನ ತಮ್ಮ ಹಳೆಯ ಮೇನರಿನ ಹಳ್ಳಿಗಳನ್ನು ಬಿಟ್ಟು, ಹೊಸ ಜೀವನ ಆರಂಭಿಸುವ ಅಭಿಲಾಷೆಯಿಂದ, ನವಚೈತನ್ಯ ತುಂಬಿದ, ಪ್ರವರ್ಧಮಾನಕ್ಕೆ ಬರು ತ್ತಿದ್ದ ಈ ಪಟ್ಟಣಗಳಿಗೆ ಬರಲಾರಂಭಿಸಿದರು. ಬೆಳೆಯುತ್ತಿದ್ದ ವ್ಯಾಪಾರದಿಂದ ಹೆಚ್ಚು ಜನಕ್ಕೆ ಉದ್ಯೋಗ ಲಭಿಸುತ್ತಿತ್ತು. ಕೆಲಸ ಬಯಸಿದ ಜನ ಪಟ್ಟಣಕ್ಕೆ ವಲಸೆ ಬಂದರು.

ಮೇಲೆ ಹೇಳಿದುದೆಲ್ಲ ಖಚಿತವೆಂಬುದು ನಮಗೆ ಗೊತ್ತಿಲ್ಲ. ಹೀಗಾಯಿತೆಂಬುದು ಕೆಲವರು ಇತಿಹಾಸಕಾರರ ಊಹೆ ಮಾತ್ರ. ಇವರಲ್ಲೂ, ಮಿ|| ಹೆನ್ರಿ ಪಿರೆನೆ ಎಂಬವರು ಈ ಬಗ್ಗೆ ದೊರಕಬಹುದಾದ ಎಲ್ಲ ಮಾಹಿತಿಯನ್ನೂ ಸಂಗ್ರಹಿಸಿ, ಇದರ ಆಧಾರದ ಮೇಲೆ, ಮಧ್ಯಯುಗದ ಪಟ್ಟಣಗಳು ಬೆಳೆದ ಬಗೆಯ ಕಲ್ಪನೆ ನೀಡಿದ್ದಾರೆ. ಅವರ ಈ ವಿವರಣೆ ಓದಲು ಬಹು ಸ್ವಾರಸ್ಯವಾಗಿದೆ—ಪತ್ತೇದಾರಿ ಕಾದಂಬರಿಗಿಂತ ರೋಮಾಂಚ ಕಾರಿಯಾಗಿದೆ. ವ್ಯಾಪಾರಿ ಪಟ್ಟಣಿಗನೇ ಆಗಿದ್ದನೆಂಬುದಕ್ಕೆ ಅವರು ಕೊಟ್ಟಿರುವ ಸಾಕ್ಷ್ಯ ಗಳ ಪೈಕಿ ಒಂದಂತೂ ಬಹು ಯುಕ್ತಿಯುಕ್ತ—ಸುಸ್ಪಷ್ಟ. ಹನ್ನೆರಡನೆಯ ಶತಮಾನದ ಆದಿಯ ವರೆಗೂ, 'ವ್ಯಾಪಾರಿ' ಎಂಬ ಅರ್ಥ ಕೊಡುವ 'ಮರ್ಕೇಟರ್' ಎಂಬ ಪದವನ್ನೂ 'ಪಟ್ಟಣಿಗ'ನೆಂಬ ಅರ್ಥ ಕೊಡುವ 'ಬರ್ಗೆನ್ಸಿಸ್' ಎಂಬ ಪದವನ್ನೂ ಪರ್ಯಾಯವಾಗಿ ಉಪಯೋಗಿಸಬಹುದಾಗಿತ್ತಂತೆ.[1] ಇದಕ್ಕಿಂತ ಆಧಾರ ಬೇಕೆ, ವ್ಯಾಪಾರಿ ಪಟ್ಟಣಿಗನೇ ಆಗಿದ್ದನೆಂಬುದಕ್ಕೆ ?

ಹೀಗೆ ವ್ಯಾಪಾರದ ಬೆಳೆವಣಿಗೆಯ ಜತೆಗೆ ಪಟ್ಟಣಗಳೂ ಬೆಳೆದುವು. ಇವುಗಳಲ್ಲಿ ವಾಸಿಸುತ್ತಿದ್ದವರು ವರ್ಧಿಷ್ಣು ವ್ಯಾಪಾರಿ ವರ್ಗ. ಊಳಿಗಮಾನ್ಯ ಪದ್ಧತಿಯ ಸಾಮಾಜಿಕ ವ್ಯವಸ್ಥೆಯಲ್ಲಿ ಘರ್ಷಣೆಗೆ ಎಡೆಕೊಟ್ಟಿತು ಈ ಪ್ರವೃತ್ತಿ. ಊಳಿಗಮಾನ್ಯ ವಾತಾವರಣವೇ ಬಂಧನದ ವಾತಾವರಣ ; ಪಟ್ಟಣದಲ್ಲಿನ ವ್ಯಾಪಾರಿಗಳ ಚಟುವಟಿಕೆ ಸ್ವಾತಂತ್ರ್ಯದ ಗಾಳಿ ಯನ್ನೇ ಬೀಸಿತು. ಪಟ್ಟಣದ ನೆಲ ಸೇರಿದ್ದುದು ಊಳಿಗಮಾನ್ಯ ವ್ಯವಸ್ಥೆಯ ಪ್ರಭುಗಳಿಗೆ, ಧರ್ಮಗುರುಗಳಿಗೆ, ಶ್ರೀಮಂತರಿಗೆ, ರಾಜರಿಗೆ. ಪ್ರಥಮವಾಗಿ, ಈ ನೆಲದೊಡೆಯರ ದೃಷ್ಟಿ ಯಲ್ಲಿ ಇವರ ಈ ಪಟ್ಟಣ ಪ್ರದೇಶಕ್ಕೂ ಇತರ ಭೂಮಿಗೂ ಏನೂ ವ್ಯತ್ಯಾಸವಿರಲಿಲ್ಲ. ಇವರು ತಮ್ಮ ಜಹಗೀರು ನೆಲದ ವಿಚಾರದಲ್ಲಿ ನಡೆಯುತ್ತಿದ್ದಂತೆಯೇ ಇಲ್ಲಿಯೂ ನಡೆದು ಕೊಳ್ಳಬಹುದೆಂದು ನಿರೀಕ್ಷಿಸಿದ್ದರು. ಅಲ್ಲಿಯಂತೆಯೇ ಇಲ್ಲಿಯೂ ಶುಲ್ಕ ವಸೂಲಿ ಮಾಡ ಬಹುದೆಂದು, ತೆರಿಗೆ ವಿಧಿಸಬಹುದೆಂದು, ದುಡಿತ ಪಡೆಯಬಹುದೆಂದು ಇವರು ಬಗೆದಿದ್ದರು. ಆದರೆ ಪಟ್ಟಣಗಳಲ್ಲಿ ಇದು ಸಾಧ್ಯವಿರಲಿಲ್ಲ. ಈ ವಿಧಾನಗಳೆಲ್ಲ ಮಧ್ಯಯುಗದ ವ್ಯವಸ್ಥೆಗೆ ಸರಿಹೊಂದುತ್ತಿದ್ದುವು. ನೆಲದ ಒಡೆತನದ ಮೇಲೆ ಸ್ಥಾಪಿತವಾಗಿದ್ದ ಪದ್ಧತಿ ಇದು. ಆದರೆ ಪಟ್ಟಣಿಗರ ವ್ಯವಸ್ಥೆಯಲ್ಲಿ ಇದನ್ನೆಲ್ಲ ಬದಲಿಸುವುದು ಅಗತ್ಯವಾಗಿತ್ತು. ಊಳಿಗಮಾನ್ಯ

---

[1] Cf. H. Pirenne. "The Stages in the Social History of Capitalism," in *The American Historical Review*, vol. XIX, April 1914. The Macmillan Company, N. Y., 1914.

ವ್ಯವಸ್ಥೆಯ ನೀತಿ ನಿಯಮಗಳು ಸಂಪ್ರದಾಯದ ಆಧಾರದ ಮೇಲೆ ರಚಿತವಾಗಿದ್ದುವು. ಅವುಗಳನ್ನು ಬದಲಾಯಿಸುವುದು ದುಸ್ಸಾಧ್ಯವಾಗಿತ್ತು. ಆದರೆ ವ್ಯಾಪಾರದ ಸ್ವಭಾವವೇ ಚಟುವಟಿಕೆ, ಪರಿವರ್ತನೆ. ಎಲ್ಲ ಅಡಚಣೆಗಳೂ ಅದಕ್ಕೆ ಅಸಹನೀಯ. ಕಟ್ಟುನಿಟ್ಟಾದ ಊಳಿಗಮಾನ್ಯ ಪದ್ಧತಿಯ ಚೌಕಟ್ಟಿನೊಳಗೆ ಇದನ್ನು ಸಿಲುಕಿಸುವುದು ಸಾಧ್ಯವಿರಲಿಲ್ಲ. ಮೇನರಿನ ಜೀವನಕ್ಕಿಂತ ನಗರ ಜೀವನ ಭಿನ್ನವಾಗಿತ್ತು. ಆದ್ದರಿಂದ ಹೊಸ ವ್ಯವಸ್ಥೆಯ ನಿರ್ಮಾಣ ಅಗತ್ಯವಾಯಿತು.

ಉಳಿದವರು ಹೇಗಾದರೂ ಇರಲಿ, ವರ್ತಕರಂತೂ ಹೀಗೆ ಯೋಚಿಸಿದರು. ಈ ಸಾಹಸಿ ವರ್ತಕರು ಶೀಘ್ರವಾಗಿ ತಮ್ಮ ಈ ಆಲೋಚನೆಯನ್ನು ಕಾರ್ಯರೂಪಕ್ಕೂ ತಂದರು. ಸಂಘ ದಲ್ಲೇ ಶಕ್ತಿ—ಎಂಬ ಪಾಠವನ್ನೂ ಇವರು ಕಲಿತಿದ್ದರು. ಸಂಚಾರಕಾಲದಲ್ಲಿ ಡಕಾಯಿತ ರಿಂದ ರಕ್ಷಣೆ ಪಡೆಯಲು ಇವರು ಒಟ್ಟಾಗಿ ಸೇರುತ್ತಿದ್ದರು. ಸಮುದ್ರಯಾನ ಮಾಡು ವಾಗಲೂ ಅಷ್ಟೇ: ಕಡಲುಕಳ್ಳರ ಭಯನಿವಾರಣೆಗೆ ಒಟ್ಟುಗೂಡುವುದೇ ಉಪಾಯ. ಇದೇ ನಿಯಮ ಅನ್ವಯವಾಯಿತು ವ್ಯಾಪಾರಕ್ಕೂ ಕೂಡ. ಪೇಟೆಗಳಲ್ಲೂ ಪರಿಷೆಗಳಲ್ಲೂ ವ್ಯಾಪಾರ ನಡಸುವಾಗ ಅವರು ಒಟ್ಟಿಗೆ ಕೂಡುತ್ತಿದ್ದರು. ಎಲ್ಲ ವ್ಯಾಪಾರಿಗಳೂ ಒಂದಾ ದಾಗ ಅವರ ಶಕ್ತಿ ವ್ಯಕ್ತವಾಗುತ್ತಿತ್ತು. ಚೌಕಾಯಿಸಿಯಲ್ಲಿ ಅವರದೇ ಮೇಲುಗೈ. ಅವರ ವ್ಯವಹಾರವನ್ನು ಸಂಕುಚಿತಗೊಳಿಸುತ್ತಿದ್ದ ಊಳಿಗಮಾನ್ಯ ವ್ಯವಸ್ಥೆಯ ಬಂಧನಗಳನ್ನು ಎದುರಿಸಲು ಅವರು ಮತ್ತೆ ಸಂಘಟಿತರಾದರು. ಗಿಲ್ಡ್ ಅಥವಾ ಹ್ಯಾನ್ಸ್ ಎಂಬ ವೃತ್ತಿ ಸಂಘಗಳನ್ನು—ಶ್ರೇಣಿಗಳನ್ನು—ವರ್ತಕ ಮಂಡಲಿಗಳನ್ನು—ರಚಿಸಿಕೊಂಡರು. ತಮ್ಮ ವ್ಯವಹಾರ ವಿಸ್ತರಣೆ ಅನಿರ್ಬಂಧಿತವಾಗಿ ಅವ್ಯಾಹತವಾಗಿ ಮುಂದುವರಿಯಲು ಅಗತ್ಯ ವಾದ ಸ್ವಾತಂತ್ರ್ಯವನ್ನು ತಮ್ಮ ನಗರಗಳಿಗೆ ದೊರಕಿಸಿಕೊಳ್ಳುವುದೇ ಈ ಸಂಘಗಳ ಉದ್ದೇಶ. ಹೋರಾಟವಿಲ್ಲದೆ ತಮ್ಮ ಕೇಳಿಕೆ ಫಲಿಸಿದರಂತೂ ಸರಿ. ಹೀಗಾಗದಿದ್ದರೆ, ಹೋರಾಟವೇ ಅನಿವಾರ್ಯವಾದರೆ, ಅದಕ್ಕೂ ಸೈ. ಇದು ಅವರ ಕ್ರಮ.

ಅವರಿಗೆ ಬೇಕಾಗಿದ್ದುದಾದರೂ ಏನು? ಈ ಬೆಳೆಯುವ ನಗರಗಳನ್ನು ಕುರಿತ ಅವರ ಕೇಳಿಕೆಗಳಾದರೂ ಯಾವುವು? ಅವರ ಈ ಪರಿವರ್ತನೆಯ ಪ್ರಪಂಚ ಹಳೆಯ ಊಳಿಗ ಮಾನ್ಯ ಪದ್ಧತಿಯ ಪ್ರಪಂಚದೊಡನೆ ಎಲ್ಲಿ ಘರ್ಷಣೆಗೆ ಎಡೆಕೊಟ್ಟಿತ್ತು? ಪರಿಶೀಲಿಸ ಬೇಕಾದ ಕೆಲವು ಪ್ರಶ್ನೆಗಳು ಇವು.

ನಗರದ ಜನರಿಗೆ ಸ್ವಾತಂತ್ರ್ಯ ಬೇಕಿತ್ತು. ಇಚ್ಛೆ ಬಂದಂತೆ ಬರುವ ಹೋಗುವ ಅವಕಾಶ ಅವರಿಗೆ ಬೇಕಿತ್ತು. ಆಗಿನ ಪಶ್ಚಿಮ ಯೂರೋಪಿಗೆಲ್ಲ ಅನ್ವಯವಾಗುವಂತಿದ್ದ ಹಳೆಯ ಜರ್ಮನ್ ಗಾದೆಯೊಂದಿದೆ. "ನಗರದ ಗಾಳಿ ಬೀಸಿತೋ, ಮನುಷ್ಯ ಸ್ವತಂತ್ರ." ಇದು ಈ ಗಾದೆ. ಅವರು ಬಯಸಿದ್ದನ್ನು ಪಡೆದರು—ಎಂಬುದಕ್ಕೆ ಈ ಗಾದೆಯೇ ಸಮರ್ಥನೆ. ಈ ಗಾದೆ ಎಷ್ಟೊಂದು ಯಥಾರ್ಥವಾಗಿದ್ದಿತೆಂಬುದಕ್ಕೆ ೧೧೫೫ರಲ್ಲಿ ಏಳನೆಯ ಲೂಯಿ ದೊರೆ ಲಾರಿಸ್ ನಗರಕ್ಕೆ ಕೊಟ್ಟ ಸನ್ನದಿನ ಈ ನಿಬಂಧನೆ ನೋಡಿ: "ಹನ್ನೊಂದು ಹನ್ನೆರಡನೆಯ ಶತಮಾನಗಳಲ್ಲಿ ಹಲವು ನಗರಗಳಿಗೆ ದತ್ತವಾದ ಸನ್ನದು

ಗಳಲ್ಲಿ ಇಂಥದೇ ನಿಬಂಧನೆ ಇರುತ್ತಿತ್ತು. "ಲಾರಿಸ್ ನಾಡಿನಲ್ಲಿ ಯಾರಾದರೂ ಒಂದು ವರ್ಷ ಒಂದು ದಿನ ವಾಸಿಸಿದ್ದೇ ಆದರೆ, ಅಂಥವರ ವಿಚಾರದಲ್ಲಿ ಯಾವ ತಕರಾರೂ ಇಲ್ಲದಿದ್ದರೆ, ನಮ್ಮ ಅಥವಾ ನಮ್ಮ ಮುಖ್ಯಾಧಿಕಾರಿಯ ಸನ್ಮುಖದಲ್ಲಿ ತಮ್ಮ ವಾದ ಮುಂಡಿಸಲು ನಿರಾಕರಿಸದಿದ್ದರೆ, ಅಂಥವರು ಅಲ್ಲಿ ಯಾವ ಹಿಂಸೆಯೂ ಇಲ್ಲದೆ ಸ್ವತಂತ್ರವಾಗಿ ವಾಸಿಸಲು ಬಾಧ್ಯತೆ ಹೊಂದಿರುತ್ತಾರೆ."[1] ಲಾರಿಸ್ ಹಾಗೂ ಇತರ ನಗರಗಳ ಜನರಿಗೆ ನಮ್ಮ ಇಪ್ಪತ್ತನೆಯ ಶತಮಾನದ ಜಾಹೀರಾತು ಕಲೆ ಗೊತ್ತಿದ್ದ ಪಕ್ಷದಲ್ಲಿ ಅವರು ಬಹುಶಃ ಇಂಥ ಜಾಹೀರಾತು ಹಾಕುತ್ತಿದ್ದರು :




ಪಟ್ಟಣಿಗರಿಗೆ ತಮ್ಮ ಸ್ವಾತಂತ್ರ್ಯವೊಂದೇ ಸಾಲದಾಗಿತ್ತು. ನೆಲದ ಹಕ್ಕೂ ಅವರಿಗೆ ಬೇಕಿತ್ತು. ಇಂಥವರಿಂದ ಉಂಬಳಿಯಾದ ನೆಲ ಮತ್ತೆ ಇಂಥವರಿಗೆ ಉಂಬಳಿಯಾಗಿದೆ—ಎಂಬ ಮುಂತಾದ ಊಳಿಗಮಾನ್ಯ ಪದ್ಧತಿಯ ಯುಗದ ನಡವಳಿಕೆ ಅವರಿಗೆ ಇಷ್ಟವಿರಲಿಲ್ಲ. ನೆಲವನ್ನೂ ಅದರ ಮೇಲಣ ಮನೆಯನ್ನೂ ಪಟ್ಟಣಿಗ ನೋಡುತ್ತಿದ್ದ ದೃಷ್ಟಿಯೇ ಬೇರೆ. ಊಳಿಗಮಾನ್ಯ ಪದ್ಧತಿಯ ಯುಗದ ನೆಲಒಡೆಯನ ದೃಷ್ಟಿಯೇ ಬೇರೆ. ಪಟ್ಟಣಿಗನಿಗೆ ತನ್ನ ವ್ಯಾಪಾರೋದ್ಯಮದಲ್ಲಿ ಹೂಡಲು ನಗದು ಹಣ ಬೇಕಾದಾಗ, ತನ್ನ ಆಸ್ತಿಯ ಮಾರಾಟ ಮಾಡಲೋ, ಆಧಾರ ಮಾಡಲೋ ತನ್ನ ಮೇಲಣ ಪ್ರಭುಗಳ ಶ್ರೇಣಿಯಲ್ಲಿ ಒಬ್ಬೊಬ್ಬರ ಒಪ್ಪಿಗೆಯನ್ನೂ ಪಡೆಯಬೇಕೆಂಬ ನಿಯಮ ಅವನಿಗೆ ಒಗ್ಗುತ್ತಿರಲಿಲ್ಲ. ಮೇಲೆ ಉದ್ಧರಿಸಿದ ಲಾರಿಸ್ ನಗರದ ಸನ್ನದಿನಲ್ಲಿ ಈ ವಿಚಾರವನ್ನೂ ಸ್ಪಷ್ಟೀಕರಿಸಿತ್ತು : "ತನ್ನ ಆಸ್ತಿಯನ್ನು ಮಾರಲು ಯಾವ ಪಟ್ಟಣಿಗನಾದರೂ ಇಚ್ಛಿಸಿದಲ್ಲಿ ಆತ ಹಾಗೆ ಮಾಡಬಹುದು."[2] ವ್ಯಾಪಾರವೂ ನಗರವೂ ಬೆಳೆದದ್ದರ ಫಲವಾಗಿ ಆದ ಈ ವ್ಯತ್ಯಾಸ ಎಷ್ಟೊಂದು ಪ್ರಚಂಡವಾದದ್ದೆಂಬುದನ್ನು ಅರಿಯಲು ಈ ಪುಸ್ತಕದ ಮೊದಲನೆಯ ಅಧ್ಯಾಯದಲ್ಲಿ ವಿವರಿಸಿದ ನೆಲದ ಹಿಡುವಳಿ ಪದ್ಧತಿಯನ್ನು ನೆನಸಿಕೊಂಡರೆ ಸಾಕು.

---

[1] *A Source Book of Medieval History*, pp. 328 ff., edited by F.A. Ogg. American Book Company, N.Y., 1907.

[2] *Ibid.*

ತಮ್ಮ ವ್ಯಾಜ್ಯವೆಲ್ಲ ತಮ್ಮ ನ್ಯಾಯಾಲಯಗಳಲ್ಲೇ ತೀರ್ಮಾನವಾಗಬೇಕೆಂಬ ಇಚ್ಛೆಯಿತ್ತು ಪಟ್ಟಣಿಗರಿಗೆ. ಮೇನರಿನ ನ್ಯಾಯಾಲಯಗಳು ಸ್ಥಾಯೀ ಸಮಾಜಕ್ಕೆ ತಕ್ಕಂತೆ ರೂಪಿತವಾಗಿದ್ದುವು. ಜೀವಂತವಾದ ವ್ಯಾಪಾರಿ ನಗರದ ನೂತನ ಸಮಸ್ಯೆಗಳನ್ನು ನಿರ್ವಹಿಸಲು ಇವು ಸಂಪೂರ್ಣವಾಗಿ ಅಸಮರ್ಥವಾಗಿದ್ದುವು. ಈ ಜಡ ನ್ಯಾಯಾಲಯಗಳು ಪಟ್ಟಣಿಗರಿಗೆ ಒಪ್ಪಿಗೆಯಾಗಲಿಲ್ಲ. ಉದಾಹರಣೆಗೆ ಕೆಲವು ಸಮಸ್ಯೆಗಳನ್ನು ನೋಡಿ: ಆಧಾರ, ಉದ್ಧರಿಪತ್ರ, ವ್ಯಾಪಾರ ನಿಯಮ—ಇವೆಲ್ಲ ಮೇನರಿನ ಒಡೆಯನಿಗೇನು ಗೊತ್ತು? ಅವನು ಈ ವಿಚಾರದಲ್ಲಿ ಶುದ್ಧ ಅಜ್ಞಾನಿ. ಇದೆಲ್ಲ ಅವನಿಗೆ ತಿಳಿದಿತ್ತೆಂದೇ ಇಟ್ಟುಕೊಳ್ಳೋಣ. ಆಗ ಅವನು ಈ ಜ್ಞಾನವನ್ನೂ ಅಧಿಕಾರವನ್ನೂ ತನ್ನ ಅನುಕೂಲಕ್ಕಾಗಿಯೇ ಬಳಸಿಕೊಂಡಾನು—ದುರುಪಯೋಗಪಡಿಸಿಕೊಂಡಾನು. ಪಟ್ಟಣಿಗರಿಗೆ ಅವನು ಸಹಾಯ ಮಾಡಿಯಾನೆ? ತಮ್ಮ ವಿಶಿಷ್ಟ ಸಮಸ್ಯೆಗಳನ್ನು ತಮ್ಮ ಹಿತಕ್ಕೆ ಅನುಗುಣವಾಗಿ ನಿರ್ವಹಿಸಬಲ್ಲಂಥ, ತಮ್ಮವೇ ಆದ, ನ್ಯಾಯಾಲಯಗಳ ಸ್ಥಾಪನೆಯಾಗಬೇಕೆಂದು ಪಟ್ಟಣಿಗರು ಇಚ್ಛಿಸಿದರು. ಅಪರಾಧ ಶಾಸನವನ್ನು ಪ್ರತ್ಯೇಕವಾಗಿ—ತಮ್ಮ ವ್ಯವಸ್ಥೆಗೆ ಹೊಂದುವಂತೆ—ರಚಿಸಬೇಕೆಂದೂ ಅವರು ಬಯಸಿದರು. ಸಣ್ಣ ಜಹಗೀರಿಯ ಹಳ್ಳಿಯಲ್ಲಿ ಶಾಂತಿ ಸ್ಥಾಪನೆಯ ಸಮಸ್ಯೆಯೇ ಬೇರೆ. ಅಧಿಕ ಸಂಪತ್ತಿನಿಂದಲೂ ವ್ಯತ್ಯಸ್ತಗೊಳ್ಳುತ್ತಿರುವ ಜನಸಂಖ್ಯೆಯಿಂದಲೂ ಕೂಡಿ ಬೆಳೆಯುತ್ತಿರುವ ನಗರದ ಶಾಂತಿಪಾಲನೆಯ ಮಹಾಸಮಸ್ಯೆಯನ್ನು ಇದರೊಡನೆ ಹೋಲಿಸುವುದು ಸಾಧ್ಯವೆ? ಈ ಸಮಸ್ಯೆ ಪಟ್ಟಣಿಗರಿಗೆ ಗೊತ್ತಿದ್ದಂತೆ ಮೇನರಿನ ಅಧಿಪತಿಗೆ ಗೊತ್ತಿರುವುದು ಸಾಧ್ಯವೆ? ಆದ್ದರಿಂದ ಪಟ್ಟಣಿಗರು ತಮ್ಮದೇ ಆದ ಶಾಂತಿ ಸಮಿತಿ ರಚಿಸಿಕೊಳ್ಳಬಯಸಿದರು.

ತೆರಿಗೆಯ ವಿಚಾರವೂ ಹೀಗೆಯೇ. ತಮ್ಮಿಚ್ಛೆಯಂತೆ ಇರಬೇಕು ಇದು, ವಿಧಿಸಿಕೊಳ್ಳಬೇಕು ಇದನ್ನು—ಎಂದು ಬಯಸಿದರು ಇವರು. ಇದರಲ್ಲಿ ತಮ್ಮದೇ ಆಗಬೇಕು ಕೊನೆ ಮಾತು. ಊಳಿಗಮಾನ್ಯ ವ್ಯವಸ್ಥೆಯಲ್ಲಿ ಇದ್ದ ತೆರುವಿಕೆ ಹಲವು ಬಗೆ—ಸುಂಕ, ಶುಲ್ಕ, ಚಂದಾ, ದಂಡ: ಹಲವು ಹೆಸರಿನ ಹಲವು ತೆರುವಿಕೆ. ಇವನ್ನೆಲ್ಲ ಇವರು ವಿರೋಧಿಸಿದರು. ಇವು ತುಂಬಾ ಕ್ಲೇಶಕರವೆನಿಸಿದುವು ಅವರಿಗೆ. ಅವರ—ಪರಿವರ್ತನೆಯ—ಜಗತ್ತಿನಲ್ಲಿ ಇದೆಲ್ಲ ಕೋಟಲೆ. ಅವರಿಗೆ ಬೇಕಾಗಿದ್ದದ್ದು ವ್ಯಾಪಾರ. ಇದಕ್ಕೆ ಅಡ್ಡ ಬಂದ ಎಲ್ಲ ತೆರಿಗೆಯನ್ನೂ ತೊಡೆಯಬೇಕು—ಎಂದು ಅವರು ಯತ್ನಿಸಿದರು. ಇವನ್ನೆಲ್ಲ ಸಂಪೂರ್ಣವಾಗಿ ತೊಡೆದುಹಾಕಲು ಸಾಧ್ಯವಾಗದಿದ್ದರೂ ಇದರ ಕೋಟಲೆಯನ್ನು ಆದಷ್ಟಾದರೂ ಕಡಮೆ ಮಾಡೋಣ—ಎಂದು ಇವರು ಯತ್ನಿಸಿದರು. ಇವನ್ನು ಅನುಕೂಲಕರವಾಗಿ ಪರಿವರ್ತಿಸಲು ಹೆಣಗಿದರು. ಇವರ ಯತ್ನದಲ್ಲಿ ಯಶಸ್ಸೂ ದೊರಕಿತು.

ಪಟ್ಟಣಗಳ ಮೇಲೆ ಹತೋಟಿಪೊಂದುವ ಇವರ ಯತ್ನ ಒಂದೇ ಬಾರಿಗೆ ಸಫಲವಾಗಲಿಲ್ಲ. ಕೊಂಚಕೊಂಚವಾಗಿ ಇವರು ಅವುಗಳ ಮೇಲೆ ಯಾಜಮಾನ್ಯ ಸ್ಥಾಪಿಸಿಕೊಂಡರು. ಪ್ರಥಮವಾಗಿ, ಪ್ರಭುವಿನಿಂದ ನಗರಗಳ ಮೇಲಣ ಕೆಲವು ಹಕ್ಕುಗಳ ಮಾರಾಟ. ಅನಂತರ ಇನ್ನಷ್ಟು. ಆಮೇಲೆ ಮತ್ತಷ್ಟು. ಹೀಗಾಗಿ ಕೊನೆಗೆ ಇಡೀ ಪಟ್ಟಣದ ಮೇಲೆಯೇ ಪ್ರಭುವಿನ

ಸ್ವಾಧೀನ ತಪ್ಪಿದಂತೆ. ಉದಾಹರಣೆಗೆ, ಜರ್ಮನಿಯ ಡಾರ್ಟ್‌ಮಂಡ್ ನಗರದಲ್ಲಿ ಆದದ್ದು ಬಹುಶಃ ಹೀಗೆಯೇ. ೧೨೪೧ರಲ್ಲಿ ಡಾರ್ಟ್‌ಮಂಡಿನ ಶ್ರೀಮಂತ—ಕೌಂಟ್—ಅಲ್ಲಿನ ಪೌರರಿಗೆ ತನ್ನ ಅಧಿಕಾರದಲ್ಲಿ ಸ್ವಲ್ಪವನ್ನು ಮಾರಿದ. ಅದರ ವಿವರ ಈ ರೀತಿ ಇದೆ: "ಡಾರ್ಟ್‌ಮಂಡಿನ ಶ್ರೀಮಂತ (ಕೌಂಟ್) ಕಾನ್ರಾಡ್ ಆದ ನಾನೂ ಮತ್ತು ನನ್ನ ಪತ್ನಿ ಗಿಸೆಲ್‌ಟ್ರೂಡ್ ಹಾಗೂ ನನ್ನ ಆಸ್ತಿಗೆ ಹಕ್ಕುದಾರರಾದ ಎಲ್ಲ ಉತ್ತರಾಧಿಕಾರಿಗಳೂ ಮಾರ್ಕೆಟ್ಟಿನ ಪಕ್ಕದಲ್ಲಿರುವ ನಮ್ಮ ಮನೆಯನ್ನು ಡಾರ್ಟ್‌ಮಂಡ್ ನಗರಕ್ಕೂ ಪಟ್ಟಣಿಗರಿಗೂ ಮಾರಿದ್ದೇವೆ. ಇವನ್ನು, ಇವುಗಳ ಜತೆಗೆ, ಪವಿತ್ರವಾದ ರೋಮನ್ ಚಕ್ರಾಧಿಪತ್ಯದಿಂದ ನಮಗೆ ಕೊಡಲ್ಪಟ್ಟಿದ್ದ ಕಸಾಯಿ ಖಾನೆಗಳ ಮೇಲೂ ಚಮ್ಮಾರ ಕಟ್ಟೆಯ ಮೇಲೂ ರೊಟ್ಟಿಮನೆಯ ಮೇಲೂ ನ್ಯಾಯಾಲಯದ ಮೇಲಣ ಭವನದ ಮೇಲೂ ಇದ್ದ ಹಕ್ಕನ್ನು ಬಿಟ್ಟುಕೊಟ್ಟಿದ್ದೇವೆ. ಕಸಾಯಿಖಾನೆಗಾಗಿ ಎರಡು ದೇನಾರಗಳನ್ನೂ, ಚಮ್ಮಾರ ಕಟ್ಟೆಗಾಗಿ ಎರಡು ದೇನಾರಗಳನ್ನೂ, ನ್ಯಾಯಾಲಯದ ಮೇಲಣ ಭವನಕ್ಕಾಗಿ ಒಂದು ಪೌಂಡು ಮೆಣಸನ್ನೂ ಪ್ರತಿವರ್ಷವೂ ಕೊಡತಕ್ಕದ್ದು."[1]

ಎಂಬತ್ತು ವರ್ಷವಾದ ಮೇಲೆ ಇನ್ನೊಬ್ಬ ಕೌಂಟ್ ಕಾನ್ರಾಡ್ ಇನ್ನಷ್ಟು ಹಕ್ಕು ಮಾರಿದ. ವಾರ್ಷಿಕ ಬಾಡಿಗೆ ಒಪ್ಪಂದದ ಮೇಲೆ, ಡಾರ್ಟ್‌ಮುಂಡಿನ ಆಡಳಿತ ಸಮಿತಿ ಹಾಗೂ ಪೌರರಿಗೆ ಡಾರ್ಟ್‌ಮುಂಡ್ ನಾಡಿನಲ್ಲಿ ಅರ್ಧವನ್ನು, "ಅವರ ಸಂಪೂರ್ಣ ಸ್ವಾಮ್ಯಕ್ಕೆ" ವಹಿಸಿಕೊಟ್ಟ. ನ್ಯಾಯಾಲಯ, ತೆರಿಗೆ, ಸುಂಕ, ನಾನಾ ಬಗೆಯ ವರಮಾನ, ಗೋಡೆಗಳೊಳಗೆ ಇದ್ದದ್ದು, ಎಲ್ಲವೂ—ಶ್ರೀಮಂತನ ಸ್ವಂತ ಮನೆ, ಅವನ ವೈಯಕ್ತಿಕ ಜೀತಗಾರರು, ಸೆಂಟ್ ಮಾರ್ಟಿನ್ನನ ದೇವಾಲಯ ಇವನ್ನು ಬಿಟ್ಟು—ಇದರಲ್ಲಿ ಸೇರಿಹೋದುವು.

ಹೀಗೆ ಬಹು ಪರಿಣಾಮಕಾರಿ ಸಾಮಾಜಿಕ ಪರಿವರ್ತನೆ ಆಗುತ್ತಿತ್ತು. ಇದು ಬಿಷಪ್ಪರಿಗೂ ಪ್ರಭುಗಳಿಗೂ ಮನವರಿಕೆಯಾಗಿತ್ತೆಂದೂ ಊಹಿಸುವುದು ಸುಲಭ. ಈ ಐತಿಹಾಸಿಕ ಶಕ್ತಿಗಳನ್ನು ತಾವು ತಡೆಗಟ್ಟುವುದು ಅಸಾಧ್ಯವೆಂಬ ವಿಚಾರವನ್ನೂ ಅವರು ಅರಿತರು. ಕೆಲವರೇನೋ ಈ ಯತ್ನ ಮಾಡಿದರು. ಆದರೆ ಹಲವರು ಹೀಗೆ ಮಾಡಲಿಲ್ಲ. ಸುತ್ತಮುತ್ತ ಸಂಭವಿಸುತ್ತಿದ್ದ ಈ ಘಟನೆಗಳ ಮುನ್ಸೂಚನೆಯನ್ನು ಅರ್ಥ ಮಾಡಿಕೊಳ್ಳುವಷ್ಟು ಚತುರರಾಗಿದ್ದರು ಅವರು. ಇಂಥವರು ತಮಗೆ ವ್ಯತಿರಿಕ್ತವಾಗಿ ಏನೂ ಪರಿಣಮಿಸದಂತೆ ನಡೆದುಕೊಂಡರು. ಪರಿಸ್ಥಿತಿಗೆ ಹೊಂದಿಕೊಂಡರು. ಕೊನೆಯಲ್ಲಿ ಇವರಿಗೆ ಒಳ್ಳೆಯದೇ ಆಯಿತು. ಆದರೆ ಯಾವಾಗಲೂ ಇದು ಹೀಗೆಯೇ, ಶಾಂತವಾಗಿಯೇ, ಪರ್ಯವಸಾನವಾಗಲಿಲ್ಲ. "ಇದು ನಿನಗೆ ಇರಲಿ. ಇದನ್ನು ನನಗೆ ಕೊಡು"—ಎಂಬಷ್ಟು ಸುಲಲಿತವಾಗಿ ಇವೆಲ್ಲ ನಡೆಯಲಿಲ್ಲ. ಅಧಿಕಾರಸ್ಥರು, ಅನುಕೂಲಸ್ಥರು ತಮ್ಮ ಹಿತ ಉಳಿಸಿಕೊಳ್ಳಲು ಎಲ್ಲ ಉಪಾಯವನ್ನೂ ಅನುಸರಿಸಿಯಾರು—ಎಂಬುದು ಚರಿತ್ರೆಯ ಉದ್ದಕ್ಕೂ ನಿಜವಿರಬೇಕು. ತನ್ನ ಬಾಯಲ್ಲಿ ಕಚ್ಚಿ ಹಿಡಿದಿರುವ ಮೂಳೆಗಾಗಿ ನಾಯಿ ಕಾದಾಡುವುದು ಸಹಜ. ಅನೇಕ ಸಂದರ್ಭಗಳಲ್ಲಿ

---

[1] *Dortmunder Urkundenbuch*, Bd. I, pp. 33, 269-271, bearbeitet von karl Rübel. Dortmund, 1881.

ಊಳಿಗಮಾನ್ಯ ಯುಗದ ಪ್ರಭುಗಳೂ ಬಿಷಪ್ಪರೂ (ಮುಖ್ಯವಾಗಿ ಬಿಷಪ್ಪರು) ತಮ್ಮ ಮೂಳಿಗಳನ್ನು ಬಿಗಿಯಾಗಿ ಕಚ್ಚಿ ಹಿಡಿದಿದ್ದರು. ಪಟ್ಟಣಿಗರು ಬಲಪ್ರಯೋಗ ಮಾಡಿ ಕಿತ್ತು ಕೊಳ್ಳುವ ವರೆಗೂ ಅವರು ಅವನ್ನು ಬಿಡಲೊಪ್ಪಲಿಲ್ಲ. ಈ ಪುರಾತನ ಹಕ್ಕುಗಳಿಂದ ಲಾಭ ಬಂದೀತೆಂಬ ಕಾರಣದಿಂದಲೇ ಇವಕ್ಕೆ ಜೋತು ಬಿದ್ದಿರಲಿಲ್ಲ, ಹಲವರು. ಅಂದಿನ ಪರಿಸ್ಥಿತಿ ಯಲ್ಲಿ ಅವರು ಅನುಕೂಲವಾಗಿದ್ದರು. ಈ ಸ್ಥಿತಿ ಹೀಗೆಯೇ ಮುಂದುವರಿಯಬೇಕು, ಇಲ್ಲ ದಿದ್ದರೆ ಸರ್ವನಾಶ—ಸಮಾಜ ವ್ಯವಸ್ಥೆಯೇ ಛಿದ್ರವಾದೀತು—ಎಂದು ಇವರು ಪ್ರಾಮಾ ಣಿಕವಾಗಿ ನಂಬಿದ್ದರು. ಇದೂ ಕೂಡ ಚರಿತ್ರೆಗೇನು ಹೊಸದಲ್ಲ. ಆದರೆ ಪಟ್ಟಣಿಗರಿಗೆ ಈ ಧಾಟಿಯ ವಿಚಾರದಲ್ಲಿ ನಂಬಿಕೆಯಿರಲಿಲ್ಲ. ಆದ್ದರಿಂದ ಬಲಪ್ರಯೋಗದಿಂದಲೇ ಹಲವು ಪಟ್ಟಣಗಳು ಸ್ವಾತಂತ್ರ್ಯ ಗಳಿಸಬೇಕಾಯಿತು. ನ್ಯಾಯಮೂರ್ತಿ ಆಲಿವರ್ ವೆಂಡೆಲ್ ಹೋಮ್ಸರ ಮಾತು ಸತ್ಯ: "ಭಿನ್ನಾಭಿಪ್ರಾಯ ತುಂಬಾ ಹೆಚ್ಚಿದಾಗ ವಿಚಾರ ಮರೆಯಾಗು ತ್ತದೆ. ನಮ್ಮ ಪ್ರತಿವಾದಿ ತನ್ನ ಪಾಡಿಗೆ ತಾನು ಇರಲಿ—ಎಂಬ ಧಾರಾಳ ಬುದ್ಧಿ ಹೋಗು ತ್ತದೆ. ಅವನ ನಾಶಕ್ಕೇ ನಾವು ಯತ್ನಿಸುತ್ತೇವೆ," ಎಂದರು ಅವರು.

ವಾಸ್ತವವಾಗಿ ನೋಡಿದರೆ, ಸಂಘಟಿತ ವರ್ತಕ ಶ್ರೇಣಿಗಳ ನೇತೃತ್ವದಲ್ಲಿ ಹೋರಾಟ ನಡಸಿದ ಪಟ್ಟಣಿಗರು ಅಂಥ ಕ್ರಾಂತಿಕಾರಿಗಳೇನೂ ಅಲ್ಲ—ನಾವು ಈ ಪದವನ್ನು ಯಾವ ಅರ್ಥದಲ್ಲಿ ಬಳಸುತ್ತೇವೋ ಆ ಅರ್ಥದಲ್ಲಿ ಕ್ರಾಂತಿಕಾರಿಗಳಲ್ಲ. ಅವರು ತಮ್ಮ ಮೇಲಣ ಪ್ರಭುಗಳನ್ನು ಪದಚ್ಯುತಿಗೊಳಿಸುವ ಉದ್ದೇಶದಿಂದಲೇನೂ ಹೋರಾಟ ನಡಸುತ್ತಿರಲಿಲ್ಲ. ಆದರೆ ಸವೆದು ನಿರುಪಯುಕ್ತವಾಗಿದ್ದ ಊಳಿಗ ಮಾನ್ಯ ವ್ಯವಸ್ಥೆಯ ಕೆಲವು ಪದ್ಧತಿಗಳು ಸಡಿಲವಾಗಬೇಕೆಂದು ಮಾತ್ರ ಅವರು ಈ ಹೋರಾಟ ನಡಸುತ್ತಿದ್ದರು. ಬೆಳೆಯುತ್ತಿದ್ದ ವ್ಯಾಪಾರಕ್ಕೆ ಈ ಪದ್ಧತಿಗಳು ಅಡ್ಡಿಯಾಗಿದ್ದುವು. ಅಮೆರಿಕದ ಕ್ರಾಂತಿವಾದಿಗಳಂತೆ ಇವರು ಇರಲಿಲ್ಲ. "ಎಲ್ಲ ಜನರೂ ಜನ್ಮತಃ ಸ್ವತಂತ್ರರು, ಸಮಾನರು," ಎಂದು ಖಂಡಿತ ಇವರು ಬರೆಯುತ್ತಿರಲಿಲ್ಲ. "ವ್ಯಕ್ತಿ ಸ್ವಾತಂತ್ರ್ಯ ಸಹಜ ಸಿದ್ಧ ಹಕ್ಕು"—ಎಂದು ಇವರು ಎಂದೂ ಸಾಧಿಸಲಿಲ್ಲ. ಈ ಸ್ವಾತಂತ್ರ್ಯದಿಂದ ಇವರಿಗೆ ಕೆಲವು ಅನುಕೂಲಗಳು ಲಭಿಸುತ್ತಿದ್ದುವು. ಆದ್ದರಿಂದಲೇ ಇವರು ಇದನ್ನು ಅಪೇಕ್ಷಿಸಿದರು. ಈ ಮಾತು ಬಹು ಸತ್ಯ. ಉದಾಹರಣೆಗೆ ಈ ಘಟನೆಯನ್ನು ನೋಡಿ: "ಸೇಂಟ್ ವ್ಯಾಸ್ಟ್‌ನ ಸನ್ಯಾಸಿ ಮಠದ ಜೀತಗಾರರಿಗೆ ಪೇಟೆಯ ಸುಂಕದಿಂದ ವಿನಾಯಿತಿ ಇತ್ತು. ಈ ವಿನಾಯಿತಿ ಪಡೆಯಬೇಕೆಂಬ ಉದ್ದೇಶದಿಂದ, ಆರ್ರಾಸ್ ಎಂಬಲ್ಲಿಯ ವರ್ತಕರು ತಾವೂ ಈ ಸನ್ಯಾಸಿ ಮಠದ ಜೀತಗಾರರೆಂದು ಪರಿಗಣಿಸಲ್ಪಡಲು ಯತ್ನಿಸಿದರು."[1]

ತಮ್ಮ ಬೆಳವಣಿಗೆಗೆ ಯಾರೂ ಆತಂಕ ತಂದೊಡ್ಡಬಾರದೆಂದು ಪಟ್ಟಣಗಳು ಬಯಸಿ ದುವು. ಕೆಲವು ಶತಮಾನಗಳ ಅನಂತರ ಅವುಗಳ ಈ ಬಯಕೆ ಈಡೇರಿತು. ಇವಕ್ಕೆ ಲಭಿಸಿದ ಸ್ವಾತಂತ್ರ್ಯವಾದರೂ ಒಂದೇ ಸಮನಾಗಿರಲಿಲ್ಲ. ಪಟ್ಟಣದಿಂದ ಪಟ್ಟಣಕ್ಕೆ

---

[1] H. Pirenne, *Medieval Cities*, p. 177. Princeton University Press, 1925. have followed this book closely for much of the material on towns.

ವ್ಯತ್ಯಾಸವಿತ್ತು. ಆದ್ದರಿಂದ ಮೇನರಿನಂತೆ ಈ ಮಧ್ಯಯುಗದ ನಗರಗಳ ಹಕ್ಕು, ಸ್ವಾತಂತ್ರ್ಯ, ಸಂಘಟನೆ ಇವುಗಳ ಸಮಗ್ರ ಚಿತ್ರ ಕೊಡುವುದು ಕಷ್ಟ. ಇಟಲಿಯ ನಗರ ರಾಷ್ಟ್ರ ಹಾಗೂ ಫ್ಲಾಂಡರ್ಸ್‌ನಂಥ ಸಂಪೂರ್ಣ ಸ್ವತಂತ್ರ ನಗರಗಳೂ ಇದ್ದುವು. ಸ್ವತಂತ್ರ ಸಮುದಾಯಗಳೂ ಇದ್ದುವು; ಇವುಗಳ ಸ್ವಾತಂತ್ರ್ಯದಲ್ಲಿ ನಾನಾ ಪ್ರಭೇದ. ಊಳಿಗ ಮಾನ್ಯ ಪ್ರಭುಗಳಿಂದ ಕೆಲವು ಹಕ್ಕುಗಳನ್ನು ಮಾತ್ರ ದಕ್ಕಿಸಿಕೊಂಡಿದ್ದು, ಇನ್ನೂ ಕೆಲ ಮಟ್ಟಿಗೆ ಅವರ ಅಧೀನದಲ್ಲೇ ಉಳಿದುಕೊಂಡು ಬಂದಿದ್ದ ನಗರಗಳು ಕೆಲವು. ಆದರೆ ಈ ನಗರಗಳ ಹಕ್ಕುಗಳೇನೇ ಇರಲಿ, ಈ ಹಕ್ಕುಗಳನ್ನು ತಮಗೆ ದೊರಕಿಸಿಕೊಟ್ಟ ಸನ್ನದು ಗಳನ್ನು ಇಲ್ಲಿನ ಪೌರರು ಭದ್ರವಾಗಿ ತಮ್ಮ ವಶದಲ್ಲೇ ಇಟ್ಟುಕೊಂಡಿದ್ದರು—ಇದಕ್ಕಾಗಿ ಎಲ್ಲ ಎಚ್ಚರಿಕೆ ವಹಿಸಿದ್ದರು. ಪ್ರಭುಗಳಾಗಲಿ ಅವರ ಪ್ರತಿನಿಧಿಗಳಾಗಲಿ ಈ ಹಕ್ಕುಗಳ ವಿಚಾರ ಮರೆತಿದ್ದೇ ಆದರೆ ಉದ್ಭವಿಸಬಹುದಾಗಿದ್ದ ವ್ಯಾಜ್ಯ ನಿವಾರಣೆಗೆ ಇವು ಸಹಾಯಕ ವಾಗಿದ್ದುವು. ಪಾಂತ್ಯೂವಿನ ಶ್ರೀಮಂತ—ಕೌಂಟ್—ಅಬ್ಬೆವಿಲ್ಲೆ—ನಗರಕ್ಕೆ ೧೧೮೪ರಲ್ಲಿ ನೀಡಿದ ಸನ್ನದಿನ ಮೊದಲ ಕೆಲವು ವಾಕ್ಯಗಳನ್ನು ಇಲ್ಲಿ ಉದ್ಧರಿಸಿ ಕೊಟ್ಟಿದೆ. ಪಟ್ಟಣಿಗರು ತಮ್ಮ ಸನ್ನದಿಗೆ ಅಷ್ಟೊಂದು ಪ್ರಾಮುಖ್ಯ ನೀಡಿದ್ದುದೇಕೆ? ಬೀಗ ಹಾಕಿ ಅವನ್ನು ಭದ್ರ ಪಡಿಸುತ್ತಿದ್ದುದೇಕೆ? ಕೆಲವು ವೇಳೆ ತಮ್ಮ ನಗರಭವನ ಅಥವಾ ಚರ್ಚಿನ ಗೋಡೆಯ ಮೇಲೆ ಸುವರ್ಣಾಕ್ಷರದಲ್ಲಿ ಇವನ್ನು ಕೆತ್ತಿಸುತ್ತಿದ್ದುದೇಕೆ? ಇದಕ್ಕೆ ಕಾರಣವನ್ನು ಈ ಸನ್ನದಿನ ಮೊದಲನೆಯ ಸಾಲಿನಲ್ಲೇ ಈತ ಕೊಟ್ಟಿದ್ದಾನೆ: "ಲಿಖಿತವಾದದ್ದು ಮನುಷ್ಯನ ನೆನಪಿ ನಲ್ಲಿ ಹೆಚ್ಚು ಸುಲಭವಾಗಿ ಉಳಿಯಬಲ್ಲುದು. ಆದ್ದರಿಂದ ಪಾಂತ್ಯೂವಿನ ಕೌಂಟ್ ಜೀನ್ ಆದ ನಾನು ವರ್ತಮಾನ ಭವಿಷ್ಯ ಕಾಲಗಳ ಸಮಸ್ತರಿಗೂ ತಿಳಿಯಪಡಿಸುವುದೇನೆಂದರೆ— ನನ್ನ ತಾತನಾದ ಗಿಲ್ಲಾಮೆ ತಾಲ್ವಾಸನು ಅಬ್ಬೆವಿಲ್ಲೆಯ ಪಟ್ಟಣಿಗರಿಗೆ ಈ ಸಮುದಾಯವ ಆಡಳಿತ ಹೊಂದಿರುವ ಹಕ್ಕನ್ನು ಮಾರಿದ್ದಾನೆ. ಆದರೆ ಈ ಮಾರಾಟದ ಕರಾರಿನ ಅಧಿಕೃತ ಪ್ರತಿ ಈ ಪಟ್ಟಣಿಗರಲ್ಲಿ ಇಲ್ಲವಾಗಿದೆ. ಆದ್ದರಿಂದ ಈಗ ನಾನು ಅವರಿಗೆ ಈ ಹಕ್ಕು ನೀಡಿಕೆ ಹಾಗೂ ಶಾಶ್ವತಾನುಭವದ ಸನ್ನದು ನೀಡಿದ್ದೇನೆ...."[1]

ನೂರೆಂಬತ್ತು ವರ್ಷಗಳಾದ ಮೇಲೆ, ೧೩೭೦ರಲ್ಲಿ, ಅಬ್ಬೆವಿಲ್ಲೆಯ ಪೌರರಿಗೆ ಇನ್ನೊಬ್ಬ ಹೊಸ ಪ್ರಭು ಇದ್ದನೆಂದು ಕಾಣುತ್ತದೆ. ಅವನು ಬೇರೆ ಯಾರೂ ಅಲ್ಲ—ಫ್ರಾನ್ಸಿನ ದೊರೆಯೇ. ಈ ನಡುವಣ ಕಾಲದಲ್ಲಿ ನಗರದ ಸ್ವಾತಂತ್ರ್ಯ ಚಳವಳಿ ಬಹು ಚುರುಕಾ ಗಿಯೇ ನಡೆಯುತ್ತಿತ್ತೆಂದು ಕಾಣುತ್ತದೆ. ಏಕೆಂದರೆ ದೊರೆ ತನ್ನ ಅಧಿಕಾರಿಗಳಿಗೆ ನೀಡಿದ ಒಂದು ಆದೇಶದಲ್ಲಿ ಈ ಪಟ್ಟಣಿಗರಿಗೆ ಹಲವು ಪರಿಯ ವಾಗ್ದಾನ ನೀಡಿದ್ದಾನೆ: "ನಾವು ಇವರಿಗೆ ದಾನ ಮಾಡಿರುವ ಹಕ್ಕುಗಳಲ್ಲಿ ಮುಂದೆ ಸೂಚಿಸಿರುವ ಹಕ್ಕೂ ಒಂದು ಎಂಬು ದಾಗಿ ಕಾಣುತ್ತದೆ: ಯಾವ ಕಾರಣದಿಂದಲೇ ಆಗಲಿ, ಯಾವ ಸಂದರ್ಭದಲ್ಲಿಯೇ ಆಗಲಿ, ಅಬ್ಬೆವಿಲ್ಲೆಯ ಮೇಲೇ ಆಗಲಿ, ಇತರ ಯಾವ ನಗರದ ಮೇಲೇ ಆಗಲಿ, ಈ ನಗರಗಳಿಗೆ

---

[1] A Luchaire, *Les communes françaises a l'epoque des capetiens Directs*, p. 112, Hachette et Cie., Paris, 1890.

ಲಾಭದಾಯಕವಲ್ಲದ, ಹಾಗೂ ಅವರಾಗಿ ಇಚ್ಛೆ ಪಡದ ಯಾವ ದಂಡವನ್ನೂ ವಿಧಿಸುವುದಿಲ್ಲ, ಯಾವ ಹಕ್ಕನ್ನೂ ಚಲಾಯಿಸುವುದಿಲ್ಲ. ಇಂಥ ಯಾವ ಕ್ರಮ ಕೈಕೊಳ್ಳಲೂ ಯಾರಿಗೂ ಅವಕಾಶ ಕೊಡುವುದಿಲ್ಲ. ಆದ್ದರಿಂದ—ಈ ಅರ್ಜಿದಾರರು ನಮ್ಮಲ್ಲಿ ವ್ಯಕ್ತಪಡಿಸಿರುವ ಪ್ರೀತಿ ವಿಧೇಯತೆಗಳನ್ನೂ ಗಮನದಲ್ಲಿಟ್ಟುಕೊಂಡು—ನಿಮಗೆಲ್ಲ ನಾವು ಆಜ್ಞಾಪಿಸುವುದೇನೆಂದರೆ—ಈ ನಗರದ ಎಲ್ಲ ಪೌರರೂ ಎಲ್ಲ ವ್ಯಾಪಾರಿಗಳೂ ಈ ನಾಡಿನ ಮೇರೆಯೊಳಗಿರುವ ಎಲ್ಲ ನಗರಗಳಲ್ಲೂ ಗ್ರಾಮ ಪ್ರದೇಶದಲ್ಲೂ ವ್ಯಾಪಾರ ಮಾಡಲು, ಉಪ್ಪೇ ಮುಂತಾದ ಎಲ್ಲ ಸರಕುಗಳನ್ನೂ ಕೊಳ್ಳಲು, ಮಾರಲು, ಸಾಗಿಸಲು, ಅವಕಾಶ ಕೊಡತಕ್ಕದ್ದು. ನಮಗಾಗಲಿ, ನಮ್ಮ ಜನಕ್ಕಾಗಲಿ, ನಮ್ಮ ಅಧಿಕಾರಿಗಳಿಗಾಗಲಿ, ಉಪ್ಪಿನ ತೆರಿಗೆ, ಸುಂಕ, ಸುಲಿಗೆ, ದಂಡ, ಕಾಣಿಕೆ ಇತ್ಯಾದಿ ಯಾವ ಶುಲ್ಕವನ್ನೂ ತೆರಬೇಕಾದ್ದಿಲ್ಲ...."[1]

ಫ್ರಾನ್ಸಿನ ದೊರೆ ಮೇಲೆ ಹೇಳಿದ ಆಜ್ಞೆಯಲ್ಲಿ ನೀಡಿದ ತೆರಿಗೆ ವಿನಾಯಿತಿಗಾಗಿಯೇ ಅಲ್ಲ—ಇಂಥ ಹಲವಾರು ಅನುಕೂಲಗಳಿಗಾಗಿ ವರ್ತಕರು ಹೋರಾಟ ನಡಸಿದರು. ನಗರ ಸ್ವಾತಂತ್ರ್ಯ ಚಳವಳಿಯಲ್ಲಿ ವರ್ತಕರದೇ ಮುಂದಾಳುತನ. ನಗರಗಳಲ್ಲಿ ಇವರು ಅತ್ಯಂತ ಬಲಿಷ್ಠರು. ಇವರು ತಮ್ಮ ವೃತ್ತಿಸಂಘಗಳಿಗೆ, ಶ್ರೇಣಿಗಳಿಗೆ, ಎಲ್ಲ ರೀತಿಯ ರಿಯಾಯಿತಿಗಳನ್ನೂ ಗಳಿಸಿಕೊಂಡರು. ವರ್ತಕ ಮಂಡಲಿಗಳು ಸಾಮಾನ್ಯವಾಗಿ ನಗರದ ಒಟ್ಟು ವ್ಯಾಪಾರದ ಏಕಸ್ವಾಮ್ಯ ಪಡೆದಿದ್ದುವು. ಈ ಮಂಡಲಿಗಳ ಸದಸ್ಯರಾಗದಿದ್ದವರಿಗೆ ವ್ಯಾಪಾರದಲ್ಲಿ ಅದೃಷ್ಟ ಖುಲಾಯಿಸುತ್ತಲೇ ಇರಲಿಲ್ಲ. ೧೨೮೦ರಲ್ಲಿ ನಡೆದ ಒಂದು ಸಂಗತಿ ಗಮನಾರ್ಹ. ನ್ಯೂಕ್ಯಾಸಲ್ ನಗರದ ರಿಚರ್ಡ್ ಎಂಬ ಒಬ್ಬ, ದೊರೆಯಲ್ಲಿಗೆ ದೂರು ಹೊತ್ತ. ಹಲವು ವರ್ತಕರು ಸೇರಿ ತನ್ನ ಹತ್ತು ಕುರಿಯ ಉಣ್ಣೆ ವಶಪಡಿಸಿಕೊಂಡರೆಂದು ಅವನ ದೂರು. ಅದನ್ನು ಮತ್ತೆ ತನಗೆ ಕೊಡಿಸಿಕೊಡಬೇಕೆಂದು ಆತ ಕೇಳಿಕೊಂಡ. ರಿಚರ್ಡನ ಉಣ್ಣೆಯನ್ನು ಅವರು ಕಿತ್ತುಕೊಂಡುದೇಕೆಂದು ದೊರೆ ಆ ವರ್ತಕರನ್ನು ಕರೆಸಿ ಕೇಳಿದ. ಮೂರನೆಯ ಹೆನ್ರಿ ದೊರೆ ತಮಗೆ ನೀಡಿರುವ ಅಧಿಕಾರಕ್ಕೆ ಅನುಗುಣವಾಗಿ ತಾವು ನಡೆದಿರುವುದಾಗಿ ಪ್ರತಿವಾದಿಗಳು ಹೇಳಿದರು. ಈ ನಗರದ ವರ್ತಕರು ಮಂಡಲಿ ರಚಿಸಿಕೊಳ್ಳಬಹುದೆಂದೂ, ಈ ಮಂಡಲಿಗೆ ಸಂಬಂಧಿಸಿದಂತೆ ಎಲ್ಲ ಬಗೆಯ ಹಕ್ಕೂ ಸ್ವಾತಂತ್ರ್ಯವೂ ಸುಂಕ ವಿನಾಯಿತಿಯೂ ತಮಗೆ ಲಭ್ಯವಾಗಿದೆಯೆಂದೂ ಇವರು ಹೇಳಿದರು. ಈ ಮಂಡಲಿಗೆ ಸಂಬಂಧಿಸಿದಂತೆ ತಮಗೆ ದತ್ತವಾದ ಹಕ್ಕುಗಳು ಯಾವುವೆಂಬ ಪ್ರಶ್ನೆಗೆ ಅವರು ಕೊಟ್ಟ ಉತ್ತರ ನೋಡಿ, ಎಷ್ಟು ಸ್ವಾರಸ್ಯವಾಗಿದೆ: "ವರ್ತಕ ಮಂಡಲಿಯ ಸ್ವತಂತ್ರ ಪಂಕ್ತಿಗೆ ಸೇರದ ಯಾರೊಬ್ಬರೂ ನಗರದಲ್ಲಿ ಮಾರಾಟ ಮಾಡುವ ಉದ್ದೇಶದಿಂದ ಬಟ್ಟೆ ಕತ್ತರಿಸುವಂತಿಲ್ಲ, ಮಾಂಸ ಮೀನು ಕೊಯ್ಯುವಂತಿಲ್ಲ, ಚಕ್ಕಳ ಉಣ್ಣೆ ಕೊಳ್ಳುವಂತಿಲ್ಲ."[2] ಹೀಗೆಂದು ಅವರು ಹೇಳಿದರು. ರಿಚರ್ಡ್ ಈ ಮಂಡಲಿಯ ಸದಸ್ಯ

---

[1] A. Thierry, *op. cit.*, vol IV, pp. 170, 171.

[2] Charles Gross, *The Gild Merchant*, vol. I, pp. 39-40. 2 vols. Clarendon Press, Oxford, 1890.

ನಾಗಿರಲಿಲ್ಲವೆಂಬುದಾಗಿ ಹೇಳಬೇಕಾಗಿಯೇ ಇಲ್ಲ. ಉಣ್ಣೆಯ ವ್ಯಾಪಾರದ ಪೂರ್ಣ ಹಕ್ಕು ಇದ್ದುದು ಈ ಮಂಡಲಿಗೆ.

ಸೌದಾಂಪ್ಟನ್ ಎಂಬಲ್ಲಿ ವರ್ತಕ ಸಂಘದ ಸದಸ್ಯರಲ್ಲದವರೂ ಪದಾರ್ಥ ಕೊಳ್ಳಬಹುದಾಗಿತ್ತೆಂದು ಕಾಣುತ್ತದೆ. ಆದರೆ ವರ್ತಕ ಮಂಡಲಿಗೆ ಮೊದಲ ಹಕ್ಕು. "ನಗರಕ್ಕೆ ಬಂದ ಯಾವ ಪದಾರ್ಥವೇ ಆಗಲಿ, ವರ್ತಕ ಮಂಡಲಿಯ ವ್ಯಾಪಾರಿಗಳ ಪೈಕಿ ಯಾರಾದರೂ ಹಾಜರಿದ್ದರೆ ಸಾಕು. ಅವರು ಇದನ್ನು ವ್ಯಾಪಾರ ಮಾಡುವ, ಅಥವಾ ಕೊಳ್ಳುವ ಇಚ್ಛೆ ಹೊಂದಿದ್ದ ಪಕ್ಷದಲ್ಲಿ ಇತರರು ಯಾರೂ ಅದರ ವ್ಯಾಪಾರ ಮಾಡತಕ್ಕದ್ದಿಲ್ಲ. ಇಂಥವರು ಪೌರರೇ ಆಗಿರಬಹುದು, ಅಥವಾ ಆಗಂತುಕರೇ ಆಗಿರಬಹುದು. ಯಾರಾದರೂ ಹಾಗೆ ಮಾಡಿದ್ದೇ ಆದರೆ, ಅವರು ತಪ್ಪಿತಸ್ಥರೆಂದು ನಿರ್ಣಯವಾದರೆ, ಅವರು ಕೊಂಡ ಪದಾರ್ಥವನ್ನು ದೊರೆಯ ಹೆಸರಿನಲ್ಲಿ ಮುಟ್ಟುಗೋಲು ಹಾಕಿಕೊಳ್ಳತಕ್ಕದ್ದು."[1]

ಸ್ಥಳೀಯ ಸದಸ್ಯೇತರರು ತಮ್ಮ ವ್ಯಾಪಾರದಲ್ಲಿ ಕೈಹಾಕದಂತೆ ನೋಡಿಕೊಂಡದ್ದಷ್ಟೇ ಅಲ್ಲ. ತಮ್ಮ ಪ್ರಾಂತದ ವ್ಯಾಪಾರದಲ್ಲಿ ಹೊರಗಿನವರು ಪ್ರವೇಶಿಸದಂತೆ ತಡೆಯುವ ಯತ್ನದಲ್ಲೂ ಈ ಮಂಡಲಿಯ ಸದಸ್ಯರಿಗೆ ಯಶಸ್ಸು ದೊರಕಿತು. ಇಡೀ ಪೇಟೆಯ ವ್ಯಾಪಾರದ ಸಂಪೂರ್ಣ ಹತೋಟಿ ಹೊಂದುವುದು ಅವರ ಮುಖ್ಯ ಗುರಿ. ನಗರ ಪ್ರವೇಶ ಮಾಡುವ, ಅಲ್ಲಿಂದ ಹೋಗುವ ಎಲ್ಲ ವಸ್ತುವೂ ಅವರ ಮೂಲಕವೇ ಸಾಗಬೇಕು. ಹೊರಗಿನವರ ಸ್ಪರ್ಧೆ ಇಲ್ಲದಂತಾಗಬೇಕು. ಸರಕುಗಳ ಬೆಲೆ ನಿರ್ಧಾರದ ಅಧಿಕಾರವೂ ವರ್ತಕ ಮಂಡಲಿಯದು. ವಹಿವಾಟಿನ ಪ್ರತಿ ಘಟ್ಟದಲ್ಲೂ ಅವರದೇ ಪ್ರಧಾನ ಪಾತ್ರ. ಪೇಟೆಯ ಮೇಲೆ ಸಂಪೂರ್ಣ ನಿಯಂತ್ರಣ ಸಾಧ್ಯವಾಗುವ ಏಕಾಧಿಕಾರ ತಮ್ಮದಾಗಬೇಕೆಂದು ಅವರ ಉದ್ದೇಶ.

ಈ ಅಧಿಕಾರ ಚಲಾಯಿಸಲು, ನಾನಾ ನಗರಗಳ ವ್ಯಾಪಾರದ ಏಕಸ್ವಾಮ್ಯ ಪಡೆಯಲು, ಈ ವರ್ತಕ ಮಂಡಲಿಗಳು ಅಧಿಕಾರಿಗಳನ್ನು 'ಒಳಗೆ' ಹಾಕಿಕೊಳ್ಳಬೇಕಾಯಿತು. ಇವರು ಹಾಗೆಯೇ ಮಾಡಿಕೊಂಡರು. ವರ್ತಕರು ನಗರದ ಪ್ರಮುಖರಾಗಿದ್ದುದರಿಂದ, ನಗರಾಧಿಕಾರಿಗಳು ಯಾರಾಗಬೇಕೆಂಬ ವಿಚಾರದಲ್ಲಿ ಇವರ ಮಾತು ನಡೆಯುತ್ತಿತ್ತು. ಕೆಲವೆಡೆಗಳಲ್ಲಿ ಅಧಿಕಾರಿಗಳು ಇವರ ಪ್ರಭಾವಕ್ಕೆ ಒಳಗಾಗಿದ್ದರು. ಉಳಿದೆಡೆಗಳಲ್ಲಿ ವರ್ತಕರೇ ಅಧಿಕಾರಿಗಳಾದರು. ಕೆಲವು ಕಡೆಗಳಲ್ಲಂತೂ, ಮಂಡಲಿಯ ಸದಸ್ಯರೇ ನಗರಾಡಳಿತ ವಹಿಸಬಹುದೆಂದು ವಿಧಾಯಕವಾಗಿತ್ತು. ಇಂಥ ಸಂದರ್ಭಗಳು ವಿರಳ. ಆದರೆ ಹೇಗೂ ಇತ್ತೆಂಬುದಕ್ಕೆ ಪ್ರೆಸ್ಟನ್ ನಗರಸಭೆಯನ್ನು ಕುರಿತು ೧೩೨೮ರಲ್ಲಿ ರಚಿತವಾದ ನಿಬಂಧನೆಗಳೇ ಸಾಕ್ಷಿ: "ನ್ಯಾಯಾಲಯದ ದಾಖಲೆಯ ಪ್ರಕಾರ ವರ್ತಕ ಮಂಡಲಿಯ ಸದಸ್ಯರಲ್ಲದ ಪಟ್ಟಣಿಗರಾರೂ ನಗರಾಧ್ಯಕ್ಷತೆಯೇ ಮುಂತಾದ ಅಧಿಕಾರ ವಹಿಸಕೂಡದು. ಮುಂಚಿನಿಂದಲೂ ವರ್ತಕ ಮಂಡಲಿಯ ಸದಸ್ಯರ ಪಟ್ಟಿಯಲ್ಲಿ ಹೆಸರಿರತಕ್ಕವರು ಮಾತ್ರ ಇದಕ್ಕೆ ಅರ್ಹರು.

---

[1] *Ibid.*, vol. I, p. 48.

ಮಂಡಲಿಯಲ್ಲಿರುವವರಿಗೆ ಮಾತ್ರ ದೊರೆಯಿಂದ ಈ ಸ್ವಾತಂತ್ರ್ಯ ದೊರೆತಿದೆ, ಇತರರಿಗೆ ಇಲ್ಲ."[1]

ಏಕ ಸ್ವಾಮ್ಯಾಧಿಕಾರಾಕಾಂಕ್ಷೆ ಹೊಂದಿದ್ದುವು ಈ ಮಂಡಲಿಗಳು. ತಮ್ಮ ಅಧಿಕಾರ ಕಾಯ್ದುಕೊಳ್ಳಲು ಸದಾ ಎಚ್ಚರಿಕೆ ವಹಿಸಿದ್ದುವು ಇವು. ತಮ್ಮ ಸದಸ್ಯರು ದಾರಿ ತಪ್ಪದಂತೆ ಇವು ಜಾಗ್ರತವಾಗಿದ್ದುವು. ಇದಕ್ಕಾಗಿ ಬಹು ಕಟ್ಟುನಿಟ್ಟಾದ ನಿಬಂಧನೆಗಳಿದ್ದುವು. ಇವನ್ನು ಪ್ರತಿಯೊಬ್ಬ ಸದಸ್ಯನೂ ಪಾಲಿಸಬೇಕಾಗಿತ್ತು. ಮಂಡಲಿಯ ಸದಸ್ಯರಿಗೆ ಹಲವು ಅನುಕೂಲಗಳೇನೋ ಇದ್ದವು. ಆದರೆ ಮಂಡಲಿಯ ನಿಯಮಗಳನ್ನು ಎಚ್ಚರಿಕೆಯಿಂದ ಪಾಲಿಸಿದಾಗ ಮಾತ್ರ ಸದಸ್ಯತ್ವ ಉಳಿಸಿಕೊಳ್ಳುವುದು ಸಾಧ್ಯ. ಒಂದೇ, ಎರಡೇ, ಈ ನಿಬಂಧನೆ? ಹಲವಾರು, ಕಟ್ಟುಗ್ರ. ಇವುಗಳನ್ನು ಮುರಿದವರಿಗೆ ಮಂಡಲಿಯಿಂದ ಉಚ್ಚಾಟನೆ, ಇಲ್ಲವೇ ಬೇರೆ ಬಗೆಯ ದಂಡನೆ. ಈ ದಂಡನೆಯ ವಿಧಾನ ನೋಡಿ, ಎಷ್ಟು ಸ್ವಾರಸ್ಯವಾಗಿದೆ! ಮುನ್ನೂರು ವರ್ಷಗಳಿಗೂ ಹಿಂದೆ ಚೆಸ್ಟರಿನ ವರ್ತಕಮಂಡಲಿ ಇದನ್ನು ಅನುಸರಿಸುತ್ತಿತ್ತು. ಟಿ ಆಲ್ಡರ್ಸ್ಲೇ ಎಂಬುವನು ಅಂಗಡಿ ಮುಚ್ಚಬೇಕೆಂದು ಗಿಲ್ಡಿನವರು ಅಜ್ಞಾಪಿಸಿದ್ದರು. ಜವಳಿ ಕಬ್ಬಿಣ ವ್ಯಾಪಾರಿಗಳ ಸಂಘ ಆಜ್ಞೆ ಮಾಡಿತು. ಅವನು ಈ ಆಜ್ಞೆಯನ್ನು ತಳ್ಳಿಹಾಕಿದ. "ಈ ಸಂಘದ ಇನ್ನಿಬ್ಬರು ಅವನ ಅಂಗಡಿಯ ಮುಂದೆ ಹಗಲೆಲ್ಲಾ ಠಳಾಯಿಸಿದರು. ಪದಾರ್ಥ ಕೊಳ್ಳಲು ಯಾರೂ ಇಲ್ಲಿಗೆ ಬರದಂತೆ ತಡೆದರು, ಬಹಿಷ್ಕರಿಸಿದರು."[2]

ಈ ಕ್ರಮದ ಮುಂದೆ ಆಲ್ಡರ್ಸ್ಲೇ ಏನು ಮಾಡಬಲ್ಲ? ಇಪ್ಪತ್ತನೆಯ ಶತಮಾನದಲ್ಲಿ ಮಾಡುವಂತೆ ಅವನು ಇದರ ವಿರುದ್ಧವಾಗಿ ನ್ಯಾಯಾಲಯದಿಂದ ತಡೆ ಆಜ್ಞೆ ತರಲಾರನಾಗಿದ್ದ. ಯಾವ ಪರಿಯಿಂದಲೂ ಇದನ್ನು ತಪ್ಪಿಸಲಾರನಾಗಿದ್ದ. ಏಕೆಂದರೆ ವರ್ತಕ ಮಂಡಲಿ ಬಹು ಬಲಿಷ್ಠವಾಗಿತ್ತು. ವಾಸ್ತವವಾಗಿ ಈ ಮಂಡಲಿಗಳು ತಮ್ಮ ಪ್ರದೇಶದಲ್ಲಿ ಮಾತ್ರವೇ ಅಲ್ಲದೆ ಹೊರಗೂ—ಬಹುದೂರ—ಪ್ರಭಾವ ಹೊಂದಿದ್ದುವು. ನಾನಾ ಪ್ರದೇಶಗಳ ಮಂಡಲಿಗಳೆಲ್ಲಾ ಸೇರಿ ಈ ಬಲ ಗಳಿಸಿದ್ದುವು. ವಿವಿಧ ಶ್ರೇಣಿಗಳು ಒಟ್ಟಾಗಿ ಬಲಿಷ್ಠವಾಗಿ ಸಂಘಟಿತವಾಗಿದ್ದ ಜರ್ಮನಿಯ ಪ್ರಸಿದ್ಧ ಶ್ರೈಣಿಕ ಸಂಘ—ಹ್ಯಾನ್ಸಿಯಾಟಿಕ್‌ಲೀಗ್—ಇದಕ್ಕೆ ಒಂದು ಮುಖ್ಯ ಉದಾಹರಣೆ. ಇದು ವ್ಯಾಪಾರದ ಠಾಣೆಗಳನ್ನು ಹೊಂದಿತ್ತು. ಈ ಠಾಣೆಗಳು ದುರ್ಗಗಳಾಗಿದ್ದುವು, ಅಲ್ಲದೆ ಕೋಠಿಗಳಾಗಿಯೂ ಇದ್ದುವು. ಹಾಲೆಂಡಿನಿಂದ ರಷ್ಯಾದ ವರೆಗೆ ಇವು ಹಬ್ಬಿದ್ದುವು. ಈ ಸಂಘ ಅತ್ಯಂತ ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ಸುಮಾರು ನೂರು ಪಟ್ಟಣಗಳಲ್ಲಿ ಇದು ವ್ಯಾಪಿಸಿತ್ತು. ಇದು ಎಷ್ಟೊಂದು ಬಲಿಷ್ಠವಾಗಿತ್ತೆಂದರೆ, ಉತ್ತರ ಯೂರೋಪಿಗೂ ಪ್ರಪಂಚದ ಇತರ ಭಾಗಗಳಿಗೂ ನಡುವಣ ವ್ಯಾಪಾರವೆಲ್ಲ ಹೆಚ್ಚು-ಕಡಮೆ ಇದರ ಅಧೀನದಲ್ಲಿತ್ತು. ಇದೇ ಒಂದು ಬಗೆಯ ರಾಷ್ಟ್ರ. ಇದು ವಾಣಿಜ್ಯ ಕೌಲು ಮಾಡಿಕೊಳ್ಳುತ್ತಿತ್ತು. ಸ್ವಂತ ಯುದ್ಧ ನೌಕೆಗಳ ನೆರವಿನಿಂದ ತನ್ನ ವರ್ತಕರ ವ್ಯಾಪಾರ ನೌಕೆಗಳಿಗೆ ರಕ್ಷಣೆ ನೀಡುವ ಹೊಣೆ ಹೊತ್ತಿತ್ತು. ಉತ್ತರ ಸಮುದ್ರದ

[1] *Ibid.*, vol. II, p. 195.
[2] *Ibid.*, vol. I, p. 36, footnote.

ಕಡಲ್ಗಳ್ಳರ ಹಾವಳಿಯನ್ನು ಇದು ನಿವಾರಿಸಿತು ; ತನ್ನ ಆಡಳಿತಕ್ಕೆ ಸಂಬಂಧಿಸಿದ ಶಾಸನಗಳ ರಚನೆಗೆ ತನ್ನವೇ ಆದ ಶಾಸನ ಸಭೆಗಳನ್ನೂ ಹೊಂದಿತ್ತು.

ಸಂಪತ್ತಿನ ಮೂಲವಾದ ವ್ಯಾಪಾರದ ಪ್ರಾಮುಖ್ಯ ಹೆಚ್ಚುತ್ತಿತ್ತೆಂಬುದಕ್ಕೆ ಈ ವರ್ತಕರೂ ನಗರಗಳೂ ಗಳಿಸಿದ ಹಕ್ಕುಗಳೇ ಸಾಕ್ಷಿ. ಭೂ ಸಂಪತ್ತಿಗಿಂತ ವಿತ್ತಸಂಪತ್ತಿನ ಹೆಚ್ಚುಗಾರಿಕೆಯ ಕುರುಹಾಗಿ ನಗರಗಳಲ್ಲಿನ ವರ್ತಕರ ಸ್ಥಾನಮಾನಗಳು ಹೆಚ್ಚಿದುವು.

ಹಿಂದಣ ಊಳಿಗ ಮಾನ್ಯ ವ್ಯವಸ್ಥೆಯಲ್ಲಿ ಮನುಷ್ಯನ ಸಂಪತ್ತಿನ ಅಳತೆಯೆಂದರೆ ನೆಲವೊಂದೇ. ವ್ಯಾಪಾರ ವರ್ಧಿಸಿದಾಗ ಹೊಸ ಬಗೆಯ ಸಂಪತ್ತು ಮೈವೆತ್ತಿತು—ಅದು ವಿತ್ತ ಸಂಪತ್ತು, ಹಣದ ಸಂಪತ್ತು. ಹಿಂದಣ ಊಳಿಗ ಮಾನ್ಯ ಯುಗದಲ್ಲಿ ಹಣ ಜಡವಾಗಿತ್ತು, ಸ್ಥಾಯಿಯಾಗಿತ್ತು, ನಿಶ್ಚಲವಾಗಿತ್ತು. ಈಗ ಅದು ಚೇತನವೂ ಜೀವಂತವೂ ಚಲವೂ ಆಯಿತು. ಹಿಂದಣ ಊಳಿಗ ಮಾನ್ಯ ಯುಗದಲ್ಲಿ ಸಮಾಜದ ತಕ್ಕಡಿಯ ಒಂದು ಬದಿಯಲ್ಲಿ ನೆಲದೊಡೆಯರಾದ ಪ್ರಾರ್ಥನಕಾರರೂ ಯೋಧರೂ ಇದ್ದರು. ತಕ್ಕಡಿಯ ಇನ್ನೊಂದು ಬದಿಯಲ್ಲಿದ್ದ ಜೀತಗಾರರ ದುಡಿಮೆಯ ಮೇಲೆ ಇವರು ಬದುಕಿದ್ದರು. ಈಗ ಇನ್ನೊಂದು ಹೊಸ ಗುಂಪು—ಮಧ್ಯಮ ವರ್ಗ—ಜನ್ಮ ತಾಳಿತು. ಕೊಳ್ಳುವ, ಮಾರುವ ಹೊಸ ಜೀವನ ವಿಧಾನ ಇವರದಾಯಿತು. ಊಳಿಗ ಮಾನ್ಯಯುಗದಲ್ಲಿ ನೆಲದ ಒಡೆತನವೊಂದೇ ಸಂಪತ್ತಿನ ಮೂಲ. ಈ ಸಂಪತ್ತಿನ ಬಲದಿಂದಲೇ ಪುರೋಹಿತರೂ ಶ್ರೀಮಂತರೂ ಅಧಿಕಾರ ಗಳಿಸಿಕೊಂಡಿದ್ದರು. ಈಗಲಾದರೋ, ಸಂಪತ್ತಿನ ಹೊಸ ಮೂಲವಾದ ಹಣದ ಒಡೆತನದೊಂದಿಗೆ, ವರ್ಧಿಷ್ಣು ಮಧ್ಯಮ ವರ್ಗಕ್ಕೆ ಸರಕಾರದ ಆಡಳಿತದ ಪಾಲುಗಾರಿಕೆಯೂ ಲಭಿಸಿತು.

## ೪. ಹಳೆಯ ಭಾವನೆಗಳ ಬದಲು ಹೊಸವು

ಇಂದಿನ ವ್ಯಾಪಾರದಲ್ಲಿ ಬಹು ಪಾಲು ನಡೆಯುತ್ತಿರುವುದು ಬಡ್ಡಿಯ ಮೇಲೆ ಕಡ ತಂದ ಹಣದಿಂದ. ಸಂಯುಕ್ತ ಸಂಸ್ಥಾನ ಉಕ್ಕಿನ ಕಂಪೆನಿ ತನ್ನೊಡನೆ ಸ್ಪರ್ಧೆ ನಡಸುತ್ತಿರುವ ಇನ್ನೊಂದು ಉಕ್ಕಿನ ಸಂಸ್ಥೆಯನ್ನು ಕೊಳ್ಳಬಯಸುವುದೆನ್ನಿ. ಇದಕ್ಕೆ ಬೇಕಾದ ಹಣವನ್ನು ಬಹುಶಃ ಅದು ಸಾಲ ಪಡೆಯುತ್ತದೆ. ಋಣಪತ್ರಗಳನ್ನು ನೀಡಿ ಅದು ಈ ಹಣ ಪಡೆಯಬಹುದು. ಇವನ್ನು ಕೊಂಡವರು ಪ್ರತಿಯಾಗಿ ನೀಡುವ ಸಾಲದ ಹಣವನ್ನು ಬಡ್ಡಿಯ ಸಮೇತ ಸಲ್ಲಿಸುವುದಾಗಿ ಮಾಡಿದ ವಾಗ್ದಾನಗಳೇ ಋಣಪತ್ರಗಳು. ನಿಮ್ಮ ಬೀದಿಯ ಕೊನೆಯ ಮಿಠಾಯಿ ವ್ಯಾಪಾರಿ ತನ್ನ ಅಂಗಡಿಗೆ ಹೆಚ್ಚಿನ ಬೆಲೆಯ ಹೊಸ ನೆಲೆಕಟ್ಟು (Fixtures)ಕೊಳ್ಳ ಬಯಸಿದಾಗ ಅವನು ಮಾಡುವುದಾದರೂ ಏನು? ಅವನು ಹಣ ಸಾಲ ಪಡೆಯಬಯಸಿ ಬ್ಯಾಂಕಿಗೆ ಹೋಗುವನು. ಬ್ಯಾಂಕು ಅವನಿಗೆ ಸಾಲ ಕೊಡುವುದು; ಅದಕ್ಕಾಗಿ ಬಡ್ಡಿ ವಿಧಿಸುವುದು. ತನ್ನ ಆಸ್ತಿಯ ಪಕ್ಕದ ನೆಲ ಕೊಳ್ಳಬಯಸುವ ರೈತ ತನ್ನ ನೆಲ ಆಧಾರ ಮಾಡಿ ಸಾಲ ಪಡೆಯಬಹುದು. ಈ ಆಧಾರ ಸಾಲದ ಮೊತ್ತದ ಮೇಲೆ ಅವನು ವಾರ್ಷಿಕ ಬಡ್ಡಿ ಕೊಡುವನು. ಸಾಲದ ಹಣಕ್ಕೆ ಬಡ್ಡಿ ಕೊಡುವ ಪದ್ಧತಿ ಸಹಜವಾಗಿ ಜಾರಿಯಲ್ಲಿರುವ ಆರ್ಷೇಯ ಪದ್ಧತಿಯೆಂದೇ ನಾವು ಭಾವಿಸುವಷ್ಟು ಇದು ನಮಗೆ ಒಗ್ಗಿ ಹೋಗಿದೆ.

ಆದರೆ ಎಂದೆಂದೂ ಹೀಗಿರಲಿಲ್ಲ. ಇನ್ನೊಬ್ಬರು ನಿಮ್ಮ ಹಣ ಬಳಸಿಕೊಳ್ಳಲು ಅನುಮತಿ ಕೊಟ್ಟದ್ದಕ್ಕೆ ಪ್ರತಿಯಾಗಿ ಬಡ್ಡಿ ವಿಧಿಸುವುದು ಮಹಾಪರಾಧವೆಂದು ಪರಿಗಣಿಸುತ್ತಿದ್ದ ಕಾಲವೊಂದಿತ್ತು. ಬಡ್ಡಿಯ ಮೇಲೆ ಸಾಲ ನೀಡುವುದನ್ನು ನಿಷೇಧಿಸುವ ಶಕ್ತಿಯೊಂದು ಮಧ್ಯಯುಗದ ಪೂರ್ವಕಾಲದಲ್ಲಿತ್ತು. ಕ್ರಿಸ್ತ ಸಾಮ್ರಾಜ್ಯದಲ್ಲೆಲ್ಲ ಈ ಶಕ್ತಿಯ ಮಾತಿಗೆ ಶಾಸನದ ಗೌರವವಿದ್ದ ಕಾಲವದು.

ಈ ಶಕ್ತಿಯೇ ಚರ್ಚು. ಬಡ್ಡಿಯ ಮೇಲೆ ಹಣದ ಸಾಲ ಕೊಡುವುದು ಯೂಸ್ಯುರಿ—ಕುಸೀದ ಪದ್ಧತಿ. ಈ ಪದ್ಧತಿ ಪಾಪಕರ—ಎನ್ನುತ್ತಿತ್ತು ಚರ್ಚು. ಚರ್ಚಿನ ಮಾತೇ ಶಾಸನ, ವೇದವಾಕ್ಯ. ಅದನ್ನು ಉಲ್ಲಂಘಿಸಿದರೆ ರೌರವ ನರಕ. ಇದು ಎಂಥವರ ಎದೆಯನ್ನೂ ನಡುಗಿಸುತ್ತಿತ್ತು. ಊಳಿಗಮಾನ್ಯ ಯುಗದಲ್ಲಿ ಚರ್ಚು ಜನರ ಮನಸ್ಸಿನ ಮೇಲೆ ಇಂದಿಗಿಂತ ಹೆಚ್ಚು ಒಡೆತನ ಸ್ಥಾಪಿಸಿತ್ತು. ಆದರೆ ಕುಸೀದ ಪದ್ಧತಿಯನ್ನು ಕಂಡು ಕ್ರುದ್ಧವಾಗುತ್ತಿದ್ದದ್ದು ಚರ್ಚೊಂದೇ ಅಲ್ಲ. ನಗರಾಡಳಿತಗಳೂ, ಅನಂತರ ರಾಷ್ಟ್ರ ಸರಕಾರಗಳೂ ಇದರ ವಿರುದ್ಧ ಶಾಸನ ರಚಿಸಿದುವು. ಇಂಗ್ಲೆಂಡಿನಲ್ಲಿ ಜಾರಿಗೆ ಬಂದ ಕುಸೀದ ವಿರುದ್ಧ ಶಾಸನವೊಂದರ ಒಕ್ಕಣೆ ಈ ರೀತಿ ಇದೆ: "ಕುಸೀದ ಪದ್ಧತಿ ಅಸಹ್ಯ, ದ್ವೇಷಾರ್ಹ; ಆದ್ದರಿಂದ ಇದು ನಿಷಿದ್ಧ. ಇದು ವೇದವಾಕ್ಯ. ಉಪದೇಶದ ಮೂಲಕವೇ ಕೃಪಣರನ್ನೂ ಅಧರ್ಮಿಗಳನ್ನೂ ಆಶೆಬಡಕರನ್ನೂ ಪರಿವರ್ತಿಸುವುದು ಸಾಧ್ಯವಿಲ್ಲ. ಯಾರೇ ಆಗಲಿ,

ಯಾವ ವಿಧವಾದ ಅನೀತಿಯ ಕೃತ್ರಿಮದ ಅಥವಾ ಮೋಸದ ವ್ಯವಹಾರದ ಮೂಲಕ, ಪ್ರತ್ಯಕ್ಷ ಪರೋಕ್ಷ ವಿಧಾನಗಳಿಂದ, ಸಾಲವಾಗಿಯೋ ಬೇರೆ ತೆರನಾಗಿಯೋ ಹಣ ಕೊಟ್ಟದ್ದೇ ಆದರೆ, ಈ ವ್ಯವಹಾರದ ಉದ್ದೇಶ ಯಾವುದೇ ರೀತಿಯ ಕುಸೀದ ಅಥವಾ ವಿತ್ತ ವೃದ್ಧಿ ಅಥವಾ ಬಡ್ಡಿಯಾಗಿದ್ದರೆ—ಕೊಟ್ಟ ಹಣಕ್ಕಿಂತ ಹೆಚ್ಚು ಪಡೆಯಬೇಕೆಂಬ ಉದ್ದೇಶ ವಿದ್ದರೆ—ಇಂಥ ವ್ಯವಹಾರ ಮಾಡಿದವರು ಕಾರಾಗೃಹ ಶಿಕ್ಷೆಯನ್ನನುಭವಿಸಬೇಕಾಗುವುದು. ಈ ಕೃತ್ಯ ಎಸಗಿದವರ ಅಧಿಕಾರ, ಅಂತಸ್ತು, ಗುಣ ಮುಂತಾದ ಯಾವ ಪರಿಸ್ಥಿತಿಯನ್ನೂ ಗಣನೆಗೆ ತಂದುಕೊಳ್ಳುವುದಿಲ್ಲ."[1] ಮಧ್ಯಯುಗದಲ್ಲಿ ಸಾಮಾನ್ಯವಾಗಿ ಪ್ರಚಲಿತವಿದ್ದ ಅಭಿಪ್ರಾಯದ ದ್ಯೋತಕವಾಗಿದೆ, ಈ ಶಾಸನ. ಇದು ಕೆಟ್ಟದ್ದೆಂದೇನೋ ಬಹುಜನ ಒಪ್ಪುತ್ತಿದ್ದರು. ಆದರೆ ಏಕೆ ಕೆಟ್ಟದ್ದು ? ಬಡ್ಡಿ ಪಡೆಯುವುದು ಕೆಟ್ಟದ್ದೆಂಬ ಈ ಧೋರಣೆ ಬೆಳೆದದ್ದಾದರೂ ಎಂತು ? ಇದಕ್ಕೆ ಉತ್ತರವಾಗಿ ಊಳಿಗಮಾನ್ಯ ವ್ಯವಸ್ಥೆಯಲ್ಲಿದ್ದ ಮಾನವ ಸಂಬಂಧಗಳನ್ನರಿಯಬೇಕು.

ಆ ವ್ಯವಸ್ಥೆಯ ಅಡಿಯಲ್ಲಿ ನಡೆಯುತ್ತಿದ್ದ ವ್ಯಾಪಾರ ಬಹು ಅಲ್ಪ. ಲಾಭ ಸಂಪಾದನೆ ಗಾಗಿ ಹಣ ಹೂಡುವ ಅವಕಾಶ ಆಗ ಪ್ರಾಯಿಕವಾಗಿ ಇರಲೇ ಇಲ್ಲ. ಆ ವ್ಯವಸ್ಥೆಯಲ್ಲಿ ಸಾಲ ಪಡೆಯುತ್ತಿದ್ದುದು ಜೀವನಕ್ಕಾಗಿಯೇ ವಿನಾ ಹಣ ಸಂಪಾದನೆಗಾಗಿ ಅಲ್ಲ. ದುರ ವಸ್ಥೆಗೆ ಈಡಾದಾಗ ಸಾಲ ಬೇಡುತ್ತಿದ್ದುದು ಸಾಮಾನ್ಯ. ರೈತನ ಹಸು ಸತ್ತಾಗ, ಕ್ಷಾಮ ದಿಂದ ಬೆಳೆ ನಾಶವಾದಾಗ, ಆತ ವಿಧಿಯಿಲ್ಲದೆ ಸಾಲದ ನೆರವು ಬೇಡುತ್ತಿದ್ದ. ಇಂಥ ಸಂದರ್ಭದಲ್ಲಿ ಅವನ ನೆರವಿಗೆ ಬಂದವನು ಅವನ ಹೀನಸ್ಥಿತಿಯ ದುರುಪಯೋಗ ಪಡೆಯು ವುದು, ಇದರಿಂದ ಲಾಭ ಪಡೆಯುವುದು, ಅನುಚಿತ—ಎಂಬುದು ಮಧ್ಯಯುಗದ ಭಾವನೆ. ಲಾಭದ ಆಸೆಯಿಲ್ಲದೆ ನೆರೆಯವನ ನೆರವಿಗೆ ಹೋಗುವುದು ಒಳ್ಳೆಯ ಕ್ರಿಸ್ತಾನನ ಧರ್ಮ. ಯಾರಿಗಾದರೂ ನೀವು ಒಂದು ಚೀಲ ಹಿಟ್ಟು ಕೊಟ್ಟರೆ, ಮರಳಿ ನೀವು ಪಡೆಯಬೇಕಾದ್ದು ಒಂದೇ ಚೀಲ ಹಿಟ್ಟು—ಹೆಚ್ಚಲ್ಲ. ನೀವು ಕೊಟ್ಟ ಒಂದು ಚೀಲಕ್ಕಿಂತ ಹೆಚ್ಚು ಪಡೆದರೆ, ಆಗ ನೀವು ಆ ಇನ್ನೊಬ್ಬನನ್ನು ಮೋಸಗೊಳಿಸಿದಂತೆ—ಇದು ಆಗಿನ ಭಾವನೆ. ಈ ಮೋಸ ದೋಷವೇ. ನಿಮಗೆ ಎಷ್ಟು ಸಲ್ಲಬೇಕೋ ಅಷ್ಟೇ ಪಡೆಯಬೇಕು ; ಹೆಚ್ಚೂ ಅಲ್ಲ, ಕಡಮೆಯೂ ಅಲ್ಲ.

ಮನುಷ್ಯನ ಪ್ರತಿಯೊಂದು ಕೃತಿಯಲ್ಲೂ ಒಳಿತು ಕೆಡಕುಗಳುಂಟು. ಇದು ಚರ್ಚಿನ ಉಪದೇಶ. ಮನುಷ್ಯನ ಧಾರ್ಮಿಕ ನಡವಳಿಕೆಯಲ್ಲಿ ಯಾವುದು ಸರಿಯೋ ಯಾವುದು ತಪ್ಪೋ, ಅವನ ಸಾಮಾಜಿಕ ಆರ್ಥಿಕ ನಡೆವಳಿಕೆಯಲ್ಲೂ ಅದೇ ಸರಿ ಅಥವಾ ತಪ್ಪು. ಇದು ಸರಿ, ಇದು ತಪ್ಪು—ಎಂದು ಚರ್ಚು ವಿಧಿಸುತ್ತಿದ್ದ ನಿಬಂಧನೆಗಳು ಈ ಎಲ್ಲ ವಿಚಾರ ಗಳಿಗೂ ಸಮಾನವಾಗಿ ಅನ್ವಯವಾಗುತ್ತಿದ್ದುವು.

ಒಬ್ಬ ತನ್ನ ಸ್ನೇಹಿತನಿಗೋ ನೆರೆಯವನಿಗೋ ಏನು ಮಾಡಬಾರದೋ, ಯಾವುದು

[1] *Tudor Economic Documents*, vol. II, p. 142. Edited by R. H. Tawney and E. Power. 3 vols. Longmans, Green and Company, London, 1924.

ಅನುಚಿತವೋ ಅದನ್ನು ವ್ಯಾಪಾರದಲ್ಲಿ ಮಾಡಬಹುದು. ಇದು ಇಂದಿನ ವಾಡಿಕೆ. ನಮ್ಮ ಇತರ ವ್ಯವಹಾರಗಳಿಗೆ ಅನ್ವಯವಾಗುವುದು ವ್ಯಾಪಾರಕ್ಕೆ ಅನ್ವಯಿಸುವುದಿಲ್ಲ. ಇದರ ತತ್ವಗಳೇ ಭಿನ್ನ. ಉದಾಹರಣೆಗೆ ಹೇಳುವುದಾದರೆ, ಒಬ್ಬ ಉತ್ಪಾದಕ ತನ್ನ ಸ್ಪರ್ಧಿಯನ್ನು ನಿರ್ನಾಮ ಮಾಡಲು ಏನು ಬೇಕಾದರೂ ಮಾಡಬಹುದು—ಸಾಧ್ಯವಾದದ್ದನ್ನೆಲ್ಲ ಎಸಗಬಹುದು. ಅವನು ಮಾರುವುದಕ್ಕಿಂತ ಕಡಮೆ ಬೆಲೆಗೆ ಮಾರಬಹುದು, ವ್ಯಾಪಾರ ಕದನವಲ್ಲಿ ತೊಡಗಬಹುದು, ತನ್ನ ಸಂಸ್ಥೆಗೆ ವಿಶಿಷ್ಟ ಸವಲತ್ತುಗಳನ್ನು ಪಡೆಯಬಹುದು, ತನ್ನ ಪ್ರತಿಸ್ಪರ್ಧಿಯನ್ನು ಇಕ್ಕಟ್ಟಿನಲ್ಲಿ ಸಿಕ್ಕಿಸಲು ಎಲ್ಲ ವಿಧಾನಗಳನ್ನೂ ಅನುಸರಿಸಬಹುದು. ಈ ಕಲಾಪಗಳಿಂದ ಆ ಇನ್ನೊಬ್ಬ ದುರ್ಗತಿಗೀಡಾಗುವನೆಂಬುದು ಇವನಿಗೆ ಗೊತ್ತಿಲ್ಲವೆ ? ಆದರೂ ಈತ ಈ ಹಾದಿಯನ್ನೇ ಅನುಸರಿಸುವನು. ಏಕೆಂದರೆ—"ವ್ಯಾಪಾರವೆಂದರೆ ವ್ಯಾಪಾರ." ಆದರೆ ಇದೇ ಮನುಷ್ಯ ತನ್ನ ನೆರೆಯವನೋ ಸ್ನೇಹಿತನೋ ಉಪವಾಸದಿಂದಿರಲು ಒಂದು ಕ್ಷಣವೂ ಅವಕಾಶ ಕೊಡುವುದಿಲ್ಲ. ಹೀಗೆ ಆರ್ಥಿಕ ವ್ಯವಹಾರಗಳಿಗೆ ಒಂದು ತತ್ವ, ಆರ್ಥಿಕಾತೀತ ವ್ಯವಹಾರಗಳಿಗೆ ಇನ್ನೊಂದು ತತ್ವ. ಆದರೆ ಇಂಥ ವೈಪರೀತ್ಯ, ಮಧ್ಯಯುಗದ ಚರ್ಚಿನ ಬೋಧನೆಗೆ ವ್ಯತಿರಿಕ್ತವಾಗಿತ್ತು. ಚರ್ಚು ಬೋಧಿಸುತ್ತಿದ್ದುದನ್ನೆ ಬಹು ಜನರು ದೃಢವಾಗಿ ನಂಬಿಯೂ ಇದ್ದರು, ಆಗ.

ಕೈಲೆಕ್ಕದ ಪುಸ್ತಕದ ದೃಷ್ಟಿಯಿಂದ ಯಾವುದು ಹಿತಕರವೋ ಅದು ಆತ್ಮದ ದೃಷ್ಟಿಯಿಂದ ಅಹಿತಕಾರಿಯಾದರೆ ಆಗ ಏನು ಮಾಡಬೇಕು ? ಆಗ ಆತನ ಆಧ್ಯಾತ್ಮಿಕ ಹಿತವೇ ಹೆಚ್ಚು ಮುಖ್ಯ. ಹೀಗೆಂದು ಚರ್ಚು ಬೋಧಿಸುತ್ತಿತ್ತು. "ಮನುಷ್ಯ ಆತ್ಮ ಕಳೆದುಕೊಂಡು ಇಡೀ ಜಗತ್ತನ್ನೇ ಪಡೆದರೂ ಅದರಿಂದೇನು ಲಾಭ ?"[1] ಯಾವ ವ್ಯವಹಾರದಲ್ಲೇ ಆಗಲಿ, ನಿಮಗೆ ನ್ಯಾಯವಾಗಿ ಸಲ್ಲಬೇಕಾದ್ದಕ್ಕಿಂತ ಹೆಚ್ಚು ಲಾಭ ಸಂದರೆ, ಆ ಇನ್ನೊಬ್ಬರ ನಷ್ಟದಿಂದಲೇ ನಿಮಗೆ ಲಾಭ ಬಂದಿರಬೇಕು. ಇದು ತಪ್ಪು, ಮಧ್ಯಯುಗದ ಅತ್ಯಂತ ಹಿರಿಯ ಜ್ಞಾನಿ ಸಂತ ಥಾಮಸ್ ಆಕ್ವಿನಾಸ್ ಎಂಬವನು "ಲಾಭ ಬಡಕತನ"ವನ್ನು ಖಂಡಿಸಿದ. ವ್ಯಾಪಾರದಿಂದ ಪ್ರಯೋಜನವೇನೋ ಉಂಟು. ಇದನ್ನು ಒಪ್ಪಬೇಕು—ವಿಧಿಯಿಲ್ಲ. ಆದರೆ ಈ ವ್ಯಾಪಾರದಲ್ಲಿ ತಮ್ಮ ಶ್ರಮಕ್ಕೆ ಸಲ್ಲಬೇಕಾದ್ದಕ್ಕಿಂತ ಹೆಚ್ಚು ಪಡೆಯಲು ವ್ಯಾಪಾರಿಗಳು ಯತ್ನಿಸುವುದು ಸರಿಯಲ್ಲ. ಅವರಿಗೆ ಆ ಹಕ್ಕಿಲ್ಲ. ಇದು ಆಗಿನ ಕಾಲದಲ್ಲಿ ಸ್ವಯಂಸಿದ್ಧ.

ಕೆಲವು ಶತಮಾನಗಳ ಅನಂತರ ಪ್ರಬಲರಾದ ಮಧ್ಯವರ್ತಿಗಳಿಗೂ ಇದೇ ಮಾತು ಅನ್ವಯಿಸುತ್ತಿತ್ತು. "ಒಂದು ಪಕ್ಷದ ಕಣ್ಣಿಗೆ ಮಣ್ಣೆರಚಿ ಇನ್ನೊಂದು ಪಕ್ಷವನ್ನು ಕೊಳ್ಳೆ ಹೊಡೆಯುವವರು ಇವರು," ಎಂದು ಡಿಸ್ರೇಲಿ ಎಂಬವನು ಇವರನ್ನು ಬಣ್ಣಿಸಿದ. ಇವರನ್ನೂ ಕೂಡ ಮಧ್ಯಯುಗದ ಚರ್ಚಿನ ಜನರು ತೀವ್ರವಾಗಿ ನಿರಾಕರಿಸುತ್ತಿದ್ದರು. ವ್ಯವಹಾರ ಯಾವುದೇ ಆಗಲಿ, ಅದನ್ನು ನೀವು ಜೀರ್ಣಿಸಿಕೊಳ್ಳುವುದಾದರೆ, ಊರ್ಜಿತಪಡಿಸಿಕೊಳ್ಳುವುದಾದರೆ ಸರಿ,—ಅದು ನ್ಯಾಯ ಬದ್ಧ. ಇದು ಆಧುನಿಕ ಭಾವನೆ. ಈ ಭಾವನೆ ಮಧ್ಯಯುಗದ ದೃಷ್ಟಿಕೋನಕ್ಕೆ ಅನುಗುಣವಾಗಿರಲಿಲ್ಲ. ಆದಷ್ಟು ಕಡಮೆ ಬೆಲೆಗೆ ಕೊಂಡು

[1] Matthew 16 : 26.

ಆದಷ್ಟು ಹೆಚ್ಚು ಬೆಲೆಗೆ ಮಾರುವ ಇಂದಿನ ಯಶಸ್ವೀ ವರ್ತಕ ಮಧ್ಯಯುಗದಲ್ಲೇನಾದರೂ ಇದ್ದಿದ್ದರೆ ಆತನೂ ಇಮ್ಮಡಿ ಖಂಡನೆಗೆ ಒಳಗಾಗುತ್ತಿದ್ದುದರಲ್ಲಿ ಸಂಶಯವಿಲ್ಲ. ಅವಶ್ಯವಾದ ಸಾರ್ವಜನಿಕ ಸೇವೆ ಸಲ್ಲಿಸಿದ್ದಕ್ಕಾಗಿ ವ್ಯಾಪಾರಿಗೆ ನ್ಯಾಯವಾದ ಸಂಭಾವನೆ ಸಲ್ಲಲಿ; ಆದರೆ ಅದಕ್ಕಿಂತ ಹೆಚ್ಚು ಪಡೆಯಲು ಅವನಿಗೆ ಅಧಿಕಾರವಿಲ್ಲ—ಎಂಬುದು ಅಂದಿನ ನೀತಿ.

ಉದರಂಭರಣೆಗೆ ಅಗತ್ಯವಾದ್ದಕ್ಕಿಂತ ಹೆಚ್ಚು ಹಣ ಸಂಗ್ರಹಿಸಿಡುವುದೂ ಪಾಪ—ಎಂದು ಅಂದು ಪರಿಗಣಿತವಾಗಿತ್ತು. ಈ ವಿಷಯದಲ್ಲಿ ಬೈಬಲ್ಲು ಸ್ಪಷ್ಟವಾಗಿ ನುಡಿದಿತ್ತು: "ಸೂಜಿಯ ಕಣ್ಣಲ್ಲಿ ಒಂಟೆಯಾದರೂ ನುಸಿದೀತು; ಆದರೆ ಧನವಂತ ಮಾತ್ರ ಸ್ವರ್ಗಕ್ಕೆ ಹೋಗಲಾರ."[1]

ಆ ಕಾಲದ ಲೇಖಕನೊಬ್ಬನ ಮಾತು ಓದಿ: "ತನ್ನ ಅಗತ್ಯಗಳ ಪೂರೈಕೆಗೆ ಎಷ್ಟು ಬೇಕೋ ಅಷ್ಟು ಸಂಪತ್ತು ಹೊಂದಿದ ಮೇಲೂ ಕೂಡ, ಸಮಾಜದಲ್ಲಿ ಮೇಲಣ ಅಂತಸ್ತಿಗೆ ಏರುವ ಉದ್ದೇಶದಿಂದಲೋ, ಮುಂದೆ ಸುಖಜೀವನ ಸಾಗಿಸಬೇಕೆಂಬ ಆಸೆಯಿಂದಲೋ, ಮಕ್ಕಳು ಧನಿಕರೂ ದೊಡ್ಡ ಮನುಷ್ಯರೂ ಆಗಬೇಕೆಂಬ ಬಯಕೆಯಿಂದಲೋ, ಯಾರು ಹೆಚ್ಚು ಸಂಪಾದನೆಗಾಗಿ ಎಡೆಬಿಡದೆ ದುಡಿಯುವರೋ ಅವರಿಗೆ ಲೋಭ ಕಾಮ ಅಹಂಕಾರಗಳ ದೆವ್ವವೇ ಬಡಿದಿರಬೇಕು."[2]

ಸಹಜ ಅರ್ಥವ್ಯವಸ್ಥೆಗೆ ಯಾವ ತತ್ವಗಳ ಅನ್ವಯವೋ ಅವೇ ತತ್ವಗಳು ಹಣದ ಅರ್ಥ ವ್ಯವಸ್ಥೆಗೂ ಅನ್ವಯವಾದುವು. ಹಳೆಯ ವ್ಯವಸ್ಥೆ ಹೋಗಿ ಹೊಸ ವ್ಯವಸ್ಥೆ ಬಂತು. ಇದನ್ನೂ ಅಂದಿನ ಜನ ಹಳೆಯ ರೀತಿಯಲ್ಲೇ ಸ್ವಾಗತಿಸಿದರು. ಉದಾಹರಣೆಗೆ, ನೀವು ಒಬ್ಬನಿಗೆ ನೂರು ಪೌಂಡು ಸಾಲ ನೀಡಿದಿರೆನ್ನಿ. ಆಗ ಮತ್ತೆ ನೀವು ನೂರು ಪೌಂಡು ಮಾತ್ರ ಪಡೆಯಲು ನಿಮಗೆ ನೈತಿಕಾಧಿಕಾರವುಂಟು. ನಿಮ್ಮ ಹಣವನ್ನು ಆತ ಉಪಯೋಗಿಸಿಕೊಂಡುದಕ್ಕಾಗಿ ನೀವು ಬಡ್ಡಿಯನ್ನೇನಾದರೂ ವಿಧಿಸಿದರೆ ಅದು ತಪ್ಪು. ಸ್ವಲ್ಪಕಾಲ ಈ ಹಣವನ್ನು ಆತ ಇಟ್ಟುಕೊಂಡಿದ್ದ ಕಾರಣದಿಂದಲೇ ನೀವು ಆತನಿಂದ ಬಡ್ಡಿ ಪಡೆದರೆ ಆಗ ಆ ಕಾಲಕ್ಕೆ ಹಣಪಡೆದಂತೆ—ಕಾಲವನ್ನೇ ಮಾರಿದಂತೆ. ಕಾಲ ನಿಮ್ಮದಲ್ಲ. ಅದು ದೇವರ ಸ್ವತ್ತು. ಅದನ್ನು ಮಾರಲು ನಿಮಗೆ ಹಕ್ಕಿಲ್ಲ.

ಮೇಲಾಗಿ, ಹಣ ಸಾಲ ನೀಡಿ, ಪ್ರತಿಯಾಗಿ ಅಸಲಿನ ಜತೆಗೆ ನಿಗದಿಯಾದ ಬಡ್ಡಿಯನ್ನೂ ಪಡೆದರೆ ನೀವು ದುಡಿಯದೆಯೇ ಬದುಕಲು ಯತ್ನಿಸಿದಂತೆ. ಇದು ತಪ್ಪು. (ಪ್ರಾರ್ಥನಕಾರರೂ ಯೋಧರೂ ಕೂಡ ತಮತಮಗೆ ಅನುಗುಣವಾದ ಕಾರ್ಯಗಳಲ್ಲಿ ತೊಡಗಿದ್ದರೆಂಬುದೇ ಮಧ್ಯಯುಗದ ಭಾವನೆ.) ನಮ್ಮ ಹಣ ನಮಗಾಗಿ ದುಡಿಯುತ್ತದೆ; ಇದರಲ್ಲೇನು ತಪ್ಪು ?—ಎನ್ನುವಿರಲ್ಲವೆ ? ಆಗೇನಾಗುವುದು ಬಲ್ಲಿರಾ ? ಚರ್ಚಿನ ಮಂದಿಯ ಕ್ರೋಧಕ್ಕೆ ನೀವು ತುತ್ತಾದಂತೆಯೇ ಸರಿ. ಹಣ ಬರಡು; ಅದು ಏನನ್ನೂ ಉತ್ಪಾದನೆ

[1] *Ibid.*, 19 : 24.

[2] Quoted in R. H. Tawney, *Religion and the Rise of Capitalism*, p. 36, Harcourt, Brace and Company, N.Y., 1926.

ಮಾಡದು—ಹೀಗೆಂದು ಅವರು ಪ್ರತಿಯಾಗಿ ಹೇಳುವರು. ಬಡ್ಡಿ ಪಡೆಯುವುದು ಖಂಡಿತ ತಪ್ಪು—ಎನ್ನುತ್ತಿತ್ತು ಚರ್ಚು.

ಹೌದು, ಅದು ಹಾಗೆ ಹೇಳುತ್ತಿತ್ತು, ಆದರೆ ಅದು ಹೇಳುತ್ತಿದ್ದುದೊಂದು ಮಾಡುತ್ತಿದ್ದುದು ಮತ್ತೊಂದು. ಬಿಷಪ್ಪರೂ ರಾಜರೂ ಎಗರಾಡಿ ಶಾಸನ ಮಾಡಿದ್ದೇನೋ ನಿಜ. ಆದರೆ ತಾವು ಮಾಡಿದ ಶಾಸನ ಮುರಿಯಲು ಅವರೇ ಮುಂದಾದರು. ಅವರೇ ಬಡ್ಡಿಯ ಮೇಲೆ ಸಾಲ ಪಡೆಯುತ್ತಿದ್ದರು, ಕೊಡುತ್ತಿದ್ದರು. ಅದೇ ಸಮಯಕ್ಕೆ ಇತರ ಕುಸೀದಕರನ್ನು (Usurers) ಹಿಡಿದು ಹಾಕುತ್ತಿದ್ದರು. ಯಹೂದಿಗಳು ಸಾಮಾನ್ಯವಾಗಿ ಸಣ್ಣಪುಟ್ಟ ಮೊಬಲಗು ಸಾಲ ಕೊಡುತ್ತಿದ್ದರು. ಹಣ ಕಳೆದುಕೊಳ್ಳುವ ಸಂಭವವೇ ಹೆಚ್ಚಾಗಿದ್ದುದರಿಂದ ಇವರು ದುಬಾರಿ ಬಡ್ಡಿ ವಿಧಿಸುತ್ತಿದ್ದರು. ಇವರು ಎಲ್ಲರ ದ್ವೇಷಕ್ಕೆ ತುತ್ತಾಗಿದ್ದರು. ಇತರರು ಇವರನ್ನು ಬೇಟೆಯಾಡುತ್ತಿದ್ದರು. ಎಲ್ಲರ ತಾತ್ಸಾರಕ್ಕೂ ಇವರು ಗುರಿಯಾಗಿದ್ದರು. ಇಟಲಿಯ ಬ್ಯಾಂಕರುಗಳು ದೊಡ್ಡ ವ್ಯಕ್ತಿಗಳಾಗಿದ್ದರು; ಅಧಿಕ ಮೊತ್ತದ ಸಾಲ ನೀಡುತ್ತಿದ್ದರು; ಇವರ ವ್ಯವಹಾರ ಅಗಾಧ. ಇವರು ನೀಡಿದ ಸಾಲದ ಮೇಲೆ ಬಡ್ಡಿಯೇನಾದರೂ ಬಾರದಿದ್ದರೆ, ಆಗ ಪೋಪನೇ ಸಾಲಗಾರರಿಗೆ ಧಾರ್ಮಿಕ ದಂಡನೆಯ ಬೆದರಿಕೆ ಹಾಕಿ ಬಡ್ಡಿ ವಸೂಲು ಮಾಡುತ್ತಿದ್ದ. ಚರ್ಚೇ ಅತ್ಯಂತ ಪಾಪ ಭೂಯಿಷ್ಠವಾಗಿತ್ತು. ಆದರೂ ಇದು ಕುಸೀದಕರ ವಿರುದ್ಧ ಸಂತತವಾಗಿ ಬೊಬ್ಬೆ ಹಾಕುತ್ತಿತ್ತು.

ಯೂರೋಪಿನಲ್ಲಿ ವಾಣಿಜ್ಯ ಬೆಳೆಯುತ್ತಿದ್ದ ಕಾಲದಲ್ಲಿ ವ್ಯಾಪಾರ ನಡಸಲು ಕಾತರರಾಗಿದ್ದ ವರ್ತಕರ ಸಮೂಹಕ್ಕೆ ಕುಸೀದ ಪದ್ಧತಿ ಪಾಪಕರವೆಂಬ ತತ್ವ ನಿರುತ್ಸಾಹದಾಯಕವಾಗಿತ್ತೆಂಬುದಂತೂ ಸ್ವತಃ ಸಿದ್ಧ. ಆರ್ಥಿಕ ಜೀವನದಲ್ಲಿ ಹಣದ ಪಾತ್ರ ಅಧಿಕಾಧಿಕವಾದಷ್ಟೂ ಈ ತತ್ವ ನಿಜವಾಗಿಯೂ ಒಂದು ಪ್ರತಿಬಂಧಕವಾಗಿಯೇ ಪರಿಣಮಿಸಿತು.

ವರ್ಧಿಷ್ಣು ಮಧ್ಯಮವರ್ಗದ ಜನ ತಮ್ಮ ಹಣವನ್ನು ಕಬ್ಬಿಣದ ಪೆಟ್ಟಿಗೆಗಳಲ್ಲಿ ಇಡುತ್ತಿರಲಿಲ್ಲ. (ಇದು ಊಳಿಗಮಾನ್ಯ ಯುಗದ ಪದ್ಧತಿ. ಆಗ ಹಣವನ್ನು ಲಾಭದಾಯಕವಾಗಿ ಹೂಡಲು ಅವಕಾಶಗಳಿರಲಿಲ್ಲ.) ಎಷ್ಟು ಹಣ ದೊರೆತರೂ ಅದನ್ನೆಲ್ಲ ಲಾಭದಾಯಕ ಕ್ಷೇತ್ರದಲ್ಲಿ ಹೂಡುವ ಶಕ್ತಿ ಪಡೆದಿತ್ತು ವರ್ತಕ ಸಮೂಹ, ಈಗ. ವ್ಯಾಪಾರಕ್ಕೆ ಆಲಂಬನವಾಗಬೇಕು; ವ್ಯವಹಾರ ವರ್ಧನ ಮಾಡಿಕೊಳ್ಳಬೇಕು; ಹೀಗೆ ಲಾಭ ಹೆಚ್ಚಿಸಿಕೊಳ್ಳಬೇಕು; ಇವಕ್ಕೆಲ್ಲ ಹಣ ಬೇಕು—ಎಂದು ಚಿಂತಿಸಿತು ವ್ಯಾಪಾರಿ ವರ್ಗ. ಆದರೆ ಈ ಹಣವನ್ನು ವರ್ತಕ ಪಡೆಯುವುದಾದರೂ ಎಲ್ಲಿ? ಷೇಕ್ಸ್‌ಪಿಯರ್ ಮಹಾಕವಿಯ ಆಂಟೋನಿಯೋವು ಷೈಲಾಕ್ ಎಂಬ ಯಹೂದಿಯ ಬಳಿಗೆ ಹೋದಂತೆ, ಹಣ ಸಾಲ ಕೊಡುವ ಯಹೂದಿಗಳ ಬಳಿಗೆ ಇವನು ಹೋಗಬಹುದಿತ್ತು; ಅಥವಾ ದೊಡ್ಡ ವ್ಯಾಪಾರಿಗಳ ಬಳಿಗೆ ಹೋಗಬಹುದಿತ್ತು. ಇಂಥ ದೊಡ್ಡ ವ್ಯಾಪಾರಿಗಳಲ್ಲಿ ಕೆಲವರು ಪದಾರ್ಥ ವ್ಯಾಪಾರ ಬಿಟ್ಟು ಹಣದ ವ್ಯಾಪಾರವನ್ನಾರಂಭಿಸಿದ್ದರು. ಇವರೇ ಆ ಕಾಲದ ಬ್ಯಾಂಕರುಗಳು—ಹಣ ಕಾರ್ಯ ನಿರತರು. ಆದರೆ ಈ ವ್ಯಾಪಾರ ಸುಲಭವಾಗಿರಲಿಲ್ಲ. ಸಾಹುಕಾರರೇ ಆಗಲಿ,

ಬ್ಯಾಂಕರುಗಳೇ ಆಗಲಿ, ಬಡ್ಡಿಯ ಮೇಲೆ ಹಣ ಕೊಡಬಾರದೆಂಬ ಚರ್ಚಿನ ನಿರ್ಬಂಧ ಇವರಿಗೆ ಅಡ್ಡ ಬಂದಿತ್ತು.

ಹಳೆಯ ಅರ್ಥವ್ಯವಸ್ಥೆಗೆ ಅಳವಡುವಂತೆ ನಿರ್ಮಿತವಾಗಿದ್ದ ಚರ್ಚಿನ ಈ ತತ್ವಕ್ಕೂ, ಉದಯೋನ್ಮುಖ ವರ್ತಕ ವರ್ಗದ ರೂಪದಲ್ಲಿ ವ್ಯೈವೆತ್ತಿದ್ದ ಐತಿಹಾಸಿಕ ಶಕ್ತಿಗೂ ಘರ್ಷಣೆ ಯಾದಾಗ ಏನಾಯಿತು ? ಹಳೆಯ ತತ್ವ ದಾರಿ ಬಿಟ್ಟಿತು. ಆದರೆ ಇದು ಒಮ್ಮೆಗೇ ಆಗ ಲಿಲ್ಲ, ನಿಜ. ನಿಧಾನವಾಗಿ, ಸ್ವಲ್ಪ ಸ್ವಲ್ಪವಾಗಿ, ಹೊಸ ಹೊಸ ನಿರ್ಣಯಗಳ ಮೂಲಕ, ಅನುಕೂಲ ಸಿಂಧುಗಳ ಮೂಲಕ ಇದು ಸಾಧಿಸಿತು. "ಕುಸೀದ ಪದ್ಧತಿಯೇನೋ ಪಾಪಕರ; ಆದರೆ ಈ ಸಂದರ್ಭದಲ್ಲಿ...." ಎಂದೋ, "ಕುಸೀದ ಪಡೆಯುವುದು ಕೆಟ್ಟದ್ದಾದರೂ, ವಿಶಿಷ್ಟ ಪರಿಸ್ಥಿತಿಗಳಲ್ಲಿ...." ಎಂದೋ ಪೀಠಿಕೆ ಹಾಕಿ ನಿರ್ಣಯ ಮಾಡಿದರೆ ತೀರಿತು ! ಇಂಥ ತೀರ್ಮಾನಗಳಿಂದ ಹಳೆಯ ತತ್ವದ ಭದ್ರಕೋಟೆ ಬಿರುಕುಬಿಟ್ಟಿತು.

ಕುಸೀದ ತತ್ವವನ್ನು ಕ್ಷೀಣಗೊಳಿಸಿದ ಸಂದರ್ಭಗಳು ಸ್ವಾರಸ್ಯವಾಗಿವೆ. 'ಬಿ' ಎಂಬ ಬ್ಯಾಕರು 'ಎಂ' ಎಂಬ ವರ್ತಕನಿಗೆ ಸಾಲ ಕೊಟ್ಟನೆಂದಿಟ್ಟುಕೊಳ್ಳಿ. ಈ ಸಾಲದ ಮೇಲೆ ಅವನು ಬಡ್ಡಿ ವಿಧಿಸುವುದು ತಪ್ಪೆಂಬುದು ಚರ್ಚಿನ ನಿಲುವು. ಆದರೆ ಈ 'ಎಂ' ಎಂಬ ವರ್ತಕ 'ಬಿ'ಯಿಂದ ಸಾಲವಾಗಿ ಪಡೆದ ಹಣವನ್ನು ವ್ಯಾಪಾರೋದ್ಯಮವೊಂದರಲ್ಲಿ ಹಾಕು ವನು. ಈ ಹಣ ಪೂರ್ತಿಯಾಗಿ ನಷ್ಟವಾಗುವ ಸಂಭವವೂ ಉಂಟು. 'ಬಿ'ಗೆ ಈ ಹಣ ಬಾರದೆ ಹೋಗಲೂ ಬಹುದು. ಆದ್ದರಿಂದ 'ಎಂ' ಎಂಬುವನು 'ಬಿ'ಯಿಂದ ಸಾಲ ಪಡೆದ ಹಣವನ್ನೇ ಅಲ್ಲದೆ, ಅವನು ಎದುರಿಸಿದ ನಷ್ಟ ಸಂಭವಕ್ಕಾಗಿ ಇನ್ನಷ್ಟು ಹಣವನ್ನೂ ಕೊಡತಕ್ಕದ್ದು ನ್ಯಾಯವಾಗಿಯೇ ಇದೆ—ಎಂದು ಚರ್ಚು ವಾದಿಸಿತು.

ಅಥವಾ ಹೀಗೂ ವಾದಿಸಬಹುದಿತ್ತು : 'ಬಿ'ಯು ಈ ಹಣವನ್ನು ಸಾಲವಾಗಿ ಕೊಡದೆ ತಾನೇ ಇಟ್ಟುಕೊಂಡಿದ್ದ ಪಕ್ಷದಲ್ಲಿ ಅವನು ಇದನ್ನು ಲಾಭದಾಯಕನಾಗಿ ಬಳಸಬಹುದಿತ್ತ ಲ್ಲವೆ ? ಈ ಹಣವನ್ನು ತಾನೇ ಬಳಸಿಕೊಳ್ಳದಿದ್ದುದಕ್ಕಾಗಿ ಅವನು 'ಎಂ' ಎಂಬವನು ಇನ್ನಷ್ಟು ಹಣ ಕೊಡಬೇಕೆಂದು ಕೇಳಿದರೆ ಇದರಲ್ಲಿ ತಪ್ಪೇನು ? ಇದು ನ್ಯಾಯವೇ ತಾನೆ ?

ಹೀಗೆ, ಇನ್ನೂ ನಾನಾ ರೀತಿಯಾಗಿ, ಈ ಕ್ಲೇಶಕರ ಕುಸೀದ ತತ್ವ ವ್ಯತ್ಯಸ್ತಗೊಂಡಿತು, ಬದಲಾಗುತ್ತಿದ್ದ ಪರಿಸ್ಥಿತಿಗೆ ತಕ್ಕಂತೆ ಹೊಂದಿಕೊಂಡಿತು. ಹದಿನಾರನೆಯ ಶತಮಾನ ದಲ್ಲಿದ್ದ ಚಾರ್ಲ್ಸ್ ಡ್ಯುಮೌಲಿನ್ ಎಂಬ ಫ್ರೆಂಚ್ ನ್ಯಾಯವಾದಿಯೊಬ್ಬ ನೀಡಿದ ವಾದ ಗಮನಾರ್ಹ : ದಿನಚರಿಯ ವಾಣಿಜ್ಯ ವ್ಯವಹಾರ ಸರಳವಾಗಲೋಸುಗ ಕುಸೀದ ಪದ್ಧತಿ ಯನ್ನು ಮಿತವಾದ ಸಮ್ಮತವಾದ ರೀತಿಯಲ್ಲಿ ಜಾರಿಗೆ ತರುವುದು ಅಗತ್ಯ. ಈ ಮಿತಿಯಲ್ಲಿ, ಸಮ್ಮತವೆನಿಸುವಂತೆ ಇದನ್ನು ಸ್ವೀಕರಿಸಬಹುದೆಂದು ಶಾಸನಮಾಡಬೇಕೆಂಬ ವಾದವನ್ನು ಮುಂದೊಡ್ಡಿದ್ದಾನೆ ಈತ. ಅವನ ಮಾತುಗಳನ್ನೇ ಓದಿ. "ದಿನದಿನದ ವಾಣಿಜ್ಯ ವ್ಯವ ಹಾರವನ್ನು ಗಮನಿಸಿದರೆ ಒಂದು ವಿಚಾರ ಗೋಚರವಾಗುತ್ತದೆ : ಇದಕ್ಕೆ ಹೆಚ್ಚು ಹಣ ಬಳಸಬೇಕು. ಬರಿಯ ಹಣದಿಂದ ಏನು ಫಲ ?—ಎಂಬ ವಾದ ನಿಷ್ಪ್ರಯೋಜಕ. ನೆಲವೂ ಕೂಡ ತನಗೆ ತಾನೇ ಫಲ ಕೊಡಲಾರದು. ಅದಕ್ಕೂ ಖರ್ಚು ಮಾಡಬೇಕು, ದುಡಿಯ

ಬೇಕು. ಹಾಗೆಯೇ ಹಣವೂ ಕೂಡ ಕಾಲೇಣ ಫಲ ಕೊಡಬೇಕಾದರೆ ಅದಕ್ಕಾಗಿ ಮನುಷ್ಯ ಶ್ರಮಪಡಬೇಕು....ಹಣ ಸಾಲ ಪಡೆದವನಿಗೆ ದೊರಕುವಷ್ಟು ಪ್ರತಿಫಲ ಸಾಲ ಕೊಟ್ಟವನಿಗೇ ಹಲವು ಸಾರಿ ದೊರಕಲಾರದು. ಆದ್ದರಿಂದ ಮಿತವಾದ, ಜನಸಮ್ಮತವಾದ ಕುಸೀದ ಪದ್ಧತಿಯನ್ನು ತೆಗಳಿ ಫಲವಿಲ್ಲ. ಈ ಖಂಡನೆ ದಂಡನೆಯೆಲ್ಲ ಅತಿಯಾದ, ಅನ್ಯಾಯವಾದ ಕುಸೀದ ಪದ್ಧತಿಗೆ ಅನ್ವಯವಾಗತಕ್ಕದ್ದು. ಈ ಮಾತು ತಿಳಿಯಬೇಕು."[1]

ಹೀಗೆ, ಕ್ರಮೇಣ, ಚರ್ಚಿನ ಕುಸೀದ ತತ್ವ ನಿರ್ಗಮಿಸಿತು. "ದಿನದಿನದ ವಾಣಿಜ್ಯ ವ್ಯವಹಾರ" ಬಂತು. ನಂಬಿಕೆಗಳು, ಶಾಸನಗಳು, ಸಮಷ್ಟಿ ಜೀವನ ವಿಧಾನಗಳು, ವೈಯಕ್ತಿಕ ಸಂಬಂಧಗಳು—ಇವೆಲ್ಲ ಬದಲಾವಣೆಗೊಂಡುವು. ಸಮಾಜದ ಬೆಳವಣಿಗೆಯ ಈ ಹೊಸ ಘಟ್ಟ ಆರಂಭವಾದಾಗ ಈ ಎಲ್ಲ ಪರಿವರ್ತನೆಗಳೂ ಆದುವು.

---

[1] *Early Economic Thought*, pp. 113, 114. Edited by A. E. Monroe. Harvard University Press, 1924.

## ೫. ರೈತ ಸಂಕೋಲೆ ಕಡಿದ

ರೈತನ ಸ್ಥಿತಿಯಲ್ಲಾದದ್ದು ಬಹು ಮುಖ್ಯ ಬದಲಾವಣೆಗಳಲ್ಲೊಂದು. ಊಳಿಗಮಾನ್ಯ ಸಮಾಜದಲ್ಲಿ ಒಡೆಯ-ಜೀತಗಾರರ ನಡುವಣ ಸಂಬಂಧಕ್ಕೆ ಸಂಪ್ರದಾಯವೇ ಆಧಾರ. ಈ ಸಮಾಜ ಬದಲಾವಣೆಯಾಗದೆ ಇದ್ದ ವರೆಗೂ ರೈತ ತನ್ನ ಸ್ಥಿತಿ ಉತ್ತಮಪಡಿಸಿಕೊಳ್ಳುವುದು ಅಸಾಧ್ಯವಾಗಿತ್ತು, ಅವನು ಆರ್ಥಿಕ ಇಕ್ಕಟ್ಟಿನಲ್ಲಿ ಸಿಲುಕಿದ್ದ. ಆದರೆ ವ್ಯಾಪಾರ ಬೆಳೆದಾಗ, ಹಣದ ಆರ್ಥಿಕ ವ್ಯವಸ್ಥೆ ಸ್ಥಾಪಿತವಾದಾಗ, ನಗರಗಳು ತಲೆಯೆತ್ತಿದಾಗ, ಇವುಗಳೊಡನೆ ರೈತನಿಗೂ ಅದೃಷ್ಟ ತಿರುಗಿತು. ಬಿಗಿದಿದ್ದ ಬಂಧನಗಳನ್ನು ಕತ್ತರಿಸುವ ಅವಕಾಶ ಅವನಿಗೆ ಲಭಿಸಿತು.

ನಗರ ಬೆಳೆದಾಗ, ಅಲ್ಲಿ ವಾಸಿಸುವವರು ತಮ್ಮ ಎಲ್ಲ ಕಾಲವನ್ನೂ—ಅಥವಾ ಬಹು ಕಾಲವನ್ನು—ವ್ಯಾಪಾರ ಕೈಗಾರಿಕೆಗಳಿಗಾಗಿಯೇ ವಿನಿಯೋಗಿಸಬೇಕಾಗಿ ಬಂದಾಗ, ಅವರು ತಮಗೆ ಅಗತ್ಯವಾದ ಆಹಾರ ಪದಾರ್ಥಗಳನ್ನು ಗ್ರಾಮದಿಂದಲೇ ಪಡೆಯಬೇಕಾಗುತ್ತದೆ. ಆಗ ನಗರಕ್ಕೂ ಗ್ರಾಮಕ್ಕೂ ನಡುವೆ ಶ್ರಮವಿಭಾಗವಾಗುತ್ತದೆ. ಕೈಗಾರಿಕೆಯ ವಸ್ತು ತಯಾರಿಕೆಗೂ ವ್ಯಾಪಾರಕ್ಕೂ ನಗರ ಗಮನ ಕೊಡುತ್ತದೆ. ಇಲ್ಲಿನ ಜನ ಆಹಾರ ವಸ್ತು ತಯಾರಿಕೆಯ ಯೋಜನೆ ಬಿಡಬೇಕಾಗುತ್ತದೆ. ಇದಕ್ಕೆ ಹಳ್ಳಿಗರನ್ನೇ ಅವಲಂಬಿಸಬೇಕಾಗುತ್ತದೆ. ಹಳ್ಳಿಗರಾದರೂ ಈ ಪಟ್ಟಣಿಗರ ಹೆಚ್ಚು ಹೆಚ್ಚಿನ ಅಗತ್ಯ ಪೂರೈಸಲು ಹೆಚ್ಚು ಹೆಚ್ಚು ವ್ಯವಸಾಯೋತ್ಪನ್ನ ಬೆಳೆಯಲು ಗಮನ ಕೊಡುತ್ತಾರೆ. ಇತಿಹಾಸದ ಹಾಳೆ ತಿರುವಿ ಹಾಕಿದಾಗ ನಮಗೆ ಒಂದು ವಿಚಾರ ವೇದ್ಯವಾಗುತ್ತದೆ: ಪೇಟೆಯ ವಿಸ್ತಾರವಾದಾಗಲೆಲ್ಲಾ ಅದರೊಡನೆಯೇ ಅಧಿಕೋತ್ಪಾದನೆಗೂ ಅಗಾಧ ಪ್ರೋತ್ಸಾಹ ದೊರೆತಿದೆ. ಆದರೆ ವ್ಯವಸಾಯೋತ್ಪನ್ನ ಅಧಿಕಗೊಳಿಸುವ ಬಗೆಯೆಂತು ? ಇದಕ್ಕೆ ಎರಡು ಮಾರ್ಗಗಳುಂಟು. ಇರುವ ನೆಲದಲ್ಲೇ ಅಧಿಕೋತ್ಪಾದನೆ ಮಾಡಲು ಯತ್ನಿಸುವುದು ಒಂದು ಮಾರ್ಗ: ಹೆಚ್ಚು ಗೊಬ್ಬರದ ಬಳಕೆ, ಸುಧಾರಿತ ಉಳುಮೆಯ ವಿಧಾನ—ಒಟ್ಟಿನಲ್ಲಿ ಕಡುತರವಾದ, ಹೆಚ್ಚು ವೈಜ್ಞಾನಿಕವಾದ ವ್ಯವಸಾಯ ಕಾರ್ಯ. ಇದು ಒಂದು ಮಾರ್ಗ. ಬೇಸಾಯದ ನೆಲದ ವಿಸ್ತರಣೆಯೇ ಇನ್ನೊಂದು ಮಾರ್ಗ. ಇದುವರೆಗೂ ಕೃಷಿಗೆ ಬಾರದಿದ್ದ ಹೊಸ ನೆಲವನ್ನು ಬೇಸಾಯಕ್ಕೆ ತರುವುದು ಈ ಇನ್ನೊಂದು ಮಾರ್ಗ. ಈ ಎರಡೂ ಮಾರ್ಗಗಳು ಈ ಕಾಲದಲ್ಲಿ ಜಾರಿಗೆ ಬಂದುವು.

ಯೂರೋಪಿನ ಜನ ಅಮೆರಿಕಕ್ಕೆ ವಲಸೆ ಹೋದಾಗ, ಈ ಮೂಲ ಪುರುಷರು ತಮ್ಮ ಪಶ್ಚಿಮಕ್ಕೆ ಹರಡಿದ್ದ ವಿಶಾಲವಾದ ಹೊಸ ನೆಲದತ್ತ ಕಣ್ಣು ಹೊರಳಿಸಿದರು. ಅಂತೆಯೇ, ಹನ್ನೆರಡನೆಯ ಶತಮಾನದಲ್ಲಿ ಯೂರೋಪಿನಲ್ಲಿದ್ದ ಈ ಮಹಾಕಾಂಕ್ಷೆಯ ರೈತರೂ ಕೂಡ ತಮ್ಮ ಸುತ್ತ ಇರಬಹುದಾದ ಸಾಗುವಳಿಯಾಗದ ನೆಲವನ್ನು ಹುಡುಕಿದರು. ದಬ್ಬಾಳಿಕೆಯಿಂದ ವಿಮೋಚನೆ ಹೊಂದಲು ಇದೊಂದು ಸಾಧನ. ಆ ಶತಮಾನದ ಕೊನೆಯಲ್ಲಿದ್ದ

ಒಬ್ಬ ಜರ್ಮನ್ ಲೇಖಕನ ಮಾತುಗಳಿವು: "ಬಲಿಷ್ಠರ ದುರಾಶೆ ಸುಲಿಗೆಗಳಿಂದ ಬಡಜನ, ರೈತಜನ, ಕಂಗೆಟ್ಟು ಹೋಗಿದ್ದಾರೆ; ಅನ್ಯಾಯದ ವಿಚಾರಣೆಗೆ ಗುರಿಯಾಗಿದ್ದಾರೆ. ಈ ಪಾಪದ ಪೀಡೆಯ ದೆಸೆಯಿಂದ ಹಲವರು ತಮ್ಮ ಪಿತ್ರಾರ್ಜಿತ ಆಸ್ತಿ ಮಾರಿ ದೂರದ ನಾಡುಗಳಿಗೆ ವಲಸೆ ಹೋಗಬೇಕಾಗಿ ಬಂದಿದೆ."[1]

ಆದರೆ ಅಮೆರಿಕದಲ್ಲಾದರೋ ಅಲ್ಲಿನ ಮೂಲಪುರುಷರ ಮುಂದೆ ಇಡೀ ಖಂಡ ಪ್ರದೇಶವೇ ತೆರೆದು ನಿಂತಿತ್ತು. ಯೂರೋಪಿನ ಹನ್ನೆರಡನೆಯ ಶತಮಾನದ ಈ ದಲಿತ ರೈತ ಜನಕ್ಕೆ ನೆಲ ಸಿಕ್ಕುವುದಾದರೂ ಎಲ್ಲಿ? ಈ ಕಾಲದಲ್ಲಿ ಫ್ರಾನ್ಸಿನ ನೆಲದಲ್ಲಿ ಅರ್ಧ ಮಾತ್ರ, ಜರ್ಮನಿಯ ನೆಲದ ಮೂರರಲ್ಲೊಂದು ಪಾಲು ಮಾತ್ರ, ಇಂಗ್ಲೆಂಡಿನ ನೆಲದ ಐದರಲ್ಲೊಂದು ಪಾಲು ಮಾತ್ರ ಸಾಗುವಳಿಗೆ ಬಂದಿತ್ತೆಂಬುದು ಸೋಜಿಗದ, ಆದರೂ ಸತ್ಯವಾದ, ಸಂಗತಿ. ಉಳಿದ ನೆಲವೆಲ್ಲ ಕಾಡು, ಹೂಳು, ಪಾಳು. ಸಾಗುವಳಿಯಲ್ಲಿದ್ದ ಕಿರಿದಾದ ಪ್ರದೇಶದ ಅಂಚಿನ ಉದ್ದಕ್ಕೂ ಸುತ್ತಲೂ ಈ ವಿಶಾಲವಾದ ಸಾಗುವಳಿಯಾಗದ ನೆಲ ಕೃಷಿಗೆ ಒದಗಿ ನಿಂತಿತ್ತು. ಹದಿನೇಳನೆಯ ಶತಮಾನದ ಅಮೆರಿಕದಂತೆ ಹನ್ನೆರಡನೆಯ ಶತಮಾನದ ಯೂರೋಪಿನಲ್ಲೂ ಈ ಹೊಸ ನೆಲ ಕೃಷಿಕರನ್ನು ಕರೆಯುತ್ತ ನಿಂತಿತ್ತು. ಪಾಳು ಹೂಳು ಕಾಡು ನೆಲದ ಈ ಸವಾಲನ್ನು ಶ್ರಮಜೀವಿಗಳಾದ ರೈತಜನ ಎದುರಿಸಿದರು. "ಸ್ವಾತಂತ್ರ್ಯದ, ಆಸ್ತಿಯ ಆಮಿಷ ಇವರನ್ನು ಆಕರ್ಷಿಸಿತು.... ಸಹಸ್ರಾರು ಮಂದಿ ಪ್ರಯೋಗಪ್ರಿಯರು....ನೇಗಿಲು ಗುದ್ದಲಿಯ ಕೆಲಸಕ್ಕೆ ಹಾದಿ ಮಾಡಿಕೊಡಲು ನುಗ್ಗಿದರು; ಪೊದೆ ಒಬ್ಬೆ ಪರೋಪಜೀವಿ ಸಸ್ಯಗಳನ್ನು ಸುಟ್ಟರು; ಕಾಡು ಕಡಿದರು; ಮರ ಬೇರು ಎಬ್ಬಿಸಿದರು."[2] ಹೀಗೆ ಯೂರೋಪಿನಲ್ಲೂ ಈ "ಪಶ್ಚಿಮಾಭಿಮುಖ ಯಾತ್ರೆ" ಸಾಗಿತು. ಯೂರೋಪಿನಲ್ಲಿ ಇದು ಸಂಭವಿಸಿದ್ದು ಅಮೆರಿಕದಲ್ಲಿ ಸಂಭವಿಸಿದ್ದಕ್ಕಿಂತ ಐದು ಶತಮಾನ ಮುಂಚೆ. ಅಮೆರಿಕದ ಆದ್ಯ ಪ್ರವರ್ತಕರು ಹದಿನೇಳರಿಂದ ಹತ್ತೊಂಬತ್ತನೆಯ ಶತಮಾನಗಳಲ್ಲಿ ಪಶ್ಚಿಮದ ಕಾಡುಗಳ ವೃಕ್ಷಗಳಿಗೆ ತಮ್ಮ ಕೊಡಲಿ ತಾಗಿಸಿದಾಗ ಅವರಿಗೆ ಕೇಳಿಸಿದ ಶಬ್ದ, ಈ ಪ್ರವರ್ತಕರ ಪೂರ್ವಿಕರು ಐದು ಶತಮಾನಗಳ ಹಿಂದೆ ಇಂಥದೇ ಸಂದರ್ಭದಲ್ಲಿ ಯೂರೋಪಿನಲ್ಲಿ ಕೇಳಿಸಿಕೊಂಡ ಶಬ್ದದ ಪ್ರತಿಧ್ವನಿಯಾಗಿತ್ತು. ಅಮೆರಿಕದ ಆದ್ಯಪ್ರವರ್ತಕರು ಗೊಂಡಾರಣ್ಯವನ್ನು ಹೊಲ ಮನೆಗಳ ಪ್ರದೇಶವಾಗಿ ಮಾರ್ಪಡಿಸಿದಂತೆ ಯೂರೋಪಿನ ಈ ಆದ್ಯಪ್ರವರ್ತಕರೂ ಜೌಗು ನೆಲವನ್ನು ಒಣಗಿಸಿದರು; ಸಮುದ್ರದ ಬಾಯಿ ನೆಲವನ್ನು ನುಂಗಿ ನೊಣೆಯದಂತೆ ಸಮುದ್ರಕ್ಕೇ ಅಡ್ಡಗಟ್ಟೆ ಹಾಕಿದರು; ಕಾಡು ಕಡಿದರು; ಹೀಗೆ ಒದಗಿ ಬಂದ ನೆಲವನ್ನು ಧಾನ್ಯ ಬೆಳೆಯುವ ಹೊಲವಾಗಿ ಮಾರ್ಪಡಿಸಿದರು. ಹದಿನೇಳನೆಯ ಶತಮಾನದ ಅಮೆರಿಕದ ಸಾಹಸಿಗಳಿಗೆ ಆದ ಅನುಭವವೇ ಹನ್ನೆರಡನೆಯ ಶತಮಾನದ ಈ ಜನಕ್ಕೂ

---

[1] E.O. Schulze, *Kolonisierung und Germanisierung der Gebiete Zwischen Saale und Elbe*, p. 125, Hirzel, Leipzig, 1896.

[2] P. Boissonnade, *op. cit.*, p. 229.

ಆಯಿತು. ಅವರ ಹೋರಾಟ ದೀರ್ಘ, ಶ್ರಮದಾಯಕ. ಆದರೆ ಈ ಹೋರಾಟ ದಲ್ಲಿ ಜಯವೇನಾದರೂ ಲಭಿಸಿತೋ—ಆಗ ಸ್ವಾತಂತ್ರ್ಯ, ಸಂಪೂರ್ಣವಾಗಿಯೋ ಭಾಗಶಃವೋ ತಮ್ಮದೇ ಆದ ನೆಲ ಹೊಂದುವ ಅವಕಾಶ, ತಮ್ಮ ಮೇಲೆ ಎಡೆಬಿಡದೆ ಹೇರಿಕೊಂಡಿದ್ದ ಕ್ಲೇಶಕರ ಶ್ರಮ ಸೇವೆಯ ಶುಲ್ಕದಿಂದ ಬಿಡುಗಡೆ. ಹಲವು ರೈತರು ಈ ಅವಕಾಶವನ್ನು ಸೆಳೆದು ಅಪ್ಪಿದ್ದರಲ್ಲಿ ಆಶ್ಚರ್ಯವಿಲ್ಲ; ಭೂಮಿ ಬೇಕೆಂದು "ದಮ್ಮಯ್ಯ ಗುಡ್ಡೆ" ಹಾಕಿದ್ದರಲ್ಲಿ ಆಶ್ಚರ್ಯವಿಲ್ಲ. ೧೧೦೬ ರಲ್ಲಿ ಹ್ಯಾಂಬರ್ಗಿನ ಬಿಷಪ್ ಒಬ್ಬ ನೀಡಿದ ಪ್ರಣಾಳಿಕೆಯಲ್ಲಿ ಹೀಗೆ ತಿಳಿಸುತ್ತಾನೆ—

"೧. ರ್‍ಹೈನ್ ನದಿಯ ಈ ಬದಿಯಲ್ಲಿ ವಾಸಿಸುತ್ತಿರುವ, ಹಾಲೆಂಡರುಗಳೆಂದು ಕರೆ ಯಲ್ಪಡುವ, ಕೆಲವು ಜನರು ನಮ್ಮೊಡನೆ ಮಾಡಿಕೊಂಡಿರುವ ಕರಾರನ್ನು ಈ ಮೂಲಕ ಸಮಸ್ತರಿಗೂ ತಿಳಿಯಪಡಿಸಲಿಚ್ಛಿಸುತ್ತೇವೆ.

"೨. ನಮ್ಮ ಸೀಮೆಯಲ್ಲಿ ಸಾಗುವಳಿಯಾಗದೆ ಬಿದ್ದಿರುವ ಜೌಗು ನೆಲವನ್ನು, ನಮ್ಮ ಜನಕ್ಕೆ ಉಪಯುಕ್ತವಲ್ಲದ ಕೆಲವು ಜಮೀನುಗಳನ್ನು ತಮಗೆ ದಯಪಾಲಿಸಬೇಕೆಂದು ಈ ಜನ ನಮ್ಮಲ್ಲಿಗೆ ಬಂದು ವಿನಮ್ರರಾಗಿ ಬೇಡಿಕೊಂಡರು. ನಾವು ಈ ಬಗ್ಗೆ ನಮ್ಮ ಪ್ರಜೆ ಗಳೊಡನೆ ಸಮಾಲೋಚನೆ ನಡಸಿದ್ದೇವೆ. ಇದು ನಮಗೂ ನಮ್ಮ ವಂಶೀಕರಿಗೂ ಲಾಭ ದಾಯಕವೆಂಬುದನ್ನರಿತು ಇವರ ಪ್ರಾರ್ಥನೆಯನ್ನು ಸಲ್ಲಿಸಿದ್ದೇವೆ.

"೩. ಇವರು ಪ್ರತಿವರ್ಷವೂ ಪ್ರತಿ ತಾಕು ನೆಲಕ್ಕೂ ಒಂದು ದೀನಾರ ನಾಣ್ಯ ಕೊಡ ಬೇಕೆಂಬುದಾಗಿ ಒಪ್ಪಂದವಾಗಿದೆ....ಈ ನೆಲದಲ್ಲಿ ಹರಿಯುವ ಹೊಳೆಗಳ ಮೇಲಣ ಸ್ವಾಮ್ಯವನ್ನೂ ಇವರಿಗೆ ಕೊಟ್ಟಿದ್ದೇವೆ.

"೪. ಉತ್ಪನ್ನದ ಒಂದು ಅಂಶವನ್ನು ನಮಗೆ ಕೊಡಬೇಕೆಂಬುದು ನಮ್ಮ ಆಜ್ಞೆ. ಎಂದರೆ ಧಾನ್ಯದ ಹನ್ನೊಂದರಲ್ಲೊಂದು ಭಾಗ, ಹತ್ತು ಕುರಿಮರಿಗೆ ಒಂದು ಮರಿ, ಹತ್ತು ಆಡಿಗೆ ಒಂದು ಆಡು, ಹತ್ತು ಬಾತಿಗೆ ಒಂದು ಬಾತು, ಜೇನಿನಲ್ಲೂ ಅಗಸೆಯಲ್ಲೂ ಹತ್ತರ ಲ್ಲೊಂದು ಪಾಲು—ಹೀಗೆ ಕೊಡಲು ಇವರು ಒಪ್ಪಿದ್ದಾರೆ.

"೫. ಎಲ್ಲ ಕ್ರೈಸ್ತ ಮಠೀಯ ವಿಚಾರಗಳಲ್ಲೂ ನಮಗೆ ವಿಧೇಯರಾಗಿರಲೂ ಇವರು ಒಪ್ಪಿದ್ದಾರೆ.

"೬. ಲೌಕಿಕ ವ್ಯವಹಾರಗಳಲ್ಲಿ ಉದಿಸಬಹುದಾದ ವ್ಯಾಜ್ಯಗಳ ಇತ್ಯರ್ಥಕ್ಕಾಗಿ ತಮ್ಮದೇ ಆದ ನ್ಯಾಯಾಲಯ ಹೊಂದಿರುವ ಹಕ್ಕಿಗಾಗಿ ಇವರು ಪ್ರತಿ ವರ್ಷವೂ ಪ್ರತಿ ನೂರು ತಾಕು ನೆಲಕ್ಕೂ ಎರಡು ಮಾರ್ಕು ಹಣ ತೆರಲು ಒಪ್ಪಿದ್ದಾರೆ...."[1]

"ನಮಗೂ ನಮ್ಮ ವಂಶೀಕರಿಗೂ ಲಾಭದಾಯಕ"–ಎಂಬ ಕಾರಣದಿಂದ ಹ್ಯಾಂಬರ್ಗಿನ ಬಿಷಪ್ಪು ಹಾಲೆಂಡಿನವರೊಡನೆ ಈ ಒಪ್ಪಂದ ಮಾಡಿಕೊಂಡ. ಇತರ ನೆಲಮೊಡೆಯರೂ— ಚರ್ಚಿಗರೂ ಇತರರೂ—ಇಂಥ ಕ್ರಮ ಲಾಭದಾಯಕವೆಂಬುದನ್ನು ಕಂಡುಕೊಂಡರು.

---

[1] O. J. Thatcher and E. H. McNeal, *Source Book for Medieval History*, pp. 572, 573, Charles Scribner's Sons, N.Y., 1905.

ಸಾಗುವಳಿಯಾದ ನೆಲವೆಲ್ಲ ಸಾಗುವಳಿಗೆ ಬರುವುದರಿಂದ, ಇದನ್ನು ಈ ಆದ್ಯ ಪ್ರವರ್ತಕರು ಕೃಷಿ ಯೋಗ್ಯವಾಗಿ ಮಾಡುವುದರಿಂದ, ಈ ಒಡೆಯರಿಗೂ ಲಾಭವಿತ್ತು. ನೆಲ ಪಡೆಯುವ ಆಸೆಯಿಂದ ದುಡಿಮೆಗಾರರು ಬಂದು "ವಿನಮ್ರರಾಗಿ" ಬೇಡಿಕೊಳ್ಳುವ ವರೆಗೂ ಇವರಲ್ಲಿ ಹಲವರು ಕಾದು ಕುಳಿತಿರಲಿಲ್ಲ. ಬದಲಾಗಿ, ಕಾಡು ಕಡಿದು ಕೃಷಿಮಾಡಿ ಗೇಣಿ ಕೊಡಲು ಸಿದ್ಧವಿರುವವರಿಗೆ ನೆಲ ಕೊಡುವುದಾಗಿ ಇವರಾಗಿಯೇ ಮುಂದೆ ಬಂದು ಪ್ರಚುರ ಪಡಿಸಿದರು. ಇನ್ನು ಕೆಲವು ಸಾಹಸಿ ಪ್ರಭುಗಳು ಪಾಳುಬಿದ್ದ ನೆಲವನ್ನು ಗೇಣಿಗೆ ಕೊಡುವುದನ್ನೇ ಒಂದು ವ್ಯಾಪಾರವಾಗಿ ಪರಿವರ್ತಿಸಿದರು. ಇವರಲ್ಲಿ ಲಾಭ ಗಳಿಸಿದರು. ಕೆಲವರು ತಮ್ಮ ಹೊಸ ನೆಲದಲ್ಲಿ ಇಡೀ ಹಳ್ಳಿಗಳನ್ನೇ ನಿರ್ಮಿಸಿದರು. ಇಲ್ಲೂ ಇವರಿಗೆ ಲಾಭ. ಹಬ್ಬುತ್ತಿದ್ದ ನೆಲಸು ನಾಡಿನ ಚಳವಳಿ ಸಾವಿರ ಸಾವಿರ ಎಕರೆ ಬಂಜರು ನೆಲವನ್ನು ಸಾಗುವಳಿಗೆ ತಂದಿತು. ಹೀಗೆ ೧೩೫೦ ರ ವೇಳೆಗೆ ಸೈಲೇಷಿಯದಲ್ಲಿ ಸುಮಾರು ಒಂದೂವರೆಯಿಂದ ಎರಡು ಲಕ್ಷ ನೆಲಸು ನಾಡಿಗರು ಬೇಸಾಯ ಮಾಡುತ್ತಿದ್ದ ಸುಮಾರು ೧೫೦೦ ಹೊಸ ನೆಲಸು ನಾಡುಗಳಿದ್ದುವು. ಈ ವಿಸ್ತೃತ ವಿಕಾಸ ಒಂದು ಮುಖ್ಯ ಘಟನೆ. ಇಷ್ಟೇ ಮುಖ್ಯವಾದ ಇನ್ನೊಂದು ಅಂಶವೆಂದರೆ, ಜೀತಗಾರರಿಗೆ ಶೃಂಖಲಾರಹಿತ ನೆಲ ಸಿಕ್ಕುತ್ತಿದ್ದದ್ದು. ಇಷ್ಟವಿಲ್ಲದ ಶ್ರಮದ ಸೇವೆಯ ತೊಡಕಿಲ್ಲ. ಹಣದ ರೂಪದಲ್ಲಿ ಗೇಣಿ ಕೊಟ್ಟು ಸ್ವಾಮ್ಯ ಪಡೆಯಬಹುದಾದ ನೆಲ. ಈ ಬಗೆಯ ಹೊಸ ಸ್ವಾತಂತ್ರ್ಯ ಹಳೆಯ ಮೇನರುಗಳಲ್ಲಿದ್ದ ಜೀತಗಾರರ ಸ್ಥಿತಿಯ ಮೇಲೂ ಪ್ರಭಾವ ಬೀರುವಷ್ಟರಮಟ್ಟಿಗೆ ಹಬ್ಬುತ್ತ ನಡೆಯುವುದೆಂಬುದು ನಿಶ್ಚಯವಾಗಿತ್ತು. ಹಾಗೆಯೇ ಆಯಿತು.



ತನ್ನದು ಹೀನ ಅದೃಷ್ಟವೆಂದು ಒಪ್ಪಿ, ನಂಬಿ, ನಡೆದಿದ್ದ, ರೈತ—ಹಲವು ವರ್ಷ. ಸಾಮಾಜಿಕ ವರ್ಗಗಳು ಖಚಿತವಾಗಿ ವಿಂಗಡವಾಗಿದ್ದ ವ್ಯವಸ್ಥೆಯಲ್ಲಿ ಹುಟ್ಟಿ ಬೆಳೆದಿದ್ದ ಈತ. ಈ ಸಮಾಜದಲ್ಲಿದ್ದವರು ಪ್ರಾರ್ಥನಕಾರರು, ಯೋಧರು, ದುಡಿಮೆಗಾರರು. ದುಡಿಮೆಗಾರರ ವರ್ಗದಲ್ಲಿ ಹುಟ್ಟಿದ್ದ ತನಗೆ ಯಾವ ಕೆಲಸವೆಂಬುದು ಮೊದಲೇ ನಿಶ್ಚಿತವಾಗಿತ್ತು. ನಿಶ್ಚಿತವಾದ ಈ ಕೆಲಸವನ್ನು ತೃಪ್ತಿಕರವಾಗಿಯೂ, ಮನಃಪೂರ್ವಕವಾಗಿಯೂ ಮಾಡಿದಾಗ ಮಾತ್ರ ಸ್ವರ್ಗಸಾಮ್ರಾಜ್ಯ ಲಭ್ಯ. ಈ ನಂಬಿಕೆಯ ಬೋಧನೆಯ ಫಲವಾಗಿ ಈತ ತನ್ನ ಕೆಲಸವನ್ನು ತುಟಿಪಿಟಕ್ಕೆನ್ನದೆ ಮಾಡುತ್ತಿದ್ದ. ಹೇಗಿದ್ದರೂ ತನ್ನ ಅಂತಸ್ತು ಹೆಚ್ಚಿಸಿಕೊಳ್ಳುವ ಅವಕಾಶವೇ ಇಲ್ಲ. ಹೀಗಿರುವಾಗ ಹೆಚ್ಚು ಶ್ರಮಪಡಲು ಏನು ಉತ್ಸಾಹ? ಬದುಕಲು ಎಷ್ಟು ಬೇಕೋ ಅಷ್ಟು ಮಾಡಿದರಾಯಿತು. ಕಟ್ಟಳೆಯಂತೆ ದಿನಚರಿಯ ಕೆಲಸ, ಅಷ್ಟೇ. ಬಿತ್ತನೆಯ ಬೀಜ, ಬೆಳೆ ತೆಗೆಯುವ ಹೊಸ ವಿಧಾನ—ಈ ಎಲ್ಲ ನಿಟ್ಟುಗಳಲ್ಲಿ ಪ್ರಯೋಗ ನಡಸುವುದರಲ್ಲಿ ಏನು ಅರ್ಥ? ಮಾರಬಹುದಾದ ಪದಾರ್ಥಕ್ಕೆ ಇದ್ದ ಗಿರಾಕಿಯಾದರೂ ಬಹು ಮಿತ. ಒಂದು ವೇಳೆ ಅಧಿಕ ಉತ್ಪನ್ನ ಪಡೆದರೂ ಅದರ ಫಲ ಭೋಗಿಸುವವರು ಯಾರು? ಅದರಲ್ಲಿ ರಾಜಭಾಗ ಪ್ರಭುವಿಗೇ ಹೋದೀತಲ್ಲವೆ?

ಆದರೆ ಈಗ ಇದೆಲ್ಲ ಬದಲಾಗಿತ್ತು. ಗಿರಾಕಿ ಹೆಚ್ಚಿತ್ತು. ರೈತನಿಗೆ ಅಗತ್ಯವಾದದ್ದಕ್ಕಿಂತ, ಪ್ರಭು ತೆಗೆದುಕೊಂಡದ್ದಕ್ಕಿಂತ ಹೆಚ್ಚಾಗಿ ಉಳಿದದ್ದನ್ನು ಮಾರಬಹುದಿತ್ತು;

ಪ್ರತಿಯಾಗಿ ಹಣ ಪಡೆಯಬಹುದಿತ್ತು. ಈ ಕಾಲದಲ್ಲಿ ಅವನಿಗೆ ಹಣದ ಬಳಕೆ ಸುಲಭವಾಗಿರಲಿಲ್ಲ, ನಿಜ. ಆದರೆ ಇದು ಕ್ರಮೇಣ ಅವನಿಗೆ ಪರಿಚಿತವಾಗುತ್ತಿತ್ತು. ವರ್ತಕ ಜನರ, ಹಳೆಯ ವ್ಯವಸ್ಥೆಗೆ ಹೊಂದಿಕೊಳ್ಳಲಾರದವರ, ಒಂದು ಹೊಸ ವರ್ಗ ಜನ್ಮ ತಾಳಿತ್ತೆಂಬುದನ್ನೂ ಅವನು ಅರಿತಿದ್ದ. ಆದರೆ ಈ ಜನ ದಿನೇ ದಿನೇ ಪ್ರವರ್ಧಮಾನಕ್ಕೆ ಬರುತ್ತಿದ್ದರು. ಗ್ರಾಮದ ಬಳಿಯಲ್ಲಿದ್ದ ಇವರ ನಗರವನ್ನೂ ಅವನು ಕಂಡಿದ್ದ. ಆ ನಗರವೋ ಒಂದು ಸೋಜಿಗ. ತನ್ನಂಥ ಜೀತಗಾರರೂ—ಒಬ್ಬಿಬ್ಬರು—ಪಟ್ಟಣ ಸೇರಿದ್ದುಂಟು; ಚೆನ್ನಾಗಿ ಬಾಳಿದ್ದೂ ಉಂಟು. ಈ ಪರಿವರ್ತನೆಯ ಪ್ರಪಂಚದಲ್ಲಿ ತನ್ನಂಥ ಜನಕ್ಕೂ ಒಂದು ಸದವಕಾಶ, ಹಿಂದಿಗಿಂತ ಹೆಚ್ಚಾಗಿ ದುಡಿದರೆ, ತನಗೆ ಅಗತ್ಯವಿದ್ದುದಕ್ಕಿಂತ ಹೆಚ್ಚು ಬೆಳೆದರೆ, ತಾನೂ ಒಂದಿಷ್ಟು ಹಣ ಸಂಗ್ರಹಿಸಬಹುದು. ಪ್ರಭುವಿಗೆ ತಾನು ಸಲ್ಲಿಸಬೇಕಾದ ದುಡಿಮೆಯ ಸೇವೆಯನ್ನೊಂದಿಷ್ಟು ತಪ್ಪಿಸಿಕೊಂಡರೆ ಆದೀತು. ಒಂದಿಷ್ಟು ಹಣ ತೆತ್ತು ಅದರಿಂದ ಮುಕ್ತಿ ಪಡೆಯಬಹುದು. ಪ್ರಭು ಇವನ ಹೊರೆ ಇಳಿಸಲೊಪ್ಪಿದರೆ ಆಯಿತು. ಇಲ್ಲದಿದ್ದರೆ ಆಗ ಗೊತ್ತೇ ಇದೆ. ಇವನೂ ಪಟ್ಟಣಕ್ಕೆ ಪ್ರಯಾಣ ಮಾಡಬಹುದು. ಇಲ್ಲವೇ ಸಾಗುವಳಿಯಿಲ್ಲದ ನೆಲ ದೊರಕುವ ಎಡೆಗೆ ಹೋಗಬಹುದು. ತನ್ನಂಥವರು ಕೆಲವರು ಆಗಲೇ ಕಾಡು ಕಡಿಯುವ ಕೆಲಸದಲ್ಲಿ ನಿರತರಾಗಿರಲಿಲ್ಲವೆ? ಶುಲ್ಕದ ಪೀಡೆಯ ಬದಲು ನೆಲದ ತುಂಡು ಪಡೆಯುವ ಅವಕಾಶವಿತ್ತು, ಇವರಿಗೆ.

ಆದರೆ ಜೀತಗಾರನ ಶ್ರಮದ ಸೇವೆಯನ್ನು ಹಣಕ್ಕೆ ಪರಿವರ್ತಿಸಲು ಪ್ರಭುವೂ ಸಂಪೂರ್ಣವಾಗಿ ಒಪ್ಪುವವನಿದ್ದ. ಅವನಿಗೂ ಕೂಡ ಹಣದ ಗುಣದ ಪರಿಚಯವಾಗಿತ್ತು. ಈ ಪರಿವರ್ತನೆಯ ಪ್ರಪಂಚದಲ್ಲಿ ಹಣ ಏನು ಮಾಡಬಲ್ಲುದೆಂಬುದನ್ನು ಅವನೂ ಅರಿತಿದ್ದ. ಅವನು ಕೇವಲ ಕೆಲವು ತಿಂಗಳ ಹಿಂದೆ, ಪರಿಷೆಯಲ್ಲಿ, ಪೂರ್ವದೇಶದಿಂದ ಬಂದ ಆ ಸುಂದರ ವಸ್ತ್ರ ಕೊಂಡಿರಲಿಲ್ಲವೆ? ಇದಕ್ಕೆ ಕೊಡಲು ಬೇಕಾದ್ದು ಹಣ. ಅಲ್ಲದೆ, ಅವನು ಈಚೆಗೆ ಜೈತ್ರಯಾತ್ರೆ ಕೈಗೊಳ್ಳಲಿಲ್ಲವೆ? ಇದಕ್ಕಾಗಿ ಕೊಂಡ ಆಕರ್ಷಕ ಯುದ್ಧ ಕವಚದ ಹಣವನ್ನು ಶಸ್ತ್ರಕಾರನಿಗೆ ಇನ್ನೂ ಕೊಟ್ಟೇ ಇಲ್ಲ. ಜೀತಗಾರ ಹೆರೆದು ಸೇರಿಸಿ ಕೊಡಬಹುದಾದ ಅಲ್ಪ ಸ್ವಲ್ಪ ಹಣವೂ ಪ್ರಭುವಿಗೆ ಹಲವು ಬಗೆಯಲ್ಲಿ ಅವಶ್ಯ. ಜೀತಗಾರ ಜಾನ್ ಜೋನ್ಸ್ ಇನ್ನು ಮುಂದೆ ಹಿಂದಿನಂತೆ ವಾರಕ್ಕೆ ಎರಡೋ ಮೂರೋ ದಿನ ಕೆಲಸ ಸಲ್ಲಿಸುವ ಬದಲು ವರ್ಷಕ್ಕೆ ಎಕರೆಗೆ ನಾಲ್ಕು ಪೆನ್ನಿಯಂತೆ ಗುತ್ತಿಗೆ ಕೊಡುವುದಾದರೆ ಧಾರಾಳವಾಗಿ ಅವನು ಅದಕ್ಕೆ ಒಪ್ಪಿಯಾನು. ಪ್ರಭುವಿಗೆ ಅನ್ಯಥಾ ಮಾರ್ಗವೇ ಇಲ್ಲ. ಏಕೆಂದರೆ, ಅವನು ತನ್ನ ಜೀತಗಾರರ ಕರ್ತವ್ಯದ ಹೊರೆ ಇಳಿಸದಿದ್ದರೆ ಅವರಲ್ಲಿ ಕೆಲವರಾದರೂ ಓಡಿಹೋದಾರು. ಹಾಗಾದರೆ ಅವನಿಗೆ ಹಣವೂ ಇಲ್ಲ, ದುಡಿಮೆಯೂ ಇಲ್ಲ. ಆಗ ಅವನಿಗೆ ಪೀಕಲಾಟ. ದುಡಿಮೆಯ ಸೇವೆ ಸಲ್ಲಿಸುವ ಬದಲು ಜೀತಗಾರನಿಂದ ಗುತ್ತಿಗೆ ಪಡೆಯಲು ಒಪ್ಪುವುದೇ ಸರಿಯೆನಿಸಿತ್ತು, ಪ್ರಭುವಿಗೆ.

ಅಲ್ಲದೆ ಪ್ರಭುವಿಗೆ ಇನ್ನೊಂದು ವಿಚಾರವೂ ಬಹುಕಾಲದಿಂದ ಸ್ಪಷ್ಟವಾಗಿತ್ತು. ಅಸ್ವತಂತ್ರ ದುಡಿಮೆಗಿಂತ ಸ್ವತಂತ್ರ ದುಡಿಮೆ ಹೆಚ್ಚು ಉತ್ಪಾದಕವೆಂಬುದೇ ಆ ವಿಚಾರ.

ತನ್ನ ನೆಲ ಉಳುವುದು ಬಿಟ್ಟು ಪ್ರಭುವಿನ ನೆಲ ಉಳಬೇಕಾಗಿ ಬಂದಾಗ, ರೈತ ಇಷ್ಟವಿಲ್ಲದೆ ದುಡಿಯುತ್ತಿದ್ದ. ಇದು ಪ್ರಭುವಿಗೆ ಗೊತ್ತಿತ್ತು. ಇಂಥ ದುಡಿಮೆಯಿಂದ ಪರಮಾವಧಿ ಪ್ರಯೋಜನವಾಗುವುದೆಂದು ನಿರೀಕ್ಷಿಸುವುದು ತಪ್ಪು—ಎಂಬುದನ್ನು ಅವನು ಬಲ್ಲ. ಪರಂಪರೆಯಾಗಿ ಬಂದ ಈ ಜೀತದ ಪದ್ಧತಿ ತಪ್ಪಿಸಿ, ತನಗೆ ಆಗಬೇಕಾದ ಕೆಲಸವನ್ನು ಕೂಲಿಕೊಟ್ಟು ಮಾಡಿಸಿಕೊಳ್ಳುವುದೇ ಮೇಲೆಂದು ಅವನು ಅರಿತುಕೊಂಡಿದ್ದ.

ಸ್ಟೀವನೇಜ್ ಎಂಬ ಹಳ್ಳಿಯ ಕಡತದಲ್ಲಿ ಕಾಣಸಿಗುವ ಈ ಮಾತುಗಳನ್ನು ನೋಡಿ: "ಎಸ್. ಜಿ. ಎಂಬುವನು ಸಲ್ಲಿಸಬೇಕಾದ ಸೇವೆ ಹಾಗೂ ಕಟ್ಟಳೆಗಳ ಬದಲು ೧೩ ಸಾಲಿಡ್ಸೈ ೪ ದೀನಾರ ನಾಣ್ಯ ಕೊಟ್ಟು, ಹಿಂದೆ ಹೇಳಿದ ನೆಲವನ್ನು ಹೊಂದಿರಬಹುದೆಂದು ಈ ಮೂಲಕ ಒಪ್ಪಿಗೆ ಕೊಟ್ಟಿದೆ."[1] ಇಂಥ ಮಾತುಗಳನ್ನು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಪಶ್ಚಿಮ ಯೂರೋಪಿನ ಹಳ್ಳಿಗಳ ಹದಿಮೂರು ಹದಿನಾಲ್ಕನೆಯ ಶತಮಾನಗಳಿಗೆ ಸಂಬಂಧಿಸಿದ ದಾಖಲೆಗಳಲ್ಲಿ ಕಾಣಬಹುದು.

ಈ ಕಾಲಕ್ಕೆ ಸಂಬಂಧಿಸಿದ ಇತರ ಪತ್ರಗಳಲ್ಲಿ ಇನ್ನೂ ಒಂದು ಅಂಶವಿದೆ. ಪ್ರಭುವಿಗೆ ಜೀತ ಸಲ್ಲಿಸದೆ ನೆಲ ಸಾಗುವಳಿ ಮಾಡುವ ಸ್ವಾತಂತ್ರ್ಯವನ್ನೇ ಅಲ್ಲದೆ ತಮ್ಮ ವ್ಯಕ್ತಿಸ್ವಾತಂತ್ರವನ್ನೂ ಕೂಡ ಈ ಜೀತಗಾರರು ಹಣಕೊಟ್ಟು ಕೊಂಡದ್ದೂ ಉಂಟು. ವುಲ್ಸ್‌ಟನ್ನಿನ ಜೀತದಾಳೊಬ್ಬ, "ತನ್ನ ಕ್ಷೇತ್ರ ಬಿಡಲು ಸ್ವತಂತ್ರ—ಎಂದು ಪರಿಗಣಿಸಲ್ಪಡಲು ಹತ್ತು ಸಾಲಿಡ್ಸೈ ಶುಲ್ಕ ತೆತ್ತ"[2] ನೆಂಬುದು ಅಲ್ಲಿನ ನ್ಯಾಯಾಲಯದ ದಾಖಲೆಯಲ್ಲಿದೆ.

ಜೀತಗಾರರಿಗೆ ಸ್ವಾತಂತ್ರ್ಯ ನೀಡುವುದೇ ಜಾಣತನವೆಂಬುದನ್ನು ಎಲ್ಲ ಪ್ರಭುಗಳೂ ಅರಿತುಕೊಂಡರೆಂದು ನೀವು ಊಹಿಸಬಾರದು. ಊಳಿಗ ಮಾನ್ಯ ಯುಗದ ಶುಲ್ಕ ವಿಧಿಸುವ ಹಕ್ಕನ್ನು ಬೆಳೆಯುತ್ತಿದ್ದ ನಗರಗಳ ಮೇಲೆ ಚಲಾಯಿಸದೆ ಬಿಟ್ಟುಕೊಡುವಷ್ಟು ಬುದ್ಧಿವಂತರಾಗಿರಲಿಲ್ಲ—ಎಲ್ಲ ಪ್ರಭುಗಳೂ. ಇಂಥವರೂ ಕೆಲವರಿದ್ದರು. ಹಿಂದೆ ನಡೆದಂತೆಯೇ ಮುಂದೆಯೂ ನಡೆಯಲಾರದೆಂಬ ವಿಚಾರವನ್ನು ಮನಗಾಣಲಾರದ, ಮನಗಾಣಲೊಲ್ಲದ, ಜನ—ಅನಿವಾರ್ಯವಾದ ಬದಲಾವಣೆಯ ಎದುರಿಗೂ ಹಳೆಯದನ್ನೇ ಬಿಗಿಯಾಗಿ ಅಪ್ಪಿಕೊಳ್ಳುವ ಜನ—ಇತಿಹಾಸದ ಪ್ರತಿಯೊಂದು ಕಾಲದಲ್ಲೂ ಇರುತ್ತಾರೆ. ತಮ್ಮ ಜೀತಗಾರರಿಗೆ ಸ್ವಾತಂತ್ರ್ಯ ನೀಡಲೊಲ್ಲದ ಕೆಲವು ಪ್ರಭುಗಳು ಆಗಲೂ ಇದ್ದರು.

ಜೀತಗಾರರ ವಿಮೋಚನೆಯ ಚಳವಳಿಯಲ್ಲಿ ಚರ್ಚೇ ಪ್ರಮುಖ ಪಾತ್ರ ವಹಿಸಿತೆಂದು ನೀವು ನಿರೀಕ್ಷಿಸಬಹುದು. ಆದರೆ ಆದದ್ದು ತದ್ವಿರುದ್ಧ. ನಗರದಲ್ಲೂ ಗ್ರಾಮದಲ್ಲೂ ಈ ಬಂಧ ವಿಮೋಚನೆಯ ಚಳವಳಿಗೆ ಮುಖ್ಯ ವಿರೋಧ ಬಂದದ್ದು ಶ್ರೀಮಂತರಿಂದಲ್ಲ, ಚರ್ಚಿನಿಂದ. ಜೀತಗಾರರಿಗೆ ಸ್ವಾತಂತ್ರ್ಯ ನೀಡಿ, ತಮಗೆ ಅಗತ್ಯವಾದ ಕೆಲಸಗಾರರನ್ನು

---

[1] T. W. Page, *End of Villainage in England*, pp. 54, 55. American Economic Association, N.Y., 1900.

[2] *Ibid.*, p. 41.

ದಿನಗೂಲಿ ಕೊಟ್ಟು ಪಡೆಯುವುದೇ ಹೆಚ್ಚು ವಿಹಿತವೆಂದು ಹಲವು ಪ್ರಭುಗಳು ಅರಿತಿದ್ದ ಕಾಲದಲ್ಲಿ ಚರ್ಚು ಮಾತ್ರ ಇನ್ನೂ ಈ ವಿಮೋಚನೆಯ ವಿರುದ್ಧವಾದ ನಿಲವನ್ನೇ ತಳೆದಿತ್ತು. ಈ ಧೋರಣೆ ಎಷ್ಟು ದೂರ ಹೋಗಿದ್ದಿತೆಂಬುದಕ್ಕೆ ಕ್ಲೂನಿಯಾಕ್ ಎಂಬ ಧರ್ಮ ವ್ಯವಸ್ಥೆಯ ನಿಬಂಧನೆಗಳೇ ಉದಾಹರಣೆ: "ನಮ್ಮ ವ್ಯವಸ್ಥೆಗೆ ಒಳಪಟ್ಟ ಮಠಗಳಿಗೆ ಸಂಬಂಧಿಸಿದ್ದ ಜೀತಗಾರರ ಮೇಲೋ, ಗುಲಾಮರ ಮೇಲೋ ಪ್ರಭಾವ ಬೀರಿ, ಅವರಿಗೆ ಬಿಡುಗಡೆಯ ಪತ್ರವನ್ನಾಗಲಿ, ಸ್ವಾತಂತ್ರ್ಯದ ಹಕ್ಕನ್ನಾಗಲಿ ಕೊಡುವಂಥವರನ್ನು [ನಮ್ಮ ವ್ಯವಸ್ಥೆಯಿಂದ ಬಹಿಷ್ಕರಿಸುವೆವು]."[1]

ಈ ಆದೇಶ ಬಂದದ್ದು ೧೩೦೦ರಲ್ಲಿ. ೧೩೮ ವರ್ಷಗಳ ಅನಂತರ, ೧೪೩೮ರಲ್ಲಿಯೂ ಕೂಡ, ಕ್ಲೂನಿಯಾಕ್ ಇದೇ ನಿಲವು ತಳೆದಿತ್ತು. ಆಗ ಬಂದ ಅದರ ನಿರೂಪ ಈ ರೀತಿ ಇತ್ತು: "ಈ ವ್ಯವಸ್ಥೆಯ ಆಬಟ್, ಪ್ರೈಯರ್, ಡೀನ್ ಮುಂತಾದ ನಿರ್ವಾಹಕರು ತಮ್ಮ ಅಧೀನದಲ್ಲಿರುವ ಜೀತಗಾರರನ್ನೂ ದಾಸ್ಯವೃತ್ತಿಯವರನ್ನೂ ಅವರ ಹಿಡುವಳಿಯನ್ನೂ ಬಿಡುಗಡೆಗೊಳಿಸುವುದಿಲ್ಲವೆಂಬುದಾಗಿ ಪ್ರತಿಜ್ಞೆ ಮಾಡಬೇಕು."[2] ಇದಕ್ಕೆ ಸಂಬಂಧಿಸಿದ ದಾಖಲೆಗಳನ್ನು ಎಚ್ಚರಿಕೆಯಿಂದ ಪರಿಶೀಲಿಸಿದ ಇಬ್ಬರು ಪ್ರಸಿದ್ಧ ಇತಿಹಾಸಕಾರರು ಈ ರೀತಿ ಹೇಳುತ್ತಾರೆ: ". . . . ಎಲ್ಲ ನೆಲದೊಡೆಯರ ಪೈಕಿ ಅತ್ಯಂತ ನಿಷ್ಠುರ ಧೋರಣೆ ತಳೆದಿದ್ದ ಸಂಸ್ಥೆಗಳೆಂದರೆ ಈ ಧರ್ಮಸಂಸ್ಥೆಗಳೇ—ಎಂಬುದಕ್ಕೆ ಆಧಾರಗಳಿವೆ. ಇವು ಅತಿಯಾದ ದಬ್ಬಾಳಿಕೆ ನಡಸದಿದ್ದರೂ, ತಮ್ಮ ಹಕ್ಕಿನ ಬಗ್ಗೆ ಬಿಗಿ ಮುಷ್ಟಿ ಹಿಡಿದಿದ್ದುವೆಂಬುದಂತೂ ನಿಜ. ಜೀತ ವ್ಯವಸ್ಥೆ ಉಳಿಯಬೇಕು—ಎಂದು ಇವು ಹಠ ಹಿಡಿದುವು. ಶಾಶ್ವತವೆನಿಸಿದರೂ ಆತ್ಮಹೀನವಾದ ಈ ಸಂಸ್ಥೆ ತನ್ನ ನಿಲವನ್ನು ಪಟ್ಟಾಗಿ ಹಿಡಿದಿತ್ತು. ತನ್ನ ನಿಲವನ್ನು ಸಮರ್ಥಿಸಲು ದಾಖಲೆಯ ರಾಶಿಯನ್ನೇ ಹೊಂದಿತ್ತು. ಅದು ಒಂದು ಅಂಗುಲವೂ ಸರಿಯಲಿಲ್ಲ, ಒಬ್ಬ ಜೀತಗಾರನಿಗೂ ವಿಮೋಚನೆ ನೀಡಲೊಪ್ಪಲಿಲ್ಲ. ಒಬ್ಬ ಹಿಡುವಳಿದಾರನಿಗೂ ಅವನಿಗೆ ಸಲ್ಲಬೇಕಾದ ಹಕ್ಕು ಬಿಟ್ಟುಕೊಡಲೊಪ್ಪಲಿಲ್ಲ. ಹಾಗೆ ನೋಡಿದರೆ, ಈ ಧಾರ್ಮಿಕ ವ್ಯವಸ್ಥೆಗಿಂತ ಲೌಕಿಕ ಪ್ರಭುವೇ ಹೆಚ್ಚು ದಯಾಳುವಾಗಿದ್ದ. ಏಕೆಂದರೆ ಅವನಲ್ಲಿ ಹೆಚ್ಚು ಮಾನವತೆಯಿತ್ತು; ಅವನು ನಿಶ್ಚಿಂತ; ಅವನಿಗೆ ಬೇಕಾಗಿದ್ದದ್ದು ನಗದು ಹಣ. ತಾನು ಅಮರನೆಂಬ ಅಹಂಭಾವವಂತೂ ಅವನಿಗೆ ಇರಲಿಲ್ಲ . . . . ಆದ್ದರಿಂದ ಈ ರೈತರು ಗಟ್ಟಿಯಾಗಿ ಮೊರೆಯಿಟ್ಟದ್ದು ಈ ಧಾರ್ಮಿಕ ಸಂಸ್ಥೆಗಳ ವಿರುದ್ಧ."[3]

ಗಟ್ಟಿಯಾಗಿ ಮೊರೆಯಿಡುವಷ್ಟಕ್ಕೇ ರೈತರು ನಿಲ್ಲಲಿಲ್ಲ. ಆಗಿಂದಾಗ್ಗೆ ಅವರು ಚರ್ಚಿನ ಸ್ವತ್ತನ್ನು ಸುತ್ತುವರಿದರು; ಕಿಟಕಿಗೆ ಕಲ್ಲೆಸೆದರು; ಬಾಗಿಲು ಸುಟ್ಟರು; ಸನ್ಯಾಸಿಗಳನ್ನು

[1] C. G. Coulton, *The Medieval Village*, pp. 147, 148. Cambridge University Press, 1925.

[2] *Ibid.*, p. 148.

[3] F. Pollock and F.W. Maitland, *History of English Law Before the Time of Edward I*, vol. I, pp. 378, 379. Cambridge University Press.

ಹೊಡೆದರು. ಈ ಹೋರಾಟವಲ್ಲಿ ಇವರಿಗೆ ಪಟ್ಟಣಿಗರ ನೆರವೂ ದೊರಕಿದ್ದುಂಟು. ಚರ್ಚೇ ಆಗಲಿ, ಯಾರೇ ಆಗಲಿ, ಎಲ್ಲ ಮೇಲೊಡೆಯರ ವಿರುದ್ಧವಾಗಿ ಅವರೂ ಹೋರಾಡುತ್ತಲೇ ಇದ್ದರು.

ಸ್ವಾತಂತ್ರ್ಯದ ಗಾಳಿ ಎಲ್ಲೆಲ್ಲೂ ಬೀಸಿತು. ಇದನ್ನು ಪಡೆಯುವ ಯತ್ನ ಕೈಬಿಡಲು ಈ ಜನ ಎಷ್ಟಕ್ಕೂ ಒಡಂಬಡಲಿಲ್ಲ. ಈ ಸ್ವಾತಂತ್ರ್ಯ ತಾನಾಗಿ ಬಾರದಿದ್ದಾಗ ಇವರು ಬಲಪ್ರಯೋಗ ಮಾಡಿ ಇವನ್ನು ಪಡೆಯಲು ಯತ್ನಿಸಿದರು. ಪ್ರಭುಗಳೂ ಚರ್ಚೂ ಈ ವಿಮೋಚನೆಯ ವಿರುದ್ಧವಾಗಿ ಸಾಗಿಸಿದ ಹೋರಾಟ ವ್ಯರ್ಥವಾಯಿತು. ಆರ್ಥಿಕ ಶಕ್ತಿಗಳ ಒತ್ತಡ ಅದಮ್ಯವಾಗಿತ್ತು. ಕೊನೆಗೆ ಸ್ವಾತಂತ್ರ್ಯ ಬರಲೇ ಬೇಕಾಯಿತು.

ಆ ವೇಳೆಗೆ ಇನ್ನೊಂದು ಮಹಾ ಘಟನೆ ಸಂಭವಿಸಿತು. ಇದೂ ಕೂಡ ಈ ಜನ ಬಯಸಿದ ಸ್ವಾತಂತ್ರ್ಯ ತಂದು ಕೊಡುವುದರಲ್ಲಿ ಬಹು ಮಟ್ಟಿಗೆ ಕಾರಣವಾಯಿತು. ಅದು ಪ್ಲೇಗು ವ್ಯಾಧಿ. ಕರಾಳಮೃತ್ಯು—**Black Death**—ಎಂದು ಹೆಸರಾಯಿತು ಇದಕ್ಕೆ. ಮಧ್ಯ ಯುಗದಲ್ಲಿ ಇಡೀ ಖಂಡಗಳನ್ನೇ ಗುಡಿಸಿ ಹಾಕಿದ ಇಂಥ ಪ್ಲೇಗು ವ್ಯಾಧಿಯ ಸ್ವರೂಪವನ್ನು ಇಂದಿನ ನಾಗರಿಕ ದೇಶೀಯರು ಅರಿಯಲಾರರು. ವೈದ್ಯ ವಿದ್ಯೆ ಈಗ ಅಗಾಧ ಪ್ರಗತಿ ಸಾಧಿಸಿದೆ. ಆರೋಗ್ಯ ಸೂತ್ರಗಳ ಪ್ರಸಾರ ಹಾಗೂ ಅನುಷ್ಠಾನ ಈಗ ಸಾರ್ವತ್ರಿಕವಾಗಿದೆ. ಆಗಿನ ಈ ಪಿಡುಗಿಗೆ ಸ್ವಲ್ಪ ಹತ್ತಿರ ಬರುವ ಇಂದಿನ ವ್ಯಾಧಿಯೆಂದರೆ, ಈಗ ಆಗೊಮ್ಮೆ ಈಗೊಮ್ಮೆ ಬರುವ ಕೆಂಜ್ವರ—ಅಥವಾ "ಇನ್‌ಫ್ಲುಯೆನ್ಜಾ". ಇದರಿಂದ ನೂರಾರು ಜನಗಳೇನಾದರೂ ಸತ್ತರೆ ಅಷ್ಟಕ್ಕೇ ನಮಗೆ ಘಾಬರಿಯಾಗುತ್ತದೆ. ಆದರೆ ಹದಿನಾಲ್ಕನೆಯ ಶತಮಾನದಲ್ಲಿ ಸಂಭವಿಸಿದ ಕರಾಳಮೃತ್ಯು—ಪ್ಲೇಗು ವ್ಯಾಧಿ—ಯಿಂದ ಪ್ರಥಮ ಮಹಾಯುದ್ಧದಲ್ಲಿ ಮಡಿದವರ ಎರಡರಷ್ಟು ಜನ ಸಾವಿಗೀಡಾದರು. ಪ್ರಥಮ ಮಹಾಯುದ್ಧವಾದರೋ, ಇಪ್ಪತ್ತನೆಯ ಶತಮಾನದ ಅತ್ಯಂತ ಚಾತುರ್ಯಪೂರ್ಣ ಮಾರಣ ವಿಧಾನಗಳ ನಾಲ್ಕು ವರ್ಷ ಕಾಲದ ಸಂಘಟಿತ ಕೊಲೆ. ಹದಿನಾಲ್ಕನೆಯ ಶತಮಾನದ ಕರಾಳಮೃತ್ಯು ಸಂಭವಿಸಿದ ನಾಲ್ಕು ವರ್ಷಗಳಾದ ಮೇಲೆ ಬೊಕಾಷಿಯೋ ಎಂಬ ಪ್ರಸಿದ್ಧ ಇಟಾಲಿಯನ್ ಲೇಖಕ ಈ ಪರಿಯಾಗಿ ಇದನ್ನು ವರ್ಣಿಸುತ್ತಾನೆ: "ನಮ್ಮ ಪ್ರಭುವಿನ ಶಕ ವರ್ಷಂಗಳು ೧೩೪೮ರಲ್ಲಿ, ಇಟಲಿಯ ಅತ್ಯಂತ ರಮಣೀಯ ನಗರವಾದ ಫ್ಲಾರೆನ್ಸಿನಲ್ಲಿ ಅತಿಭೀಕರ ಪ್ಲೇಗುವ್ಯಾಧಿ ಸಂಭವಿಸಿತು. ಇದು ಗ್ರಹಗಳ ಪ್ರಭಾವವೋ, ನಮ್ಮ ಪಾಪಗಳಿಗೆ ದೇವರು ವಿಧಿಸಿದ ಶಿಕ್ಷೆಯೋ, ಯಾರು ಬಲ್ಲರು? ಇದು ಕೆಲವು ವರ್ಷಗಳ ಹಿಂದೆ ಲಿವಾಂಟ್ ಎಂಬಲ್ಲಿ ಆರಂಭವಾಗಿ, ಸ್ಥಳದಿಂದ ಸ್ಥಳಕ್ಕೆ ಹಬ್ಬಿ, ಉದ್ದಕ್ಕೂ ಭೀಕರ ಹಾವಳಿ ಮಾಡಿ, ಕೊನೆಗೆ ಪಶ್ಚಿಮ ದೇಶವನ್ನೂ ಮುಟ್ಟಿತು. ಅಲ್ಲಿ ಇದರ ವಿರುದ್ಧ ಹಲವಾರು ಮುನ್ನೆಚ್ಚರಿಕೆಯ ಕ್ರಮ ಕೈಕೊಂಡರು. ನಗರವನ್ನು ಶುಚಿಯಾಗಿಟ್ಟುಕೊಂಡರು; ಈ ರೋಗದ ಸೋಂಕು ತಗಲಿರಬಹುದೆಂಬ ಶಂಕೆಗೆ ಒಳಗಾಗಿದ್ದವರನ್ನು ಪ್ರತ್ಯೇಕಿಸಿದರು; ಆರೋಗ್ಯಪಾಲನೆಯ ಸೂತ್ರಗಳ ಪ್ರಸಾರ ಮಾಡಿದರು; ಮನುಷ್ಯ ಕಲಿತ ವಿದ್ಯೆ ಹಾಗೂ ದೂರದೃಷ್ಟಿಯಿಂದ ಏನೇನು ಮಾಡಬಹುದೋ

ಅದನ್ನೆಲ್ಲ ಮಾಡಿದರು ; ದೇವರ ಮೆರವಣಿಗೆ ಬೆಳಸಿದರು ; ನಾನಾ ರೀತಿಯಲ್ಲಿ ದೇವರಿಗೆ ಮೊರೆಯಿಟ್ಟರು. ಆದರೂ ಈ ವ್ಯಾಧಿ ಬಂದೇ ಬಂತು ; ವಸಂತಕಾಲದಲ್ಲಿ ತಲೆದೋರಿತು. ಅದು ಕಾಣಿಸಿಕೊಂಡ ರೀತಿ ವಿಚಿತ್ರ, ವಿಷಾದಕರ . . . . ವೈದ್ಯ ಜ್ಞಾನವಾಗಲಿ ಔಷಧ ಶಕ್ತಿಯಾಗಲಿ ಈ ರೋಗದ ಮುಂದೆ ಏನೂ ಮಾಡಲಾರದಾಯಿತು . . . . ಕಾರಣ ಏನಾದರೂ ಇರಲಿ, ಬಹಳ ಮಂದಿ ಇದನ್ನು ಗೆಲ್ಲಲಾರದೆ ಹೋದರು. ವ್ಯಾಧಿ ಚಿಹ್ನೆ ಕಂಡಂದಿನಿಂದ ಮೂರನೆಯ ದಿನ ಸಾಯುವುದು ಖಾತ್ರಿಯಾಗಿತ್ತು . . . . ದಾಹ್ಯ ಪದಾರ್ಥವನ್ನು ಸೋಕಿದ ಬೆಂಕಿಯಂತೆ ಇದು ರೋಗಿಗಳಿಂದ ನಿರೋಗಿಗಳಿಗೆ ಶೀಘ್ರವಾಗಿ ಹಬ್ಬಲಾರಂಭಿಸಿತು. ಹೀಗೆ ಈ ವ್ಯಾಧಿ ಅತಿ ಭೀಕರವಾಯಿತು. ಈ ಪಿಡುಗಿನ ಸ್ವರೂಪ ಎಂಥದಾಗಿತ್ತೆಂದರೆ, ಇದು ಒಬ್ಬರಿಂದ ಇನ್ನೊಬ್ಬರಿಗೆ ಹರಡುತ್ತಿದ್ದುದಷ್ಟೇ ಅಲ್ಲ— ಅದಕ್ಕಿಂತ ವಿಚಿತ್ರನಾದ ರೀತಿಯಲ್ಲೂ ಇದು ತಗುಲುತ್ತಿತ್ತು . . . . ವ್ಯಾಧಿಗ್ರಸ್ತ ಉಪ ಯೋಗಿಸಿದ ಯಾವ ವಸ್ತುವನ್ನು ಮುಟ್ಟಿದರೂ ಸರಿ, ಅವರಿಗೂ ಈ ವ್ಯಾಧಿಯ ಸೋಂಕು ತಗಲುವುದು ಖಂಡಿತವಾಗಿತ್ತು. ಅತಿ ಶೀಘ್ರದಲ್ಲೇ ಅವರೂ ಸಾವಿನ ಹೆದ್ದಾರಿ ಹಿಡಿಯು ತ್ತಿದ್ದರು. ಇಂಥ ಒಂದು ಸಂದರ್ಭ ನನ್ನ ಗಮನಕ್ಕೆ ಬಂತು : ಆಗ ತಾನೆ ಸತ್ತವನೊಬ್ಬ ಧರಿಸಿದ್ದ ಚಿಂದಿ ಬಟ್ಟೆಯನ್ನು ಬೀದಿಯಲ್ಲಿ ಬಿಸಾಡಿತ್ತು. ಎರಡು ಹಂದಿಗಳು ಅಲ್ಲಿಗೆ ಬಂದು ಈ ಚಿಂದಿಯನ್ನು ಕೆದಕಿ, ತಮ್ಮ ಬಾಯಲ್ಲಿ ಕಚ್ಚಿ ಅಳ್ಳಾಡಿಸಿದುವು. ಕೇವಲ ಒಂದು ಘಂಟೆಯೊಳಗೆ ಆ ಎರಡು ಹಂದಿಗಳೂ ಒದ್ದಾಡಿ ಅಲ್ಲೇ ಸತ್ತುಬಿದ್ದುವು."[1]

ಈ ಹಂದಿಗಳ ಕತೆ ನಿಜವಿರಬಹುದು, ಇಲ್ಲದಿರಬಹುದು. ಆದರೆ ಎಲ್ಲೆಲ್ಲೂ ಜನ ನೊಣಗಳಂತೆ ಸಾಯುತ್ತಿದ್ದರೆಂಬುದೇನೋ ನಿಜ. ಬೊಕಾಷಿಯೋ ಹೇಳಿದ ಫ್ಲಾರೆನ್ಸ್ ನಗರದಲ್ಲಿ ಒಂದು ಲಕ್ಷ ಜನ ಸತ್ತರು. ಲಂಡನ್ನಿನಲ್ಲಿ ದಿನಕ್ಕೆ ಇನ್ನೂರು ಮಂದಿಯಂತೆ, ಪ್ಯಾರಿಸಿನಲ್ಲಿ ದಿನಕ್ಕೆ ಎಂಟುನೂರು ಮಂದಿಯಂತೆ ಮಡಿದರು. ಫ್ರಾನ್ಸ್, ಇಂಗ್ಲೆಂಡ್, ತಗ್ಗುನಾಡು, ಜರ್ಮನಿ—ಈ ಪ್ರದೇಶಗಳಲ್ಲಿ ಇಡೀ ಜನಸಂಖ್ಯೆಯ ಮೂರರಲ್ಲೊಂದ ರಿಂದ ಅರ್ಧಪಾಲು ಜನರನ್ನು ಈ ವ್ಯಾಧಿ ಗುಡಿಸಿ ಹಾಕಿತು. ೧೩೪೮ರಿಂದ ೧೩೫೦ರ ವರೆಗೆ ಯೂರೋಪಿನ ಎಲ್ಲ ದೇಶಗಳನ್ನೂ ಈ ಪಿಡುಗು ವ್ಯಾಪಿಸಿತು. ಕೆಲವು ದೇಶ ಗಳಲ್ಲಂತೂ, ಮುಂದಣ ದಶಕಗಳಲ್ಲಿ ಇದು ಮತ್ತೆ ಮತ್ತೆ ಹಿಂದಿರುಗಿ, ಹಿಂದಣ ಸಲಗಳಲ್ಲಿ ಅದೃಷ್ಟವಶಾತ್ ಇದರಿಂದ ತಪ್ಪಿಸಿಕೊಂಡಿದ್ದವರನ್ನು ನುಂಗಿ ಹಾಕಿತು. ಈ ಕಗ್ಗೊಲೆ ಎಷ್ಟು ವ್ಯಾಪಕವಾಗಿತ್ತೆಂಬುದನ್ನು ಆ ಕಾಲದ ಐರಿಷ್ ಸನ್ಯಾಸಿಯೊಬ್ಬನ ಈ ಬರಹ ದಲ್ಲಿರುವ ನಿರಾಶೆಯ ಧ್ವನಿಯಿಂದ ಅರಿಯಬಹುದು: "ನಾನು ಬರೆದದ್ದೂ ಕೂಡ, ಇದನ್ನು ಬರೆದ ನನ್ನೊಡನೆಯೇ ನಾಶ ಹೊಂದದಿರಲಿ. ಈ ಕೃತಿಯನ್ನು ಯಾರೂ ನಾಶ ಗೊಳಿಸದಿರಲಿ . . . . ಆದಿ ಮಾನವನ ವಂಶಜರು ಯಾರಾದರೂ ಈ ಸಾವನ್ನು ತಪ್ಪಿಸಿ

---

[1] *Stories of Boccaccio, The Decameron*, pp. 1, 2. Translated into English by John Payne. The Bibliophilist Library, 1903.

ಕೊಂಡವ್ದೇ ಆದರೆ, ನಾನು ಆರಂಭಿಸಿದ ಈ ಕೃತಿಯನ್ನು ಅವರು ಮುಂದುವರಿಸಲಿಚ್ಛಿಸಿದ ಪಕ್ಷದಲ್ಲಿ, ಅವರು ಹಾಗೆ ಮಾಡಲೆಂದು ಈ ಚರ್ಮಲೇಖನವನ್ನು ಬಿಡುತ್ತಿದ್ದೇನೆ."[1]

ಯಾರೂ ಜೀವಂತವಾಗಿ ಉಳಿಯಲಾರರೆಂಬ ಶಂಕೆಗೆ ಎಡೆ ಕೊಡುವಷ್ಟು ಅಸಂಖ್ಯಾತ ಜನರ ಬಲಿ ತೆಗೆದುಕೊಂಡ ಈ ಪ್ಲೇಗಿನ ಪರಿಣಾಮವೇನು? ಪಶ್ಚಿಮ ಯೂರೋಪಿನ ರೈತನ ಸ್ಥಿತಿಯ ಮೇಲೆ ಈ ವ್ಯಾಧಿಯಿಂದ ಏನು ಪರಿಣಾಮವಾಯಿತು?

ಇಷ್ಟೊಂದು ಜನ ಸತ್ತದ್ದರಿಂದ, ಜೀವಂತವಾಗಿ ಉಳಿದುಕೊಂಡವರ ದುಡಿಮೆಯ ಬೆಲೆ ಹೆಚ್ಚಿತೆಂಬುದು ಸ್ವಯಂಸಿದ್ಧ. ಕೆಲಸಗಾರರು ತಮ್ಮ ದುಡಿಮೆಗೆ ಹಿಂದೆ ಎಂದೂ ಇಲ್ಲದಷ್ಟು ಹೆಚ್ಚು ಕೂಲಿ ಪಡೆಯಬಹುದಾಯಿತು. ಈ ಉಪದ್ರವ ನೆಲವನ್ನೇನೋ ಮುಟ್ಟಲಿಲ್ಲ. ಆದರೆ ನೆಲದ ಉತ್ಪಾದನ ಶಕ್ತಿಗೆ ಅನುಗುಣವಾಗಿ ತಾನೆ ಅದರ ಬೆಲೆ? ನೆಲದ ಉತ್ಪಾದನೆಯ ಮೂಲಸಾಧನವೆಂದರೆ ದುಡಿಮೆ. ದುಡಿಮೆಗಾರರ ಸರಬರಾಯಿ ಕಡಮೆಯಾದದ್ದರಿಂದ ದುಡಿಮೆಗೆ ಬೇಡಿಕೆಯೂ ಅಷ್ಟೇ ಪ್ರಮಾಣದಲ್ಲಿ ಹೆಚ್ಚಿತು. ರೈತನ ಕೆಲಸ ಹಿಂದಿಗಿಂತ ಅಂದು ಹೆಚ್ಚು ಅಮೂಲ್ಯ. ಈ ವಿಚಾರ ಅವನಿಗೂ ಗೊತ್ತಿತ್ತು.

ಪ್ರಭುವಿಗೂ ಇದು ಗೊತ್ತಿತ್ತು. ತಮ್ಮ ಜೀತಗಾರರ ದುಡಿಮೆಯ ಸೇವೆಯನ್ನು ಹಣಕ್ಕೆ ಪರಿವರ್ತಿಸಲು ಒಪ್ಪದಿದ್ದ ಪ್ರಭುಗಳು ಹಿಂದಿನ ಪದ್ಧತಿಯನ್ನೇ ಉಳಿಸಿಕೊಳ್ಳಲು ಎಂದಿಗಿಂತಲೂ ಹೆಚ್ಚಾಗಿ ಯತ್ನಿಸಿದರು. ತಮ್ಮ ಜೀತಗಾರರು ಸಲ್ಲಿಸಬೇಕಾದ ದುಡಿಮೆಯ ಸೇವೆಗಳನ್ನು ಪರಿವರ್ತಿಸಿ, ಇವಕ್ಕೆ ಪ್ರತಿಯಾಗಿ ಹಣ ಪಡೆಯಲು ಒಪ್ಪಿದ್ದ ಪ್ರಭುಗಳು ಈಗ ಹೊಸ ಪದ್ಧತಿಯನ್ನೆದುರಿಸಬೇಕಾಯಿತು. ಕಾರ್ಮಿಕರ ದಿನಗೂಲಿ ಹೆಚ್ಚಿದ್ದುದರಿಂದ, ಪ್ರಭುಗಳಿಗೆ ದೊರಕುತ್ತಿದ್ದ ಗೇಣಿಯ ವರಮಾನದಿಂದ ಅವರು ಪಡೆಯಬಹುದಾಗಿದ್ದ ದುಡಿಮೆಯ ಪ್ರಮಾಣವೂ ಕಡಮೆಯಾಗಿತ್ತು. ಕರಾಳಮೃತ್ಯುವಿಗೆ ಹಿಂದೆ ಇದ್ದ ದರದ ಒಂದೂವರೆಯಷ್ಟಾಯಿತು ಕೂಲಿ. ಎಂದರೆ ಹಿಂದೆ ಮೂವತ್ತು ಆಳುಗಳನ್ನು ನೇಮಕ ಮಾಡಿಕೊಳ್ಳಬಹುದಾಗಿದ್ದ ಪ್ರಭು ಈಗ ಅದೇ ಹಣಕ್ಕೆ ಕೇವಲ ಇಪ್ಪತ್ತು ಆಳುಗಳನ್ನು ಮಾತ್ರ ಪಡೆಯಬಹುದಾಗಿತ್ತು. ಕರಾಳಮೃತ್ಯು ಸಂಭವಿಸಲು ಮುನ್ನ ವಾಡಿಕೆಯಲ್ಲಿದ್ದ ಕೂಲಿಯ ದರಕ್ಕಿಂತ ಹೆಚ್ಚು ಕೊಡಬಾರದು; ಉಳುಮೆಗಾರರೂ ಕುರುಬರೂ ಹಂದಿ ಕುರುಬರೂ ಹೆಚ್ಚು ಕೂಲಿ ಕೇಳಬಾರದು. ಹಾಗೆ ಮಾಡಿದರೆ ದಂಡ ತೆರಬೇಕಾದೀತು. ಹೀಗೆಂದು ಹೊರಡಿಸಿದ ಪ್ರಕಟನೆಯೆಲ್ಲ ವ್ಯರ್ಥವಾಯಿತು. ನಾಗಾಲೋಟದಿಂದ ನಡೆಯುತ್ತಿದ್ದ ಆರ್ಥಿಕ ಶಕ್ತಿಗಳನ್ನು ಆ ಕಾಲದ ಶಾಸನಗಳು ತಡೆಯಲಾರದೆ ಹೋದುವು.

ನಾಡಿನ ಪ್ರಭುಗಳಿಗೂ ನೆಲದ ಮೇಲೆ ದುಡಿಯುವವರಿಗೂ ನಡುವೆ ಘರ್ಷಣೆ ಅನಿವಾರ್ಯವಾಯಿತು. ಈ ಶ್ರಮಜೀವಿಗಳು ಸ್ವಾತಂತ್ರ್ಯದ ರುಚಿ ಕಂಡಿದ್ದರು. ಸ್ವಾತಂತ್ರ್ಯದ ಹಸಿವು ಅವರಲ್ಲಿ ಬಲಿತಿತ್ತು. ತೀವ್ರ ದಬ್ಬಾಳಿಕೆಯನ್ನೆದುರಿಸಿ ದ್ವೇಷದಿಂದ ಹಿಂದೆಯೂ ದಂಗೆಯೆದ್ದಿದ್ದರು—ಈ ಜೀತಗಾರ ಜನ. ಆದರೆ ಆ ದಂಗೆಗಳು ದೀರ್ಘವಲ್ಲ.

---

[1] Quoted in J. Kulischer, *Allgemeine Wirtschaftsgeschichte des Mittelalters und der Neuzeit*, vol. I, p. 129. Oldenbourg, Berlin, 1928.

ಅಲ್ಲದೆ ಅವು ಸ್ಥಳೀಯ. ಅವರ ಕ್ರೋಧದ ದಳ್ಳುರಿ ದಮನ ಸಾಧ್ಯವಾಗಿತ್ತು ಆಗ. ಆದರೆ ಹದಿನಾಲ್ಕನೆಯ ಶತಮಾನದ ರೈತರ ದಂಗೆ ಅವಕ್ಕಿಂತ ಭಿನ್ನ. ಬೇಸಾಯಕ್ಕೆ ಆಳುಗಳ ಅಭಾವವುಂಟಾಗಿತ್ತು. ಇದ್ದವರು ಕೆಲವೇ ಜನ. ತಮ್ಮನ್ನು ಬಿಟ್ಟರೆ ಏನೂ ಕೆಲಸ ಸಾಗದು—ಎಂಬುದು ಅವರಿಗೂ ಗೊತ್ತಿತ್ತು. ತಮ್ಮ ಬಲದ ಅರಿವುಂಟಾಗಿತ್ತು ಅವರಿಗೆ. ಪಶ್ಚಿಮ ಯೂರೋಪಿನಲ್ಲೆಲ್ಲ ಧಾರಾವಾಹಿಯಾಗಿ ನಡೆದ ಈ ದಂಗೆಗಳಲ್ಲಿ ರೈತರು ತಮ್ಮ ಶಕ್ತಿಪ್ರದರ್ಶನ ಮಾಡಿದರು. ಬೇರಾವ ಮಾರ್ಗದಿಂದಲೂ ಪಡೆಯಲಾಗದಿದ್ದ, ಉಳಿಸಿ ಕೊಳ್ಳಲಾಗದಿದ್ದ, ಸವಲತ್ತುಗಳನ್ನೆಲ್ಲ ಇವರು ಪಡೆಯಲು ಯತ್ನಿಸಿದರು.

ರೈತರ ದಂಗೆಗಳ ಕಾರಣಗಳೇನೆಂಬ ಬಗ್ಗೆ ಇತಿಹಾಸಕಾರರಲ್ಲಿ ಒಮ್ಮತವಿಲ್ಲ. ಹಿಂದಿನ ಪದ್ಧತಿಯಂತೆಯೇ ರೈತರು ದುಡಿತದ ಸೇವೆ ಸಲ್ಲಿಸಬೇಕೆಂದು ನೆಲದೊಡೆಯರು ಅವರನ್ನು ಬಲವಂತ ಪಡಿಸಿದ್ದರಿಂದ ಹೀಗಾಯಿತೆಂಬುದು ಒಂದು ಮತ. ಹಿಂದಿನ ಪದ್ಧತಿಯನ್ನು ತ್ಯಜಿಸಿ, ತನ್ನ ದುಡಿತಕ್ಕೆ ಹಣದ ಲೆಕ್ಕ ಹಾಕಬೇಕೆಂದು ರೈತ ಕೇಳಿದಾಗ, ತನ್ನ ಶಕ್ತಿ ಯನ್ನರಿತ ರೈತ ಇದಕ್ಕಾಗಿ ಮುಷ್ಕರ ಹೂಡಿದಾಗ, ನೆಲದೊಡೆಯರು ಹೀಗೆ ಮಾಡಲು ನಿರಾಕರಿಸಿದರೆಂಬುದು ಇನ್ನೊಂದು ಮತ. ಬಹುಶಃ ಎರಡೂ ಮತಗಳು ಸರಿ. ಅಂತೂ ಇಷ್ಟು ಹೇಳಬಹುದು: ಎರಡು ಪಕ್ಷಗಳೂ ಹಿಂಸಾಕೃತ್ಯಗಳನ್ನೆಸಗಿದುವೆಂಬುದಕ್ಕೆ ಸಾಕಷ್ಟು ಸಾಕ್ಷ್ಯವಿದೆ. ದಾಖಲೆಗಳ ಹಾಗೂ ಅಸ್ಥಿಯ ಭಸ್ಮ, ರೈತ ದಲಿತರ ಹಾಗೂ ದಮನಕಾರರ ಪರಸ್ಪರ ಕೊಲೆ, ದುರದೃಷ್ಟವಶಾತ್ ಸಿಕ್ಕಿಬಿದ್ದ ಕ್ರಾಂತಿಕಾರಿ ರೈತರ "ನ್ಯಾಯಬದ್ಧ" ಕೊಲೆ—ಇವೆಲ್ಲ ಸಂಭವಿಸಿದುವು. ಹೀಗೆ ಸಿಕ್ಕಿಬಿದ್ದು ಕೊಲೆಗೀಡಾದ ಒಬ್ಬ ರೈತ ಆಡಮ್ ಕ್ಲಿಮ್. 'ಎಲಿ' ಎಂಬಲ್ಲಿಯ ದಾಖಲೆಯಲ್ಲಿ ಇದರ ಉಲ್ಲೇಖವಿದೆ: "ದಂಗೆಕಾರರಿಗೆ ದಂಡನೆ ವಿಧಿಸುವ ಉದ್ದೇಶದಿಂದ ಎಲಿ ದ್ವೀಪಗಳ ಕೇಂಬ್ರಿಜ್ ನಾಡಿನಲ್ಲಿ ನೇಮಕವಾಗಿರುವ ನ್ಯಾಯಮೂರ್ತಿಗಳ ಸಮ್ಮುಖದಲ್ಲಿ ಮುಂದಣ ಗುರುವಾರ, ಕನ್ನಿಕೆ ಸೇಂಟ್ ಮೇರಿಯ ವಾರ್ಷಿಕ ಸಮಾರಂಭದಲ್ಲಿ [ಜುಲೈ ೨೦], ವಾದ ಪ್ರತಿವಾದಗಳು ನಡೆಯುವುವು.

"ಆಡಂ ಕ್ಲಿಮ್‌ನನ್ನು ದ್ರೋಹಾತ್ಮಕ ಬಂಡಾಯದ ಆಪಾದನೆಯ ಮೇಲೆ ಸೆರೆ ಹಿಡಿದಿದೆ. . . . ಅವನು ಇತರರೊಡನೆ ಸೇರಿ ಎಲಿಯಲ್ಲಿ ದಂಗೆಯೆದ್ದು, ಥಾಮಸ್ ಸುಮೇಸರ್ ಪ್ರದೇಶವನ್ನು ಅಕ್ರಮವಾಗಿ ಪ್ರವೇಶಿಸಿ, ದುಷ್ಕೃತ್ಯಗಳನ್ನು ಎಸಗಿದ್ದಾನೆ; ಎಲಿಯ ಧರ್ಮಗುರುವಿನ ಹಾಗೂ ರಾಜನ ಚಿಹ್ನೆಗಳನ್ನೂ ಇತರ ವಸ್ತುಗಳನ್ನೂ ಕೊಂಡೊಯ್ದು, ಇವನ್ನು ಸುಟ್ಟು ರಾಜದ್ರೋಹವೆಸಗಿದ್ದಾನೆ.

"ಕರ್ತವ್ಯನಿಷ್ಠರಾದ ಎಲ್ಲ ಅಧಿಕಾರಿಗಳನ್ನೂ ತುಂಡರಿಸಬೇಕೆಂದು ಈತ ಮುಂದಣ ಭಾನುವಾರ ಸೋಮವಾರಗಳಂದು ಘೋಷಿಸಿದ.

"ಅಲ್ಲದೆ, ಹಿಂದೆ ಹೇಳಿದ ದಿನಗಳಂದು, ಇವನು ದಂಗೆಕೋರರನ್ನು ಜಮಾಯಿಸುವ ಉದ್ದೇಶದಿಂದ ಶಸ್ತ್ರಗಳಿಂದ ಆಚ್ಛಾದಿತನಾಗಿ ಬಾವುಟ ಹಿಡಿದು ಮೆರೆಯುತ್ತಿದ್ದ. ಯಾವ ಮನುಷ್ಯನೇ ಆಗಲಿ, ಅವನ ಅಂತಸ್ತು ಯಾವುದೇ ಇರಲಿ, ಅವನು ಸ್ವತಂತ್ರನಿರಲಿ, ಜೀತ

ಗಾರನಿರಲಿ, ತನ್ನ ಪ್ರಭುವಿಗೆ ವಿಧೇಯನಾಗಿರಕೂಡದು; ಸಂಪ್ರದಾಯಾನುಗುಣವಾದ ಅಥವಾ ಇತರ ರೀತಿಯ ಯಾವ ಸೇವೆಯನ್ನೂ ಸಲ್ಲಿಸಕೂಡದು; ಹೀಗೆ ಮಾಡಿದ್ದೇ ಆದರೆ ತಲೆ ಕಡಿಯಲಾದೀತು—ಎಂದು ಇವನು ಘೋಷಿಸಿದ. ಹೀಗೆ ಈತ ರಾಜನಿಗೆ ದ್ರೋಹ ಬಗೆದ; ಆಡಳಿತಾಧಿಕಾರ ಕಸಿದುಕೊಳ್ಳಲು ಯತ್ನಿಸಿದ. ನಾಡಗೌಡರಿಂದ ಇವನು ಬಂಧಿಸಲ್ಪಟ್ಟು ಆಪಾದನೆಗೆ ಒಳಪಟ್ಟಾಗ, ತನ್ನ ಮೇಲೆ ಆರೋಪಿತವಾದ—ಅಥವಾ ಯಾವುದೇ ವಿಧವಾದ—ಅಪರಾಧಗಳನ್ನೂ ನಿರಾಕರಿಸಿದ: ತಾನು ನಿರಪರಾಧಿಯೆಂದು ಹೇಳಿಕೊಂಡ. ಇವನ ಮೇಲಣ ಆರೋಪಗಳನ್ನು ಕುರಿತು ತೀರ್ಪು ನುಡಿಯಲು ಒಳ್ಳೆಯ ಹಾಗೂ ನ್ಯಾಯನಿಷ್ಠರಾದ ಹನ್ನೆರಡು ಮಂದಿ ನ್ಯಾಯದರ್ಶಿಗಳನ್ನು ನೇಮಿಸಲಾಯಿತು. ಪ್ರಮಾಣ ಪೂರ್ವಕವಾದ ವಿಚಾರಣೆ ನಡಸಿದ ಅನಂತರ, ಆಡಮ್ಸನ ಮೇಲೆ ಮಾಡಿರುವ ಆರೋಪಗಳೆಲ್ಲ ನಿಜವೆಂದೂ, ಅವನು ಅಪರಾಧಿಯೆಂದೂ ಈ ನ್ಯಾಯದರ್ಶಿಗಳು ತೀರ್ಮಾನಕ್ಕೆ ಬಂದಿದ್ದಾರೆ. ಶಾಸನಾನುಗುಣವಾಗಿ ಅವನನ್ನು ನೇಣಿಗೆ ಗುರಿಪಡಿಸಬೇಕೆಂಬುದು ಇವರು ವಿಧಿಸಿರುವ ಶಿಕ್ಷೆ. ಮೇಲೆ ಹೇಳಿರುವ ಪಟ್ಟಣದಲ್ಲಿ ಆಡಮ್ಸನಿಗೆ ಸೇರಿದ ಮೂವತ್ತೆರಡು ಷಿಲ್ಲಿಂಗುಗಳ ಮೌಲ್ಯದ ಆಸ್ತಿ ಇರುವುದೆಂದು ತಿಳಿದುಬರಲು, ದೊರೆಯ ಪರವಾಗಿ ರಾಲ್ಫ್ ಆಟ್‌ವೈಕ್ ಎಂಬ ಅಧಿಕಾರಿ ಇದನ್ನು ವಶಪಡಿಸಿಕೊಂಡು, ದೊರೆಯ ಹೆಸರಿನಲ್ಲಿ ಇತರ ಕ್ರಮ ಜರುಗಿಸಿದ . . . ."[1]

ಆಡಮ್ ಕ್ಲಿಮ್‌ನನ್ನು ನೇಣು ಹಾಕಲಾಯಿತು. ಸಹಸ್ರಾರು ಮಂದಿ ರೈತರೂ ನೇಣಿಗೆ ಗುರಿಯಾದರು. ರೈತರ ದಂಗೆಗಳು ಅಡಗಿಸಲ್ಪಟ್ಟುವು. ಆದರೆ ಅವರು ಎಷ್ಟೇ ಪ್ರಯತ್ನಪಟ್ಟರೂ ಗ್ರಾಮಪ್ರದೇಶದಲ್ಲಾಗುತ್ತಿದ್ದ ಈ ಬದಲಾವಣೆಗಳನ್ನು ಹಿಂದಕ್ಕೆ ತಿರುಗಿಸಲಾಗಲಿಲ್ಲ. ಅದಮ್ಯವಾದ ಆರ್ಥಿಕ ಶಕ್ತಿಗಳ ಅಡಿಗೆ ಸಿಲುಕಿ, ಹಳೆಯ ಊಳಿಗಮಾನ್ಯ ವ್ಯವಸ್ಥೆ ಮುರಿಯಿತು. ಹದಿನೈದನೆಯ ಶತಮಾನದ ಮಧ್ಯಕಾಲದ ವೇಳೆಗೆ ಪಶ್ಚಿಮ ಯೂರೋಪಿನ ಹೆಚ್ಚು ಭಾಗದಲ್ಲಿ ದುಡಿಮೆಯ ಶುಲ್ಕದ ಬದಲು ಹಣದ ಗೇಣಿ ಪದ್ಧತಿ ಜಾರಿಗೆ ಬಂದಿತ್ತು. ಅಲ್ಲದೆ ಹಲವು ರೈತರು ಹಳೆಯ ಸೆರೆಯಿಂದ ಸಂಪೂರ್ಣವಾಗಿ ಮುಕ್ತರಾಗಿದ್ದರು. [ತೀರ ದೂರ ಪ್ರದೇಶಗಳಲ್ಲಿ—ವ್ಯಾಪಾರದ ರಾಜಮಾರ್ಗಗಳಿಂದ ದೂರ—ಪಟ್ಟಣಗಳ ಸ್ವಾತಂತ್ರ್ಯದ ಪ್ರಭಾವ ತಾಕದ ಎಡೆಗಳಲ್ಲಿ—ಜೀತ ಪದ್ಧತಿ ಉಳಿದಿತ್ತು.] ಬೇಸಾಯಕೆಲಸಗಾರ ಈಗ ಕೇವಲ ದುಡಿಮೆಯ ಶಾಕಣವಾಗಿರಲಿಲ್ಲ. ಗೌರವದಿಂದ ತಲೆ ಎತ್ತಿ ನಡೆಯುವುದು ಅವನಿಗೆ ಸಾಧ್ಯವಾಯಿತು.

ಊಳಿಗಮಾನ್ಯ ಸಮಾಜದಲ್ಲಿ ಅಸಹಜವೆನಿಸಿದ್ದ ವ್ಯವಹಾರಗಳು ಈಗ ಸಾಮಾನ್ಯವಾದುವು. ಪರಸ್ಪರ ಸೇವೆಯ ಆಧಾರದ ಮೇಲೆ ಮಾತ್ರ ನೆಲದ ಕೊಡು-ಪಡೆಯುವಿಕೆ ಆಗುತ್ತಿತ್ತು ಹಿಂದೆ. ಈಗಲಾದರೋ, ನೆಲದ ಆಸ್ತಿಯ ಹೊಸ ದೃಷ್ಟಿಯೊಂದು ಬೆಳೆಯಿತು. ಅಧಿಕ ಸಂಖ್ಯೆಯ ರೈತರು ಸಂಚಾರ ಸ್ವಾತಂತ್ರ್ಯ ಪಡೆದರು. ನೆಲವನ್ನು ಮಾರುವ ಅಥವಾ ಪರಭಾರೆ ಮಾಡುವ ಹಕ್ಕೂ ಬಂತು. ಇದಕ್ಕಾಗಿ ಸ್ವಲ್ಪ ಶುಲ್ಕ ಕೊಡಬೇಕಾಗಿ

---

[1] **Bland, Brown, and Tawney,** ***op. cit.***, **p. 105.**

ದ್ದುದೇನೋ ನಿಜ. ೧೩೮೫ರ ಸ್ಟೀವನೇಜ್ ನ್ಯಾಯಾಲಯದ ದಾಖಲೆಯೊಂದು ಇವಕ್ಕೆ ಆಧಾರ. "ವಾಸದ ಮನೆ, ಅದರ ಸುತ್ತಣ ಪ್ರದೇಶ, ಒಂದು ಚೂರು ಹೊಲ ಇವನ್ನು ಒಬ್ಬ ಜೀತಗಾರ ಆಜೀವ ಪರ್ಯಂತ ಹೊಂದಿರುವ ಹಕ್ಕು ಹೊಂದಿದ್ದನಂತೆ. ಇವನು ನ್ಯಾಯಾಲಯಕ್ಕೆ ಬಂದು, ಮೇಲೆ ಹೇಳಿದ ನೆಲವನ್ನು ಇನ್ನೊಬ್ಬನಿಗೆ ಅವನು ಆಜೀವ ಪರ್ಯಂತ ಅನುಭವಿಸಿಕೊಂಡಿರುವಂತೆ ಕೊಟ್ಟನೆಂದೂ, ನ್ಯಾಯಾಲಯದ ಪುಸ್ತಕದಲ್ಲಿ ಇದನ್ನು ದಾಖಲು ಮಾಡಿಸಲು ಪ್ರಭುವಿಗೆ ಆರು ದೀನಾರ ಹಣ ತೆತ್ತನೆಂದೂ ಉಲ್ಲೇಖವಿದೆ."[1]

ಹೀಗೆ ನೆಲವನ್ನು ಇತರ ವಸ್ತುಗಳಂತೆ ಕೊಳ್ಳುವ, ಮಾರುವ, ಮತ್ತು ತಡೆಯಿಲ್ಲದೆ ವಿನಿಮಯ ಮಾಡುವ ಪದ್ಧತಿ ಬಂದಾಗ ಹಳೆಯ ಊಳಿಗಮಾನ್ಯ ಪದ್ಧತಿಯ ಅವಸಾನವಾಯಿತು. ಪರಿವರ್ತನೆಯ ಶಕ್ತಿಗಳು ಇಡೀ ಪಶ್ಚಿಮ ಯೂರೋಪನ್ನೆಲ್ಲಾ ಆವರಿಸಿದುವು. ಅದರ ಸ್ವರೂಪವೇ ಬದಲಾಯಿತು.

[1] Page, *op. cit.*, p. 85.

## ೬. "ಅನ್ಯರಿಗೆ ದುಡಿಯುವ ಹಕ್ಕಿಲ್ಲ . . . ."

ಕೈಗಾರಿಕೆಯೂ ವ್ಯತ್ಯಸ್ತಗೊಂಡಿತು. ಹಿಂದೆ ಇದ್ದಿರಬಹುದಾದ ಕೈಗಾರಿಕೆಯೆಲ್ಲ ನಡೆಯುತ್ತಿದ್ದುದು ರೈತನ ಮನೆಯಲ್ಲೇ. ಅವನ ಸಂಸಾರಕ್ಕೆ ಅಣಿಕಟ್ಟು, ಪೀಠೋಪಕರಣ, ಬೇಕಿತ್ತೆ? ಹಾಗಿದ್ದರೆ ಇದನ್ನು ತಯಾರಿಸಲು ಬಡಗಿಯನ್ನು ಕರೆತರುವಂತಿರಲಿಲ್ಲ; ಮುಖ್ಯ ಬೀದಿಯ ಅಣಿಕಟ್ಟಿನ ಅಂಗಡಿಯಲ್ಲಿ ಕೊಳ್ಳುವಂತಿರಲಿಲ್ಲ. ಇದು ಸಾಧ್ಯವೇ ಇರಲಿಲ್ಲ. ರೈತನ ಸಂಸಾರದ ಮಂದಿಯೇ ಮರ ಕಡಿದು, ಕೆತ್ತಿ, ಸೀಳಿ, ಕೊರೆದು, ಬೇಕಾದ ಅಣಿಕಟ್ಟನ್ನು ಮಾಡಿಕೊಳ್ಳಬೇಕಾಗಿತ್ತು. ಸಂಸಾರದ ಜನಕ್ಕೆ ಬಟ್ಟೆ ಬೇಕಿತ್ತೆ? ಹಾಗಿದ್ದರೆ ಸಂಸಾರದ ಜನರೇ ದಾರ ತೆಗೆದು, ಬಟ್ಟೆ ನೆಯ್ದು, ಹೊಲಿದು ಹಾಕಿಕೊಳ್ಳಬೇಕಾಗಿತ್ತು. ಕೈಗಾರಿಕೆ ನಡೆಯುತ್ತಿದ್ದುದು ಮನೆಯಲ್ಲೇ. ಮನೆಯ ಜನರ ಅಗತ್ಯವನ್ನು ಪೂರೈಸುವುದೇ ಇದರ ಉದ್ದೇಶ. ಪ್ರಭುವಿನ ಗೃಹಕೃತ್ಯದ ಜೀತಗಾರರಲ್ಲಿ ಕೆಲವರು ಇಂಥ ಕೆಲಸಗಳನ್ನೇ ಮಾಡುವವರಿದ್ದರು; ಉಳಿದವರು ಆರಂಬ ಮಾಡುತ್ತಿದ್ದರು. ಕ್ರೈಸ್ತ ವೈದಿಕರ ಮನೆಗಳಲ್ಲಿಯೂ ಕೂಡ ಒಂದೊಂದು ಕಸಬಿನಲ್ಲೂ ತರಬೇತಾದ ಕೆಲವು ಮಂದಿ ಇದ್ದರು. ನೇಯುವ, ಮರಗೆಲಸ ಮಾಡುವ, ಕಬ್ಬಿಣದ ಕೆಲಸ ಮಾಡುವ—ಇಂಥ ಹಲವಾರು—ಕೆಲಸಗಳಲ್ಲಿ ಅವರು ಪ್ರಾವೀಣ್ಯ ಗಳಿಸಿದ್ದರು. ಇದೂ ಕೂಡ ವಾಣಿಜ್ಯ ಪ್ರಧಾನವಾದ ಕೈಗಾರಿಕೆಯಾಗಿರಲಿಲ್ಲ. ಪೇಟೆಯಲ್ಲಿ ಮಾರಾಟಕ್ಕೆ ವಸ್ತು ಒದಗಿಸುವುದು ಇದರ ಉದ್ದೇಶವಾಗಿರಲಿಲ್ಲ. ಗೃಹದ ಅಗತ್ಯಗಳನ್ನು ಪೂರೈಸುವುದು ಮಾತ್ರ ಇದರ ಗುರಿ. ಈ ಕೈ ಕೆಲಸಗಾರರು ತಮ್ಮ ವಿಶಿಷ್ಟ ಕಸಬುಗಳ ಮೂಲಕ ಜೀವಿಸುವಂತಾಗಬೇಕಾಗಿದ್ದರೆ, ಅದಕ್ಕೆ ಮುಂಚೆ ಪೇಟೆ ಬೆಳೆಯುವುದು ಅವಶ್ಯವಾಗಿತ್ತು.

ಪಟ್ಟಣಗಳು ಬೆಳೆದು, ಹಣ ಬಳಕೆಗೆ ಬಂದಾಗ ಈ ಕಸಬುದಾರರು ಬೇಸಾಯ ಬಿಟ್ಟು ತಮ್ಮ ಕಸಬಿನಿಂದಲೇ ಜೀವಿಸುವ ಅವಕಾಶ ಲಭಿಸಿತು. ಕಸಾಯಿ, ರೊಟ್ಟಿಗಾರ, ಮೋಂಬತ್ತಿ ತಯಾರಕ—ಎಲ್ಲರೂ ಪಟ್ಟಣಕ್ಕೆ ಹೋಗಿ ಅಲ್ಲಿ ಅಂಗಡಿ ಸ್ಥಾಪಿಸಿದರು; ಕಸಾಯಿಖಾನೆಯ, ರೊಟ್ಟಿ ತಯಾರಿಕೆಯ, ಮೋಂಬತ್ತಿ ತಯಾರಿಕೆಯ ಉದ್ಯಮವನ್ನಾರಂಭಿಸಿದರು—ತಮ್ಮ ಮನೆಯ ಅಗತ್ಯದ ಪೂರೈಕೆಗಾಗಿ ಮಾತ್ರವಲ್ಲ, ಇತರರ ಬೇಡಿಕೆ ಪೂರೈಸಲೂ ಕೂಡ. ಚಿಕ್ಕದಾದ—ಆದರೆ ಬೆಳೆಯುತ್ತಿದ್ದ—ಪೇಟೆಗೆ ಸರಬರಾಯಿ ಮಾಡಲು ಅವರು ವ್ಯಾಪಾರದಲ್ಲಿ ತೊಡಗಿದ್ದರು.

ಇದಕ್ಕೆ ಅಷ್ಟು ಬಂಡವಾಳವೂ ಬೇಕಿರಲಿಲ್ಲ. ಕಸಬುದಾರ ವಾಸಿಸುತ್ತಿದ್ದ ಮನೆಯ ಒಂದು ಕೋಣೆಯೇ ಕಾರಖಾನೆ. ಅವನಿಗೆ ಬೇಕಾಗಿದ್ದದ್ದು ಇಷ್ಟೇ: ತನ್ನ ಕಸಬಿನಲ್ಲಿ ಕೌಶಲ, ತಯಾರಿಸಿದ ಪದಾರ್ಥಗಳನ್ನು ಕೊಳ್ಳಲು ಗ್ರಾಹಕರು. ಅವನು ಒಳ್ಳೆಯ ಕೆಲಸಗಾರನಾಗಿದ್ದು, ಪಟ್ಟಣಿಗರಲ್ಲಿ ಪ್ರಸಿದ್ಧಿ ಗಳಿಸಿದ್ದೇ ಆದರೆ, ತತ್ಫಲವಾಗಿ ಅವನ ಪದಾರ್ಥಕ್ಕೆ

ಬೇಡಿಕೆ ಹೆಚ್ಚಿದರೆ, ಆಗ ಒಬ್ಬಿಬ್ಬರು ಸಹಾಯಕರನ್ನು ತೆಗೆದುಕೊಂಡು ಉತ್ಪಾದನೆಯನ್ನು ಹೆಚ್ಚಿಸಬಹುದಿತ್ತು.

ಅವನಿಗೆ ದೊರಕುತ್ತಿದ್ದ ಸಹಾಯಕರು ಎರಡು ಬಗೆ: ಅಭ್ಯಾಸಿಗಳು ಹಾಗೂ ಕಾರೇಗಾರರು. ನುರಿತ ಕಸಬುದಾರನ ಜತೆಯಲ್ಲಿ ವಾಸಿಸುತ್ತಾ ಅವನೊಡನೆ ಕೆಲಸ ಮಾಡುತ್ತಿದ್ದ ಎಳೆಯರು ಅಭ್ಯಾಸಿಗಳು. ಕಲಿಯಬೇಕಾದ ಕಸಬಿಗೆ ಅನುಗುಣವಾಗಿ ಅಭ್ಯಾಸಾವಧಿ. ಈ ಅವಧಿ ಒಂದೇ ವರ್ಷದಷ್ಟು ಕಿರಿದಾಗಿರಬಹುದು ; ಅಥವಾ ಹನ್ನೆರಡು ವರ್ಷಗಳಷ್ಟು ಲಂಬಿತವಾಗಿರಬಹುದು. ಅಭ್ಯಾಸಿಯಾಗಿ ಕಳೆಯಬೇಕಾದ ಕಾಲಾವಧಿ ಸಾಮಾನ್ಯವಾಗಿ ಎರಡರಿಂದ ಏಳು ವರ್ಷಗಳ ವರೆಗೆ. ಅಭ್ಯಾಸಿಯಾಗುವುದೂ ಸಾಮಾನ್ಯವೇನಲ್ಲ. ಕಲಿಕೆಗೆ ಸೇರಲಿದ್ದ ಮಗುವಿಗೂ ಅವನ ತಂದೆತಾಯಿಯರಿಗೂ ಅವನನ್ನು ತೆಗೆದುಕೊಳ್ಳಲಿದ್ದ ನುರಿತ ಕಸಬುದಾರನಿಗೂ ನಡುವೆ ಒಂದು ಒಪ್ಪಂದ ಏರ್ಪಡಬೇಕಿತ್ತು. ಆಹಾರ ಅಥವಾ ಹಣದ ರೂಪದಲ್ಲಿ ಸ್ವಲ್ಪ ಶುಲ್ಕ ಕೊಡುವುದಲ್ಲದೆ, ಕಷ್ಟಪಟ್ಟು ದುಡಿಯುವುದಾಗಿಯೂ ವಿಧೇಯತೆಯಿಂದಿರುವುದಾಗಿಯೂ ಇವರು ಒಪ್ಪಬೇಕು. ಇದಕ್ಕೆ ಪ್ರತಿಯಾಗಿ ಅಭ್ಯಾಸಿಗೆ ಕಸಬಿನ ಮರ್ಮ ಬೋಧಿಸುವುದಾಗಿಯೂ, ಈ ಒಪ್ಪಂದದ ಅವಧಿಯಲ್ಲಿ ತನ್ನೊಡನೆ ಅಭ್ಯಾಸಿಗೂ ಊಟ ವಸತಿ ಕಲ್ಪಿಸುವುದಾಗಿಯೂ ಕಸಬುದಾರ ಯಜಮಾನ ಒಪ್ಪಬೇಕು. ಇವು ಷರತ್ತುಗಳು.

ಅಭ್ಯಾಸದ ಅವಧಿ ಪೂರೈಸಿದೊಡನೆಯೇ ಅಭ್ಯಾಸಿ ತಾನೇ ಒಬ್ಬ ಯಜಮಾನನಾಗಿ ಪ್ರತ್ಯೇಕ ಕಾರ್ಯಾಲಯ ತೆರೆಯಬಹುದು. ಅವನು ಪರೀಕ್ಷೆಯಲ್ಲಿ ಉತ್ತೀರ್ಣನಾಗುವುದು ಅಗತ್ಯ. ತನ್ನದೇ ಆದ ವ್ಯಾಪಾರ ಆರಂಭಿಸಲು ಸಾಕಷ್ಟು ಹಣವಿಲ್ಲದಿದ್ದರೆ ಆಗ ಅವನು ಕಾರೇಗಾರನಾಗಬಹುದಿತ್ತು. ಕೂಲಿಯ ಮೇಲೆ ಅದೇ ಯಜಮಾನನ ಹತ್ತಿರ ಕೆಲಸ ಮಾಡಬಹುದಿತ್ತು. ಅಥವಾ ಬೇರೊಬ್ಬ ಯಜಮಾನನ ಬಳಿ ಕೆಲಸ ಹಿಡಿಯ ಬಹುದಿತ್ತು. ಕಷ್ಟಪಟ್ಟು ದುಡಿದು, ಜತನದಿಂದ ಹಣ ಉಳಿಸಿದ್ದೇ ಆದರೆ, ಅವನು ಕೆಲವೇ ವರ್ಷಗಳಲ್ಲಿ ತನ್ನದೇ ಆದ ಅಂಗಡಿ ತೆರೆಯಬಹುದಿತ್ತು. ಉದ್ಯಮ ಆರಂಭಿಸಲು, ಉತ್ಪಾದನೆ ಮಾಡಲು, ಆ ಕಾಲದಲ್ಲಿ ಹೆಚ್ಚು ಬಂಡವಾಳ ಬೇಕಿರಲಿಲ್ಲ. ಮಧ್ಯಯುಗದ ಮಾದರಿಯ ಕೈಗಾರಿಕೆ ಸಂಸ್ಥೆಯೆಂದರೆ ಈ ಸಣ್ಣ ಕಾರಖಾನೆ. ಇದರಲ್ಲಿ ಯಜಮಾನ ತನ್ನ ಸಹಾಯಕ್ಕಾಗಿ ಕೆಲವರನ್ನು ನೇಮಿಸಿಕೊಳ್ಳುತ್ತಿದ್ದ. ಅವರೊಡನೆ ತಾನೂ ದುಡಿಯುತ್ತಿದ್ದ. ಈ ಕಸಬುದಾರ ಧಣಿ ತಾನು ಮಾರಲಿದ್ದ ವಸ್ತುಗಳನ್ನು ಉತ್ಪಾದಿಸುತ್ತಿದ್ದದ್ದೇ ಅಲ್ಲದೆ, ಸಾಮಾನ್ಯವಾಗಿ ಅವನ್ನು ತಾನೇ ಮಾರುತ್ತಲೂ ಇದ್ದ. ಕಾರಖಾನೆಯ ಒಂದು ಗೋಡೆಯಲ್ಲಿ, ನಗರದ ಬೀದಿಯ ಕಡೆಗೆ, ಸಾಮಾನ್ಯವಾಗಿ ಒಂದು ಕಿಟಕಿ. ಇಲ್ಲಿ ಮಾರಾಟಕ್ಕಿದ್ದ ವಸ್ತುಗಳ ಪ್ರದರ್ಶನ. ಅಲ್ಲೇ, ಅಂಗಡಿಯ ಮೇಜಿನ ಮೇಲೆ, ಮಾರಾಟವೂ ನಡೆಯುವುದು.

ಕೈಗಾರಿಕಾ ಸಂಘಟನೆಯಲ್ಲಿ ಈ ಹೊಸ ಅವಸ್ಥೆಯನ್ನು ಅರಿತುಕೊಳ್ಳುವುದು ಆವಶ್ಯಕ. ವ್ಯಾಪಾರದ ದೃಷ್ಟಿಯಿಂದ, ಮಾರಾಟಕ್ಕಾಗಿ, ಒಂದೆ ಪದಾರ್ಥದ ಉತ್ಪಾದನೆಯಾಗು

ತ್ತಿರಲಿಲ್ಲ. ಗೃಹಕೃತ್ಯದ ಅಗತ್ಯಗಳ ಪೂರೈಕೆಯೇ ಆಗ ಉತ್ಪಾದನೆಯ ಗುರಿ. ಈಗ ಲಾದರೋ, ಹೊರಗಣ ಪೇಟೆಗೆ ಮಾರಾಟ ಮಾಡುವ ಉದ್ದೇಶದಿಂದಲೇ ಪದಾರ್ಥೋ ತ್ಪಾದನೆಯಾಗುತ್ತಿತ್ತು. ಉತ್ಪಾದನೆಗೆ ಬೇಕಾದ ಕಚ್ಚಾ ಸಾಮಗ್ರಿ ಹಾಗೂ ಉಪಕರಣ ಗಳನ್ನು ಹೊಂದಿದ್ದ ಕಸಬುದಾರರಿಂದ ಪದಾರ್ಥೋತ್ಪಾದನೆಯಾಗುತ್ತಿತ್ತು. ಈ ಪರಿಷ್ಕೃತ ಪದಾರ್ಥದ ಮಾರಾಟ ಮಾಡುವವರೂ ಅವರೇ. (ಇಂದು ಕೈಗಾರಿಕೆಯಲ್ಲಿ ತೊಡಗಿಸಿದ ಕಚ್ಚಾಸಾಮಗ್ರಿಯಾಗಲಿ ಉಪಕರಣವಾಗಲಿ ಕೆಲಸಗಾರರದಲ್ಲ. ಅವರು ಮಾರಾಟ ಮಾಡುವುದು ಪರಿಷ್ಕೃತ ಪದಾರ್ಥವನ್ನಲ್ಲ—ಸಿದ್ಧವಸ್ತುವನ್ನಲ್ಲ, ದುಡಿಮೆಯ ಶಕ್ತಿಯನ್ನು.)

ಈ ಕಸಬುದಾರರು ತಮ್ಮ ಪೂರ್ವಿಕರಾದ ವರ್ತಕರ ಮಾರ್ಗವನ್ನೇ ಅನುಸರಿಸಿದರು : ತಮ್ಮವೇ ಆದ ವೃತ್ತಿಸಂಘಗಳನ್ನು ನಿರ್ಮಿಸಿಕೊಂಡರು. ಒಂದು ಪಟ್ಟಣದಲ್ಲಿ ಒಂದೇ ಕಸಬಿನಲ್ಲಿ ನಿರತರಾಗಿದ್ದವರೆಲ್ಲ ವೃತ್ತಿಸಂಘವೆಂಬ ಸಂಘ ಕಟ್ಟಿಕೊಂಡರು. ಬಂಡವಾಳ ಶ್ರಮಗಳ ನಡುವೆ ಪಾಲುಗಾರಿಕೆಯ ಬಗ್ಗೆ ಈ ಕಾಲದಲ್ಲಿ ಒಬ್ಬ ರಾಜಕೀಯ ಧುರೀಣನೋ ಕೈಗಾರಿಕೋದ್ಯಮಿಯೋ ಭಾಷಣ ಮಾಡಿದನೆಂದರೆ, ಆ ಸಭೆಯಲ್ಲಿರಬಹುದಾದ ವೃದ್ಧ ಅನುಭವಿ ಕಾರ್ಮಿಕ ತಲೆಯಲ್ಲಾಡಿಸುವನು ; "ಹೀಗಾದದು," ಎನ್ನುವನು. ಅವನು ಇದನ್ನು ನಂಬಲಾರ. ವೇತನ ಕೊಡುವ ಧಣಿಗೂ, ಪಡೆಯುವ ಶ್ರಮಜೀವಿಗೂ ನಡುವೆ ದೊಡ್ಡ ಅಂತರವುಂಟೆಂಬುದನ್ನು ಅವನು ಅರಿತಿದ್ದಾನೆ. ಅವರಿಬ್ಬರ ಹಿತಗಳು ಭಿನ್ನವೆಂಬು ದನ್ನು ಅವನು ಬಲ್ಲ. ಅವರಿಬ್ಬರ ಪಾಲುದಾರಿಕೆಯ ಬಗ್ಗೆ ಲೋಕದಲ್ಲಿ ಎಷ್ಟೇ ಮಾತಾಡಲಿ, ಕಟುಸತ್ಯ ಪರಿಸ್ಥಿತಿ ಇದರಿಂದ ಬದಲಾಗಲಾರದು—ಎಂಬುದನ್ನು ಅವನು ಬಲ್ಲ. ಈ ಕಾರಣದಿಂದಲೇ ಕಂಪೆನಿ ಸಂಘಗಳ ಬಗ್ಗೆ ಅವನಿಗೆ ಸಂಶಯ. ಅವನಿಗೆ ಸಾಧ್ಯವಾಗುವು ದಾದರೆ, ಯಜಮಾನನ ಪಾತ್ರ ಹಿರಿದಾಗಿರುವ ಸಂಘದಲ್ಲಿ ಸದಸ್ಯನಾಗಿರಲು ಅವನು ಇಚ್ಛಿಸುವುದಿಲ್ಲ.

ಆದರೆ ಮಧ್ಯಯುಗದ ವೃತ್ತಿಸಂಘಗಳು ಬೇರೆ ತೆರನಾಗಿದ್ದುವು. ಒಂದೇ ರೀತಿಯ ಕೆಲಸ ಮಾಡುವ ಎಲ್ಲರೂ—ಅಭ್ಯಾಸಿಗಳು, ಕಾರೇಗಾರರು, ಕಸಬುದಾರ ಧಣಿ, ಎಲ್ಲರೂ —ಒಂದೇ ಸಂಘದ ಸದಸ್ಯರು. ಯಜಮಾನರು ಸಹಾಯಕರಿಬ್ಬರೂ ಒಂದೇ ಸಂಸ್ಥೆಗೆ ಸೇರಿ, ಒಂದೇ ಉದ್ದೇಶಗಳಿಗಾಗಿ ಹೋರಾಡಬಹುದಿತ್ತು. ಕೆಲಸಗಾರನಿಗೂ ಧಣಿಗೂ ನಡುವೆ ಹೆಚ್ಚು ದೂರವಿಲ್ಲದಿದ್ದುದರಿಂದ ಇದು ಸಾಧ್ಯವಾಗಿತ್ತು. ಕಾರೇಗಾರ ಧಣಿಯೊಂದಿಗೆ ವಾಸಿಸುತ್ತಿದ್ದ, ಅವನು ತಿನ್ನುವುದನ್ನೇ ತಿನ್ನುತ್ತಿದ್ದ, ಅದೇ ರೀತಿಯ ಶಿಕ್ಷಣ ಪಡೆದಿದ್ದ, ಅವನಂತೆಯೇ ನಂಬಿಕೆ ಹೊಂದಿದ್ದ, ಅವನಂತೆಯೇ ಭಾವನೆ ಹೊಂದಿದ್ದ. ಅಭ್ಯಾಸಿಯೇ ಆಗಲಿ, ಕಾರೇಗಾರನೇ ಆಗಲಿ ಮುಂದೆ ಸ್ವತಂತ್ರವಾಗಿ ಧಣಿಯಾಗುವುದು ಸಾಮಾನ್ಯ ವಾಗಿತ್ತು. ಈ ಪರಿಸ್ಥಿತಿ ಇರುವವರೆಗೂ ಧಣಿಯೂ ನೌಕರನೂ ಒಂದೇ ವೃತ್ತಿ ಸಂಘದ ಸದಸ್ಯರಾಗಬಹುದಿತ್ತು. ಅನಂತರ ದುರಾಚಾರಗಳು ತಲೆಹಾಕಿ ಈ ಪರಿಸ್ಥಿತಿ ಬದಲಾದಾಗ, ಕಾರೇಗಾರರು ತಮ್ಮವೇ ಆದ ಸಂಘಗಳನ್ನು ರಚಿಸಿಕೊಂಡರು. ಆದರೆ ಮೊದ ಮೊದಲು ಹೀಗಿರಲಿಲ್ಲ. ಸರಂಜಾಮು ಉತ್ಪಾದಕರ ಸಂಘದಲ್ಲಿ, ಕತ್ತಿ ಹೊಳಪುಗಾರರ ಸಂಘದಲ್ಲಿ,

ಹೀಗೆ ಆಯಾ ವೃತ್ತಿ ಸಂಘದಲ್ಲಿ ಆಯಾ ವೃತ್ತಿಯಲ್ಲಿ ನಿರತರಾದವರೆಲ್ಲ ಇದ್ದರು. ಪ್ರತಿ ಅಭ್ಯಾಸಿಗೂ ಇತರ ಅಭ್ಯಾಸಿಗಳಿಗೆ ಇದ್ದ ಎಲ್ಲ ಹಕ್ಕುಗಳೂ, ಪ್ರತಿ ಕಾರೇಗಾರನಿಗೂ ಇತರ ಕಾರೇಗಾರರಿಗೆ ಇದ್ದ ಎಲ್ಲ ಹಕ್ಕುಗಳೂ, ಪ್ರತಿ ಕಸಬುದಾರ ಧಣಿಗೂ ಇತರ ಕಸಬುದಾರ ಧಣಿಗಳ ಎಲ್ಲ ಹಕ್ಕುಗಳೂ ಇದ್ದುವು. ವೃತ್ತಿ ಸಂಘಗಳಲ್ಲಿ ನಾನಾ ಶ್ರೇಣಿಗಳಿದ್ದುವು. ಆದರೆ ಈ ಶ್ರೇಣಿಗಳಲ್ಲಿ ಸಮಾನತೆಯಿತ್ತು. ಕೆಳಮಟ್ಟದ ಅಭ್ಯಾಸಿಯಿಂದ ಮೇಲಿಣ ಕಸಬುದಾರ ಧಣಿಯವರೆಗೆ ನಾನಾ ಅಂತಸ್ತುಗಳನ್ನು ಏರಿ ಹೋಗುವುದು ಹಲವು ಕೆಲಸಗಾರರಿಗೆ ಅಸಾಧ್ಯವಿರಲಿಲ್ಲ.

ಟಾಯರ್ ಎಂಬ ಹೆಸರು ಕೇಳಿದ್ದೀರಾ ನೀವು ? ಅದು ಈಗ ಬಳಕೆಯಲ್ಲಿಲ್ಲ. ಏಕೆಂದರೆ ಆ ವೃತ್ತಿಯೇ ಈಗ ಇಲ್ಲ. ಬಿಳಿಯ ಚರ್ಮ ಹದ ಮಾಡುವವನು—ಎಂದು ಈ ಪದದ ಅರ್ಥ. ಲಂಡನ್ನಿನಲ್ಲಿ ಹದಿನಾಲ್ಕನೆಯ ಶತಮಾನದಲ್ಲಿ ಇದು ಒಂದು ದೊಡ್ಡ ವ್ಯಾಪಾರವಾಗಿತ್ತು. ಟಾಯರರ ಸಂಘವೂ ಒಂದು ಸ್ಥಾಪಿತವಾಗಿತ್ತು. ಈ ಸಂಘದ ಕಟ್ಟಳೆಗಳಿಂದ ವೃತ್ತಿಸಂಘಗಳನ್ನು ಕುರಿತ ಕೆಲವು ಅಂಶಗಳು ವ್ಯಕ್ತವಾಗುತ್ತವೆ. ಇವು ರಚಿತವಾದದ್ದು ೧೩೪೬ರಲ್ಲಿ :

“(೧) .... ಈ ವೃತ್ತಿಯಲ್ಲಿರುವ ಯಾರಾದರೂ, ಮುಪ್ಪಿನ ದೆಸೆಯಿಂದಲೋ, ದೌರ್ಬಲ್ಯದ ದೆಸೆಯಿಂದಲೋ, ದುರದೃಷ್ಟವಶಾತ್ ದರಿದ್ರನಾದರೆ .... ಅಂಥವನು ಗೌರವಾರ್ಹ ವ್ಯಕ್ತಿಯಾಗಿದ್ದರೆ, ಅವನಿಗೆ ಉದರಂಭರಣಕ್ಕಾಗಿ ವಾರಕ್ಕೆ ಏಳು ಪೆನ್ನಿ ಸಲ್ಲತಕ್ಕದ್ದು.

“(೨) ಅಭ್ಯಾಸಿಯಾಗಿಲ್ಲದ ಅಥವಾ ಈ ನಗರದ ಪೌರತ್ವ ಪಡೆಯದ ಅನ್ಯನಾರೂ ಈ ವೃತ್ತಿಯಲ್ಲಿ ದುಡಿಯಕೂಡದು.

“(೩) ಇನ್ನೊಬ್ಬರಲ್ಲಿ ಕೆಲಸ ಮಾಡುತ್ತಿರುವ ಯಾರನ್ನೇ ಆಗಲಿ, ಈ ಕೆಲಸದ ಅವಧಿಯಲ್ಲಿ, ಅವನ ಧಣಿಯ ಒಪ್ಪಿಗೆಯಿಲ್ಲದೆ ಬೇರೊಬ್ಬರು ನೇಮಿಸಿಕೊಳ್ಳಕೂಡದು. ಈ ವೃತ್ತಿಯಲ್ಲಿ ನಿರತನಾಗಿರುವ ಯಾರೇ ಆಗಲಿ, ತನ್ನ ಮನೆಯಲ್ಲಿ ಈ ಕೆಲಸವನ್ನು ಮುಗಿಸಲಾರದೆ ಹೋದರೆ, ಈ ಕೆಲಸ ಕಳೆದು ಹೋಗದಂತೆ ಈ ವೃತ್ತಿಯಲ್ಲಿರುವ ಇತರರು ಅವನಿಗೆ ನೆರವು ನೀಡತಕ್ಕದ್ದು.

“(೪) ಯಾವ ಕಾರ್ಯನಿರತನೇ ಆಗಲಿ, ತನ್ನ ಧಣಿಯ ಬಗ್ಗೆ ಉಚಿತವಾದ ರೀತಿಯಲ್ಲಿ ವರ್ತಿಸದೆ ಇದ್ದರೆ, ಅಥವಾ ಅವನನ್ನು ವಿರೋಧಿಸಿದರೆ, ಪೌರಸಭಾಧ್ಯಕ್ಷ ಹಾಗೂ ಪುರಪ್ರಮುಖರ ಸಮ್ಮುಖದಲ್ಲಿ ಇವನು ಕ್ಷಮಾಪಣೆ ಕೇಳಿಕೊಳ್ಳುವ ವರೆಗೂ ಇವನನ್ನು ಈ ವೃತ್ತಿಯ ಇತರರಾರೂ ನೇಮಿಸಿಕೊಳ್ಳಕೂಡದು.

“(೫) ಅಲ್ಲದೆ, ಈ ವೃತ್ತಿಯು ಪ್ರತಿ ವರ್ಷಕ್ಕೊಮ್ಮೆ ಇಬ್ಬರನ್ನು ಮೇಲ್ವಿಚಾರಕರಾಗಿ ಆರಿಸತಕ್ಕದ್ದು. ಇವರು ಕೆಲಸದ ಮೇಲ್ವಿಚಾರಣೆ ನಡಸುವುದೇ ಅಲ್ಲದೆ, ಆ ವರ್ಷ ವೃತ್ತಿಗೆ ಸಂಬಂಧಿಸಿದ ಎಲ್ಲ ವಿಚಾರಗಳನ್ನೂ ನಿರೀಕ್ಷಿಸತಕ್ಕದ್ದು. ಪೌರಸಭಾಧ್ಯಕ್ಷನಿಗೂ ಪುರಪ್ರಮುಖರಿಗೂ ಇವುಗಳ ಪರಿಚಯ ಮಾಡಿಕೊಡತಕ್ಕದ್ದು. ಈ ವೃತ್ತಿಗೆ ಸಂಬಂಧಿಸಿದ

ಎಲ್ಲ ಕುಂದುಗಳನ್ನೂ ಶ್ರದ್ಧೆಯಿಂದ ಪರಿಶೀಲಿಸಿ, ವಿಚಾರಿಸಿ, ಸ್ನೇಹಿತರು ಶತ್ರುಗಳೆಂಬ ಪಕ್ಷಪಾತವಿಲ್ಲದೆ, ವಿಧೇಯತೆಯಿಂದ ಪೌರಸಭಾಧ್ಯಕ್ಷನಿಗೂ ಪುರಪ್ರಮುಖರಿಗೂ ವರದಿ ಮಾಡತಕ್ಕದ್ದು.

"ಅಲ್ಲದೆ, ಸುಳ್ಳು ಹೇಳಿ ವಂಚನೆಯಿಂದ ತಯಾರಿಸಿದ ಪದಾರ್ಥಗಳನ್ನು ವಶಪಡಿಸಿ ಕೊಳ್ಳತಕ್ಕದ್ದು.

"(೬) ಅಭ್ಯಾಸಿಯಾಗಿ ಕೆಲಸ ಮಾಡಿಲ್ಲದ, ಅಭ್ಯಾಸದ ಅವಧಿ ಪೂರೈಸದ ಯಾರೂ ಈ ವೃತ್ತಿಯನ್ನು ಸ್ವತಂತ್ರವಾಗಿ ನಡಸಬಾರದೆಂದೂ ಕಟ್ಟುಪಾಡು ಮಾಡಿದೆ."[1]

ಚರಿತ್ರಕಾರರು ಇಂಥ ಸಾವಿರಾರು ದಾಖಲೆಗಳ ಅವಲೋಕನ ಮಾಡಿದ್ದಾರೆ. ನೂರಾರು ವರ್ಷಗಳ ಅನಂತರ ಈ ವೃತ್ತಿಸಂಘಗಳನ್ನು ಕುರಿತ ಸ್ಪಷ್ಟ ಚಿತ್ರವನ್ನು ರಚಿಸಲು ಸಮರ್ಥ ರಾಗಿದ್ದಾರೆ.

ಮೇಲೆ ಉಲ್ಲೇಖಿಸಿದ ಕಟ್ಟಳೆಗಳಿಂದ ಹಲವು ವಿಚಾರಗಳು ವ್ಯಕ್ತವಾಗುತ್ತದೆ. ಈ ವೃತ್ತಿಸಂಘಗಳು ತಮ್ಮ ಸದಸ್ಯರ ಹಿತವನ್ನು ಗಮನದಲ್ಲಿಟ್ಟುಕೊಂಡಿದ್ದುವೆಂಬುದು ಮೊದ ಲನೆಯ ನಿಬಂಧನೆಯಿಂದ ವ್ಯಕ್ತಪಡುತ್ತದೆ. ಪತಿತರಾದ ಸದಸ್ಯರ ರಕ್ಷಣೆಯ ಭಾರ ವಹಿಸಿದ ಒಂದು ರೀತಿಯ ಸೋದರ ಸಂಘವಾಗಿತ್ತು ಇದು. ಕಷ್ಟಕಾಲದಲ್ಲಿ ಸದಸ್ಯರು ಪರಸ್ಪರ ಸಹಾಯ ನೀಡುವುದು ಸಾಧ್ಯವಾಗುವಂತೆ, ಬಹುಶಃ ಈ ಕಾರಣದಿಂದಲೇ, ಹಲವು ಸಂಘಗಳು ಸ್ಥಾಪಿಸಲ್ಪಟ್ಟುವು. ತತ್ಸಂಬಂಧವಾಗಿ ಈ ಒಂದು ಸ್ವಾರಸ್ಯಕರ ಅಂಶ ವನ್ನು ನೋಡಿ: ಇಂದು ವರ್ತಮಾನ ಪತ್ರಿಕೆಯಲ್ಲಿ ನಾವು ಓದುವ ನಿರುದ್ಯೋಗ ವಿಮೆ, ವೃದ್ಧಾಪ್ಯದ ವಿಶ್ರಾಂತಿ ವೇತನ ಇವನ್ನು ಆರುನೂರು ವರ್ಷಗಳ ಹಿಂದೆ ಅಂದಿನ ವೃತ್ತಿ ಸಂಘಗಳು ತಮ್ಮ ಸದಸ್ಯರಿಗೆ ನೀಡಿದ್ದುವು!

ಸಾಂಘಿಕರ ನಡುವೆ ಸ್ಪರ್ಧೆಯಿರಬಾರದು, ಸೌಹಾರ್ದವಿರಬೇಕು—ಎಂಬ ಉದ್ದೇಶ ದಿಂದ ಈ ವೃತ್ತಿಸಂಘಗಳನ್ನು ನಿಯೋಜಿಸಿತ್ತೆಂಬುದು ಮೂರನೆಯ ನಿಬಂಧನೆಯಿಂದ ವ್ಯಕ್ತಪಡುತ್ತದೆ. ಒಬ್ಬ ಚರ್ಮ ಹದಗಾರ ತಾನು ಒಪ್ಪಿಕೊಂಡ ಕೆಲಸವನ್ನು ಒಪ್ಪಿಕೊಂಡ ಅವಧಿಯಲ್ಲಿ ಮುಗಿಸಲಾಗದಿದ್ದರೆ ಅವನ ವ್ಯಾಪಾರ ಕಳೆದುಹೋಗದಂತೆ ಇತರರು ಅವ ನಿಗೆ ಕೆಲಸದಲ್ಲಿ ನೆರವಾಗಬೇಕೆಂಬ ನಿಯಮವನ್ನು ಮುಖ್ಯವಾಗಿ ನೋಡಿ. ಸಂಘದ ಸದಸ್ಯರ ವ್ಯಾಪಾರ ಹಿತಗಳು ಅವರ ಗಮನವನ್ನು ಸೆಳೆದಿದ್ದ ಮುಖ್ಯಾಂಶಗಳಲ್ಲೊಂದು.

ಕೈಗಾರಿಕೆಯನ್ನು ಸಂಘ ಸದಸ್ಯರು ತಮ್ಮ ಕೈಯಲ್ಲೇ ಇಟ್ಟುಕೊಳ್ಳುವ ಉದ್ದೇಶದಿಂದ ಅವರು ಒಂದಾಗಿ ಕಲೆತಿದ್ದರೆಂಬುದು ಸ್ಪಷ್ಟ. ಎರಡನೆಯ ನಿಬಂಧನೆಯನ್ನು ಮತ್ತೆ ಓದಿ. ಇದು ಮುಖ್ಯ. ಏಕೆಂದರೆ ಹಿಂದೆ ಇದ್ದ ವಣಿಕ ಸಂಘಗಳಂತೆ ವೃತ್ತಿಸಂಘಗಳೂ ಕೂಡ ಪಟ್ಟಣದಲ್ಲಿ ತಮ್ಮ ಕೆಲಸದ ಸಂಪೂರ್ಣ ಸ್ವಾಮ್ಯವನ್ನು ಬಯಸಿದರು. ಅದನ್ನು ಪಡೆದೂ ಪಡೆದರು. ನಗರದಲ್ಲಿ ಯಾವ ಕಸಬನ್ನವಲಂಬಿಸಬೇಕಾದರೂ ನೀವು ವೃತ್ತಿಸಂಘದ ಸದಸ್ಯ ರಾಗಿರುವುದು ಅಗತ್ಯವಾಗಿತ್ತು. ಸಂಘದ ಅಪ್ಪಣೆಯಿಲ್ಲದೆ, ಸಂಘದ ಸದಸ್ಯರಲ್ಲದವರು

---

[1] Bland, Brown, and Tawney, *op. cit.*, p. 136.

ಯಾರೂ ಆ ವೃತ್ತಿಯನ್ನವಲಂಬಿಸುವುದು ಸಾಧ್ಯವಿರಲಿಲ್ಲ. ಬಾಸ್ಲೆ ಮತ್ತು ಫ್ರಾಂಕ್‌ಫರ್ಟ್ ಎಂಬ ಪಟ್ಟಣಗಳಲ್ಲಿ ಭಿಕ್ಷುಕರೂ ತಮ್ಮ ಸಂಘ ಹೊಂದಿದ್ದರು! ಈ ನಗರಗಳಲ್ಲಿ ಹೊರಗಿನವರಾರೂ ವರ್ಷಕ್ಕೆ ಎರಡು ದಿನ ವಿನಾ ಉಳಿದ ದಿನಗಳಲ್ಲಿ ಭಿಕ್ಷೆ ಎತ್ತಲು ಈ ಸಂಘಗಳು ಅವಕಾಶ ಕೊಡುತ್ತಿರಲಿಲ್ಲ! ತಮ್ಮ ಏಕಸ್ವಾಮ್ಯದ ನಡುವೆ ಯಾರು ಬಂದರೂ ಅವು ಸಹಿಸುತ್ತಿರಲಿಲ್ಲ. ಈ ಏಕಸ್ವಾಮ್ಯ ಹೊಂದಿದ್ದರಿಂದ ಅವರಿಗೆ ಅನುಕೂಲ. ಇದನ್ನು ಉಳಿಸಿಕೊಳ್ಳಲು ಅವು ಹೋರಾಟ ನಡಸಿದುವು. ಬಹು ಬಲಿಷ್ಠವಾಗಿದ್ದ ಚರ್ಚೂ ಕೂಡ ವೃತ್ತಿಸಂಘದ ನಿಯಮಗಳಿಗೆ ಬದ್ಧವಾಗಿರಲೇ ಬೇಕಿತ್ತು. ೧೪೬೮ ರಲ್ಲಿ ಜರ್ಮನ್ ನಗರವೊಂದರಲ್ಲಿದ್ದ ಸೆಂಟ್ ಜೊಹಾನ್ ಚರ್ಚಿನ ತಲೆಯಾಳುಗಳು ತಮ್ಮ ಹೊಲದಲ್ಲಿ ಬೆಳೆದ ಗೋಧಿ ರೈಗಳಿಂದ ರೊಟ್ಟಿ ಮಾಡಿಸಬೇಕೆಂದು ಬಯಸಿದರು. ಇದಕ್ಕೆ ಅವರು ರೊಟ್ಟಿಗಾರರ ಸಂಘದ ಸಮ್ಮತಿ ಪಡೆಯಬೇಕಾಯಿತು. ಅದು ಉದಾರ ಚಿತ್ತದಿಂದ ಒಪ್ಪಿಗೆ ನೀಡಿತು—ಪ್ರತಿಫಲವನ್ನು ಪಡೆದು! "ಚರ್ಚಿನ ಅಧಿಕಾರಿಗಳಿಗಾಗಿ ಅವರ ಬಾರ್ಲಿ, ಗೋಧಿ, ರೈ ಧಾನ್ಯಗಳಿಂದ ರೊಟ್ಟಿ ಸುಡಲು ಅವರು ಸಂಘದಿಂದ ಒಬ್ಬ ರೊಟ್ಟಿಗಾರನನ್ನು ಪಡೆದು ಈ ಕೆಲಸಕ್ಕೆ ನೇಮಿಸಕೊಳ್ಳಬಹುದೆಂದು ರೊಟ್ಟಿಗಾರರ ಸಂಘದ ಯಜಮಾನ ಸದಸ್ಯರೂ ಎಲ್ಲ ಸದಸ್ಯರೂ ಒಪ್ಪಿಗೆ ನೀಡಿದ್ದಾರೆ. [ಇನ್ನು ಮೇಲೆ ಸಂಘದ ಸೋದರ ಸದಸ್ಯರು ಚರ್ಚಿಗೆ ರೊಟ್ಟಿ ಮಾರಲಾರರಾದುದರಿಂದ ಅವರಿಗೆ ಆಗುವ ನಷ್ಟ ತುಂಬಲು ಚರ್ಚು] ೧೬ ಮಾರ್ಕು ಹಣವನ್ನು ಒಪ್ಪಿಸಿದೆ."[1]

ವೃತ್ತಿಸಂಘದ ಸದಸ್ಯರು ತಮ್ಮ ವೃತ್ತಿಯ ಸಂಪೂರ್ಣಸ್ವಾಮ್ಯವನ್ನು ತಮ್ಮಲ್ಲೇ ಉಳಿಸಿಕೊಳ್ಳಲು ಹೋರಾಟ ನಡಸಿದರು. ತಮ್ಮ ನಗರ ಪೇಟೆಯಲ್ಲಿ ಅನ್ಯರಾರೂ ತಲೆ ಹಾಕದಂತೆ ಮಾಡಲು ಯತ್ನಿಸಿದರು. ಒಂದು ನಗರಕ್ಕೂ ಇನ್ನೊಂದಕ್ಕೂ ಭೀಕರ ಕದನಗಳು ನಡೆಯುತ್ತಿದ್ದುವೆಂಬುದನ್ನು ನೀವು ಮಧ್ಯ ಯುಗದ ಚರಿತ್ರೆಯಲ್ಲಿ ಓದಬಹುದು. ವೃತ್ತಿಸಂಘದ ಸದಸ್ಯರು ಇತರರಿಂದ ಸ್ಪರ್ಧೆಯನ್ನು ಸಹಿಸದಿರುತ್ತಿದ್ದುದೇ ಇಂಥ ಕದನಗಳಿಗೆ ಹಲವು ವೇಳೆ ಕಾರಣವಾಗಿತ್ತು.

ಪದಾರ್ಥ ತಯಾರಿಕೆಯ ನವೀನ ಅಥವಾ ಉತ್ತಮ ವಿಧಾನವೊಂದನ್ನು ಯಾರಾದರೂ ಕಂಡು ಹಿಡಿದರೆ, ಅವರು ಈ ವಿಧಾನದ ಸ್ವಾಮ್ಯದ ಸನ್ನದು ಪಡೆಯುವುದು ಈಗಿನ ಕಾಲದಲ್ಲಿ ರೂಢಿ. ಆಗ ಈ ವಿಧಾನವನ್ನು ಇತರರು ಯಾರೂ ಬಳಸುವಂತಿಲ್ಲ. ಆದರೆ ಮಧ್ಯ ಯುಗದಲ್ಲಿ ಸ್ವಾಮ್ಯದ ಸನ್ನದಿನ ಶಾಸನವಿರಲಿಲ್ಲ. ಆದ್ದರಿಂದ ವೃತ್ತಿಸಂಘದ ಸದಸ್ಯರು ತಮ್ಮ ಏಕಸ್ವಾಮ್ಯವನ್ನುಳಿಸಿಕೊಳ್ಳಲು ಕಾತರರಾಗಿದ್ದರು. ತಮ್ಮ ವೃತ್ತಿಗೆ ಸಂಬಂಧಿಸಿದ ವಿಚಾರಗಳನ್ನು ರಹಸ್ಯವಾಗಿಡಲು ಆಸಕ್ತಿ ಹೊಂದಿದ್ದರು. ಆದರೆ ಈ ರಹಸ್ಯಗಳು ಬಯಲಾಗದಂತೆ ತಡೆಯುವುದಾದರೂ ಹೇಗೆ? ಇದಕ್ಕೆ ಅವರು ಅನುಸರಿಸುತ್ತಿದ್ದ ನಾನಾ ವಿಧಾನಗಳಲ್ಲಿ ಒಂದರ ಸುಳಿವು ೧೪೫೪ ರಲ್ಲಿ ವೆನಿಸ್ಸಿನಲ್ಲಿ ಜಾರಿಯಲ್ಲಿದ್ದ ಶಾಸನದಿಂದ

---

[1] F. Philippi, *Die Aeltesten Osnabrückischen Gildeurkunden* (bis 1500), pp. 75-76. Kisling, Osnabrück, 1890.

ಗೊತ್ತಾಗುತ್ತದೆ. "ಈ ಪ್ರಜಾರಾಜ್ಯದ ಹಿತಕ್ಕೆ ಧಕ್ಕೆ ಒದಗುವಂಥ ರೀತಿಯಲ್ಲಿ ಯಾವ ಕೆಲಸಗಾರನಾದರೂ ಬೇರೊಂದು ದೇಶಕ್ಕೆ ಯಾವ ಕಲೆಯನ್ನಾಗಲಿ ಕೌಶಲವನ್ನಾಗಲಿ ತೆಗೆದುಕೊಂಡು ಹೋದದ್ದೇ ಆದರೆ, ಅವನು ಹಿಂದಿರುಗಲು ಆಜ್ಞೆ ನೀಡಲಾಗುತ್ತದೆ; ಅವನು ಆಜ್ಞೆ ಪಾಲಿಸದಿದ್ದರೆ ಅವನ ಹತ್ತಿರದ ಸಂಬಂಧಿಗಳನ್ನು ಬಂಧನದಲ್ಲಿಡಲಾಗುತ್ತದೆ. ಸಂಸಾರದ ಐಕಮತ್ಯದ ದೃಷ್ಟಿಯಿಂದ ಅವನು ಹಿಂದಿರುಗಬೇಕಾಗುತ್ತದೆ. ಹಾಗೂ ಅವನು ಅವಿಧೇಯತೆಯಿಂದ ಮೊಂಡುತನ ತೋರಿಸಿದ್ದೇ ಆದರೆ, ಅವನು ಎಲ್ಲೇ ಇರಲಿ, ಅವನನ್ನು ಕೊಲ್ಲಿಸಲು ರಹಸ್ಯಕ್ರಮ ಕೈಕೊಳ್ಳಲಾಗುವುದು."[1]

ಹೊರಗಿನವರು ತಮ್ಮ ಸಂಪೂರ್ಣ ಸ್ವಾಮ್ಯವನ್ನತಿಕ್ರಮಿಸದಂತೆ ನಿಯತಗೊಳಿಸುತ್ತಿದ್ದುದಷ್ಟೇ ಅಲ್ಲ. ಅವರವರಲ್ಲೇ ಒಬ್ಬರು ಇನ್ನೊಬ್ಬರ ವ್ಯಾಪಾರಕ್ಕೆ ಧಕ್ಕೆ ತಾರದಂತೆಯೂ ಅಷ್ಟೇ ಎಚ್ಚರಿಕೆ ವಹಿಸಿದ್ದರು. ಇದಕ್ಕೆ ಎಡೆಕೊಡುವ ಯಾವ ಅನ್ಯಾಯಕರ ಪದ್ಧತಿಗೂ ಆಸ್ಪದ ಕೊಡುತ್ತಿರಲಿಲ್ಲ. ಸ್ನೇಹಿತರಲ್ಲಿ ಪರಸ್ಪರ ಕೊರಳು ಕೊಯ್ಯುವ ಪದ್ಧತಿ ಕೂಡದೆಂಬುದು ಚರ್ಮ ಹದಗಾರರ ಮೂರನೆಯ ನಿಯಮದ ಮೊದಲ ವಾಕ್ಯದ ತಿರುಳು. ವೃತ್ತಿಸಂಘದ ಸದಸ್ಯನಾರೂ ಇನ್ನೊಬ್ಬ ಯಜಮಾನನಿಂದ ಅಭ್ಯಾಸಿಯನ್ನಾಗಲಿ ಕಾರೇಗಾರನನ್ನಾಗಲಿ ತನ್ನತ್ತ ಸೆಳೆದುಕೊಳ್ಳುವುದು ಸಾಧ್ಯವಿರಲಿಲ್ಲ. ಒಬ್ಬ ಗ್ರಾಹಕನ ವ್ಯಾಪಾರವನ್ನು ತನ್ನತ್ತ ಸೆಳೆದುಕೊಳ್ಳಲು ಇಂದು ಅವನಿಗೆ ಮಾಡುವ ಉಪಚಾರಗಳಾಗಲಿ, ಲಂಚ ಕೊಡುವುದಾಗಲಿ ಅಂದು ನಿಷಿದ್ಧ. ಫ್ರಾನ್ಸಿನ ಕಾರ್ಬಿ ಎಂಬಲ್ಲಿಯ ರೊಟ್ಟಿಗಾರರ ಸಂಘ ೧೪೪೩ ರಲ್ಲಿ ಹೀಗೆ ಕಟ್ಟಳೆ ಮಾಡಿತು: "ಯಾರೂ ತಮ್ಮ ರೊಟ್ಟಿ ಮಾರುವ ಉದ್ದೇಶದಿಂದ ಪಾನೀಯ ಕೊಡಕೂಡದು; ಇಂಥ ಯಾವ ಉಪಚಾರವನ್ನೂ ಮಾಡಬಾರದು. ಹೀಗೆ ಮಾಡಿದ್ದೇ ಆದರೆ ೬೦ ಸೋಲ್ ದಂಡ ತೆರಬೇಕು".[2]

ಐದು ಆರನೆಯ ನಿಬಂಧನೆಗಳನ್ನು ಮತ್ತೆ ಓದಿ. ವೃತ್ತಿಸಂಘಗಳು ಸಂಪೂರ್ಣ ಅಧಿಕಾರವನ್ನೇನೋ ಹೊಂದಿದ್ದುವು. ಆದರೆ ಇದಕ್ಕೆ ಪ್ರತಿಯಾಗಿ ಒಳ್ಳೆಯ ಸೇವೆಯನ್ನೂ ಸಲ್ಲಿಸುತ್ತಿದ್ದುವು. ತಮ್ಮ ಸದಸ್ಯರ ಕೆಲಸ ಉತ್ತಮವಾಗಿರಬೇಕೆಂದು ಅವು ಆಸಕ್ತಿ ವಹಿಸಿದ್ದುವು. ಇದು ಈ ನಿಬಂಧನೆಗಳಿಂದ ಸ್ಪಷ್ಟಪಡುತ್ತದೆ. ಸಂಘದ ಪ್ರತಿಯೊಬ್ಬ ಸದಸ್ಯನೂ ತನ್ನ ಅಭ್ಯಾಸಾವಧಿ ಪೂರೈಸಿರಬೇಕೆಂಬ ನಿಯಮವಿದ್ದದ್ದು ಇದಕ್ಕಾಗಿ. ಅವನು ತನ್ನ ವೃತ್ತಿಯನ್ನು ಚೆನ್ನಾಗಿ ಅರಿತಿರುವನೆಂಬುದನ್ನು ಖಾತರಿ ಮಾಡಿಕೊಳ್ಳಲಿಕ್ಕಾಗಿ ಈ ನಿಯಮ. ಅವನ ಕೆಲಸವನ್ನು ಎಚ್ಚರಿಕೆಯಿಂದ ಉಸ್ತುವಾರಿ ಮಾಡುತ್ತಿದ್ದುವು; ಗ್ರಾಹಕರಿಗೆ ಕಡಮೆ ದರ್ಜೆಯ ಪದಾರ್ಥ ಸಿಗದಂತೆ ನೋಡಿಕೊಳ್ಳುತ್ತಿದ್ದುವು. ತನ್ನ ಒಳ್ಳೆಯ ಹೆಸರಿನ ಬಗ್ಗೆ ವೃತ್ತಿಸಂಘಕ್ಕೆ ಹೆಮ್ಮೆಯಿತ್ತು. ಕಸಬುದಾರ ತಯಾರಿಸಿದ ಪದಾರ್ಥದ ಪ್ರತಿ ಮಾರಾಟದ ಜತೆಗೂ ಆ ಪದಾರ್ಥ ಉತ್ತಮ ಮಟ್ಟದ್ದೆಂದು ಸಂಘದ ಅಧಿಕೃತ

---

[1] G. Renard, *Guilds in the Middle Ages*, p. 36. G. Bell & Sons, Ltd., London, 1918.

[2] Thierry, *op. cit.*, p. 540

ಖಾತರಿಯೂ ಇರುತ್ತಿತ್ತು. ಕೀಳುದರ್ಜೆಯ ಕೆಲಸ ನಡೆಯದಂತೆ, ಉತ್ತಮ ದರ್ಜೆಯನ್ನು ಳಿಸಿಕೊಳ್ಳುವಂತೆ ಈ ಸಂಘಗಳು ನೂರಾರು ನಿಯಮಗಳನ್ನು ರಚಿಸಿಕೊಂಡಿದ್ದುವು. ಈ ನಿಯಮಗಳ ಉಲ್ಲಂಘನೆಗೆ ತೀವ್ರ ದಂಡ ತೆರಬೇಕಾಗುತ್ತಿತ್ತು. ೧೩೨೨ ರಲ್ಲಿ ಲಂಡನ್ನಿನ ಶಸ್ತ್ರಕಾರ ಸಂಘ ರಚಿಸಿದ ನಿಯಮಗಳಲ್ಲೊಂದು ಹೀಗಿದೆ: "ಯಾವ ಗೃಹದಲ್ಲೇ ಆಗಲಿ, ಒಳ್ಳೆಯ ದರ್ಜೆಯದಲ್ಲದ ಶಸ್ತ್ರವನ್ನು ಮಾರಾಟಕ್ಕಿಟ್ಟದ್ದುದೇ ಆದರೆ, ಇಂಥ ಶಸ್ತ್ರವನ್ನು ತಕ್ಷಣವೇ ವಶಪಡಿಸಿಕೊಂಡು, ನಗರಾಧ್ಯಕ್ಷರು ಮತ್ತು ಪುರಪ್ರಮುಖರ ಮುಂದೆ ಹಾಜರುಪಡಿಸಿ, ಅವರು ಇದರ ಗುಣಾವಗುಣಗಳನ್ನು ವಿವೇಚಿಸಿ ನಿರ್ಣಯಿಸಲು ಬಿಡ ಲಾಗುವುದು."[1]

ಸಂಘದ ಮೇಲ್ವಿಚಾರಕರು ಪರೀಕ್ಷಾರ್ಥವಾಗಿ ಸಂಚಾರ ಮಾಡುತ್ತಿದ್ದರು. ಸದಸ್ಯರು ಉಪಯೋಗಿಸುತ್ತಿದ್ದ ತೂಕ-ಅಳತೆ, ಕಚ್ಚಾ ಸಾಮಗ್ರಿಯ ಮಾದರಿ, ಪರಿಷ್ಕೃತ ಸಾಮಗ್ರಿಯ—ಸಿದ್ಧವಸ್ತುವಿನ—ಸ್ವರೂಪ ಇವನ್ನೆಲ್ಲಾ ಪರೀಕ್ಷಿಸುತ್ತಿದ್ದರು. ಪ್ರತಿಯೊಂದು ಪದಾರ್ಥವನ್ನೂ ಸೂಕ್ಷ್ಮವಾಗಿ ಪರಿಶೀಲಿಸಿ, ಅದರ ಮೇಲೆ ಮುದ್ರೆ ಹಾಕುತ್ತಿತ್ತು. ಈ ರೀತಿ ಪದಾರ್ಥದ ಗುಣದ ಬಗ್ಗೆ ಕಟ್ಟುನಿಟ್ಟಾದ ಮೇಲ್ವಿಚಾರಣೆ ಅಗತ್ಯವೆಂದು— ವೃತ್ತಿಸಂಘದ ಗೌರವ ಕಳಂಕಿತವಾಗದಿರಬೇಕಾದರೆ, ತತ್ಫಲವಾಗಿ ವ್ಯಾಪಾರ ಹಾಳಾಗದೆ ಇರಬೇಕಾದರೆ ಇದು ಅಗತ್ಯವೆಂದು—ಸದಸ್ಯರು ಭಾವಿಸಿದ್ದರು. ಸಾರ್ವಜನಿಕರ ಹಿತರಕ್ಷಣೆಯ ದೃಷ್ಟಿಯಿಂದ ನಗರಾಧಿಕಾರಿಗಳು ಈ ಕ್ರಮ ಅಗತ್ಯವೆಂದು ಬಯಸಿದರು. ಸಾರ್ವಜನಿಕ ರಕ್ಷಣೆಯ ಹಾದಿಯಲ್ಲಿ ಕೆಲವು ಸಂಘಗಳು ಇನ್ನೂ ಒಂದು ಹೆಜ್ಜೆ ಮುಂದೆ ನಡೆದುವು. "ನ್ಯಾಯಬೆಲೆ" ಎಂಬ ಮುದ್ರೆಯನ್ನೂ ತಮ್ಮ ಪದಾರ್ಥಗಳ ಮೇಲೆ ಹಾಕು ತ್ತಿದ್ದುವು.

ಪದಾರ್ಥದ "ನ್ಯಾಯಬೆಲೆ" ಎಂದರೇನೆಂಬುದನ್ನು ಅರಿಯಲು ನೀವು ಕುಸೀದ ಪದ್ಧತಿಯ ಬಗ್ಗೆ ಮಧ್ಯಯುಗದಲ್ಲಿದ್ದ ಭಾವನೆಯನ್ನೂ, ಆರ್ಥಿಕ ವಿಚಾರಗಳಲ್ಲಿ ಇಂದಿಗಿಂತ ಎಷ್ಟರ ಮಟ್ಟಿಗೆ ಹೆಚ್ಚಾಗಿ ಅಂದು ನ್ಯಾಯಾನ್ಯಾಯಗಳ ಕಲ್ಪನೆಯಿತ್ತೆಂಬುದನ್ನೂ ಜ್ಞಾಪಿಸಿ ಕೊಳ್ಳಬೇಕು. ಹಳೆಯ ಸಹಜ ಅರ್ಥವ್ಯವಸ್ಥೆಯಲ್ಲಿ ಪದಾರ್ಥಗಳ ಅದಲು ಬದಲಿನ ವ್ಯಾಪಾರ ನಡೆಯುತ್ತಿದ್ದುದು ಲಾಭಕ್ಕಾಗಿಯಲ್ಲ—ಮಾರುವವ ಕೊಳ್ಳುವವರಿಬ್ಬರಿಗೂ ಪ್ರಯೋಜನವಾಗಲೆಂದು. ಪದಾರ್ಥಗಳ ಅದಲುಬದಲಿನಲ್ಲಿ ಯಾವೊಂದು ಪಕ್ಷವೂ ಇನ್ನೊಂದು ಪಕ್ಷಕ್ಕಿಂತ ಹೆಚ್ಚಾಗಿ ಲಾಭ ಪಡೆಯಬಾರದೆಂದು ನಿರೀಕ್ಷಿಸಿತ್ತು. ನನ್ನ ಮೇಲಂಗಿ ಯನ್ನು ನಿಮ್ಮಲ್ಲಿದ್ದ ಐದು ಗ್ಯಾಲನ್ ಮದ್ಯಕ್ಕೆ ಪ್ರತಿಯಾಗಿ ನಿಮಗೆ ಕೊಟ್ಟರೆ, ಈ ವ್ಯವ ಹಾರ ಸಮ ಸಮ. ಏಕೆಂದರೆ, ಉಣ್ಣೆಯ ಹಾಗೂ ಅದರ ಮೇಲೆ ನಾನು ವಿನಿಯೋಗಿಸಿದ ಶ್ರಮದ ಕಾಲದ ಬೆಲೆಯೂ, ನಿಮ್ಮಲ್ಲಿದ್ದ ದ್ರಾಕ್ಷಿಯ ಹಾಗೂ ಅದರ ಮೇಲೆ ನೀವು

---

[1] *Memorials of London and London Life in the XIIIth, XIVth, and XVth Centuries*, p. 146. Selected, translated and edited by H.T. Riley. Longmans, Green and Company, London, 1868.

ವಿನಿಯೋಗಿಸಿದ ಕಾಲದ ಬೆಲೆಯೂ ಸಮಸಮ. ಹಣದ ಅವತಾರವಾದ ಮೇಲೂ ಕೂಡ, ಪರಿಗಣಿಸಬೇಕಾಗಿದ್ದ ಅಂಶಗಳು ಇವೇ. ತನ್ನ ಪದಾರ್ಥ ದುಡಿಮೆಗಳ ಬೆಲೆಯೇನೆಂಬುದು ಕಸಬುದಾರನಿಗೆ ಗೊತ್ತಿತ್ತು. ಅವನು ಮಾರಾಟ ಮಾಡಲಿದ್ದ ಸಿದ್ಧವಸ್ತುವಿನ ಬೆಲೆಯನ್ನು ಸಂಘ ನಿರ್ಣಯಿಸುತ್ತಿತ್ತು. ಕಸಬುದಾರ ತಯಾರಿಸಿ ಮಾರಾಟ ಮಾಡಲಿದ್ದ ವಸ್ತುವಿಗೆ ನ್ಯಾಯಬೆಲೆಯೊಂದಿತ್ತು. ನಿಜವಾದ ಅಸಲು ಬೆಲೆಗೆ—ಇದಕ್ಕಾಗಿ ಅವನು ವಿನಿಯೋಗಿಸಿದ ಪದಾರ್ಥ ಹಾಗೂ ಶ್ರಮದ ಬೆಲೆಗೆ—ಅನುಗುಣವಾಗಿ ಈ ಬೆಲೆ ನಿರ್ಣಯವಾಗುತ್ತಿತ್ತು. ಕಸಬುದಾರ ಇದೇ ಬೆಲೆಗೆ ಮಾರಬೇಕು. ಒಂದು ಪೆನ್ನಿಯೂ ಹೆಚ್ಚಿಗೆ ಪಡೆಯುವಂತಿಲ್ಲ. ಸೆಂಟ್ ಥಾಮಸ್ ಅಕ್ವಿನಾಸ್ ಈ ವಿಚಾರವಾಗಿ ಸ್ಪಷ್ಟವಾಗಿ ಹೀಗೆ ಹೇಳಿದ್ದಾನೆ: "ಸಮಾನ ಹಿತಕ್ಕಾಗಿ ರಚಿಸಲ್ಪಟ್ಟ ವ್ಯವಸ್ಥೆ (ಎಂದರೆ ವ್ಯಾಪಾರ) ಎರಡು ಪಕ್ಷಗಳಲ್ಲಿ ಯಾವ ಒಂದಕ್ಕೂ ಇನ್ನೊಂದಕ್ಕಿಂತ ಹೆಚ್ಚು ಭಾರವಾಗಿರಬಾರದು . . . . ಆದ್ದರಿಂದ ಒಂದು ಪದಾರ್ಥದ ಮೌಲ್ಯಕ್ಕಿಂತ ಅದರ ಬೆಲೆ ಹೆಚ್ಚಾದರೆ, ಅಥವಾ ಕಡಮೆಯಾದರೆ, ಅದರಿಂದ ನ್ಯಾಯಸಮ್ಮತವಾದ ಸಮಾನತೆ ಇಲ್ಲದಂತಾಗುತ್ತದೆ. ಆದ್ದರಿಂದ, ಒಂದು ಪದಾರ್ಥವನ್ನು ಅದರ ನಿಜವಾದ ಮೌಲ್ಯಕ್ಕಿಂತ ಹೆಚ್ಚು ಬೆಲೆಗೋ ಕಡಮೆ ಬೆಲೆಗೋ ಮಾರುವುದು ಅನ್ಯಾಯ, ಶಾಸನ ಬಾಹಿರ."[1]

ತಮ್ಮ ಪದಾರ್ಥಗಳನ್ನು ನ್ಯಾಯ ಬೆಲೆಗಿಂತ ಹೆಚ್ಚು ದರಕ್ಕೆ ಮಾರಲು ಯತ್ನಿಸಿದ ಕಲ್ಲುಕುಟಿಗರ ಪಾಡೇನಾಯಿತು? ಶೀಘ್ರ ಶ್ರೀಮಂತನಾಗಬಯಸಿದ ವ್ಯಾಪಾರಿಯಿಂದ ರಕ್ಷಣೆ ಹೊಂದಲು ಮಧ್ಯಯುಗದ ನಾಗರಿಕರು ಮಾಡಬಹುದಾದ್ದಾದರೂ ಏನಿತ್ತು? ಮುಂದೆ ಕೊಡುವ ಪ್ರಸಂಗದಿಂದ ಈ ವಿಚಾರ ಸ್ಪಷ್ಟವಾಗುತ್ತದೆ: "ರೊಟ್ಟಿಯ ಬೆಲೆ ಹೆಚ್ಚಿದಾಗ ಏನಾಗುವುದು? 'ನೀವೆಲ್ಲರೂ ಬಡವರು. ಇದಕ್ಕೆ ಕಾರಣ ನಿಮ್ಮ ಸರಳತೆ ಆದ್ದರಿಂದ ನೀವು ನನ್ನ ಸಲಹೆಯಂತೆ ನಡೆಯುವುದಾದರೆ ಧನಿಕರೂ ಶಕ್ತರೂ ಆಗುವಿರಿ,' ಎಂದು ಲಂಡನ್ನಿನ ಒಬ್ಬ ಎದೆಗಾರ ಅಲ್ಲಿನ ಹಣ್ಣಿನ ವ್ಯಾಪಾರಿಗಳಿಗೆ ಹೇಳಿದಾಗ, ಅವರು ಒಂದಾಗಿ, ಜನರನ್ನು ಕಷ್ಟನಷ್ಟಗಳಿಗೆ ಗುರಿಪಡಿಸಿದಾಗ ಆಗುವುದೇನು? ವಸ್ತು ಸರಬರಾಯಿ ಹಾಗೂ ಬೇಡಿಕೆಯ ನಿಯಮಗಳ ಫಲವಾಗಿ ಬೆಲೆಗಳು ಮತ್ತೆ ಇಳಿದಾವೆಂಬ ಆಶೆಯಿಂದ ಪಟ್ಟಣಿಗರೂ ರೈತರೂ ಸಮಾಧಾನಪಟ್ಟುಕೊಳ್ಳುವುದಿಲ್ಲ. ಅವರು ನಗರಾಧ್ಯಕ್ಷನ ನ್ಯಾಯಾಲಯದಲ್ಲಿ ಹಿಟ್ಟು ತಯಾರಕರನ್ನು ಅವಮಾನಗೊಳಿಸುವರು. ಇದಕ್ಕೆ ಒಳ್ಳೆಯ ಕ್ರೈಸ್ತರೆಲ್ಲರ ಬೆಂಬಲವುಂಟು, ಅನುಮತಿಯುಂಟು. ಫಲವಸ್ತು ತಯಾರಕರೊಡನೆಯೂ ವಾದಿಸುವರು. 'ನನಗೆ ಐಶ್ವರ್ಯವೂ ಬೇಡ, ಬಡತನವೂ ಬೇಡ; ನಾನು ಬದುಕಲು ಅಗತ್ಯವಾದಷ್ಟನ್ನು ನೀಡು,' ಎಂದು, ಹಳೆಯ ಒಡಂಬಡಿಕೆಯ ಗಾದೆಯ ಪ್ರಕರಣದ ಈ ಮಾತುಗಳನ್ನು ಬಳಸಿಕೊಂಡು, ಹಳ್ಳಿಯ ಪಾದ್ರಿ ಆರನೆಯ ದೈವಾಜ್ಞೆಯನ್ನು ಕುರಿತು ಪ್ರವಚನ ಮಾಡುವನು."[2]

---

[1] **Monroe, *op. cit.*, p. 54, 55.**

[2] **R. H. Tawney, *op. cit.*, p. 55.**

ಹೀಗೆ ಪ್ರತಿಭಟಿಸಿದ ಪೌರರು ಈ ಆಸೆಬಡಕ ವ್ಯಾಪಾರಿಗಳನ್ನು ನಗರಾಧ್ಯಕ್ಷನ ನ್ಯಾಯಾಲಯಕ್ಕೆ ಎಳೆತಂದರೆಂಬುದರಿಂದ ಒಂದು ವಿಚಾರ ಸಿದ್ಧಪಡುತ್ತದೆ: ನ್ಯಾಯ ಬೆಲೆಯ ಪರಿಪಾಲನೆಯ ವಿಚಾರ ವೃತ್ತಿಸಂಘದವರ ಆತ್ಮಸಾಕ್ಷಿಗೇ ಬಿಟ್ಟದ್ದಾಗಿರಲಿಲ್ಲ. ಲಾಭದಾಸೆಯನ್ನು ಚರ್ಚು ತೆಗಳಿದ್ದರೂ ಕೂಡ, ಹಣ್ಣು ವ್ಯಾಪಾರಿಗಳನ್ನು ಧನಿಕರನ್ನಾಗಿ ಮಾಡುವ ವಚನಕೊಟ್ಟ ಎದೆಗಾರ ಒಬ್ಬನೇ ಆಗಿರಲಿಲ್ಲ. ಅಂಥವರು ಹಲವರಿದ್ದರು. ವ್ಯಾಪಾರಿಗಳಲ್ಲಿ ಸಂಪೂರ್ಣವಾಗಿ ನಂಬಿಕೆಯಿರಲಿಲ್ಲ, 'ವಿನಿಮಯ' ಎಂಬ ಅರ್ಥದ ಜರ್ಮನ್ ಪದದ ಮೂಲವೂ 'ಮೋಸಪಡಿಸು' ಎಂಬ ಅರ್ಥದ ಪದದ ಮೂಲವೂ ಒಂದೇ. ಆದ್ದರಿಂದ ಪದಾರ್ಥಗಳು ಅನ್ಯಾಯದ ಬೆಲೆಗೆ ಮಾರಾಟವಾಗದಂತೆ ನೋಡಿ ಕೊಳ್ಳುವುದು ಆ ಕಾಲದಲ್ಲಿ ನಗರಾಧಿಕಾರಿಗಳ ಮುಖ್ಯ ಕರ್ತವ್ಯಗಳಲ್ಲೊಂದೆಂದು ಎಣಿಸು ವುದು ಪದ್ಧತಿಯಾಯಿತು. ಉದಾರಣೆಗೆ, ಕಾರ್ಲಿಸ್ಲೆಯ ದಂಡಾಧಿಕಾರಿ ತನ್ನ ಅಧಿಕಾರ ವಹಿಸಿಕೊಳ್ಳುವಾಗ ಹೀಗೆ ಪ್ರಮಾಣ ವಚನ ಸ್ವೀಕರಿಸಬೇಕಾಗಿತ್ತು: "ಈ ಪೇಟೆಗೆ ಬರುವ ಎಲ್ಲ ಬಗೆಯ ಪದಾರ್ಥಗಳೂ ಉತ್ತಮವೂ ಆರೋಗ್ಯಕರವೂ ಆಗಿರುವಂತೆಯೂ, ನ್ಯಾಯವಾದ ಬೆಲೆಗೆ ಮಾರಾಟವಾಗುವಂತೆಯೂ ನೀವು ನೋಡಿಕೊಳ್ಳತಕ್ಕದ್ದು."[1] ತಾನು ತಯಾರಿಸುವ ಪದಾರ್ಥಗಳ ಏಕಸ್ವಾಮ್ಯ ಪಡೆದ ಯಾವ ವೃತ್ತಿಸಂಘವಾದರೂ ಈ ಸ್ವಾಮ್ಯದ ಮೂಲಕ ನ್ಯಾಯಬೆಲೆ ಸ್ಥಾಪಿಸುವ ಬದಲು ಅಧಿಕ ಲಾಭಗಳಿಸಲು ಯತ್ನಿಸಿದರೆ, ಆಗ ನಗರಾಧಿಕಾರಿಗಳು ಆ ಸಂಘದ ಹಕ್ಕುಗಳನ್ನು ವಜಾಮಾಡುವ ಅಧಿ ಕಾರ ಹೊಂದಿದ್ದರು.

ವ್ಯಾಪಾರ ವಿಸ್ತರಿಸುವ ಮುನ್ನ, ಅಥವಾ ನಗರಗಳು ಬೆಳೆಯುವ ಮುನ್ನ, ಪದಾರ್ಥ ಗಳ ನ್ಯಾಯಬೆಲೆಯ ಕಲ್ಪನೆ ಸಹಜವಾದದ್ದಾಗಿತ್ತು. ಆದರೆ ಪೇಟೆ ಬೆಳೆದು, ತತ್ಫಲವಾಗಿ ದೊಡ್ಡ ಪ್ರಮಾಣದಲ್ಲಿ ಉತ್ಪಾದನೆ ಆರಂಭವಾದಾಗ ಆರ್ಥಿಕ ಭಾವನೆಗಳೇ ಬದಲಾದುವು. ನ್ಯಾಯಬೆಲೆಯ ಬದಲು ಪೇಟೆ ಬೆಲೆಯು ಅವತಾರವಾಯಿತು. ಆರ್ಥಿಕ ಶಕ್ತಿಗಳು ಕುಸೀದ ಪದ್ಧತಿಯ ಬಗ್ಗೆ ಇದ್ದ ಭಾವನೆಗಳನ್ನು ಹೇಗೆ ಬದಲಿಸಿದವೆಂಬುದನ್ನು ನೆನಪಿನಲ್ಲಿಟ್ಟಿರು ವಿರಲ್ಲವೆ? ಇಂತೆಯೇ ನ್ಯಾಯಬೆಲೆಯನ್ನು ಕುರಿತ ಭಾವನೆಯೂ ಬದಲಾಯಿತು. ಹೊಸ ಆರ್ಥಿಕ ಶಕ್ತಿಗಳು ಇದನ್ನು ಕೊಚ್ಚಿಕೊಂಡು ಹೋದುವು.

ಮಧ್ಯಯುಗದ ಆದಿಕಾಲದಲ್ಲಿ ಪೇಟೆ ಸ್ಥಳೀಯವಾಗಿತ್ತು; ಪಟ್ಟಣದ ಸುತ್ತಮುತ್ತಣ ಗ್ರಾಮಪ್ರದೇಶದ ಜನರ ಆವಶ್ಯಕತೆ ಪೂರೈಸುವುದಾಗಿತ್ತು. ರಾಜ್ಯದ ದೂರ ಪ್ರದೇಶಗಳಲ್ಲಿ ಅಥವಾ ದೂರದ ನಗರಗಳಲ್ಲಿ ನಡೆಯುತ್ತಿದ್ದ ಘಟನೆಗಳಿಂದ ಅದರ ಮೇಲೆ ಏನೂ ಪರಿಣಾಮವಾಗುತ್ತಿರಲಿಲ್ಲ. ಆದ್ದರಿಂದ ಪದಾರ್ಥಗಳ ಬೆಲೆಗಳು ಸ್ಥಳೀಯ ಪರಿಸ್ಥಿತಿ ಗಳಿಂದಲೇ ನಿರ್ಣಯಿಸಲ್ಪಡುತ್ತಿದ್ದುವು. ಸ್ಥಳೀಯ ಪೇಟೆಗಳಲ್ಲೂ ಪರಿಸ್ಥಿತಿ ಬದಲಾಗು ತ್ತಿತ್ತು. ಅದರೊಡನೆ ಬೆಲೆಗಳೂ ವ್ಯತ್ಯಾಸಗೊಳ್ಳುತ್ತಿದ್ದುವು. ನೆರೆಯ ಪ್ರದೇಶದಲ್ಲಿ ದ್ರಾಕ್ಷಿ

---

[1] W. J. Ashley, *An Introduction to English Economic History and Theory*, Book II, p. 60, 2 vols. G. P. Putnam's Sons, N.Y., 1913.

ಬಳ್ಳಿಗೆ ರೋಗ ಅಂಟಿದರೆ ಆ ವರ್ಷ ಸಾಮಾನ್ಯವಾಗಿ ಇರುತ್ತಿದ್ದುದಕ್ಕಿಂತ ಕಡಮೆ ಮದ್ಯ ಉತ್ಪತ್ತಿಯಾಗುತ್ತಿತ್ತು—ಬಹುಶಃ ಎಲ್ಲರಿಗೂ ಸಾಕಾಗದಷ್ಟು ಉತ್ಪತ್ತಿಯಾಗುತ್ತಿತ್ತು. ಅಂಥ ಅಭಾವ ಪರಿಸ್ಥಿತಿಯಲ್ಲಿ, ಅದಕ್ಕೆ ಹೆಚ್ಚು ಬೆಲೆ ಕೊಡುವ ಶಕ್ತಿಯೂ ಇಚ್ಛೆಯೂ ಇದ್ದವರಿಗೇ ಅದರ ಮಾರಾಟ. ಹೆಚ್ಚುಲಾಭ ಪಡೆಯುವ ಉದ್ದೇಶದಿಂದ ಕೆಲವರು ಒಂದಾಗಿ ಸೇರಿ, ಸರಬರಾಯಿಯನ್ನೆಲ್ಲ ತಮ್ಮ ವಶಕ್ಕೆ ಪಡೆದುಕೊಂಡು, ಆ ಪದಾರ್ಥದ ಬೆಲೆ ಏರಿಸುವ ಇಂದಿನ ರೀತಿಗೂ, ಹಳೆಯ ಈ ರೀತಿಗೂ ವ್ಯತ್ಯಾಸ. ಮುಂಗಾಣದ, ಅನಿರೀಕ್ಷಿತವಾದ, ಹತೋಟಿಗೊಳಪಡಿಸಲಾಗದ ಕಾರಣದಿಂದ ಬೆಲೆ ಹೆಚ್ಚುವುದಕ್ಕೂ, ಯಾವನೋ ಒಬ್ಬ ವ್ಯಾಪಾರಿಯ ದುರಾಸೆಯ ದೆಸೆಯಿಂದ ಬೆಲೆ ಅಧಿಕವಾಗುವುದಕ್ಕೂ ವ್ಯತ್ಯಾಸವುಂಟು. ಕ್ಷಾಮ ಕಾಲದಲ್ಲಿ ಬೆಲೆ ಹೆಚ್ಚುವುದೆಂಬುದು ಎಲ್ಲರಿಗೂ ತಿಳಿದ ವಿಚಾರ ವಾಗಿತ್ತು. ಇದು ಅಸಹಜವಾದ ವಿಪರೀತ ಪರಿಸ್ಥಿತಿಯ ಫಲ—ಎಂಬುದು ಎಲ್ಲರಿಗೂ ಗೊತ್ತಿತ್ತು. ನ್ಯಾಯಬೆಲೆಯ, ಸಹಜ ಬೆಲೆಯ ವ್ಯವಸ್ಥೆಗೆ ಇದು ಅಡ್ಡಿಯಾಗಿರಲಿಲ್ಲ. ಈ ವ್ಯವಸ್ಥೆಯಲ್ಲಿ ಅಧಿಕಲಾಭ ಹೊಲ್ಲ. ಆದರೆ ಒಳ್ಳೆಯ ಫಸಲು ದೊರಕದ ವರ್ಷದಲ್ಲಿ ರೈತ ತನ್ನ ಧಾನ್ಯಕ್ಕೆ ಹೆಚ್ಚು ಹಣ ಪಡೆಯುವುದು ನ್ಯಾಯವಾಗಿಯೆ ಇತ್ತು. ಏಕೆಂದರೆ ಅವನು ಮಾರಬಹುದಾಗಿದ್ದ ಪದಾರ್ಥವೂ ಕಡಮೆ. ಸಣ್ಣ, ಸ್ಥಳೀಯ, ಸ್ಥಿರ ಪೇಟೆಯ ಆರ್ಥಿಕ ವ್ಯವಸ್ಥೆಯಲ್ಲಿ ಈ ನ್ಯಾಯಬೆಲೆಯ ದೃಷ್ಟಿ ಸಮಂಜಸವಾಗಿಯೇ ಇತ್ತು.

ಆದರೆ ಅಸ್ಥಿರವಾದ, ಬಾಹ್ಯವಾದ ದೊಡ್ಡಪೇಟೆಯ ಅರ್ಥವ್ಯವಸ್ಥೆಗೆ ಈ ದೃಷ್ಟಿ ಹೊಂದಿಕೊಳ್ಳಲಿಲ್ಲ. ಆರ್ಥಿಕ ಪರಿಸ್ಥಿತಿಯಲ್ಲಾದ ಬದಲಾವಣೆಯೊಡನೆ ಆರ್ಥಿಕ ಭಾವನೆ ಗಳಲ್ಲೂ ಪರಿವರ್ತನೆಯಾಯಿತು. ಪಟ್ಟಣದಲ್ಲಿ, ಅದರ ನೆರೆಹೊರೆಯಲ್ಲಿ, ತಯಾರಾದ ವಸ್ತುವನ್ನು ಕೊಳ್ಳುವವರೂ ಮಾರುವವರೂ ಮಾತ್ರವೇ ಪೇಟೆಯಲ್ಲಿರಲಿಲ್ಲ, ಈಗ. ಹೊರ ಗಿನ ವ್ಯಾಪಾರಗಾರರೂ, ದೂರದ ವಸ್ತುಗಳೂ, ಮೂಲೆಮೂಲೆಯಿಂದ ಮಾರುವ ಕೊಳ್ಳುವ ಜನರೂ ಬಂದಾಗ, ಅವರೊಡನೆ ಪೇಟೆಯಲ್ಲಿ ಹೊಸ ಪ್ರವೃತ್ತಿಗಳು ಉದ್ಭವಿಸಿ ದುವು. ಸ್ಥಳೀಯ ಸ್ಥಿರ ಪರಿಸ್ಥಿತಿಗೆ ಧಕ್ಕೆ ಒದಗಿತು. (ನ್ಯಾಯಬೆಲೆ ಕುರಿತ ನಿಬಂಧನೆ ಜಾರಿಯಲ್ಲಿಲ್ಲದ ಪರಿಷೆಗಳಲ್ಲಿ ಹೀಗಾಯಿತು. ವ್ಯಾಪಾರ ವಿಸ್ತರಿಸಿದ ಹಾಗೆಲ್ಲ ಪೇಟೆಯ ಮೇಲೆ ಪ್ರಭಾವ ಬೀರುವ ಇನ್ನೂ ಬದಲಾವಣೆಗೊಂಡುವು; ನ್ಯಾಯಬೆಲೆ ಅವ್ಯವಹಾರ್ಯ ವೆಂಬುದು ಮನವರಿಕೆಯಾಯಿತು.) ನ್ಯಾಯಬೆಲೆಯ ಭಾವನೆ ಹೋಗಿ, ಪೇಟೆ ಬೆಲೆಯ ಭಾವನೆಯ ಆವಿರ್ಭಾವವಾಯಿತು. ಇದು ಹೀಗೆಯೇ ನಡೆಯುತ್ತಿದ್ದರೂ, ಇದನ್ನು ಜನರು ಅರಿಯಲು ಹೆಚ್ಚು ಕಾಲ ಬೇಕಾಯಿತು; ಇದನ್ನು ಒಪ್ಪಿಕೊಳ್ಳಲಂತೂ, ಇನ್ನೂ ಹೆಚ್ಚು ಕಾಲ ಬೇಕಾಯಿತು. ಪರಿಸ್ಥಿತಿ ಬದಲಾವಣೆ ಹೊಂದಿದರೂ, ಆ ಹಳೆಯ ಪರಿಸ್ಥಿತಿ ಯಿಂದ ಉದ್ಭವಿಸಿದ ಭಾವನೆಗಳೂ ಸಂಪ್ರದಾಯಗಳೂ ಮಾತ್ರ ಯಾವಾಗಲೂ ಬಹು ಕಾಲ ಉಳಿದುಕೊಂಡೇ ಬರುತ್ತವೆ. ಜನರು ಮೇನದಲ್ಲಿ ಕುಳಿತು ಹೋಗುವುದು ವಾಡಿಕೆ ಯಾಗಿದ್ದ ಕಾಲದಲ್ಲಿ, ಮೇನದ ಅಡ್ಡ ಮರ ಹೊರುವುದು ಸುಲಭವಾಗುವಂತೆ, ಇದನ್ನು ಹೊರುವವರ ಉಡುಪಿಗೆ ತಕ್ಕ ಪಟ್ಟಿ ಇಟ್ಟು ಹೊಲಿಯುವುದು ವಾಡಿಕೆಯಾಗಿತ್ತು. ಆದರೆ

ಮೇನೆಗಳ ದೃಶ್ಯ ಬೀದಿಗಳಿಂದ ಸಂಪೂರ್ಣವಾಗಿ ಮರೆಯಾದಾಗಲೂ ಕೂಡ ಇಂಥ ಉಡುಪುಗಳ ತಯಾರಿಕೆ ಮಾತ್ರ ಸಾಗುತ್ತಲೇ ಇತ್ತು: ಈ ಪಟ್ಟಿ ಸಾಮಾನು ಹೊರುವವನ ಸಾಮಗ್ರಿಯ ಒಂದು ಅಗತ್ಯ ಅಂಗವೋ ಎಂಬಂತೆ ಜನ ಭಾವಿಸಿದ್ದರು. ಇದರ ಉಪಯುಕ್ತತೆ ಸಂಪೂರ್ಣವಾಗಿ ಕಣ್ಮರೆಯಾದಾಗಲೂ ಇವನ್ನು ದರ್ಜಿಗಳು ಹೊಲಿಯುತ್ತಲೇ ಇದ್ದರು.

ಭಾವನೆಗಳು ವರ್ತಿಸುವುದೇ ಹೀಗೆ. ನ್ಯಾಯಬೆಲೆಯನ್ನು ಕುರಿತ ಭಾವನೆಯೂ ಇಂತೆಯೇ ವರ್ತಿಸಿತು. ಬೆಲೆಯ ಮೇಲೆ ಪರಿಣಾಮ ಉಂಟುಮಾಡುವ ಎಲ್ಲ ಪ್ರವೃತ್ತಿಗಳೂ ಸ್ಥಳೀಯವಾಗಿಯೇ ಜನಿಸಿ, ಅಲ್ಲಿನ ಜನಸಮುದಾಯಕ್ಕೆಲ್ಲ ಗೊತ್ತಿರುತ್ತಿದ್ದ ಕಾಲದಲ್ಲಿ, ಸ್ಥಿರಪರಿಸ್ಥಿತಿಗಳಲ್ಲಿ ಬೆಳೆದ ಈ ಭಾವನೆ ಅನಂತರವೂ ಮುಂದುವರಿಯಿತು. ದೂರದ ಅಪರಿಚಿತ ಪ್ರವೃತ್ತಿಗಳು ಸ್ಥಳೀಯ ಪೇಟೆಯನ್ನು ಆಕ್ರಮಿಸಿದಾಗಲೂ ಈ ಭಾವನೆ ಮಾತ್ರ ಉಳಿದುಕೊಂಡಿತು. ಕ್ರಮೇಣ ಈ ಹೊಸ ಪರಿಸ್ಥಿತಿಗಳು ಹೊಸ ಮನೋಭಾವಕ್ಕೆ ಜನ್ಮ ನೀಡಿದುದೇನೋ ನಿಜ. ಹದಿನಾಲ್ಕನೆಯ ಶತಮಾನದಲ್ಲಿ ಪ್ಯಾರಿಸ್ ವಿಶ್ವವಿದ್ಯಾನಿಲಯದ 'ರೆಕ್ಟರ್' ಆಗಿದ್ದ ಜೆಹಾನ್ ಬುರಿಡಾನ್ ಎಂಬವನು ಬರೆದ ಈ ಮಾತುಗಳಿಂದ ಇದು ವ್ಯಕ್ತವಾಗುತ್ತದೆ: "ಒಂದು ಪದಾರ್ಥದ ಮೌಲ್ಯವನ್ನು ಅದರ ನೈಜ ಯೋಗ್ಯತೆಯ ದೃಷ್ಟಿಯಿಂದಲೇ ಅಳೆಯಬಾರದು . . . . ಮನುಷ್ಯನ ಅಗತ್ಯಗಳನ್ನು ಗಣನೆಗೆ ತೆಗೆದುಕೊಳ್ಳುವುದೂ, ಈ ಅಗತ್ಯಗಳಿಗೂ ಈ ಪದಾರ್ಥಗಳಿಗೂ ಇರುವ ಸಂಬಂಧಕ್ಕೆ ಅನುಗುಣವಾಗಿ ಮೌಲ್ಯ ನಿರ್ಣಯ ಮಾಡುವುದೂ ಅಗತ್ಯ."[1]

ಸರಕಿನ ಪೂರೈಕೆ ಹಾಗೂ ಬೇಡಿಕೆಯನ್ನು ಕುರಿತ ಮಾತನ್ನು ಬುರಿಡಾನ್ ಆಡಿದ್ದಾನೆ ಇಲ್ಲಿ. ಪರಿಸ್ಥಿತಿಗೆ ಸಂಬಂಧವಿಲ್ಲದ ಸ್ಥಿರ ಮೌಲ್ಯವೆಂಬುದು ಪದಾರ್ಥಕ್ಕೆ ಇರಲಾರದೆಂಬುದಾಗಿ ಅವನು ವಾದಿಸಿದ. ಹೀಗೆ ನ್ಯಾಯಬೆಲೆ ತೂರಿ ಹೋಗಿ, ಪೇಟೆ ಬೆಲೆ ಅದರ ಸ್ಥಾನ ಆಕ್ರಮಿಸಿತು.

ಬೆಲೆಯ ಕಲ್ಪನೆಯಲ್ಲಿ ಆದ ಬದಲಾವಣೆಯಂತೆಯೇ ವೃತ್ತಿಸಂಘಗಳ ರಚನೆಯಲ್ಲೂ ಬದಲಾವಣೆಯಾಯಿತು. ಇತಿಹಾಸವೆಂಬುದು ಬದಲಾವಣೆಯ ಕತೆ. ಅಂತೆಯೇ, ವೃತ್ತಿಸಂಘ ಹೇಗೆ ಕಾರ್ಯಮಾಡುತ್ತಿತ್ತೆಂಬುದರ ವರ್ಣನೆಯಿಂದ ಈ ಅಧ್ಯಾಯ ಆರಂಭವಾಗಿ, ಈ ವ್ಯವಸ್ಥೆ ಹೇಗೆ ಮುರಿದು ಬಿತ್ತೆಂಬ ಕತೆಯೊಡನೆ ಕೊನೆಗೊಳ್ಳುತ್ತದೆ.

ವೃತ್ತಿಸಂಘ ವ್ಯವಸ್ಥೆಯಲ್ಲಿ ಎರಡು ಮುಖ್ಯ ಲಕ್ಷಣಗಳಿದ್ದುವು: ಯಜಮಾನರ ನಡುವೆ ಸಮಾನತೆ; ಮತ್ತು ಕೆಲಸಗಾರರು ಸುಲಭವಾಗಿ ಯಜಮಾನರಾಗುವ ಅವಕಾಶ. ಸಾಮಾನ್ಯವಾಗಿ ಹದಿಮೂರು ಹದಿನಾಲ್ಕನೆಯ ಶತಮಾನಗಳ ವರೆಗೆ ಈ ಪರಿಸ್ಥಿತಿ ಮುಂದುವರಿಯಿತು. ಇದು ವೃತ್ತಿಸಂಘಗಳ ಪರ್ವಕಾಲ. ಆಮೇಲೆ ಅನಿವಾರ್ಯವಾದ ಬದಲಾವಣೆಗಳು ಸಂಭವಿಸಿದುವು.

---

[1] V. Brants, *Les Théories Economiques aux XIII$^{e}$ et XIV$^{e}$ Siècles*, p. 69. Peeters, Louvain, 1895.

ಕೆಲವು ಸಂದರ್ಭಗಳಲ್ಲಿ ಯಜಮಾನರ ನಡುವಣ ಸಮಾನತೆ ಮರೆಯಾಯಿತು. ಕೆಲವು ಯಜಮಾನರು ಪುರೋಭಿವೃದ್ಧಿ ಹೊಂದಿದರು; ಹೆಚ್ಚು ಅಧಿಕಾರ ಪಡೆದು ಕೊಂಡರು; ತಮ್ಮಷ್ಟು ಅದೃಷ್ಟಶಾಲಿಗಳಾಗಿರದಿದ್ದ ಸೋದರರ ಬಗ್ಗೆ ತಾತ್ಸಾರ ಭಾವ ತಳೆದರು; ಕೊನೆಗೆ ತಮ್ಮವೇ ಆದ ಪ್ರತ್ಯೇಕ ಸಂಘಗಳನ್ನು ಕಟ್ಟಿಕೊಂಡರು. "ಹಿರಿಯ" ಹಾಗೂ "ಕಿರಿಯ" ವೃತ್ತಿಸಂಘಗಳು ತಲೆದೋರಿದುವು. ಕೆಳಮಟ್ಟದ ವೃತ್ತಿಸಂಘಗಳಲ್ಲಿದ್ದ ಯಜಮಾನರು ಹಿರಿಯ ವೃತ್ತಿಸಂಘಗಳಲ್ಲಿದ್ದ ಯಜಮಾನರಿಗಾಗಿ ಕೂಲಿಗಾರರಾಗಿ ಕೂಡ ಕೆಲಸ ಮಾಡುತ್ತಿದ್ದರು! ನಗರದ ವ್ಯಾಪಾರದ ಸಂಪೂರ್ಣಸ್ವಾಮ್ಯ ಪಡೆದಿದ್ದ ಹಳೆಯ ವರ್ತಕ ಸಂಘಗಳ ಸ್ಥಾನವನ್ನು ವೃತ್ತಿಸಂಘಗಳು ಆಕ್ರಮಿಸಿಕೊಂಡುವು. ಈ ವೃತ್ತಿಸಂಘಗಳಲ್ಲಿ ಒಂದೊಂದೂ ತನ್ನವೇ ಆದ ವಸ್ತುಗಳಲ್ಲಿ ವ್ಯಾಪಾರ ನಡಸುತ್ತಿತ್ತು. ಕೆಲವು ಸಂದರ್ಭಗಳಲ್ಲಿ ವರ್ತಕರ ಸಂಘ ಎಲ್ಲ ವಸ್ತುಗಳನ್ನೂ ಮಾರಾಟ ಮಾಡುವುದನ್ನು ಬಿಟ್ಟು, ಒಂದೇ ಒಂದು ವಸ್ತುವಿನ ವ್ಯಾಪಾರವನ್ನು ಉಪಕ್ರಮಿಸಿತು. ಹೀಗೆ ಮಾಡಿ ಇದು ಸಾವನ್ನು ತಪ್ಪಿಸಿ ಕೊಂಡುದಲ್ಲದೆ ಬೃಹತ್ ವರ್ತಕ ಸಂಘವಾಗಿ ಅಭ್ಯುದಯ ಹೊಂದಿತು. ಇನ್ನು ಕೆಲವು ಸಂದರ್ಭಗಳಲ್ಲಿ, ವೃತ್ತಿಸಂಘದ ಶ್ರೀಮಂತ ಸದಸ್ಯರು ಪದಾರ್ಥದ ಉತ್ಪಾದನೆಯನ್ನು ಬಿಟ್ಟು ವ್ಯಾಪಾರಕ್ಕೇ ಹೆಚ್ಚು ಗಮನ ನೀಡಿದರು. ಇವರು ಪ್ರತ್ಯೇಕ ಸಂಸ್ಥೆಗಳನ್ನೇ ನಿರ್ಮಿಸಿಕೊಂಡರು. ಕುಶಲಕರ್ಮಿಗಳಿಗೆ ಈ ಸಂಸ್ಥೆಗಳಲ್ಲಿ ಸ್ಥಾನವಿರಲಿಲ್ಲ. ಲಂಡನ್ನಿನ ಹನ್ನೆರಡು ವಿಶಿಷ್ಟ ಪೋಷಾಕಿನ ಸಂಸ್ಥೆಗಳು (ಲಿವರಿ ಕಂಪೆನಿ), ಪ್ಯಾರಿಸಿನ ಆರು ವೃತ್ತಿ ದಳಗಳು (ಕೋರ್ ಡ ಮೆಟ್ಯೇ), ಫ್ಲಾರೆನ್ಸಿನ ಆರ್ಟಿ ಮ್ಯಾಗಿಯೋರಿ ಸಂಸ್ಥೆಗಳು—ಇವು ಉದಾಹರಣೆಗಳು. ಬಲಿಷ್ಠವಾದ, ಸಂಪದ್ಯುಕ್ತವಾದ ಆಯ್ದ ಸಂಸ್ಥೆಗಳು ಇವು. ಇವುಗಳದೇ ಯಾಜಮಾನ್ಯ. ಬಡವ ಬಲ್ಲಿದರೆನ್ನದೆ ಯಾವ ಯಜಮಾನ ಬೇಕಾದರೂ ವೃತ್ತಿಸಂಘಗಳ ಅಧಿಕಾರಸ್ಥಾನ ಪಡೆಯಬಹುದಿತ್ತು ಹಿಂದೆ. ಆದರೆ ಈಗ ಭೇದಭಾವ ಬಂತು. "ಹೀಗಾಗಿ, ಫ್ಲಾರೆನ್ಸಿನ ಹಳೆಬಟ್ಟೆ ವ್ಯಾಪಾರಿಗಳ ಪೈಕಿ ಬೀದಿಯಲ್ಲಿ ತಲೆಯಮೇಲೆ ಸರಕು ಹೊತ್ತು ಸಾರುತ್ತಿದ್ದವನಾಗಲಿ, ರೊಟ್ಟಿ ವ್ಯಾಪಾರಿಗಳ ಪೈಕಿ ತಲೆಯಮೇಲೆ ರೊಟ್ಟಿ ಹೊತ್ತು ಮನೆಯಿಂದ ಮನೆಗೆ ಸಾರುತ್ತ ನಡೆಯುತ್ತಿದ್ದವನಾಗಲಿ, ಸಂಘದ ಅಧ್ಯಕ್ಷನಾಗಿ ಆಯ್ಕೆ ಹೊಂದುವಂತಿರಲಿಲ್ಲ."[1]

ತಮ್ಮ ಸ್ವಂತ ವೃತ್ತಿಸಂಘಗಳ ಹತೋಟಿ ಹೊಂದಿದ್ದವರು ತಮ್ಮ ಊರಿನ ಆಡಳಿತದ ಸಂಪೂರ್ಣ ಹತೋಟಿ ಹೊಂದಲು ಕಷ್ಟವಾಗಲಿಲ್ಲ. ದೊಡ್ಡ ವೃತ್ತಿಸಂಘಗಳ ಸದಸ್ಯರು ಈ ಹತೋಟಿ ಪಡೆದರು. ವಾಸ್ತವವಾಗಿ ಇವರೇ ನಗರದ ಆಡಳಿತಗಾರರಾದರು. ಪ್ರತಿ ಯೊಂದು ನಗರದಲ್ಲೂ ಐಶ್ವರ್ಯವಂತರೇ, ಪ್ರಭಾವಶಾಲಿಗಳೇ ಸಾಮಾನ್ಯವಾಗಿ ಪೌರ ಸಭೆಯಲ್ಲೂ ಇರುತ್ತಿದ್ದರು. ಜನ್ಮತಃ ಶ್ರೀಮಂತರೆನಿಸಿದ್ದವರು, ನೆಲದ ಒಡೆಯರಾಗಿದ್ದವರು, ಹಳ್ಳಿಯಲ್ಲಿ ಆಡಳಿತವರ್ಗದವರಾಗಿದ್ದರು. ನಗರದಲ್ಲಾದರೋ, ಹಣವಂತರದೇ ಪರಮಾಧಿ ಕಾರ: "ಹಾಲೆಂಡಿನಲ್ಲಿ, ಡಾರ್‌ಡ್ರೆಕ್ಟ್‌ನಲ್ಲೂ ಇತರ ಎಲ್ಲ ಪಟ್ಟಣಗಳಲ್ಲೂ ಪೌರಸಭೆಯ

[1] G. Renard, *op. cit.*, p 29

ಆಡಳಿತ ಸಂಪೂರ್ಣವಾಗಿ ಹಣವಂತರ ಕೈಯಲ್ಲಿತ್ತು. ಅದು ಕೆಲವು ಸಂಸಾರಗಳ ಏಕ ಸ್ವಾಮ್ಯವಾಗಿತ್ತು . . . . ನಗರದ ಅಧಿಕಾರ ಧನಿಕರ, ವಿವೇಕಿಗಳ ಕೈಯಲ್ಲಿದೆಯೆಂದು ಹೇಳಲಾಗುತ್ತಿತ್ತು. ಧನಿಕರು ವಿವೇಕಿಗಳೂ ಆಗಿದ್ದರೆಂಬುದು, ಹಾಗೆ ಯಾವಾಗಲೂ ಆಗಿರುವರೆಂಬುದು, ನಂಬಿಕೆಯಾಗಿತ್ತು. ಹೀಗೆ ಕೆಲಮಂದಿ ಕ್ಲುಪ್ತವಾದ ಸದಸ್ಯರನ್ನುಳ್ಳ ಸಭೆಯಲ್ಲಿ ನಗರಾಡಳಿತದ ಅಧಿಕಾರವಿತ್ತು. ನಗರಾಧಿಕಾರಿಗಳ ನೇಮಕ, ನಗರಾಧ್ಯಕ್ಷನ ಚುನಾವಣೆ, ಮುಂತಾದ ಎಲ್ಲ ಹಕ್ಕುಗಳೂ ಇದ್ದದ್ದು ಇವರ ಕೈಯಲ್ಲಿ. ಇವುಗಳ ಮೂಲಕ ಇವರು ನಗರದ ಆಡಳಿತದ ಮೇಲೆ ಹತೋಟಿ ಹೊಂದಿದ್ದರು."[1]

ಹಾಲೆಂಡಿನ ನಗರಗಳಲ್ಲೆಲ್ಲ ಇದ್ದ ಈ ಪರಿಸ್ಥಿತಿಯೇ ಜರ್ಮನಿಯಲ್ಲೂ ಇತ್ತು. ಲುಬೆಕ್ಕಿನಲ್ಲಿ "ವರ್ತಕರು, ಶ್ರೀಮಂತ ಪಟ್ಟಣಿಗರು—ಇವರೇ ನಗರದ ಆಡಳಿತ ನಡಸುತ್ತಿದ್ದರು . . . . ಶಾಸನ ರಚನೆ, ಪರಮ ನ್ಯಾಯಾಲಯ, ಪುರಜನರ ಮೇಲೆ ತೆರಿಗೆಯ ವಿಧಾಯಕ—ಮುಂತಾದ ಎಲ್ಲ ವಿಚಾರದಲ್ಲೂ ಪುರಸಭೆಯ ಅಧಿಕಾರವಿತ್ತು. ಹೀಗೆ ಅಮಿತವಾದ ಅಧಿಕಾರ ಹೊಂದಿ ಇದು ನಗರವನ್ನು ಆಳುತ್ತಿತ್ತು."[2]

ಯಜಮಾನರಿಗೂ ಕಾರೇಗಾರರಿಗೂ ನಡುವಣ ಅಂತರ ಬೆಳೆದು ವೃತ್ತಿಸಂಘ ವ್ಯವಸ್ಥೆ ಮುರಿದು ಬೀಳಲು ಇನ್ನೊಂದು ಕಾರಣವಿತ್ತು. ಹಿಂದೆ ಅಭ್ಯಾಸಿಯಾಗಿ ಆರಂಭ ಮಾಡಿದವನು ಕಾರೇಗಾರನಾಗಿ, ಕೊನೆಗೆ ಯಜಮಾನನೂ ಆಗುತ್ತಿದ್ದ. ಆದರೆ ಈಗ ಈ ಮಾರ್ಗ ಮೊಟಕಾಯಿತು. ಅಭ್ಯಾಸಿಯಾಗಿ ಸೇರಿದವನು ತನ್ನ ಕಾರ್ಯಜೀವನದ ಕೊನೆ ಮುಟ್ಟುತ್ತಿದ್ದದ್ದು ಕಾರೇಗಾರನಾಗಿ ಮಾತ್ರ. ಕೆಲಸಗಾರ ಯಜಮಾನನ ಸ್ಥಾನಕ್ಕೆ ಏರುವುದು ಹೆಚ್ಚು ಹೆಚ್ಚು ಕಷ್ಟಕರವಾಯಿತು. ಹೆಚ್ಚು ಹೆಚ್ಚು ಜನ ಪಟ್ಟಣಗಳಲ್ಲಿ ತುಂಬಲಾರಂಭಿಸಿದುದರಿಂದ, ಹಳೆಯ ಯಜಮಾನರು ತಮ್ಮ ಏಕಸ್ವಾಮ್ಯ ಉಳಿಸಿಕೊಳ್ಳಲು ತಕ್ಷಣ ಕ್ರಮ ಕೈಗೊಂಡರು ; ಅಧಿಕಾರ ಐಶ್ವರ್ಯಗಳ ಮೆಟ್ಟಿಲನ್ನೇರುವುದನ್ನು ಕಠಿಣತರಗೊಳಿಸಿದರು. ಅನುಕೂಲ ಪರಿಸ್ಥಿತಿ ಹೊಂದಿದ್ದ ಕೆಲವರು ಮಾತ್ರ ಸುಲಭವಾಗಿ ಮೇಲೇರಬಹುದಿತ್ತು. ಯಜಮಾನನಾಗಲು ಕೊಡಬೇಕಿದ್ದ ಪರೀಕ್ಷೆಯನ್ನು ಇವರು ಹೆಚ್ಚು ಕಠಿಣಗೊಳಿಸಿದರು. ಯಜಮಾನನಾಗಲು ಕೊಡಬೇಕಾದ ಶುಲ್ಕವನ್ನು ಹೆಚ್ಚಿಸಿದರು. ಆದರೆ ತಮ್ಮ ಪಂಗಡಕ್ಕೆ ಸೇರಿದ್ದವರಿಗೆ ಈ ನಿಯಮಗಳಿಂದ ವಿನಾಯಿತಿಯಿತ್ತು. ಸಾಮಾನ್ಯರಿಗೆಲ್ಲ ಹೆಚ್ಚು ಕಟ್ಟು. ಇವರು ಯಜಮಾನರಾಗಲು ಹೆಚ್ಚು ಕಷ್ಟ. ಆದರೆ ತಮ್ಮವರಿಗೆ ಮಾತ್ರ ವಿಶೇಷ ಸೌಲಭ್ಯ. ಅವರಿಗೆ ವಿಶೇಷ ಸವಲತ್ತು. ಆದ್ದರಿಂದ ಅವರು ಯಜಮಾನರಾಗುವುದು ಸುಲಭ. ಉದಾಹರಣೆಗೆ ಏಮಿಯೆನ್ಸ್ ಎಂಬ ನಗರದ ವಿಚಾರ ತೆಗೆದುಕೊಳ್ಳಿ. ಬಣ್ಣಗಾರರ, ಶಿಲ್ಪಿಗಳ ವೃತ್ತಿಸಂಘಗಳು ೧೪೦೦ರಲ್ಲಿ ಹೊಂದಿದ್ದ ನಿಯಮಾವಳಿಗಳಲ್ಲಿ ಈ ರೀತಿ ಇದೆ: ಸಾಮಾನ್ಯವಾಗಿ ಒಬ್ಬ ಅಭ್ಯಾಸಿ ಮೂರು ವರ್ಷಕಾಲ ಶಿಕ್ಷಣ ಪಡೆಯು

---

[1] K. von Hegel, *Städte und Gilden der germanischen Völker im Mittelalter*. vol. II, p. 315, 2 vols. Duncker u. Humblot, Leipzig, 1891.

[2] *Ibid.*, p. 452.

ಬೇಕಿತ್ತು. ತನ್ನ ಶ್ರೇಷ್ಠ ಕೃತಿಯನ್ನು ಯಜಮಾನನಿಗೆ ಒಪ್ಪಿಸಬೇಕಿತ್ತಲ್ಲದೆ, ಅವನಿಗೆ ಇಪ್ಪತ್ತೈದು ಲೀವ್ರ್ ನಾಣ್ಯ ಕೊಡಬೇಕಿತ್ತು. ಆದರೆ, "ಯಜಮಾನರ ಮಕ್ಕಳು ಅದೇ ಊರಿನಲ್ಲಿ ತಮ್ಮ ವೃತ್ತಿಯನ್ನು ಆರಂಭಿಸಿ ನಡಸಲಿಚ್ಛಿಸಿದರೆ, ಅವರಿಗೆ ಈ ಅನುಭವವಿದ್ದ ಪಕ್ಷದಲ್ಲಿ, ಯಾವ ಅಭ್ಯಂತರವೂ ಇಲ್ಲ. ಹತ್ತು ಲೀವ್ರ್ ನಾಣ್ಯ ಕೊಟ್ಟರೆ ಸಾಕು."[1] ಹೀಗೆ ಇವರು ತಮ್ಮ ಸ್ಥಾನ ಭದ್ರಪಡಿಸಿಕೊಂಡು ಇತರರಿಗೆ ಅವಕಾಶ ಕೊಡದ ಈ ಪ್ರಯತ್ನ ಪರಮಾವಧಿ ಮುಟ್ಟಿದ್ದುದನ್ನು ಪ್ಯಾರಿಸಿನ ಬಟ್ಟೆ ನೇಯುವವರ ಸಂಘದ ನಿಬಂಧನೆಗಳಲ್ಲಿ ಕಾಣಬಹುದು. "ಯಜಮಾನನ ಮಗನಲ್ಲದ ಯಾರೂ ಯಜಮಾನನಾಗಿ ನೇಯ್ಗೆ ಕಾರ್ಯ ನಡಸುವುದು ಸಾಧ್ಯವಿಲ್ಲ,"[2] ಎಂಬುದಾಗಿ ಇಲ್ಲಿ ಲಿಖಿತವಾಗಿತ್ತು.

ಯಜಮಾನರಾಗಿ ತಮ್ಮ ಸ್ಥಾನಮಾನ ಹೆಚ್ಚಿಸಿಕೊಳ್ಳುವ ಅವಕಾಶ ಕಳೆದು ಹೋದಾಗ ಈ ಕಾರೇಗಾರರಿಗೆ ಹೇಗೆ ಎನಿಸಿರಬೇಕು? ಇವರಿಂದ ಅವರಿಗೆ ಅಸಮಾಧಾನವಾದದ್ದು ಸಹಜ. ತಮ್ಮ ಹಕ್ಕುಗಳೂ ಹಿತಗಳೂ ಯಜಮಾನರ ಹಕ್ಕುಗಳಿಗೂ ಹಿತಗಳಿಗೂ ವಿರುದ್ಧ ವಾಗಿದ್ದುದು ಅವರಿಗೆ ಹೆಚ್ಚು ಹೆಚ್ಚು ಸ್ಪಷ್ಟವಾಯಿತು. ಇದಕ್ಕೆ ಅವರು ಏನು ಮಾಡ ಬೇಕು? ಅವರು ತಮ್ಮವೇ ಆದ ಕಾರೇಗಾರ ಸಂಘಗಳನ್ನು ನಿರ್ಮಿಸಿಕೊಂಡರು. "ಯಾವು ದಾದರೂ ಒಂದು ಪದಾರ್ಥದ ತಯಾರಿಕೆಯಲ್ಲಿ ಏಕಸ್ವಾಮ್ಯ ಪಡೆಯಲು ಯಜಮಾನರು ಯತ್ನಿಸಿದಂತೆ ಇವರಾದರೂ ಕೆಲಸದ ಏಕಸ್ವಾಮ್ಯ ಏರ್ಪಡಿಸಿಕೊಳ್ಳಲು ಯತ್ನಿಸಿದರು. ಉದಾಹರಣೆಗೆ, ಪ್ಯಾರಿಸಿನ ಮೊಳೆ ತಯಾರಕರಲ್ಲಿ ಒಂದು ನಿಯಮವಿತ್ತು. ಅದೇ ಜಿಲ್ಲೆ ಯಲ್ಲಿ ಈ ಕೆಲಸಮಾಡುವವನು ಯಾರಾದರೂ ದೊರಕುತ್ತಿದ್ದ ಪಕ್ಷದಲ್ಲಿ ಬೇರೆ ಎಡೆಯಿಂದ ಈ ಕಾರೇಗಾರರನ್ನು ನೇಮಿಸಿಕೊಳ್ಳುವುದಕ್ಕೆ ನಿಷೇಧವಿತ್ತು . . . . ಟೂಲೋನ ರೊಟ್ಟಿ ಕೆಲಸಗಾರರು, ಪ್ಯಾರಿಸಿನ ಚರ್ಮ ಕೆಲಸಗಾರರು—ಇವರೆಲ್ಲ ಯಜಮಾನರ ಸಂಘಗಳಿಗೆ ಇದಿರಾಗಿ ತಮ್ಮ ಸೋದರ ಸಂಸ್ಥೆಗಳನ್ನು ನಿರ್ಮಿಸಿಕೊಂಡರು . . . ."[3]

ಇಂದಿನ ಕಾರ್ಮಿಕ ಸಂಘಗಳಂತೆ ಈ ಕಾರೇಗಾರರ ಸಂಘಗಳು ತಮ್ಮ ಸದಸ್ಯರಿಗೆ ಹೆಚ್ಚು ಕೂಲಿ ದೊರಕಿಸಿಕೊಡಲು ಯತ್ನಿಸಿದುವು. ಇಂದಿನ ಕಾರ್ಮಿಕ ಸಂಘಗಳಂತೆಯೇ ಅವೂ ಕೂಡ ತಮ್ಮ ಈ ಯತ್ನದಲ್ಲಿ ಯಜಮಾನರ ವಿರೋಧವನ್ನು ಎದುರಿಸಬೇಕಾಗಿತ್ತು. ಯಜಮಾನರು ಈ ಬಗ್ಗೆ ನಗರಾಧಿಕಾರಿಗಳಿಗೆ ದೂರು ಹೊತ್ತರು. ಈ ಅಧಿಕಾರಿಗಳು ಕೂಡಲೇ ಕಾರೇಗಾರ ಸಂಘಗಳನ್ನು ಶಾಸನಬಾಹಿರವನ್ನಾಗಿ ಮಾಡಿದರು. ೧೩೯೬ರಲ್ಲಿ ಲಂಡನ್ನಿನಲ್ಲಿ ಹೀಗಾಯಿತು: ಅಲ್ಲಿನ ಜೀನುಗಾರ ಕಸಬಿನ ಯಜಮಾನರಿಗೂ ಕಾರೇಗಾರ ರಿಗೂ ನಡುವೆ ನಡೆದ ವ್ಯಾಜ್ಯವೊಂದಕ್ಕೆ ಸಂಬಂಧಿಸಿದ ಕಡತವೊಂದರಲ್ಲಿ ಈ ವಿಚಾರವಿದೆ: "ಈ ಕಸಬಿನ ಕೆಲವು ದುಡಿಮೆಗಾರರು ಗೌರವ ಅರ್ಹತೆಗಳ ಸೋಗಿನಲ್ಲಿ ತಮ್ಮಲ್ಲಿನ ಕೆಲವು ಕಾರೆಗಾರರ ಮೇಲೆ ಪ್ರಭಾವ ಬೀರಿ ಸಂಘ ರಚಿಸಿಕೊಂಡಿದ್ದರು. ತಮ್ಮ ಕೂಲಿ

---

[1] Thierry, *op. cit*., vol. 2, p. 5.
[2] Renard, *op. cit.*, p. 39.
[3] *Ibid.*, p. 19.

ಯನ್ನು ಅತಿಯಾಗಿ ಹೆಚ್ಚಿಸಿಕೊಳ್ಳುವುದೇ ಇದರ ಉದ್ದೇಶ . . . . ಈ ನಗರದ ಇತರ ಕಸಬುಗಳಲ್ಲಿರುವ ದುಡಿಮೆಗಾರರಂತೆ, ಅವರು ತಮ್ಮ ಕಸಬುಗಳಲ್ಲಿರುವ ನಿಯಮಗಳಿಗೆ ಬದ್ಧರಾಗಿರುವಂತೆ, ಮೇಲೆ ಹೇಳಿದ ಕಸಬಿನ ದುಡಿಮೆಗಾರರೂ ಇನ್ನು ಮುಂದೆ ಈ ಕಸಬಿನ ಯಜಮಾನರ ನಿಯಮ ಹಾಗೂ ಆಡಳಿತಕ್ಕೆ ಬದ್ಧರಾಗಿರತಕ್ಕದೆಂದೂ, ಇನ್ನು ಮುಂದೆ ಇವರು ಸಂಘ ಸಭೆಗಳೇ ಮುಂತಾದ ಶಾಸನ ಬಾಹಿರ ಚಟುವಟಿಕೆಗಳಲ್ಲಿ ನಿರತ ರಾಗಕೂಡದೆಂದೂ, ಹಾಗೆ ಮಾಡಿದರೆ ದಂಡ ತೆರಬೇಕಾಗುವುದೆಂದೂ ತೀರ್ಮಾನಿಸಿದರು."[1]

ಫ್ರಾನ್ಸಿನಲ್ಲೂ ಹೀಗೇ ಆಯಿತು. ೧೫೪೧ರಲ್ಲಿ ಲೈಯನ್ಸಿನ ಪ್ರತಿನಿಧಿಗಳೂ ಪುರ ಪ್ರಮುಖರೂ ಅಲ್ಲಿನ ನಿವಾಸಿಗಳೂ ಮೊದಲನೆಯ ಫ್ರಾನ್ಸಿಸನಿಗೆ ದೂರಿಟ್ಟರು : "ಕಳೆದ ಮೂರು ವರ್ಷಗಳಲ್ಲಿ ಮುದ್ರಣ ಕಸಬಿನ ಕೆಲವು ದುಡಿಮೆಗಾರರೂ ಕೆಟ್ಟ ಕಾರೇಗಾರರೂ ಸೇರಿ, ಉಳಿದ ಕಾರೇಗಾರರಲ್ಲಿ ಹಲವರನ್ನು ದೊಂಬಿ ಏಳುವಂತೆ ಮಾಡಿದ್ದಾರೆ. ಇವರಿಗೆ ಹೆಚ್ಚು ಕೂಲಿಯನ್ನೂ, ಪ್ರಾಚೀನ ಸಂಪ್ರದಾಯದಂತೆ ಕೊಡುತ್ತಿರುವುದಕ್ಕಿಂದ ಹೆಚ್ಚು ಪುಷ್ಟಿಕರವಾದ ಆಹಾರವನ್ನೂ ಕೊಡಬೇಕೆಂದು ಈ ಕಸಬಿನ ಯಜಮಾನರನ್ನು ಬಲಾತ್ಕರಿ ಸುವ ಉದ್ದೇಶದಿಂದ ಇವರೆಲ್ಲ ಒಂದಾಗಿದ್ದಾರೆ . . . . ತತ್ಫಲವಾಗಿ ಮುದ್ರಣ ಕಸಬು ಈ ಲಯನ್ಸ್ ನಗರದಲ್ಲಿ ಸಂಪೂರ್ಣವಾಗಿ ನಾಶವಾಗಿದೆ . . . ."[2] ಉದ್ರಿಕ್ತರಾದ ಈ ಅರ್ಜಿ ದಾರರು ದೂರು ಕೊಟ್ಟು ಅಷ್ಟಕ್ಕೇ ಸುಮ್ಮನಾಗಲಿಲ್ಲ. ಇದಕ್ಕೆ ಪರಿಹಾರವನ್ನೂ ಸೂಚಿಸಿ ದರು. ಈ ಸಲಹೆಯನ್ನು ಫ್ರಾನ್ಸಿಸ್ ಸ್ವೀಕರಿಸಿದ; ಉದಾರ ಬುದ್ಧಿಯಿಂದ ಇದನ್ನು ಶಾಸನವನ್ನಾಗಿ ಮಾಡಿದ. "ಮುದ್ರಕ ವರ್ಗದ ಕಾರೇಗಾರರೂ ಅಭ್ಯಾಸಿಗಳೂ ಯಾವ ರೀತಿಯ ಪ್ರಮಾಣ ವಚನವನ್ನೂ ಸ್ವೀಕರಿಸಕೂಡದು ; ಏಕಸ್ವಾಮ್ಯ ಏರ್ಪಡಿಸಿಕೊಳ್ಳ ಬಾರದು ; ತಮ್ಮಲ್ಲಿ ಯಾವ ಮುಖಂಡನನ್ನೂ ನೇಮಿಸಿಕೊಳ್ಳಕೂಡದು ; . . . . ಯಾವ ಬಾವುಟವನ್ನಾಗಲಿ ಲಾಂಛನವನ್ನಾಗಲಿ ಹೊಂದಿರಕೂಡದು ; ತಮ್ಮ ಯಜಮಾನರ ಮನೆ ಅಥವಾ ಪಾಕಗೃಹಗಳ ಮುಂದಾಗಲಿ, ಬೇರೆಲ್ಲಾಗಲಿ ನ್ಯಾಯಾಲಯದ ಅನುಮತಿ ಯಿಲ್ಲದೆ ಐವರಿಗಿಂತ ಹೆಚ್ಚು ಸಂಖ್ಯೆಯಲ್ಲಿ ಸೇರಕೂಡದು. ಹೀಗೆ ಮಾಡಿದ್ದೇ ಆದರೆ, ಏಕಸ್ವಾಮ್ಯ ಹೊಂದಲು ಯತ್ನಿಸಿದ ಕಾರಣಕ್ಕಾಗಿ ಇಂಥವರು ಕಾರಾಗೃಹ, ಬಹಿಷ್ಕಾರ ಅಥವಾ ಶಿಕ್ಷೆಗೆ ಒಳಗಾಗುವರು . . . .

"ಈ ಕಾರೇಗಾರರು ತಾವು ಆರಂಭಿಸಿದ ಯಾವ ಕೆಲಸವನ್ನೇ ಆಗಲಿ, ಸಂಪೂರ್ಣ ಗೊಳಿಸತಕ್ಕದ್ದು ; ಅದನ್ನು ಅಪೂರ್ಣವಾಗಿ ಬಿಡಕೂಡದು ; ಮತ್ತು ಮುಷ್ಕರ ಹೂಡ ಕೂಡದು."[3]

ಯೂರೋಪಿನಲ್ಲಿ ಸಂಭವಿಸಿದ ಉಗ್ರವಾದ ಪ್ಲೇಗು ವ್ಯಾಧಿಯ ಪರಿಣಾಮವಾಗಿ

---

[1] Bland, Brown, and Tawney, *op. cit.*, pp. 139-141.

[2] *Recueil Général des anciennes Lois Françaises*, vol. XII, Part 2, pp. 763-5.

[3] *Ibid.*

ಹಲವು ಜನ ಮಡಿದಾಗ, ಅಧಿಕ ಕೂಲಿಯ ವಿವಾದ ಸಹಜವಾಗಿಯೇ ಬಹು ತೀವ್ರ ವಾಯಿತು. ಹಲವು ಜನ ಮಡಿದುದರ ಫಲವಾಗಿ ಕೆಲಸಗಾರರ ಸಂಖ್ಯೆ ಕಡಮೆಯಾಯಿತು. ಅವರಿಗಾಗಿ ಬೇಡಿಕೆ ಅಧಿಕವಾದುದರಿಂದ ಕೂಲಿಯ ದರ ಮೇಲೇರುವುದು ಅನಿವಾರ್ಯ ವಾಯಿತು. ಕೂಲಿಯ ದರ ಈ ವ್ಯಾಧಿಗೆ ಮುನ್ನ ಇದ್ದ ಮಟ್ಟದಲ್ಲೇ ಇರುವಂತೆ ಮಾಡುವ ಉದ್ದೇಶದಿಂದ ಹಳ್ಳಿಗಳಲ್ಲಿ ಶಾಸನ ರಚಿಸಿದಂತೆಯೇ ನಗರಗಳಲ್ಲೂ ಇದೇ ಉದ್ದೇಶದಿಂದ ಶಾಸನಗಳು ರಚಿತವಾದುವು. ಇಂಗ್ಲೆಂಡಿನಲ್ಲಿ ೧೩೪೯ರ ಕಾರ್ಮಿಕರ ಶಾಸನದಲ್ಲಿ ಹೀಗೆ ಹೇಳಿತ್ತು: "ಯಾರೇ ಆಗಲಿ, ಇನ್ನೊಬ್ಬನಿಗೆ ಕಟ್ಟಳೆಗಿಂತ ಹೆಚ್ಚಿನ ಕೂಲಿ, ಪೋಷಾಕು, ಬಾಡಿಗೆ ಅಥವಾ ವೇತನ ಕೊಡಕೂಡದು, ಅಥವಾ ಕೊಡುವುದಾಗಿ ವಾಗ್ದಾನ ಮಾಡ ಕೂಡದು . . . . ಅಲ್ಲದೆ ಯಾರೇ ಆಗಲಿ ಹೀಗೆ ಯಾವ ರೀತಿಯ ಹೆಚ್ಚಿನ ಸಂಭಾವನೆ ಯನ್ನೂ ಬಯಸಕೂಡದು, ಪಡೆಯಕೂಡದು. ಹೀಗೆ ಮಾಡಿದರೆ, ಈ ರೀತಿ ಪಾವತಿ ಮಾಡಿದ ಸಂಭಾವನೆಯ ಎರಡರಷ್ಟು ದಂಡ ತೆರಬೇಕಾದೀತು . . . . ಜೀನುಗಾರರು, ಚರ್ಮ ಚಕ್ಕಳ ಹದಗಾರರು, ಪಾದರಕ್ಷೆ ತಯಾರಕರು, ದರ್ಜಿಗಳು, ಕಮ್ಮಾರರು, ಬಡಗಿ ಗಳು, ಕಲ್ಲುಕುಟಿಗರು, ಹೆಂಚು ತಯಾರಕರು, ದೋಣಿ ಮಾಡುವವರು, ಬಂಡಿಯವರು ಮುಂತಾದ ಕಸಬುದಾರರೂ ಕಾರ್ಮಿಕರೂ ತಮ್ಮ ದುಡಿಮೆ ಅಥವಾ ಕುಶಲ ಕರ್ಮಕ್ಕೆ ವಾಡಿಕೆಯಾಗಿ ಕೊಡುತ್ತಿದ್ದುದಕ್ಕಿಂತ ಹೆಚ್ಚು ಸಂಭಾವನೆ ಪಡೆಯಕೂಡದು."[1]

ಫ್ರಾನ್ಸಿನಲ್ಲೂ ೧೩೫೧ರಲ್ಲಿ ಇಂಥದೇ ಶಾಸನ ಜಾರಿಗೆ ಬಂತು: "ದ್ರಾಕ್ಷಿ ಕೊಯ್ಯು ವವರು ದ್ರಾಕ್ಷಿಬಳ್ಳಿಯನ್ನು ನೋಡಿಕೊಳ್ಳಬೇಕು. ಪ್ಲೇಗ್ ವ್ಯಾಧಿ ಹಬ್ಬುವ ಮುನ್ನ ಪಡೆಯುತ್ತಿದ್ದುದಕ್ಕಿಂತ ಮೂರನೆಯ ಒಂದು ಭಾಗದಷ್ಟು ಮಾತ್ರ ಹೆಚ್ಚು ಕೂಲಿಯನ್ನು ತಮ್ಮ ಕೆಲಸಕ್ಕಾಗಿ ಪಡೆಯಬಹುದು. ಇದಕ್ಕಿಂತ ಹೆಚ್ಚು ಕೂಲಿ ಕೊಡುವುದಾಗಿ ಯಾರಾದರೂ ಮುಂದೆ ಬಂದರೂ ಅವರು ಪಡೆಯಕೂಡದು . . . . ಇದಕ್ಕಿಂತ ಹೆಚ್ಚು ದಿನಗೂಲಿ ಕೊಡುವವರು, ಪಡೆಯುವವರು, ಇಬ್ಬರೂ ತಲಾ ಅರುವತ್ತು ಸೋಲ್ ನಾಣ್ಯ ದಂಡ ತೆರಬೇಕು. ದಂಡ ತೆರಲು ಅವರಲ್ಲಿ ಹಣ ಇಲ್ಲದಿದ್ದರೆ ರೊಟ್ಟಿ ನೀರು ಮಾತ್ರ ಕೊಟ್ಟು ನಾಲ್ಕು ದಿನಗಳ ಕಾಲ ಅವರನ್ನು ಕಾರಾಗೃಹದಲ್ಲಿಡಲಾಗುವುದು . . . ."[2] ಈ ಶಾಸನ ಮೇಲು ನೋಟಕ್ಕೆ ನ್ಯಾಯವಾಗಿ ಕಂಡರೂ, ವಸ್ತುತಃ ಯಜಮಾನನಿಗಿಂತ ಕಾರ್ಮಿಕರಿಗೆ ಇದರ ಬಾಧೆ ಹೆಚ್ಚಾಗಿ ತಟ್ಟುತ್ತಿತ್ತು. ದಂಡ ತೆರಲು ಹಣವಿಲ್ಲದ ಕಾರ್ಮಿಕ ಕಾರಾಗೃಹಕ್ಕೆ ತೆರಳಬೇಕಾಗುತ್ತಿತ್ತು. ಆದರೆ ಜನರನ್ನು ಕಾರಾಗೃಹಕ್ಕೆ ತಳ್ಳುವುದರಿಂದ ಕಾರ್ಮಿಕರ ಅಭಾವ ಪರಿಸ್ಥಿತಿ ನಿವಾರಣೆಯಾಗುತ್ತಿತ್ತೆ ?

ಈ ನಿಬಂಧನೆಗಳು ಯಶಸ್ವಿಯಾಗಲಿಲ್ಲ. ಯಜಮಾನರು ಹೆಚ್ಚು ಕೂಲಿ ಕೊಡು ತ್ತಿದ್ದರು. ಕಾರ್ಮಿಕರು ಹೆಚ್ಚು ಕೂಲಿ ಕೇಳುತ್ತಿದ್ದರು, ಪಡೆಯುತ್ತಿದ್ದರು. ಕಾರ್ಮಿಕ ಸಂಘ

---

[1] Bland, Brown, and Tawney, *op. cit.*, pp. 165, 166.

[2] *Ordonnances, op. cit.*, p. 367.

ಗಳು ವಿಸರ್ಜಿಸಲ್ಪಟ್ಟವು. ಅವುಗಳ ಸದಸ್ಯರು ದಂಡ, ಜೈಲುವಾಸ ಅನುಭವಿಸಬೇಕಾಯಿತು. ಆದರೆ ಇತರ ಸಂಘಗಳು ಹುಟ್ಟಿಕೊಂಡುವು. ಹೆಚ್ಚು ಕೂಲಿ ಹೆಚ್ಚು ಸೌಲಭ್ಯಗಳಿಗಾಗಿ ಮುಷ್ಕರಗಳು ಮುಂದುವರಿದುವು. ಇತರ ಕಾರ್ಮಿಕರಿಗಿಂತ ಕಾರೇಗಾರರು ಉತ್ತಮ ಸ್ಥಿತಿಯಲ್ಲಿದ್ದರು. ಏಕೆಂದರೆ ಕಾರ್ಮಿಕರು ಈ ಸಂಘಗಳನ್ನು ಸೇರಲು ಅವಕಾಶವಿರಲಿಲ್ಲ. ಈ ಕಾರ್ಮಿಕರಿಗೆ ಯಾವ ಸಂಘದಲ್ಲೂ ಯಾವ ಹಕ್ಕೂ ಇರಲಿಲ್ಲ. ಇವರು ಶ್ರೀಮಂತ ಕೈಗಾರಿಕೋದ್ಯಮಿಗಳಿಗಾಗಿ ಕೆಲಸಮಾಡಿ, ಅವರ ಕೃಪೆಗೆ ಕೈಯೊಡ್ಡಬೇಕಾಗಿತ್ತು. ಅವರ ಕೆಲಸದ ಪರಿಸ್ಥಿತಿ ತುಂಬಾ ಹೀನವಾಗಿತ್ತು. ಕಡಮೆ ಕೂಲಿ ; ಉಪವಾಸ. ಕೊಳಕಾದ, ಅನಾರೋಗ್ಯಕರವಾದ ಜೋಪಡಿಗಳಲ್ಲಿ ವಾಸ. ಈ ಕಾರ್ಮಿಕರು ಬಳಸುತ್ತಿದ್ದ ಸಾಮುಗ್ರಿ ಉಪಕರಣಗಳೂ ಅವರವಲ್ಲ. ತಮ್ಮ ದುಡಿಮೆ ವಿನಾ ಬೇರಾವ ಆಸ್ತಿಯೂ ಇಲ್ಲದ, ತಮ್ಮ ಜೀವನಕ್ಕಾಗಿ ಅನುಕೂಲಕರ ಪೇಟೆ ಪರಿಸ್ಥಿತಿ ಹಾಗೂ ಯಜಮಾನರನ್ನೇ ಅವಲಂಬಿಸಬೇಕಾಗಿರುವ ಇಂದಿನ ಕಾರ್ಮಿಕರ ಆದಿ ಪುರುಷರು ಇವರು. ಅಸಂಖ್ಯಾತ ಮಂದಿ ನಿರ್ಗತಿಕರು ಕೆಳಗೆ, ಭೋಗ ಜೀವನ ನಡಸುತ್ತಿದ್ದ ಶ್ರೀಮಂತರು ಮೇಲೆ—ಹೀಗೆ ಆಗಿನ ಕಾಲದ ನಗರಗಳಲ್ಲಿ ಈ ಎರಡು ವೈಪರೀತ್ಯಗಳನ್ನೂ ಕಾಣಬಹುದಿತ್ತು. (ಫ್ಲಾರೆನ್ಸ್ ನಗರದ ವೈಭವದ ದಿನಗಳಲ್ಲಿ ಅಲ್ಲಿ ಇಪ್ಪತ್ತು ಸಾವಿರಕ್ಕೂ ಮಿಕ್ಕಿದ ಭಿಕ್ಷುಕರೇ ಇದ್ದರಂತೆ!)

ಊಳಿಗಮಾನ್ಯ ಪ್ರಭುಗಳಿಂದ ವಿಮೋಚನೆ ಹೊಂದಲು ನಡಸಿದ ಹೋರಾಟದಲ್ಲಿ ಬಡವ, ಬಲ್ಲಿದ, ವರ್ತಕ, ಯಜಮಾನ, ಕೆಲಸಗಾರ—ಎಂಬ ಭೇದವಿಲ್ಲದೆ ಎಲ್ಲರೂ ಒಂದಾಗಿದ್ದರು. ಆದರೆ ಈ ಹೋರಾಟದಲ್ಲಿ ಲಭಿಸಿದ ವಿಜಯದ ಫಲ ಮಾತ್ರ ಮೇಲಣ ವರ್ಗದ ಜನರಿಗೇ ಹೋಯಿತು. ಕೆಳವರ್ಗದ ಜನಕ್ಕೆ ಆದುದಿಷ್ಟೆ: ಯಜಮಾನರ ಬದಲಾವಣೆ. ಹಿಂದೆ ಆಡಳಿತ ಊಳಿಗ ಮಾನ್ಯ ಪ್ರಭುಗಳ ಕೈಯಲ್ಲಿತ್ತು. ಬಡವರ ಅತೃಪ್ತಿಯ ಜತೆಗೆ ಈ ಬಲಿಷ್ಠ ಆಡಳಿತಗಾರರ ಬಗ್ಗೆ ಸಣ್ಣ ಕಸಬಿನ ಜನರ ಮಾತ್ಸರ್ಯ ಅಸಮಾಧಾನಗಳೂ ಸೇರಿ, ಹದಿನಾಲ್ಕನೆಯ ಶತಮಾನದ ಉತ್ತರಾರ್ಧದಲ್ಲಿ ಅನೇಕ ದಂಗೆಗಳು ಸಂಭವಿಸಿದುವು. ರೈತರ ಬಂಡಾಯಗಳಂತೆ ಇವು ಯೂರೋಪಿನಾದ್ಯಂತ ಹಬ್ಬಿದುವು. ಇದೊಂದು ವರ್ಗ ಘರ್ಷಣೆ—ಬಡವರು ಶ್ರೀಮಂತರ ವಿರುದ್ಧ, ಹಕ್ಕಿಲ್ಲದವರು ಹಕ್ಕುಳ್ಳವರ ವಿರುದ್ಧ ನಡಸಿದ ಘರ್ಷಣೆ. ಕೆಲವು ಎಡೆಗಳಲ್ಲಿ ಬಡವರು ಜಯ ಪಡೆದರು. ಇವರು ಕೆಲವು ವರ್ಷಗಳ ಕಾಲ ಮಾತ್ರ ಕೆಲವು ನಗರಗಳ ಸ್ವಾಮ್ಯ ಹೊಂದಿದ್ದರು. ಇವರು ಅಧಿಕಾರದಿಂದ ಉರುಳುವ ಮೊದಲು, ಕೆಲವು ಎಡೆಗಳಲ್ಲಿ ಬಹು ಅಪೇಕ್ಷಿತವಾದ ಕೆಲವು ಸುಧಾರಣೆಗಳನ್ನು ತಂದರು. ಇನ್ನು ಕೆಲವು ಎಡೆಗಳಲ್ಲಿ ಇವರು ಜಯ ಗಳಿಸಿದರೂ ತಮ್ಮ ತಮ್ಮಲ್ಲೇ ಜಗಳವಾಡಿ ಕೆಳಗುರುಳಿದರು. ಹಲವು ಎಡೆಗಳಲ್ಲಿ ಮೊದಲಿಂದಲೂ ಐಶ್ವರ್ಯವಂತರಿಗೇ ಜಯವಾಯಿತು. ಆದರೆ ಅವರು ದಲಿತ ಜನರ ಸಮ್ಮಿಳಿತ ಶಕ್ತಿಯನ್ನು ಕಂಡು ಅಂಜಿಕೆ ಹೊಂದದೆ ಇರಲಿಲ್ಲ. ಇದು ಸಹಜವಾಗಿತ್ತು.

ಈ ಅವ್ಯವಸ್ಥೆಯ ಕಾಲವಾದ ಮೇಲೆ ವೃತ್ತಿಸಂಘಗಳ ಅವನತಿ ಆರಂಭವಾಯಿತು.

ಸ್ವತಂತ್ರ ನಗರಗಳ ಬಲ ಕುಂದಿತು. ಮತ್ತೆ ಅವುಗಳ ಮೇಲೆ ಬಾಹ್ಯ ಹತೋಟಿ ಏರ್ಪಟ್ಟಿತು. ಅವರು ಹಿಂದೆ ಕಂಡರಿಯದ, ಬಲಿಷ್ಠನಾದ ಶ್ರೀಮಂತ ಪ್ರಭುವಿನ, ಅಥವಾ ರಾಜನ ಆಡಳಿತ ಆರಂಭವಾಯಿತು. ಅಸಂಘಟಿತ ವಿಭಾಗಗಳನ್ನು ಒಂದುಗೂಡಿಸಿ ರಾಷ್ಟ್ರ ಪ್ರಭುತ್ವದ ನಿರ್ಮಾಣಕಾರ್ಯ ಕೈಗೂಡಿತು.

## ೭. ಬಂದನಾ ಭೂಪಾಲನು !

ಈ ಪುಸ್ತಕವನ್ನು ಹತ್ತು ಅಥವಾ ಹನ್ನೊಂದನೆಯ ಶತಮಾನದಲ್ಲಿ ಬರೆದಿದ್ದರೆ ಲೇಖಕನಿಗೆ ಎಷ್ಟೋ ಸುಲಭವಾಗಿರುತ್ತಿತ್ತು. ಬಹಳ ಹಿಂದಣ ಲೇಖನಗಳೇ ಈ ಪುಸ್ತಕಕ್ಕೆ ಆಧಾರ. ಈ ಲೇಖನಗಳೆಲ್ಲಾ ಸಾಮಾನ್ಯವಾಗಿ ಪರಭಾಷೆಯಲ್ಲೇ ಇವೆ—ಲ್ಯಾಟಿನ್, ಹಳೆಯ ಹೊಸ ಫ್ರೆಂಚ್, ಹಳೆಯ ಹೊಸ ಜರ್ಮನ್ ಭಾಷೆಯವೇ ಹೆಚ್ಚು. ಮಧ್ಯಯುಗದ ಪೂರ್ವಭಾಗದ ಚರಿತ್ರಕಾರ ತನ್ನ ಪುಸ್ತಕಕ್ಕೆ ಬೇಕಾದ ಸಾಮಗ್ರಿಯನ್ನು ತನಗೆ ಆಗ ಗೊತ್ತಿದ್ದ ಭಾಷೆಯಲ್ಲೇ ಪಡೆಯಬಹುದಿತ್ತು. ಅದು ಲ್ಯಾಟಿನ್. ಅವನು ಲಂಡನ್ನಿನಲ್ಲೇ ವಾಸಿಸಲಿ, ಪ್ಯಾರಿಸಿನಲ್ಲೇ ಇರಲಿ, ಹ್ಯಾಂಬರ್ಗ್ ಆಮಸ್ಟರ್‌ಡಾಂ ಅಥವಾ ರೋಂನಲ್ಲೇ ಇರಲಿ, ಏನೂ ವ್ಯತ್ಯಾಸವಿರಲಿಲ್ಲ. ಏಕೆಂದರೆ ಲ್ಯಾಟಿನ್ನು ಸಮಸ್ತ ವಿದ್ವಾಂಸರ ಸಾಮಾನ್ಯ ಭಾಷೆಯಾಗಿತ್ತು. ಆ ಕಾಲದಲ್ಲಿ ಮಕ್ಕಳು ಶಾಲೆಯಲ್ಲಿ ಇಂಗ್ಲಿಷ್, ಫ್ರೆಂಚ್, ಜರ್ಮನ್, ಡಚ್ ಅಥವಾ ಇಟಾಲಿಯನ್ ಭಾಷೆಯ ಅಧ್ಯಯನ ಮಾಡುತ್ತಿರಲಿಲ್ಲ. ಅವರು ಓದುತ್ತಿದ್ದುದು ಲ್ಯಾಟಿನ್. ಇಂಗ್ಲಿಷ್, ಫ್ರೆಂಚ್, ಜರ್ಮನ್ ಮುಂತಾದ ಭಾಷೆಗಳನ್ನು ಜನ ಆಡುತ್ತಿದ್ದರು. ಆದರೆ ಇವುಗಳು ಅನಂತರವೂ ಬಹುಕಾಲ ಬರಹದ ಭಾಷೆಗಳಾಗಿರಲಿಲ್ಲ. ಸ್ಪೈಯ್ನಿನ ಮಠದ ಸನ್ಯಾಸಿಯೂ ಇಂಗ್ಲಿಷ್ ಮಠದ ಸನ್ಯಾಸಿಯೂ ಪಠಿಸುತ್ತಿದ್ದ ಬೈಬಲ್ಲಿನ ಭಾಷೆ ಒಂದೇ—ಅದು ಲ್ಯಾಟಿನ್.

ಆ ಕಾಲದ ವಿಶ್ವವಿದ್ಯಾನಿಲಯಕ್ಕೆ ನೀವು ಭೇಟಿ ಕೊಟ್ಟದ್ದೇ ಆದರೆ ನೀವು ಪಶ್ಚಿಮ ಯೂರೋಪಿನ ಎಲ್ಲ ಭಾಗಗಳಿಂದಲೂ ಬಂದ ವಿದ್ಯಾರ್ಥಿಗಳನ್ನು ಕಾಣುತ್ತಿದ್ದಿರಿ. ಇವರು ಯಾವ ಕಷ್ಟವೂ ಇಲ್ಲದೆ ಒಟ್ಟಿಗೆ ಕಲೆತು ಸಂಭಾಷಿಸುತ್ತಿದ್ದರು, ಒಟ್ಟಿಗೆ ಅಧ್ಯಯನ ಮಾಡುತ್ತಿದ್ದರು. ಆಗ ವಿಶ್ವವಿದ್ಯಾನಿಲಯಗಳು ನಿಜವಾಗಿಯೂ ಅಂತರರಾಷ್ಟ್ರೀಯ ಸಂಸ್ಥೆಗಳಾಗಿದ್ದುವು.

ಮತವೂ ಆಗ ಸಾರ್ವತ್ರಿಕವಾಗಿತ್ತು. ಕ್ರೈಸ್ತನೆಂದು ಕರೆದುಕೊಳ್ಳುತ್ತಿದ್ದ ಪ್ರತಿಯೊಬ್ಬನೂ ಜನ್ಮತಃ ಕ್ಯಾಥೋಲಿಕ್ ಪಂಗಡದವನೇ ಆಗಿದ್ದ. ಬೇರೆ ಪಂಗಡವೇ ಇರಲಿಲ್ಲ. ನಿಮಗೆ ಇಷ್ಟವಿರಲಿ, ಇಲ್ಲದಿರಲಿ, ಆ ಚರ್ಚಿಗೆ ನೀವು ತೆರಿಗೆ ಕೊಡಬೇಕಾಗಿತ್ತು, ಅದರ ನಿಯಮ ನಿಬಂಧನೆಗಳಿಗೆ ಬದ್ಧರಾಗಬೇಕಿತ್ತು. ಸೌಥಾಂಪ್ಟನ್ನಿನ ಚರ್ಚಿನ ಸಂಪ್ರದಾಯಕ್ಕೂ ಜಿನೋವಾ ಚರ್ಚಿನ ಸಂಪ್ರದಾಯಕ್ಕೂ ವ್ಯತ್ಯಾಸವಿರಲಿಲ್ಲ. ಮತಕ್ಕೆ ಆಗ ರಾಜ್ಯದ ಎಲ್ಲೆಯ ಮಿತಿಯಿರಲಿಲ್ಲ.

ಇಂದು ಜನರಲ್ಲಿ ಒಂದು ಸಾಮಾನ್ಯ ನಂಬಿಕೆ ಇದೆ. ಮಕ್ಕಳಿಗೆ ಹುಟ್ಟುವಾಗಲೇ ರಾಷ್ಟ್ರಪ್ರೇಮ ಇರುತ್ತದೆಂಬುದು ಆ ನಂಬಿಕೆ. ಆದರೆ ಇದು ನಿಜವಲ್ಲ. ರಾಷ್ಟ್ರಪ್ರೇಮ ಉದ್ಭವಿಸುವುದು ರಾಷ್ಟ್ರವೀರರ ಕೃತ್ಯಗಳನ್ನು ಕುರಿತ ವೃತ್ತಾಂತವನ್ನು ಸತತವಾಗಿ ಓದುವುದರಿಂದ, ಕೇಳುವುದರಿಂದ. ಹತ್ತನೆಯ ಶತಮಾನದ ಮಕ್ಕಳು ತಮ್ಮ ಶಾಲೆಯ ಪಠ್ಯ

ಪುಸ್ತಕದಲ್ಲಿ ತಮ್ಮ ದೇಶದ ಹಡಗುಗಳು ಶತ್ರುರಾಜ್ಯದ ಹಡಗುಗಳನ್ನು ಮುಳುಗಿಸುವ ಚಿತ್ರಗಳನ್ನು ಕಾಣುತ್ತಿರಲಿಲ್ಲ. ಇವಕ್ಕೆ ಒಳ್ಳೆಯ ಕಾರಣವೇ ಇತ್ತು. ನಾವು ಇಂದು ತಿಳಿದಿರುವಂತೆ ಅಂದು ದೇಶಗಳೇ ಇರಲಿಲ್ಲ.

ಕೈಗಾರಿಕೆ ಕುಟುಂಬವನ್ನು ಬಿಟ್ಟು ನಗರಕ್ಕೆ ಬಂತೆಂಬುದನ್ನು ನೀವು ಹಿಂದಣ ಅಧ್ಯಾಯದಲ್ಲಿ ಓದಿದ್ದೀರಿ. ಅದು ರಾಷ್ಟ್ರೀಯವಾಗಿರಲಿಲ್ಲ, ಸ್ಥಳೀಯವಾಗಿತ್ತು. ಚೆಸ್ಟರಿನ ವೃತ್ತಿಸಂಘದ ಸದಸ್ಯನಿಗೆ ಲಂಡನ್ನಿನ ವಸ್ತುಗಳೂ ಪ್ಯಾರಿಸಿನಿಂದ ಬರುವ ವಸ್ತುಗಳಷ್ಟೇ 'ವಿದೇಶೀಯ' ವೆನಿಸುತ್ತಿದ್ದುವು. ಏಕೆಂದರೆ ಎರಡೂ ಅವನ ಏಕಸ್ವಾಮ್ಯಕ್ಕೆ ಭಂಗ ತರುತ್ತಿದ್ದುವು. ಒಟ್ಟು ವ್ಯಾಪಾರ ಮಾಡುತ್ತಿದ್ದವನಾದರೋ, ಇಡೀ ಜಗತ್ತೇ ತನ್ನ ವ್ಯಾಪ್ತಿಗೆ ಒಳಪಟ್ಟಿದೆಯೆಂದು ಭಾವಿಸಿದ್ದ. ಜಗತ್ತಿನ ಎಲ್ಲ ಭಾಗಗಳಲ್ಲೂ ಪ್ರಭಾವ ಗಳಿಸಲು ಆತ ಬಹಳವಾಗಿ ಪ್ರಯತ್ನಿಸುತ್ತಿದ್ದ.

ಆದರೆ ಮಧ್ಯಯುಗದ ಅಂತ್ಯದ ವೇಳೆಗೆ, ಹದಿನೈದನೆಯ ಶತಮಾನದ ಸುಮಾರಿಗೆ, ಇದೆಲ್ಲಾ ಬದಲಾಯಿತು. ರಾಷ್ಟ್ರಗಳು ಅಸ್ತಿತ್ವಕ್ಕೆ ಬಂದುವು. ರಾಷ್ಟ್ರೀಯ ವಿಭಾಗಗಳು ಸ್ಪಷ್ಟವಾದುವು. ರಾಷ್ಟ್ರೀಯ ಸಾಹಿತ್ಯಗಳು ಉದಿಸಿದುವು. ಕೈಗಾರಿಕೆಗಳನ್ನು ಕುರಿತ ಸ್ಥಳೀಯ ನಿಬಂಧನೆಗಳ ಬದಲು ರಾಷ್ಟ್ರೀಯ ಕಟ್ಟಳೆಗಳು ಜಾರಿಗೆ ಬಂದುವು. ರಾಷ್ಟ್ರ ಶಾಸನ, ರಾಷ್ಟ್ರ ಭಾಷೆ, ಹಾಗೂ ರಾಷ್ಟ್ರೀಯ ಚರ್ಚು ಕೂಡ, ಉದಿಸಿದುವು. ಜನ ತಾವು ಮ್ಯಾಡ್ರಿಡ್ಡಿನ ಜನರೆಂದು, ಕೆಂಟಿನವರೆಂದು, ಬರ್ಗಂಡಿಯವರೆಂದು ತಿಳಿದುಕೊಳ್ಳುವುದು ಬಿಟ್ಟು, ಸ್ಪೇಯ್ನಿನವರೆಂದು, ಇಂಗ್ಲೆಂಡಿನವರೆಂದು, ಫ್ರಾನ್ಸಿನವರೆಂದು ಕರೆದುಕೊಳ್ಳುವುದು ಆರಂಭವಾಯಿತು. ಜನಗಳು ಈ ನಗರಕ್ಕೋ ಅಥವಾ ಆ ಊಳಿಗಮಾನ್ಯ ಪ್ರಭುವಿಗೋ ನಿಷ್ಠೆ ತೋರುವ ಬದಲು ಇಡೀ ರಾಷ್ಟ್ರದ ಅಧಿಪತಿಯಾದ ರಾಜನಲ್ಲಿ ನಿಷ್ಠೆ ತೋರಿಸಲಾರಂಭಿಸಿದರು.

ಈ ರಾಷ್ಟ್ರ ಪ್ರಭುತ್ವದ ಉದಯವಾದದ್ದು ಹೇಗೆ? ಇದಕ್ಕೆ ರಾಜಕೀಯ ಸಾಮಾಜಿಕ ಮತ್ತೀಯ ಆರ್ಥಿಕವೇ ಮುಂತಾದ ಹಲವು ಕಾರಣಗಳಿದ್ದುವು. ಈ ಸ್ವಾರಸ್ಯ ವಿಷಯವನ್ನು ಕುರಿತ ಉದ್ಗ್ರಂಥಗಳೇ ರಚಿತವಾಗಿವೆ. ಇಲ್ಲಿ ಕೇವಲ ಕೆಲವೇ ಕಾರಣಗಳನ್ನು—ಮುಖ್ಯವಾಗಿ ಆರ್ಥಿಕ ಕಾರಣಗಳನ್ನು—ಉಲ್ಲೇಖಿಸುವುದು ಸಾಧ್ಯ.

ಹತ್ತರಿಂದ ಹದಿನೈದನೆಯ ಶತಮಾನದ ವರೆಗಿನ ಈ ಕಾಲದ ಮುಖ್ಯ ಬೆಳವಣಿಗೆಯೆಂದರೆ ಮಧ್ಯಮವರ್ಗದ ಉದಯ. ಜೀವನ ವಿಧಾನಗಳಲ್ಲಿ ಆದ ಬದಲಾವಣೆಯೇ ಈ ಹೊಸ ವರ್ಗದ ಬೆಳವಣಿಗೆಗೆ ಅಗತ್ಯವಾದ ಪೋಷಣೆ ನೀಡಿತು. ಈ ಹೊಸ ವರ್ಗದ ಆಗಮನದಿಂದ ಸಮಾಜದ ಜೀವನ ವಿಧಾನಗಳಲ್ಲಿ ಮತ್ತೆ ಕೆಲವು ಬದಲಾವಣೆಗಳಾದುವು. ಹಳೆಯ ವ್ಯವಸ್ಥೆಯಲ್ಲಿ ಗೊತ್ತಾದ ಒಂದು ಉದ್ದೇಶವನ್ನು ಸಾಧಿಸಿದ ಹಳೆಯ ಸಂಸ್ಥೆಗಳು ಈಗ ಕ್ಷೀಣಿಸಿ ನಶಿಸಿದುವು. ಇವುಗಳ ಸ್ಥಾನ ಆಕ್ರಮಿಸಲು ಹೊಸ ಸಂಸ್ಥೆಗಳು ಉದಿಸಿದುವು. ಇದು ಚರಿತ್ರೆಯ ಒಂದು ಮುಖ್ಯ ನಿಯಮ.

ತನ್ನ ಜಿಲ್ಲೆಯಲ್ಲಿ ಸಾಕಷ್ಟು ಪೋಲೀಸರು ಇದ್ದಾರೆಯೇ?—ಎಂದು ಚಿಂತಿಸುವವನು

ಯಾರು ಗೊತ್ತೆ? ಅಧಿಕವಾಗಿ ಹಣ ಹೊಂದಿರುವ ಶ್ರೀಮಂತ. ತಮ್ಮ ಸರಕನ್ನೋ ಹಣವನ್ನೋ ಇತರ ಸ್ಥಳಗಳಿಗೆ ಕಳಿಸುವ ಉದ್ದೇಶದಿಂದ ರಾಜಮಾರ್ಗಗಳನ್ನು ಬಳಸುವ ಜನರೇ ಈ ಮಾರ್ಗಗಳಲ್ಲಿ ದರೋಡೆಕಾರರ ಭಯವಾಗಲಿ ಸುಂಕದ ಕಟ್ಟೆಯ ಕೋಟಲೆಯಾಗಲಿ ಇರಬಾರದೆಂದು ಘಟ್ಟಿಯಾಗಿ ಅರಚುವವರು. ಗಲಭೆ ಅಭದ್ರತೆಗಳಿದ್ದರೆ ವ್ಯಾಪಾರ ವರ್ಧಿಸಲಾರದು. ಮಧ್ಯಮ ವರ್ಗದ ಜನ ಸುಸ್ಥಿತಿಯನ್ನೂ ಭದ್ರತೆಯನ್ನೂ ಆಶಿಸಿದರು.

ಅವರು ಇವಕ್ಕಾಗಿ ಯಾರತ್ತ ಹೋಗಬೇಕಿತ್ತು? ಊಳಿಗಮಾನ್ಯ ವ್ಯವಸ್ಥೆಯಲ್ಲಿ ಈ ಸುಸ್ಥಿತಿಯನ್ನೂ ಭದ್ರತೆಯನ್ನೂ ನೀಡುವವರು ಯಾರಿದ್ದರು? ಪೂರ್ವಕಾಲದಲ್ಲಿ ಶ್ರೀಮಂತರೂ ಊಳಿಗಮಾನ್ಯ ಪ್ರಭುಗಳೂ ರಕ್ಷಣೆ ನೀಡುತ್ತಿದ್ದರು. ಆದರೆ ಈ ಪ್ರಭುಗಳ ಶೋಷಣೆಯ ವಿರುದ್ಧವಾಗಿಯೇ ನಗರಗಳು ಹಿಂದೆ ಹೋರಾಡಿದ್ದುವು. ಲೂಟಿ, ನಾಶ, ಕಳ್ಳತನ ಮಾಡುತ್ತಿದ್ದವರು ಈ ಊಳಿಗಮಾನ್ಯ ಸೈನಿಕರು. ಶ್ರೀಮಂತರ ಸೈನಿಕರಿಗೆ ಕ್ಲುಪ್ತವಾಗಿ ಸಂಬಳ ದೊರಕುತ್ತಿರಲಿಲ್ಲ. ಆದ್ದರಿಂದ ಅವರು ಪ್ರತಿಯೊಂದು ನಗರವನ್ನೂ ಬಡಿದು, ಕೈಗೆ ಸಿಕ್ಕಿದ್ದನ್ನೆಲ್ಲಾ ಕಳವು ಮಾಡುತ್ತಿದ್ದರು. ಯುದ್ಧಾಸಕ್ತರಾದ ಪ್ರಭುಗಳಿಬ್ಬರ ನಡುವೆ ಯುದ್ಧ ನಡೆದಾಗಲೆಲ್ಲಾ ಸ್ಥಳೀಯ ಜನಕ್ಕೆ ವಿಪತ್ತು. ಯಾವ ಪಕ್ಷ ಗೆದ್ದರೂ ಅವರಿಗೆ ಇದು ತಪ್ಪಿದ್ದಲ್ಲ. ವ್ಯಾಪಾರದ ರಸ್ತೆ ಸಾಗುತ್ತಿದ್ದ ಬೇರೆಬೇರೆ ಪ್ರದೇಶಗಳಲ್ಲಿ ಬೇರೆಬೇರೆ ಪ್ರಭುಗಳು ಇದ್ದುದರಿಂದ ವ್ಯಾಪಾರಕ್ಕೆ ಅಡಚಣೆ ಉಂಟಾಗಿತ್ತು. ಆದ್ದರಿಂದ ಬೇಕಾಗಿದ್ದುದು ಒಂದು ಕೇಂದ್ರ ಅಧಿಕಾರ, ಒಂದು ರಾಷ್ಟ್ರ ಪ್ರಭುತ್ವ. ಊಳಿಗಮಾನ್ಯ ಪದ್ಧತಿಯ ಅವ್ಯವಸ್ಥೆಯಿಂದ ಸುವ್ಯವಸ್ಥೆ ತರಬಲ್ಲ ಪರಮ ಪ್ರಭುತ್ವವೊಂದು ಬೇಕಿತ್ತು. ಹಳೆಯ ಪ್ರಭುಗಳು ತಮ್ಮ ಸಾಮಾಜಿಕ ಕರ್ತವ್ಯಗಳನ್ನು ನಿರ್ವಹಿಸುವುದು ಇನ್ನು ಮುಂದೆಯೂ ಸಾಧ್ಯವಿರಲಿಲ್ಲ. ಅವರ ಕಾಲ ಆಗಿ ಹೋಗಿತ್ತು. ಬಲಿಷ್ಠವಾದ ಕೇಂದ್ರಾಧಿಕಾರ ಬರಲು ಕಾಲ ಮಾಗಿತ್ತು.

ಮಧ್ಯಯುಗದಲ್ಲಿ ತಾತ್ವಿಕವಾಗಿ ರಾಜನ ಅಧಿಕಾರವಿತ್ತು. ಆದರೆ ವಾಸ್ತವವಾಗಿ ಈ ಅಧಿಕಾರ ಬಲು ದುರ್ಬಲವಾಗಿತ್ತು. ದೊಡ್ಡ ಊಳಿಗಮಾನ್ಯ ಪ್ರಭುಗಳು—ರಾಜಮಾನ್ಯರು—ಬ್ಯಾರನ್ನುಗಳು—ವಾಸ್ತವವಾಗಿ ಸ್ವತಂತ್ರರು. ಅವರ ಬಲ ಮುರಿಯ ಬೇಕಾಗಿತ್ತು. ಹಾಗೆಯೇ ಆಯಿತು.

ಕೇಂದ್ರಪ್ರಭುತ್ವ ರಾಷ್ಟ್ರೀಯಾಧಿಕಾರ ಚಲಾಯಿಸಲು ಶಕ್ತವಾದದ್ದು ನಿಧಾನವಾಗಿ. ಇದರಲ್ಲಿ ಯಾವ ಕ್ರಮವೂ ಇರಲಿಲ್ಲ. ಈ ಘಟ್ಟಗಳಾದರೂ ಮಹಡಿಯ ಹಂತದಂತೆ ಮೆಟ್ಟಿಲು ಮೆಟ್ಟಿಲಾಗಿ ಒಂದು ಗೊತ್ತಾದ ದಿಕ್ಕಿನಲ್ಲಿ ಸಾಗಲಿಲ್ಲ. ಅದೊಂದು ಜಾರಿಕೆಯ ಒರಟು ಹಾದಿ. ಇದು ಒಂದು ವರ್ಷದಲ್ಲಿ, ಎರಡು ವರ್ಷಗಳಲ್ಲಿ, ಐವತ್ತು ವರ್ಷಗಳಲ್ಲಿ, ನೂರು ವರ್ಷಗಳಲ್ಲಿ ಸಾಧಿಸಲಿಲ್ಲ. ಇದಕ್ಕೆ ಶತಮಾನಗಳೇ ಬೇಕಾದುವು. ಕೊನೆಗೂ ಈ ಬದಲಾವಣೆ ಬಂತು.

ಪ್ರಭುಗಳು ನೆಲದ, ಜೀತಗಾರರ, ರೂಪದಲ್ಲಿ ಹೊಂದಿದ್ದ ಆಸ್ತಿಯಲ್ಲಿ ಬಹುಪಾಲನ್ನು

ಕಳೆದುಕೊಂಡಿದ್ದರಿಂದ ಅವರು ದುರ್ಬಲರಾಗುತ್ತಿದ್ದರು. ನಗರಗಳಿಂದಲೂ ಪ್ರಭುಗಳ ಅಧಿಕಾರಕ್ಕೆ ಸವಾಲು ಬಂದಿತ್ತು. ಅವರ ಅಧಿಕಾರ ಭಂಗವೂ ಆಗಿತ್ತು, ಸ್ವಲ್ಪ. ಅವರು ನಿರಂತರವಾಗಿ ನಡಸುತ್ತಿದ್ದ ಯಾದವೀ ಕಲಹದಿಂದ ಕೆಲವೆಡೆಗಳಲ್ಲಿ ಅವರು ಪರಸ್ಪರ ನಾಶದ ಹಾದಿ ಹಿಡಿದಿದ್ದರು.

ಈ ಪ್ರಭುಗಳ ವಿರುದ್ಧ ನಡೆದ ಹೋರಾಟದಲ್ಲಿ ಪಟ್ಟಣಗಳಿಗೆ ರಾಜನ ದೃಢಮೈತ್ರಿ ಲಭಿಸಿತ್ತು. ಬ್ಯಾರನ್ನುಗಳ ಬಲ ಕುಂದಿದಂತೆಲ್ಲ ರಾಜನ ಬಲ ಹೆಚ್ಚುವುದು ಸಹಜವಾಗಿತ್ತು. ರಾಜನ ನೆರವಿಗೆ ಪ್ರತಿಯಾಗಿ ಪಟ್ಟಣಿಗರು ಹಣದ ಸಾಲಕೊಟ್ಟು ಸಹಾಯ ಮಾಡಲು ಸಿದ್ಧವಿದ್ದರು. ಇದು ಬಹು ಮುಖ್ಯ. ಏಕೆಂದರೆ ಸೇನಾ ನೆರವಿಗಾಗಿ ತನ್ನ ಸಾಮಂತರ ಆಶ್ರಯ ತಪ್ಪಿಸಿಕೊಳ್ಳುವುದು ಈ ಹಣದಿಂದ ಸಾಧ್ಯವಾಗಿತ್ತು. ಪ್ರಭುವಿನ ನಿಷ್ಠೆಯನ್ನೇ ನಂಬುವ ಬದಲು, ಯಾವಾಗಲೂ ತನ್ನ ಸೇವೆಗೆ ನಿಲ್ಲಬಲ್ಲ ನುರಿತ ಸೈನ್ಯವನ್ನು ಸಂಬಳ ಕೊಟ್ಟು ಇರಿಸಿಕೊಳ್ಳಬಹುದಿತ್ತು. ಈ ಸೈನ್ಯ ಉತ್ತಮವಾಗಿಯೂ ಇರುತ್ತಿತ್ತು. ಏಕೆಂದರೆ ಯುದ್ಧವೊಂದೇ ಇದರ ಕೆಲಸ. ಊಳಿಗಮಾನ್ಯ ವ್ಯವಸ್ಥೆಯ ಸೈನ್ಯವಾದರೋ, ಅಶಿಕ್ಷಿತ, ಅಸಂಘಟಿತ. ಆದ್ದರಿಂದ ಅದು ಸುಲಲಿತವಾಗಿ, ಸುಸೂತ್ರವಾಗಿ ಕೆಲಸ ಮಾಡಿಕೊಂಡು ಹೋಗುವುದು ಅಸಾಧ್ಯವಾಗಿತ್ತು. ಚೆನ್ನಾಗಿ ನುರಿತ, ಶಿಸ್ತಿನಿಂದ ಕೂಡಿದ, ಅಗತ್ಯ ಬಿದ್ದಾಗಲೆಲ್ಲಾ ಸುಲಭವಾಗಿ ಒದಗುತ್ತಿದ್ದ, ಹೋರಾಟಕ್ಕಾಗಿಯೇ ಸಂಬಳಕೊಟ್ಟು ಇರಿಸಿಕೊಂಡ ಸೈನ್ಯ ಹಿಂದಣ ಸೈನ್ಯಕ್ಕಿಂತ ಬಹಳ ಉತ್ತಮವಾಗಿತ್ತು.

ಶಸ್ತ್ರಾಸ್ತ್ರಗಳಲ್ಲಿ ಆದ ತಾಂತ್ರಿಕ ಪ್ರಗತಿಯ ಫಲವಾಗಿಯೂ ಕೂಡ ಬೇರೆ ರೀತಿಯ ಸೈನ್ಯದ ಅಗತ್ಯ ಉಂಟಾಯಿತು. ಮದ್ದು ಫಿರಂಗಿಗಳ ಆಗಮನವಾಯಿತು. ಇವುಗಳ ಯಶಸ್ವೀ ಉಪಯೋಗಕ್ಕೆ ನುರಿತ ಮಂದಿಯ ಸಹಕಾರ ಅಗತ್ಯವಾಗಿತ್ತು. ಊಳಿಗಮಾನ್ಯ ಯುಗದ ಯೋಧ ತನ್ನವೇ ಆದ ಶಸ್ತ್ರಾಸ್ತ್ರ ತರಬಹುದಿತ್ತು. ಆದರೆ ಆತ ಫಿರಂಗಿ, ಮದ್ದು ತರುವುದು ಸಾಧ್ಯವಿರಲಿಲ್ಲ.

ಅತ್ಯಾಧುನಿಕ ಶಸ್ತ್ರಸಜ್ಜಿತ ಶಾಶ್ವತ ಸೇನಾ ಪಡೆಯನ್ನು ಸಂಬಳಕ್ಕೆ ನೇಮಕ ಮಾಡಿಕೊಳ್ಳುವುದು ಸಾಧ್ಯವಾಗುವಂತೆ ಮಾಡಿದ ವಾಣಿಜ್ಯ ಕೈಗಾರಿಕೆಗಳ ತಂಡಗಳಿಗೆ ದೊರೆ ಕೃತಜ್ಞನಾಗಿದ್ದ. ಸಾಲ, ದಾನ ಬೇಕೆಂದು ದೊರೆ ಆಗಿಂದಾಗ್ಗೆ ಈ ಪ್ರವರ್ಧಮಾನಕ್ಕೆ ಬರುತ್ತಿದ್ದ ಹಣವಂತರಿಗೆ ಮನವಿ ಮಾಡಿಕೊಳ್ಳುತ್ತಿದ್ದ. ಹದಿನಾಲ್ಕನೆಯ ಶತಮಾನದಲ್ಲಿ ಇಂಗ್ಲೆಂಡಿನ ದೊರೆ ಲಂಡನ್ ನಗರದ ವರ್ತಕ ಮಂಡಲಿಯ ಸಹಾಯ ಬೇಡಿದ ಪ್ರಸಂಗವೊಂದನ್ನು ಇಲ್ಲಿ ಉಲ್ಲೇಖಿಸಬಹುದು: “ನಮ್ಮ ಮಹಾಪ್ರಭು ದೊರೆಗಳ ಬಕ್ಷಿಗಳಾದ ಸರ್ ರಾಬರ್ಟ್ ಡೀ ಅಷ್‌ಬೀ ಅವರು ಲಂಡನ್ನಿನ ಪೌರಸಭಾ ಭವನಕ್ಕೆ ಬಂದು, ಪೌರಾಧ್ಯಕ್ಷ ಆಂಡ್ರ್ಯೂ ಆಬ್ರಿಯೂ ನಗರದ ಎಲ್ಲ ಪಿತೃಗಳೂ ನಮ್ಮ ಮಹಾಪ್ರಭು ದೊರೆಗಳ ಮತ್ತು ಅವರ ಸಚಿವರ ಸಮ್ಮುಖಕ್ಕೆ ಬರಬೇಕೆಂದು ದೊರೆಗಳ ಪರವಾಗಿ ಕೇಳಿಕೊಂಡರು . . . . ಸಮುದ್ರದಾಚೆಯ ನಾಡುಗಳಲ್ಲಿ ಯುದ್ಧ ಮಾಡಲು ದೊರೆಗಳು ಮಾಡಬೇಕಾಗಿ ಬಂದ, ಹಾಗೂ ಮಾಡಬೇಕಾದ, ವೆಚ್ಚವನ್ನು ಅವರಿಗೆ ಮುಖತಃ ಶ್ರುತ

ಪಡಿಸಿದ್ದೇ ಅಲ್ಲದೆ, ದೊರೆಗಳಿಗೆ ಇಪ್ಪತ್ತು ಸಾವಿರ ಪೌಂಡು ಸಾಲ ನೀಡಬೇಕೆಂದೂ ಅವರಿಗೆ ಕೇಳಿಕೊಂಡರು . . . . ಅವರು ದೊರೆಗೆ ಐದು ಸಾವಿರ ಮಾರ್ಕ್ ಸಾಲ ನೀಡುವುದಾಗಿ ಸರ್ವಾನುಮತದಿಂದ ವಾಗ್ದಾನ ಮಾಡಿದರು . . . . ದೊರೆ ಈ ಕೊಡುಗೆಯನ್ನು ಸಂಪೂರ್ಣವಾಗಿ ತಳ್ಳಿಹಾಕಿದರು. ಇವರು ಹೊಂದಿರಬೇಕಾದ ರಾಜನಿಷ್ಠೆಯ ದೃಷ್ಟಿಯಿಂದ ಈ ಪೌರಾಧ್ಯಕ್ಷರೂ ನಗರ ಪಿತೃಗಳೂ ಸಾಮಾನ್ಯ ಪ್ರಜೆಗಳೂ ಸರಿಯಾದ ಸಲಹೆ ಪಡೆದು, ಈ ವಿಚಾರವಾಗಿ ಸೂಕ್ತ ತೀರ್ಮಾನ ಕೈಕೊಳ್ಳಬೇಕೆಂದು ದೊರೆ ಆಜ್ಞಾಪಿಸಿದರು . . . . ಇದು ಕಷ್ಟವಾದಾಗ್ಯೂ, ಅವರು ನಮ್ಮ ಮಹಾಪ್ರಭುಗಳಿಗೆ ಐದು ಸಾವಿರ ಪೌಂಡು ಸಾಲ ನೀಡಲು ಒಪ್ಪಿಕೊಂಡರು. ದೊರೆ ಈ ನೀಡಿಕೆಯನ್ನೊಪ್ಪಿದರು. ದೊರೆಗೆ ನೀಡಬೇಕಾದ ಸಾಲದ ಈ ಐದು ಸಾವಿರ ಪೌಂಡು ತುಂಬಲು ಲಂಡನ್ ಹಾಗೂ ಅದರ ಉಪನಗರಗಳಲ್ಲಿ ಪ್ರತಿಯೊಬ್ಬನೂ ತನ್ನ ಶಕ್ತ್ಯನುಸಾರ ಎಷ್ಟು ಕೊಡಬಲ್ಲನೆಂಬುದನ್ನು ನಿಷ್ಕರ್ಷೆ ಮಾಡುವ ಸಲುವಾಗಿ ಹನ್ನೆರಡು ಮಂದಿಯ ಆಯ್ಕೆಯಾಯಿತು. ಅವರು ಈ ಬಗ್ಗೆ ಪ್ರಮಾಣವಚನ ಸ್ವೀಕರಿಸಿದರು."[1]

ಹಣವಿದ್ದವರು ಅದನ್ನು ಕೊಡಲು ಸಂತೋಷದಿಂದ ಒಪ್ಪುತ್ತಿದ್ದರೆಂದು ಕಿಂಚಿತ್ತೂ ಭಾವಿಸಬೇಡಿ. ಈ ಕಾರ್ಯದಲ್ಲಿ ಅವರಿಗೆ ಸಂತೋಷವಿರಲಿಲ್ಲ. ಇದಕ್ಕೆ ಪ್ರತಿಯಾಗಿ ನಿರ್ದಿಷ್ಟ ಸೌಲಭ್ಯ ದೊರಕುವುದೆಂಬ ಕಾರಣದಿಂದ ಅವರು ಇಂಥ ಸಾಲ ನೀಡಲೊಪ್ಪಿದರು. ಉದಾಹರಣೆಗೆ ಈ ಶಾಸನವನ್ನು ನೋಡಿ: "ಇಡೀ ರಾಜ್ಯದಲ್ಲಿ ಒಂದೇ ಅಳತೆ, ಒಂದೇ ತೂಕ ಇರಬೇಕೆಂಬುದನ್ನು ಒಪ್ಪಿ ನಿಯಮಿಸಲಾಗಿದೆ . . . . ಬೇರೆ ಯಾವ ಅಳತೆಯನ್ನಾಗಲಿ ತೂಕವನ್ನಾಗಲಿ ಹೊಂದಿರುವುದಾಗಿ ಅಥವಾ ಬಳಸುತ್ತಿರುವುದಾಗಿ ಕಂಡುಬಂದರೆ ಅಂಥವರು ಅರ್ಧ ವರ್ಷಕಾಲ ಜೈಲುವಾಸ ಅನುಭವಿಸಬೇಕಾಗುವುದು."[2] ಹೀಗೆಂದು ೧೩೮೯ರಲ್ಲಿ ಕೇಂದ್ರ ಸರಕಾರ ಶಾಸನ ಜಾರಿಗೆ ತಂದಿತು. ಇಂಥ ಶಾಸನ ವ್ಯಾಪಾರಕ್ಕೆ ತುಂಬಾ ಅನುಕೂಲಕರವಾಗಿತ್ತೆಂಬುದರಲ್ಲಿ ಸಂಶಯವಿಲ್ಲ.

ಅಲ್ಲದೆ ಇನ್ನೂ ಒಂದು ಕಾರಣವಿತ್ತು. ಒಬ್ಬ ಸಣ್ಣ ಊಳಿಗಮಾನ್ಯ ಪ್ರಭುವಿನ ಸೂರೆಕೋರ ಪಡೆಗಳ ಕೋಟಲೆ ತಪ್ಪಿಸಿಕೊಳ್ಳಲು ಹಣ ಕೊಟ್ಟರೂ ನಷ್ಟವೇನಿಲ್ಲ. ಅಸಂಖ್ಯಾತ ಊಳಿಗಮಾನ್ಯ ಪ್ರಭುಗಳ ಕಿರುಕುಳದ ವಸೂಲಿ ಹಾಗೂ ಸಣ್ಣ ಪುಟ್ಟ ಹಿಂಸೆಗಳಿಂದ ವಿಮೋಚನೆಗೊಳಿಸಬಲ್ಲ ಸರಕಾರದ ನೆರವಿಗೆ ಹಣ ಕೊಡಲು ಅವರು ಸಿದ್ಧರಾಗಿದ್ದರು. ಅವರಿಗೆ ಅನುಕೂಲಕರವಾದ ಶಾಸನ ರಚಿಸಿ ಜಾರಿಗೆ ತರಬಲ್ಲ ಶಕ್ತ ನಾಯಕನೊಡನೆ ಸಂಬಂಧ ಬೆಳಸಿಕೊಳ್ಳುವುದು ಅಂತ್ಯದಲ್ಲಿ ಲಾಭಕರವಾಗಿಯೇ ಇತ್ತು. ೧೪೩೯ರಲ್ಲಿ ಫ್ರಾನ್ಸಿನಲ್ಲಿ ಜಾರಿಗೆ ಬಂದ ಈ ಶಾಸನವನ್ನು ನೋಡಿ:

"ಬಹು ಕಾಲದಿಂದ ಜನರನ್ನು ಶೋಷಿಸುತ್ತಿರುವ ಸಶಸ್ತ್ರ ಪಡೆಗಳ ಅತ್ಯಾಚಾರ

---

[1] *Memorials of London and London Life*, *op. cit.*, pp. 208-10.

[2] *The Statutes of the Realm from Original Records and Authentic Manuscripts*. vol. II, p. 63. London, 1816.

ಲೂಟಿಗಳನ್ನು ನಿವಾರಿಸಿ ನಿರ್ಮೂಲಗೊಳಿಸುವ ಉದ್ದೇಶದಿಂದ . . . .

"ರಾಜರು ಈ ರೀತಿ ಆಜ್ಞೆ ವಿಧಿಸುತ್ತಾರೆ: ಯಾರೇ ಆಗಲಿ, ಅವರು ಯಾವ ಅಂತಸ್ತಿನವರೇ ಆಗಲಿ, ದೊರೆಯ ಅನುಮತಿಯಿಲ್ಲದೆ ಯಾವ ರೀತಿಯ ಸಶಸ್ತ್ರ ಪಡೆಯ ನಿರ್ಮಾಣ, ನಿರ್ವಹಣ, ನಿರ್ದೇಶನ ಅಥವಾ ಸ್ವೀಕಾರ ಮಾಡಕೂಡದು. ಹೀಗೆ ಮಾಡಿದ್ದೇ ಆದರೆ, ಅಂಥವರನ್ನು ರಾಜದ್ರೋಹಿಗಳೆಂದು ಪರಿಗಣಿಸಲಾಗುವುದು; ಅವರೂ ಅವರ ವಂಶಸ್ಥರೂ ಎಲ್ಲ ಸಾರ್ವಜನಿಕ ಗೌರವ ಅಧಿಕಾರಗಳನ್ನೂ, ಶ್ರೀಮಂತ ಪದವಿ ಹಕ್ಕುಗಳನ್ನೂ ಶಾಶ್ವತವಾಗಿ ಕಳೆದುಕೊಳ್ಳುವರು . . . .

"ಅಂತೆಯೇ ಎಲ್ಲ ಸೇನಾನಾಯಕರಿಗೂ ಯೋಧರಿಗೂ ಈ ನಿಷೇಧ ವಿಧಿಸಲಾಗಿದೆ: ವರ್ತಕರು, ಕಾರ್ಮಿಕರು; ದನಕರು, ಕುದುರೆ—ಮುಂತಾದ ಪ್ರಾಣಿಗಳು ಇವನ್ನು ಹೊಂದಿರಕೂಡದು. ಇವಕ್ಕೂ, ಗಾಡಿಗಳಿಗೂ, ಇವು ಸಾಗಿಸುವ ಸಾಮಗ್ರಿಗೂ ಯಾವ ರೀತಿಯ ವಿಘ್ನವನ್ನೂ ತಂದೊಡ್ಡಕೂಡದು. ದಂಡ ತೆತ್ತು ಬಿಡಿಸಿಕೊಳ್ಳಿ—ಎಂದು ಇವನ್ನು ವಶಪಡಿಸಿಕೊಳ್ಳಕೂಡದು. ಈ ವರ್ತಕರು ತಮ್ಮ ಇಚ್ಛೆ ಇದ್ದಂತೆ ಕೆಲಸ ಮಾಡಲು, ಬಂದು ಹೋಗಲು, ತಮ್ಮ ಸರಕನ್ನು ಸಾಗಿಸಲು ಯಾವ ಆತಂಕವನ್ನೂ ಒಡ್ಡಕೂಡದು; ಶಾಂತಿ ಭದ್ರತೆಗಳಿಗೆ ಭಂಗ ತರಕೂಡದು."[1]

ಪೂರ್ವಕಾಲದಲ್ಲಿ ತನ್ನ ಸ್ವಂತ ನೆಲದಿಂದ ಬಂದ ವರಮಾನವಷ್ಟೇ ದೊರಕುತ್ತಿತ್ತು ದೊರೆಗೆ. ರಾಷ್ಟ್ರೀಯ ತೆರಿಗೆ ವ್ಯವಸ್ಥೆ ಯಾವುದೂ ಇರಲಿಲ್ಲ. ೧೪೩೯ರಲ್ಲಿ ಫ್ರಾನ್ಸಿನಲ್ಲಿ ಅಲ್ಲಿನ ದೊರೆ ಟೇಲ್ (Taille) ಎಂಬ ಹಣದ ತೆರಿಗೆ ವಿಧಿಸುವುದು ಸಾಧ್ಯವಾಯಿತು. ಹಿಂದೆ—ನಿಮಗೆ ಜ್ಞಾಪಕವಿರಬಹುದು—ಜೀತಗಾರರ ಸೇವೆಯನ್ನು ನೆಲಕೊಟ್ಟು ಪಡೆಯಬಹುದಾಗಿತ್ತು. ಈಗ ಹಣದ ಆರ್ಥಿಕ ವ್ಯವಸ್ಥೆಯಿಂದ ಈ ಪದ್ಧತಿ ಅನಗತ್ಯವಾಯಿತು, ಮರೆಯಾಯಿತು. ಹಣದ ವ್ಯವಹಾರ ಆರಂಭವಾಯಿತು. ದೊರೆಯ ಅಧಿಕಾರಿಗಳು ರಾಜ್ಯಾದ್ಯಂತ ಹಣದ ರೂಪದಲ್ಲಿ ತೆರಿಗೆ ಎತ್ತಲಾರಂಭಿಸಿದರು. ಈ ಅಧಿಕಾರಿಗಳಿಗೆ ಸಂಭಾವನೆ ಕೊಡುತ್ತಿದ್ದದ್ದು ನೆಲದ ರೂಪದಲ್ಲಲ್ಲ, ಹಣದ ರೂಪದಲ್ಲಿ. ರಾಜ್ಯದ ಪ್ರತಿಯೊಂದು ಭಾಗದಲ್ಲೂ ಸಂಬಳ ಪಡೆವ ಅಧಿಕಾರಿಗಳು ನೇಮಕವಾಗಿದ್ದರು. ದೊರೆಯ ಪರವಾಗಿ ಇವರು ಆಡಳಿತ ನಡಸುತ್ತಿದ್ದರು. ಊಳಿಗಮಾನ್ಯ ಯುಗದಲ್ಲಿ ಈ ಕೆಲಸ ಮಾಡುತ್ತಿದ್ದವರು ಶ್ರೀಮಂತರು. ಆಗ ಈ ಶ್ರೀಮಂತರಿಗೆ ಇದಕ್ಕೆ ಪ್ರತಿಯಾಗಿ ನೆಲ ದೊರಕುತ್ತಿತ್ತು. ಇದು ಮುಖ್ಯವಾಗಿತ್ತು.

ದೊರೆಗಳಿಗೆ ತಮ್ಮ ಅಧಿಕಾರಕ್ಕೆ ಹಣವೇ ಆಧಾರವೆಂಬುದು ಸ್ಪಷ್ಟವಾಗಿ ಮನವರಿಕೆಯಾಯಿತು. ವಾಣಿಜ್ಯ ಕೈಗಾರಿಕೆ ಅಭಿವೃದ್ಧಿ ಹೊಂದಿದಾಗಲೇ ತಮ್ಮ ಭಂಡಾರಕ್ಕೆ ಹಣದ ಹೊಳೆ ಹರಿಯುವುದೆಂಬುದನ್ನೂ ಅವರು ಚೆನ್ನಾಗಿ ಅರಿತರು. ಆದ್ದರಿಂದ ವ್ಯಾಪಾರ ಕೈಗಾರಿಕೆಗಳ ಅಭಿವೃದ್ಧಿಗೆ ಅವರು ಗಮನ ಕೊಟ್ಟರು. ಪ್ರತಿಯೊಂದು ಪಟ್ಟಣದಲ್ಲೂ

---

[1] *Ordonnances des Roys de France de la Troisième Race*, *op. cit.*, vol. XI (1782), pp. 306-13.

ಕೆಲವು ಜನರ ಸಣ್ಣ ಗುಂಪಿಗೆ ಏಕಸ್ವಾಮ್ಯ ದೊರಕಿಸಿಕೊಟ್ಟು, ಇದನ್ನು ಉಳಿಸಿಕೊಂಡು ಬರುವ ಉದ್ದೇಶದಿಂದ ರಚಿತವಾದ ವರ್ತಕ ಸಂಘದ ನಿಬಂಧನೆಗಳು ವಿಸ್ತೃತವಾಗುತ್ತಿದ್ದ ವ್ಯಾಪಾರ ಕೈಗಾರಿಕೆಗಳಿಗೆ ಪ್ರತಿಬಂಧಕಗಳೆಂಬುದೂ ಬಹು ಬೇಗ ಸ್ಪಷ್ಟವಾಯಿತು.

ಇಡೀ ದೇಶದ ದೃಷ್ಟಿಯಲ್ಲಿ ಆಲೋಚನೆ ನಡಸುತ್ತಿದ್ದವರಿಗೆ ಒಂದು ವಿಚಾರ ಸ್ಪಷ್ಟವಾಯಿತು. ಅತಿಯಾದ, ಪರಸ್ಪರ ವಿರುದ್ಧವಾದ ಸ್ಥಳೀಯ ನಿಬಂಧನೆಗಳನ್ನು ತೊರೆಯಬೇಕು, ನಗರ ನಗರಗಳ ನಡುವಣ ಅಸೂಯೆ ತಪ್ಪಿಸಬೇಕು—ಎಂಬುದು ಖಚಿತವಾಯಿತು. ಉದಾಹರಣೆಗೆ ಹೇಳುವುದಾದರೆ, "ಫ್ರಾಂಕ್‌ಫರ್ಟ್ ಚರ್ಮದ ಪರಿಷೆಯಲ್ಲಿ ಬರ್ಲಿನ್ ಪಾದರಕ್ಷಾ ತಯಾರಿಕೆಗೆ ಪ್ರವೇಶ ದೊರಕಿಸಿಕೊಡಲು ೧೪೪೩ರಲ್ಲಿ ದೊರೆ ಒಂದು ಶಾಸನ ಜಾರಿಗೆ ತರಬೇಕಾಯಿತು,"[1] ಎಂಬುದು ಹಾಸ್ಯಾಸ್ಪದ. ರಾಷ್ಟ್ರ ಪ್ರಭುತ್ವದ ಬಲ ವೃದ್ಧಿಯಾದಂತೆಲ್ಲಾ ದೊರೆಗಳು ಇಡೀ ರಾಷ್ಟ್ರದ ಹಿತದೃಷ್ಟಿಯಿಂದ ಈ ಸ್ಥಳೀಯ ಏಕಸ್ವಾಮ್ಯ ವಾದಿಗಳ ಮೇಲೆ ಎರಗಲಾರಂಭಿಸಿದರು. ೧೪೩೬ರಲ್ಲಿ ಇಂಗ್ಲೆಂಡ್ ದೇಶದಲ್ಲಿ ಜಾರಿಗೆ ಬಂದ ಕಾನೂನುಗಳಲ್ಲೊಂದು ಹೀಗಿದೆ: "ವೃತ್ತಿಸಂಘಗಳ ಯಜಮಾನ ಸದಸ್ಯರೂ ಅಧ್ಯಕ್ಷರೂ ಸಾಮಾನ್ಯ ಸದಸ್ಯರೂ, ಭ್ರಾತೃ ಸಂಸ್ಥೆಗಳೂ, ಇತರ ಸಂಘಟಿತ ಸಂಸ್ಥೆಗಳೂ ಹಲವು ಶಾಸನಬಾಹಿರ ಅನ್ಯಾಯಕರ ಕಾನೂನುಗಳನ್ನು ರಚಿಸಿಕೊಳ್ಳುತ್ತಿದ್ದಾರೆ. . . . ಅಂಗೀಕಾರ, ಶಿಕ್ಷೆ, ತಿದ್ದುಪಾಡು—ಮುಂತಾದ ಅಧಿಕಾರವೆಲ್ಲ ದೊರೆಗಳಿಗೆ ಮಾತ್ರ ಸೇರಿದ್ದು . . . . ಆದ್ದರಿಂದ ನಮ್ಮ ಪ್ರಭುವಾದ ದೊರೆಗಳು ದೈವಿಕ ಹಾಗೂ ಲೌಕಿಕ ಗುರುಗಳ ಸಲಹೆ ಸಮ್ಮತಿಗಳ ಮೇರೆಗೂ, ಹಿಂದೆ ಹೇಳಿದ ಸಾಮಾನ್ಯರ ಪ್ರಾರ್ಥನೆಗೆ ಅನುಗುಣವಾಗಿಯೂ, ಇದೇ ಪಾರ್ಲಿಮೆಂಟು ನೀಡಿರುವ ಅಧಿಕಾರಕ್ಕೆ ಅನುಸಾರವಾಗಿ ಈ ರೀತಿ ಆಜ್ಞೆ ಮಾಡುತ್ತಾರೆ: ಇಂಥ ಪ್ರತಿಯೊಂದು ವೃತ್ತಿಸಂಘ, ಭ್ರಾತೃ ಸಂಸ್ಥೆ ಅಥವಾ ಸಂಘಟಿತ ಸಂಸ್ಥೆಯ ಯಜಮಾನರೂ ಅಧ್ಯಕ್ಷರೂ ಸದಸ್ಯ ಜನರೂ ತಮ್ಮ ಎಲ್ಲ ಸ್ವಾಮ್ಯದ ಸನ್ನದು, ಅಧಿಕಾರ ಪತ್ರ ಇವನ್ನು ಶಾಂತಿಪಾಲಕ ನ್ಯಾಯಾಧಿಪತಿಗಳ ಪುಸ್ತಕದಲ್ಲಿ ದಾಖಲು ಮಾಡಿಸಬೇಕು. ಅಲ್ಲದೆ, ಮೇಲೆ ಹೇಳಿದ ಅಧಿಕಾರಕ್ಕೆ ಅನುಗುಣವಾಗಿ ಹೇಳುವುದೇನೆಂದರೆ:—ಇನ್ನು ಮುಂದೆ ಈ ಯಜಮಾನರೂ ಅಧ್ಯಕ್ಷರೂ ಸದಸ್ಯ ಜನರೂ ಪೂರ್ವಭಾವಿಯಾಗಿ ಶಾಂತಿಪಾಲಕ ನ್ಯಾಯಾಧಿಪತಿಗಳೊಡನೆ ಚರ್ಚಿಸಿ, ನ್ಯಾಯಬದ್ಧವೆಂದು ಅವರ ಸಮ್ಮತಿ ದೊರಕಿಸಿಕೊಳ್ಳದೆ ಯಾವ ಕಾನೂನನ್ನೂ ರಚಿಸಿಕೊಳ್ಳತಕ್ಕದ್ದಲ್ಲ, ಅನುಸರಿಸತಕ್ಕದ್ದಲ್ಲ. ಇದು ಆಜ್ಞೆ."[2]

ಫ್ರಾನ್ಸಿನ ದೊರೆ ಇವಕ್ಕಿಂತಲೂ ವ್ಯಾಪಕವಾದ ಶಾಸನವೊಂದನ್ನು ಜಾರಿಗೆ ತಂದ. ಆ ದೇಶದ ದೊರೆಯ ಅಧಿಕಾರ ಬೆಳೆಯುತ್ತಿತ್ತೆಂಬುದಕ್ಕೆ ಇದು ಉದಾಹರಣೆ: "ದೇವರ ದಯೆಯಿಂದ, ಫ್ರಾನ್ಸಿನ ದೊರೆ ಚಾರ್ಲ್ಸ್ ಅವರು, ನಮ್ಮ ಮಹಾಸಚಿವ ಮುಂಡಲಿ

---

[1] G. Schmoller, *The Mercantile System and Its Historical Significance*, p. 22. The Macmillan Company, N.Y., 1910.

[2] *Statutes of the Realm, op. cit.*, vol. II, pp. 298-9.

ಯೊಡನೆ ದೀರ್ಘಾಲೋಚನೆ ನಡಸಿ, ಈ ರೀತಿ ಆಜ್ಞೆ ವಿಧಿಸಿದ್ದಾರೆ, ವಿಧಿಸುತ್ತಾರೆ: . . . ನಮ್ಮ ನಗರವಾದ ಪ್ಯಾರಿಸಿನಲ್ಲಿ ಇನ್ನು ಮುಂದೆ ಯಾವ ರೀತಿಯ ವೃತ್ತಿ ಅಥವಾ ಶ್ರೇಣಿಯ ಯಜಮಾನರೂ ಇರುವುದಿಲ್ಲ . . . . ಆದರೆ ಪ್ರತಿಯೊಂದು ವೃತ್ತಿಯಲ್ಲೂ ಆ ವೃತ್ತಿಯ ಕೆಲವು ಹಿರಿಯರನ್ನು ನಮ್ಮ ರಕ್ಷಣಾಧಿಕಾರಿ ಆರಿಸುವರು . . . . ಇನ್ನು ಮುಂದೆ ಇವರು ನಮ್ಮ ಒಪ್ಪಿಗೆ, ಅಪ್ಪಣೆ ಅಥವಾ ಅನುಮತಿ ಇಲ್ಲದೆ, ಅಥವಾ ರಕ್ಷಣಾಧಿಕಾರಿಯ ಒಪ್ಪಿಗೆ ಇಲ್ಲದೆ, ವೃತ್ತಿ ಬಾಂಧವರ ಅಥವಾ ಬೇರೆ ಯಾವ ರೀತಿಯ ಸಭೆಯನ್ನೂ ನಡಸಕೂಡದು. ಈ ಆಜ್ಞೆಯನ್ನು ಮುರಿದವ್ದೇ ಆದರೆ ಅಂಥವರು ಬಂಡಾಯಗಾರರೆಂದೂ, ನಮಗೂ ನಮ್ಮ ಫ್ರಾನ್ಸ್ ದೇಶದ ರಾಜತ್ವಕ್ಕೂ ಅವಿಧೇಯರೆಂದೂ ಪರಿಗಣಿಸಿ, ಅಂತೆಯೇ ವರ್ತಿಸಲಾಗುವುದು. ಅಂಥವರು ವ್ಯಕ್ತಿತ್ವವನ್ನೂ ಆಸ್ತಿಯನ್ನೂ ಕಳೆದುಕೊಳ್ಳುವರು."[1]

ಮಹಾ ನಗರಗಳ ಏಕಸ್ವಾಮ್ಯ ಶಕ್ತಿಯನ್ನು ಹತ್ತಿಕ್ಕಿದ್ದು ಬಹು ದೊಡ್ಡ ಸಾಧನೆ. ಜರ್ಮನಿ ಇಟಲಿಗಳಲ್ಲಿನ ಬಲಿಷ್ಠವಾದ ನಗರಗಳನ್ನು ಬಗ್ಗಿಸಬಲ್ಲ ಕೇಂದ್ರಾಧಿಕಾರ ಸ್ಥಾಪಿಸಲು ಹಲವು ಶತಮಾನಗಳ ಕಾಲವೇ ಬೇಕಾಯಿತು. ವ್ಯತ್ಯಸ್ತಗೊಳ್ಳುತ್ತಿದ್ದ ಆರ್ಥಿಕ ಪರಿಸ್ಥಿತಿಗಳಿಗೆ ಹೊಂದಿಕೊಳ್ಳಬೇಕಾದರೆ ಈ ನಗರಗಳ ಸಂಘಟನೆ ಅಗತ್ಯವಾಗಿತ್ತು. ಇತರ ಎಲ್ಲೆಡೆಗಳಲ್ಲೂ ಈ ಕೆಲಸ ಸಾಧಿಸಿದ ಮೇಲೆ—ಕೊನೆಗೆ—ಜರ್ಮನಿ ಇಟಲಿಗಳಲ್ಲಿನ ಈ ಬಲಿಷ್ಠ ಐಶ್ವರ್ಯವಂತ ಸಮುದಾಯಗಳನ್ನು ಒಂದು ಮಾಡುವುದು ಸಾಧ್ಯವಾಯಿತು. ಇದಕ್ಕೆ ಇವು ಬಲಿಷ್ಠವಾಗಿದ್ದುದೇ ಕಾರಣ. ಇತರ ಪ್ರದೇಶಗಳಲ್ಲಿ ಕೆಲವು ನಗರಗಳು ತಮ್ಮ ಅಧಿಕಾರದ ಮೇಲಣ ಹತೋಟಿಯನ್ನು ಎದುರಿಸಿದುವು. ಇದರ ವಿರುದ್ಧ ಹೋರಾಟವನ್ನೂ ನಡಸಿದುವು. ಆದರೆ ಅವುಗಳ ಪರಸ್ಪರ ಅಸೂಯೆ ದ್ವೇಷಗಳ ದೆಸೆಯಿಂದ ಅವು ಒಗ್ಗಟ್ಟಾಗಿ ಹೋರಾಟ ನಡಸುವುದು ಸಾಧ್ಯವಾಗಲಿಲ್ಲ. ಆದ್ದರಿಂದ ಅವು ಸೋತುವು. ಹೀಗಾದುದು ಅವಕ್ಕೆ ಒಳ್ಳೆಯದೇ ಆಯಿತು. ಇಂಗ್ಲೆಂಡ್ ಫ್ರಾನ್ಸ್ ನೆದರ್ಲೆಂಡ್ಸ್ ಸ್ಪೇಯ್ನ್‌ಗಳಲ್ಲಿ ಪ್ರತಿಯೊಂದು ನಗರವೂ ಒಂದೊಂದು ಪ್ರತ್ಯೇಕ ಆರ್ಥಿಕ ಜೀವನ ವ್ಯವಸ್ಥೆ ಹೊಂದಿದ್ದುದನ್ನು ತಪ್ಪಿಸಿ, ರಾಷ್ಟ್ರ ಆ ಸ್ಥಾನವನ್ನು ಆಕ್ರಮಿಸಿಕೊಂಡಿತು. ಇಡೀ ರಾಷ್ಟ್ರಕ್ಕೆ ಒಂದು ಆರ್ಥಿಕ ವ್ಯವಸ್ಥೆ ಏರ್ಪಟ್ಟಿತು.

ಹಲವು ನಗರಗಳೂ ವೃತ್ತಿಸಂಘಗಳೂ ತಮ್ಮ ವಿಶಿಷ್ಟ ಹಕ್ಕುಗಳನ್ನು ಉಳಿಸಿಕೊಳ್ಳಲು ಬಹುವಾಗಿ ಯತ್ನಿಸಿದುವು. ಅವು ಇಲ್ಲಲ್ಲಿ, ಇಷ್ಟಿಷ್ಟು ಹಕ್ಕು ಉಳಿಸಿಕೊಂಡಿದ್ದರೆ, ಇದು ಸಾಧ್ಯವಾದದ್ದು ಪ್ರಭುತ್ವದ ಮೇಲ್ವಿಚಾರಣೆಯಲ್ಲಿ, ಅದು ಅಧಿಕಾರ ನೀಡಿದಾಗ ಮಾತ್ರ. ಬಲಿಷ್ಠ ಕೇಂದ್ರ ಸರಕಾರ ಹಾಗೂ ಆರ್ಥಿಕ ಚಟುವಟಿಕೆಗಳ ಕ್ಷೇತ್ರ ವಿಸ್ತರಣೆಯಿಂದ ದೊರಕುತ್ತಿದ್ದ ಅನುಕೂಲಗಳು ಮಧ್ಯಮವರ್ಗದ ಎಲ್ಲ ಜನರ ಹಿತಕ್ಕೂ ಅನುಗುಣವಾಗಿದ್ದುದರಿಂದ ರಾಷ್ಟ್ರಪ್ರಭುತ್ವ ಪರಮಾಧಿಕಾರ ಸ್ಥಾಪಿಸುವುದು ಸಾಧ್ಯವಾಯಿತು.

---

1 *Documents Relatifs a l'histoire de L'Industrie et du Commerce en France*, vol. II, pp. 123-4. *Publiés par M. G. Fagniez. Picard, Paris, 1898.* vol. II, 1900.

ದೊರೆಗಳು ಮಧ್ಯಮವರ್ಗದ ಪ್ರಜೆಗಳಿಂದ ಬರುವ ಹಣವನ್ನೇ ಅವಲಂಬಿಸಿದ್ದರು. ಆದ್ದರಿಂದ ವಿಸ್ತರಿಸುತ್ತಿದ್ದ ತಮ್ಮ ರಾಜ್ಯಗಳನ್ನು ಆಳುವ ಕಾರ್ಯದಲ್ಲಿ ಈ ವರ್ಗದ ಜನರ ಸಲಹೆ ಸಹಕಾರಗಳನ್ನೂ ಅವಲಂಬಿಸಲಾರಂಭಿಸಿದರು. ಇವರೇ ನ್ಯಾಯಾಧೀಶರು, ಮಂತ್ರಿಗಳು, ಆಡಳಿತಾಧಿಕಾರಿಗಳು—ಎಲ್ಲರೂ ಈ ವರ್ಗದವರೇ. ಹದಿನೈದನೆಯ ಶತಮಾನದ ಫ್ರಾನ್ಸಿನಲ್ಲಿ, ಜಾಕ್ವೆ ಕೋ ಎಂಬ ಲಯನ್ಸಿನ ಬ್ಯಾಂಕರೊಬ್ಬ—ಆತ ಆ ಕಾಲದ ಬಹು ದೊಡ್ಡ ಶ್ರೀಮಂತ—ದೊರೆಯ ಸಲಹೆಗಾರನಾದ. ಟ್ಯೂಡರ್ ಆಳಿಕೆಯ ಕಾಲದ ಇಂಗ್ಲೆಂಡಿನಲ್ಲಿ ಥಾಮಸ್ ಕ್ರಾಮ್‌ವೆಲ್ ಎಂಬ ಒಬ್ಬ ನ್ಯಾಯವಾದಿಯೂ, ಥಾಮಸ್ ಗ್ರೆಷಾವ್ ಎಂಬ ಒಬ್ಬ ಜವಳಿ ವ್ಯಾಪಾರಿಯೂ ದೊರೆಯ ಸಚಿವರಾದರು. "ರಾಜತ್ವಕ್ಕೂ, ಉದ್ಯಮಶೀಲರೂ ಧಣಿಗಳೂ ಆದ ಕೈಗಾರಿಕಾ ಕ್ಷೇತ್ರದ ಮಧ್ಯಮವರ್ಗದ ಜನರಿಗೂ ಒಂದು ರೀತಿಯ ಒಡಂಬಡಿಕೆಯಾಗಿತ್ತು. ರಾಜಪ್ರಭುತ್ವದ ಸೇವೆಗಾಗಿ ಅವರು ತಮ್ಮ ರಾಜಕೀಯ ಸಾಮಾಜಿಕ ಪ್ರಭಾವವನ್ನೂ ಬುದ್ಧಿಶಕ್ತಿಯನ್ನೂ ಐಶ್ವರ್ಯವನ್ನೂ ಮುಡಿಪಾಗಿರಿಸಿದರು. ಪ್ರತಿಯಾಗಿ ಪ್ರಭುತ್ವ ಅವರಿಗೆ ಅಸಂಖ್ಯಾತ ಆರ್ಥಿಕ ಸಾಮಾಜಿಕ ಹಕ್ಕುಗಳನ್ನು ನೀಡಿತು. ಸಾಮಾನ್ಯ ಕೂಲಿಗಾರರು ಅವರಿಗೆ ಅತ್ಯಂತ ವಿಧೇಯರಾಗಿರುವಂತೆ ಅವರನ್ನು ಮೆಟ್ಟಿ ಹಿಡಿದರು."[1]

"ನೀನು ನನ್ನ ಬೆನ್ನು ಕೆರಿ. ನಾನು ನಿನ್ನ ಬೆನ್ನು ಕೆರೀತೀನಿ," ಎಂಬ ಗಾದೆಗೆ ತಕ್ಕ ಉದಾಹರಣೆ ಇದು.

ಈ ಕಾಲದ ಒಂದು ಸ್ವಾರಸ್ಯಕರ ಲಕ್ಷಣವನ್ನು ಇಂಗ್ಲೆಂಡಿನಲ್ಲಿ ಕಾಣಬಹುದಿತ್ತು. ವೆನಿಸಿಗರೂ, ಲಂಡನ್ನಿನಲ್ಲಿ ಕೋಠಿಯನ್ನು ಹೊಂದಿದ್ದ ಹ್ಯಾನ್ಸಿಯಾಟಿಕ್ ಸಂಘದ ಜರ್ಮನ್ ವರ್ತಕರೂ ಅಲ್ಲಿಂದ ಉಚ್ಚಾಟನೆಗೊಂಡರು. ಆ ದೇಶದ ಆಯಾತ ನಿರ್ಯಾತ ವ್ಯಾಪಾರಗಳ ಹತೋಟಿಯನ್ನು ಹಿಂದಿನಿಂದಲೂ ವಿದೇಶೀಯರೇ ಹೊಂದಿದ್ದರು. ವಂಶ ಪಾರಂಪರ್ಯವಾಗಿ ಆಡಳಿತ ನಡಸುತ್ತಿದ್ದ ದೊರೆಗಳಿಂದ ಅವರು ಹಣ ಗಳಿಸುವ, ವ್ಯಾಪಾರ ಮಾಡುವ ಹಕ್ಕುಗಳನ್ನು ಕೊಂಡುಕೊಂಡಿದ್ದರು. ಹದಿನೈದು ಹದಿನಾರನೆಯ ಶತಮಾನಗಳಲ್ಲಿ ಇಂಗ್ಲಿಷ್ ವರ್ತಕರ ಚತುರತೆ ಬೆಳಕಿಗೆ ಬಂತು. ಅವರಲ್ಲೂ ಮುಖ್ಯವಾಗಿ ವರ್ತಕ ಸಾಹಸಿಗಳ ತಂಡವೊಂದು ಬಹು ಜೀವಂತವಾಗಿತ್ತು, ಚುರುಕಾಗಿತ್ತು. ವಿದೇಶೀಯರ ಕೈಯಲ್ಲಿದ್ದ ಲಾಭಕರ ವ್ಯಾಪಾರವನ್ನೆಲ್ಲ ಗಿಟ್ಟಿಸಿಕೊಳ್ಳಬೇಕೆಂದು ಇವರು ಇಚ್ಛಿಸಿದರು. ಮೊದಮೊದಲು ಇವರ ಯತ್ನ ಅಷ್ಟಾಗಿ ಫಲಿಸಲಿಲ್ಲ. ವಿದೇಶೀಯರಿಗೆ ಕೊಟ್ಟಿದ್ದ ಹಕ್ಕುಗಳಿಗೆ ಪ್ರತಿಯಾಗಿ ದೊರೆ ಪಡೆಯುತ್ತಿದ್ದ ಹಣ ಬಿಟ್ಟುಕೊಡಲು ಆತ ಇಷ್ಟ ಪಡಲಿಲ್ಲ. ಅಲ್ಲದೆ ಈ ಬಗ್ಗೆ ಬಹು ಕಠಿನ ಕ್ರಮ ಕೈಕೊಂಡರೆ ಇತರ ಪ್ರಭುತ್ವಗಳ ವಿರೋಧವನ್ನೂ ಕಟ್ಟಿಕೊಳ್ಳಬೇಕಾದೀತೆಂಬ ಅಂಶವನ್ನೂ ಗಮನಿಸಬೇಕಾಗಿತ್ತು. ಆದರೆ ಇಂಗ್ಲಿಷ್ ವರ್ತಕ

---

[1] P. Boissonnade. *Le Socialisme d' Etat* (1453-1661), pp. 9-10 Champion, Paris, 1927.

ಸಾಹಸಿಗಳು ಜಗ್ಗಲಿಲ್ಲ. ೧೫೩೪ರಲ್ಲಿ ವೆನಿಸಿಗರು ತಮ್ಮ ಹಕ್ಕುಗಳನ್ನು ಕಳೆದುಕೊಂಡರು. ಆರು ವರ್ಷಗಳ ಅನಂತರ ಹ್ಯಾನ್ಸಿಗರು ದೊರೆಗೆ ಹೀಗೆ ದೂರು ಹೊತ್ತರು: "ಹ್ಯಾನ್ಸಿನ ವರ್ತಕರಿಗೆ ಮಹಾಪ್ರಭುಗಳಾದ ತಾವು ವ್ಯಾಪಾರಾವಕಾಶ ನೀಡಿದ್ದೀರಿ. ಇದರ ಅವಧಿಯನ್ನು ಪದೇಪದೇ ವಿಸ್ತರಿಸಿಕೊಂಡು ಬಂದಿದ್ದೀರಿ. ಈ ವರ್ತಕರಿಗೆ ಸೇರಿದ ಜನ ಹಾಗೂ ಸರಕುಗಳ ಮೇಲೆ ಯಾವ ರೀತಿಯ ವಸೂಲಿಯನ್ನೂ ದುಬಾರಿ ಶುಲ್ಕವನ್ನೂ ವಿಧಿಸಬಾರದೆಂದು ಅಪ್ಪಣೆ ಕೊಟ್ಟದ್ದೀರಿ. ಆದರೂ ಲಂಡನ್ನಿನ ಉಣ್ಣೆ ಕತ್ತರಿಸುವವರಿಗೂ, ಬಟ್ಟೆ ತೊಳೆಯುವವರಿಗೂ ಮನ್ನಣೆ ನೀಡಿರುವುದರಿಂದ ಹ್ಯಾನ್ಸಿನ ಯಾವ ವರ್ತಕನೂ ಕಚ್ಚಾ ಉಣ್ಣೆಯನ್ನೂ ವಸ್ತ್ರವನ್ನೂ ನಿರ್ಭಯವಾಗಿ ಈಗ ಇಂಗ್ಲೆಂಡ್ ಸೀಮೆಯಿಂದ ಹೊರಗೆ ಸಾಗಿಸುವಂತಿಲ್ಲ."[1]

ಹ್ಯಾನ್ಸ್ ವರ್ತಕರು ಫ್ಲಾಂಡರ್ಸಿನಲ್ಲೂ ಜರ್ಮನಿಯಲ್ಲೂ ವಸ್ತ್ರ ತಯಾರಿಸುವ ಉದ್ದೇಶದಿಂದ ಇಂಗ್ಲಿಷ್ ಉಣ್ಣೆ ಕೊಳ್ಳುತ್ತಿದ್ದರು. ಆದ್ದರಿಂದ ಇಂಗ್ಲೆಂಡಿನ ವಸ್ತ್ರಕೈಗಾರಿಕೆ ಇಂಗ್ಲಿಷ್ ವರ್ತಕ ಸಾಹಸಿಗಳಿಗೆ ಬೆಂಬಲ ನೀಡಿತು. ಇಂಗ್ಲಿಷ್ ವಸ್ತ್ರ ತಯಾರಕರೂ ಇಂಗ್ಲಿಷ್ ವರ್ತಕ ಸಾಹಸಿಗಳೂ ಒಂದಾಗಿ ತಮ್ಮ ವಾದದಲ್ಲಿ ಗೆದ್ದರು. ಇವರಿಗೆ ಸಹಾಯ ಮಾಡಲು ಇಂಗ್ಲೆಂಡಿನ ಜವಳಿ ವ್ಯಾಪಾರಿ ಗ್ರೆಷಾಮ್ ಇದ್ದ. ಇವನು ರಾಜನ ಸಚಿವನಾಗಿದ್ದುದು ಇವರಿಗೆ ಅನುಕೂಲವಾಗಿತ್ತು. ಜರ್ಮನ್ ಹ್ಯಾನ್ಸ್ ವರ್ತಕರಿಗೆ ದೊರೆತಿದ್ದ ಸೌಲಭ್ಯಗಳು ಒಂದೊಂದಾಗಿ ಕತ್ತರಿಸಿ ಹೋದುವು. ಬಹು ಪ್ರಬಲವಾಗಿದ್ದ ಹ್ಯಾನ್ಸಿನ ಕೋಠಿ ೧೫೯೭ರಲ್ಲಿ ಮುಚ್ಚಲ್ಪಟ್ಟಿತು.

ತನ್ನ ನೆಲವನ್ನು ಉಳಬಯಸಿದ ರೈತ, ತನ್ನ ವೃತ್ತಿಯನ್ನು ಅನುಸರಿಸಬಯಸಿದ ಕಸಬುದಾರ, ವ್ಯಾಪಾರ ನಿರತನಾಗಬಯಸಿದ ವರ್ತಕ—ತಂತಮ್ಮ ಕಾರ್ಯಗಳಲ್ಲಿ ಶಾಂತಿಯುತವಾಗಿ ನಿರತರಾಗಬಯಸಿದ ಈ ಎಲ್ಲರೂ—ಹಲವು ಹನ್ನೊಂದು ಸ್ಥಳೀಯ ನಿಬಂಧನೆಗಳ ಬದಲು ವ್ಯಾಪಕವಾದ ಒಂದೇ ಒಂದು ನಿಬಂಧನೆ ಜಾರಿಗೆ ತರಬಲ್ಲ, ಅಸಂಘಟನೆಯ ಬದಲು ಸಂಘಟನೆ ಏರ್ಪಡಿಸಬಲ್ಲ, ಸಮರ್ಥ ಕೇಂದ್ರ ಸರಕಾರದ ರಚನೆಯನ್ನು ಸ್ವಾಗತಿಸಿದರು. ರಾಷ್ಟ್ರೀಯತ್ವದ ಕಲ್ಪನೆಗೆ ಕಾರಣವಾದ ಹಲವು ಪ್ರವೃತ್ತಿಗಳಿಂದ ರಾಷ್ಟ್ರೀಯ ಭಾವನೆ ಬೆಳೆಯಿತು. ಜೋನ್ ಆಫ್ ಆರ್ಕ್ ಇವಳ ಜೀವನ, ಹೋರಾಟ ಮತ್ತು ಸಾವಿನಲ್ಲಿ ಈ ವಿಚಾರ ಸ್ಪಷ್ಟವಾಗುತ್ತದೆ. ಫ್ರಾನ್ಸಿನಲ್ಲಿ ಊಳಿಗಮಾನ್ಯ ಪ್ರಭುಗಳು ಬಹು ಪ್ರಬಲರಾಗಿದ್ದರು. ಇಂಗ್ಲೆಂಡಿನೊಡನೆ ನಡೆದ ನೂರು ವರ್ಷಗಳ ಯುದ್ಧದಲ್ಲಿ, ಈ ಊಳಿಗಮಾನ್ಯ ಪ್ರಭುಗಳ ಪೈಕಿ ಅತ್ಯಂತ ಬಲಿಷ್ಠನಾದ ಬರ್ಗಂಡಿಯ ಡ್ಯೂಕನು ಇಂಗ್ಲಿಷರೊಡನೆ ಸೇರಿಕೊಂಡು ಫ್ರಾನ್ಸ್ ದೊರೆಯನ್ನು ಹಲವು ಬಾರಿ ಸೋಲಿಸಿದ. ಬರ್ಗಂಡಿ ಫ್ರಾನ್ಸಿನ ಭಾಗವಾಗಬೇಕೆಂದು ಜೋನಳ ಇಷ್ಟವಾಗಿತ್ತು. ಆಕೆ ಡ್ಯೂಕನಿಗೆ ಹೀಗೆ ಬರೆದಳು: "ಫ್ರಾನ್ಸಿನ ದೊರೆಯೊಡನೆ ನೀವು ದೀರ್ಘವಾದ, ಪರಿಶುದ್ಧವಾದ, ಸ್ಥಿರವಾದ

---

[1] *Tudor Economic Documents, op. cit* , vol. II, p. 31.

ಶಾಂತಿ ಮಾಡಿಕೊಳ್ಳಬೇಕೆಂದು ಕನ್ಯೆ ಜೇನ್ ಬಯಸುತ್ತಾಳೆ.... ಫ್ರಾನ್ಸಿನ ಪವಿತ್ರ ರಾಜ್ಯದ ಮೇಲೆ ಯುದ್ಧ ಮಾಡಬಾರದೆಂದು ಅತ್ಯಂತ ವಿನಯದಿಂದ ನಾನು ಪ್ರಾರ್ಥಿಸುತ್ತೇನೆ, ಬೇಡಿಕೊಳ್ಳುತ್ತೇನೆ."[1]

ಫ್ರೆಂಚ್ ಸೇನೆಗೆ ಸ್ಥೈರ್ಯ ಆತ್ಮವಿಶ್ವಾಸ ತುಂಬುವ, ಅವರು ಫ್ರೆಂಚ್ ಜನರೆಂಬ ಭಾವನೆ ತುಂಬುವ, ದೊರೆಯ ಕೆಲಸ ಎಲ್ಲ ಫ್ರೆಂಚ್ ಜನರ ಕೆಲಸವೆಂಬ ನಂಬಿಕೆ ಬೆಳಸುವ ಈ ಕಾರ್ಯದಲ್ಲಿ ಜೋನಳು ಸಹಾಯಕಳಾದಳು. ಫ್ರಾನ್ಸ್ ದೇಶದ ಬಗ್ಗೆ ಅವಳಿಗೆ ಯಾವ ಉನ್ಮತ್ತಾಭಿಮಾನ ಇತ್ತೋ ಅಷ್ಟೇ ಅಭಿಮಾನವನ್ನು ಆಕೆ ಹಲವರಲ್ಲಿ ತುಂಬಿದಳು. ಊಳಿಗಮಾನ್ಯ ಪ್ರಭುವೊಬ್ಬನಿಗೆ ಸೇವೆ ಸಲ್ಲಿಸುತ್ತಿದ್ದ ಸೈನಿಕನೊಬ್ಬ ಜೋನಳ ಭಾಷಣ ಕೇಳಿದಾಗ, "ಫ್ರೆಂಚ್ ರಕ್ತ ಚೆಲ್ಲಿದ ಭೀಕರ ದೃಶ್ಯ ನೋಡಿದಾಗಲೆಲ್ಲ ನನ್ನ ಕೂದಲು ನಿಮಿರಿ ನಿಲ್ಲುತ್ತದೆ,"[2] ಎಂದು ಉದ್ಗಾರ ತೆಗೆದನಂತೆ. ಅವನು ಈ ಮಾತು ಹೇಳಿದಾಗ ಅವನು ತನ್ನ ಪ್ರಭುವಿನಿಂದಲೂ ದೂರ, ಫ್ರಾನ್ಸನ್ನು, ತನ್ನ ದೇಶವನ್ನು ನೆನಸಿಕೊಳ್ಳುತ್ತಿದ್ದ. ಹೀಗೆ ಸ್ಥಳಪ್ರೇಮ ಹೋಗಿ ರಾಷ್ಟ್ರಪ್ರೇಮ ಬಂತು. ಸಂಘಟಿತ ರಾಜ್ಯವನ್ನಾಳುವ ಪ್ರಬಲ ರಾಜರ ಯುಗ ಆರಂಭವಾಯಿತು.

ಬರ್ನಾರ್ಡ್‌ಷಾ ಎಂಬ ಆಂಗ್ಲ ನಾಟಕಕಾರ ಸೆಂಟ್ ಜೋನಳ ಬಗ್ಗೆ ಬರೆದಿರುವ ಕೃತಿರತ್ನದಲ್ಲಿ ಈ ಪ್ರಬುದ್ಧ ರಾಷ್ಟ್ರಪ್ರೇಮವನ್ನು ಕುರಿತು ಒಂದು ಮುಖ್ಯ ಭಾಗವಿದೆ. ಒಬ್ಬ ಆಂಗ್ಲ ಚರ್ಚಿಗನೂ ಒಬ್ಬ ಆಂಗ್ಲ ಊಳಿಗಮಾನ್ಯ ಪ್ರಭುವೂ ಫ್ರೆಂಚ್ ಪ್ರಭುವೊಬ್ಬನ ಸೇನಾಬಲವನ್ನು ಕುರಿತು ಮಾಡುವ ಸಂಭಾಷಣೆ ಈ ರೀತಿ ಇದೆ:

"ಪಾದ್ರಿ : ಅವನು ಒಬ್ಬ ಯಃಕಶ್ಚಿತ್ ಫ್ರೆಂಚ್ ಮನುಷ್ಯ.

ಶ್ರೀಮಂತ : ಏನು, ಫ್ರೆಂಚನೆ? 'ಫ್ರೆಂಚ್' ಎನ್ನುವ ಪದ ಎಲ್ಲಿ ಸಂಪಾದಿಸಿದೆ? ಈ ಬರ್ಗಂಡಿಯನರು, ಬ್ರೆಟನ್ನರು, ಪಿಕಾರ್ಡರು, ಗ್ಯಾಸ್ಕನ್ನರು ಯಾವಾಗಿನಿಂದ ಫ್ರೆಂಚರೆಂದು ಕರೆದುಕೊಳ್ಳಲಾರಂಭಿಸಿದರು? ಫ್ರಾನ್ಸ್, ಇಂಗ್ಲೆಂಡ್—ಎಲ್ಲಾ ತಮ್ಮ ದೇಶ ಎನ್ನುವಂತೆ ಇವರು ಮಾತಾಡುವರು. ಆಹಾ! ಅವರವೇ ಏಕಾಗಬಾರದು? ಇಂಥ ಭಾವನೆ ಹಬ್ಬಿ ಜನಪ್ರಿಯವಾದರೆ ನನ್ನ ನಿನ್ನ ಗತಿ ಏನು?

ಪಾದ್ರಿ : ಏಕೆ? ಅದರಿಂದ ನಮಗೇನು ನಷ್ಟ?

ಶ್ರೀಮಂತ : ಜನ ಇಬ್ಬರು ಯಜಮಾನರನ್ನು ಸೇವಿಸಲಾರರು. ಈ ದೇಶಸೇವೆಯ ಒಣ ಮಾತು ಅವರ ತಲೆ ಹೊಕ್ಕರೆ ಸಾಕು—ಊಳಿಗಮಾನ್ಯ ಪ್ರಭುಗಳ ಅಧಿಕಾರ, ಚರ್ಚಿನ ಅಧಿಕಾರ—ಎಲ್ಲಕ್ಕೂ ಸಂಚಕಾರ ಬಂದಂತೆಯೇ."[3]

ಈ ದೂರದೃಷ್ಟಿಯ ಶ್ರೀಮಂತ ಹೇಳಿದ ಮಾತು ನಿಜ. ರಾಜತ್ವಕ್ಕೆ ಇದ್ದ ಒಂದೇ

---

[1] Lang, *The Maid of France*, p. 165, Longmans, Green and Company, London, 1929.

[2] *Ibid.*, p. 110.

[3] G. B. Shaw, *Saint Joan*, Scene 4.

ಒಂದು ಪ್ರಬಲ ಪ್ರತಿಸ್ಪರ್ಧಿಯೆಂದರೆ ಚರ್ಚು. ಇವೆರಡಕ್ಕೂ ಘರ್ಷಣೆ ಅನಿವಾರ್ಯ ವಾಯಿತು. ರಾಷ್ಟ್ರೀಯ ಭಾವನೆ ಹೊಂದಿದ್ದ ರಾಜರ ದೃಷ್ಟಿಯಲ್ಲಿ ರಾಜ್ಯಕ್ಕೆ ಇಬ್ಬರು ಅಧಿಪತಿಗಳು ಅಗತ್ಯವೆನಿಸಲಿಲ್ಲ. ಪೋಪ್ ಪಡೆದಿದ್ದ ಅಧಿಕಾರ ಊಳಿಗಮಾನ್ಯ ಪ್ರಭುಗಳ ಅಧಿಕಾರಕ್ಕಿಂತ ಹೆಚ್ಚು ಅಪಾಯಕಾರಿಯಾಗಿತ್ತು. ಪೋಪನೂ ರಾಜನೂ ಪದೇ ಪದೇ ಬಡಿದಾಡುತ್ತಿದ್ದರು. ಉದಾಹರಣೆಗೆ, ಬಿಷಪ್ಪರ ಅಥವ ಆಬಟ್ಟರ ಸ್ಥಾನ ಖಾಲಿಯಾದಾಗ ಇವರನ್ನು ನೇಮಕ ಮಾಡಬೇಕಾದವರು ಯಾರು?—ಎಂಬ ಪ್ರಶ್ನೆ. ಇದು ಬಹು ಮುಖ್ಯ. ಏಕೆಂದರೆ ಈ ಸ್ಥಾನದಲ್ಲಿದ್ದವರು ಹೆಚ್ಚು ಹಣ ಗಳಿಸಬಹುದಾಗಿತ್ತು. ಈ ಹಣ ಬರುತ್ತಿದ್ದುದು ಜನ ಸಾಮಾನ್ಯರಿಂದ. ಚರ್ಚಿಗೆ ಇವರು ತೆರಿಗೆ ಕೊಡುತ್ತಿದ್ದರು. ಹೀಗೆ ಬರುತ್ತಿದ್ದ ಹಣದ ಮೊತ್ತ ಅಗಾಧ. ದೊರೆ, ಪೋಪು—ಇಬ್ಬರೂ ತಮ್ಮ ತಮ್ಮ ಕಡೆಯ ಜನಕ್ಕೇ ಇವನ್ನು ದೊರಕಿಸಿಕೊಡಬೇಕೆಂದು ಇಚ್ಛಿಸಿದರು. ಹಣ ಗಳಿಸುವ ಈ ಹುದ್ದೆಗಳತ್ತ ರಾಜರು ಲೋಭದೃಷ್ಟಿ ಬೀರಿದರು. ಈ ಹುದ್ದೆಗಳಿಗೆ ನೇಮಕ ಮಾಡಲು ಪೋಪರಿಗೆ ಅಧಿಕಾರವಿಲ್ಲವೆಂದು ಇವರು ವಾದಿಸಿದರು.

ಚರ್ಚು ಪರಮ ಶ್ರೀಮಂತವಾಗಿತ್ತು: ಎಲ್ಲ ನೆಲದ ಮೂರರಲ್ಲೊಂದರಿಂದ ಅರ್ಧ ದಷ್ಟು ಪಾಲು ಅದಕ್ಕೆ ಸೇರಿತ್ತೆಂದು ಒಂದು ಅಂದಾಜು. ಆದರೂ ಅದು ರಾಷ್ಟ್ರೀಯ ಸರಕಾರಕ್ಕೆ ತೆರಿಗೆ ಕೊಡಲು ನಿರಾಕರಿಸಿತು. ರಾಜರಿಗೆ ಹಣ ಬೇಕಿತ್ತು. ಆಗಲೇ ಅಗಾಧ ವಾಗಿದ್ದ, ಇನ್ನೂ ವರ್ಧಿಸುತ್ತಲೇ ಇದ್ದ, ಚರ್ಚಿನ ಐಶ್ವರ್ಯದ ಮೇಲೆ ತೆರಿಗೆ ಹಾಕ ಬೇಕೆಂದು, ಸರಕಾರ ವಹಿಸುವ ವೆಚ್ಚದ ಒಂದು ಪಾಲನ್ನು ಹೀಗೆ ತುಂಬಿಕೊಳ್ಳಬೇಕೆಂದು, ರಾಜರು ಅಭಿಪ್ರಾಯಪಟ್ಟರು.

ಚರ್ಚಿಗೂ ರಾಜರಿಗೂ ನಡುವಣ ಜಗಳಕ್ಕೆ ಇನ್ನೂ ಒಂದು ಕಾರಣವಿತ್ತು. ಕೆಲವು ವ್ಯಾಜ್ಯಗಳ ವಿಚಾರಣೆ ನಡೆಯುತ್ತಿದ್ದದ್ದು ಚರ್ಚಿನ ನ್ಯಾಯಾಲಯಗಳಲ್ಲಿ, ಕ್ರಮಬದ್ಧ ನ್ಯಾಯಾಲಯಗಳಲ್ಲಲ್ಲ. ಹಲವು ವೇಳೆ ಚರ್ಚಿನ ನ್ಯಾಯಾಲಯದ ತೀರ್ಪು ರಾಜನ ನ್ಯಾಯಾ ಸ್ಥಾನದ ತೀರ್ಪಿಗೆ ವಿರುದ್ಧವಾಗಿತ್ತು. ದಂಡ ಲಂಚಗಳ ರೂಪದಲ್ಲಿ ವಸೂಲಾಗುತ್ತಿದ್ದ ಹಣ ಯಾರಿಗೆ ಸೇರಬೇಕೆಂಬುದು ಇಷ್ಟೇ ಮುಖ್ಯವಾದ ಪ್ರಶ್ನೆಯಾಗಿತ್ತು.

ಪೋಪು ಹಲವು ವೇಳೆ ರಾಜ್ಯದ ಆಂತರಿಕ ವಿಚಾರದಲ್ಲೂ ಕೈ ಹಾಕುತ್ತಿದ್ದ. ಅವನು ಹೀಗೆ ಚಲಾಯಿಸುತ್ತಿದ್ದ ಅಧಿಕಾರದಿಂದ ಹಲವು ವೇಳೆ ತೊಡಕುಂಟಾಗುತ್ತಿತ್ತು. ಹೀಗೆ ಚರ್ಚು ರಾಜತ್ವದ ರಾಜಕೀಯ ಪ್ರತಿಸ್ಪರ್ಧಿಯಾಗಿತ್ತು.

ಅಂತೂ ಚರ್ಚು ಒಂದು ರಾಷ್ಟ್ರಾತೀತ ಶಕ್ತಿಯಾಗಿತ್ತು. ರಾಜರಲ್ಲಿ ಪ್ರಜೆಗಳು ತೋರು ತ್ತಿದ್ದ ನಿಷ್ಠೆಯಲ್ಲಿ ತನಗೂ ಪಾಲು ಸಲ್ಲಬೇಕೆಂದು ಇದು ಕೇಳುತ್ತಿತ್ತು. ಭೂಧನಗಳ ರೂಪದಲ್ಲಿ ಇದು ಅಗಾಧ ಐಶ್ವರ್ಯ ಪಡೆದಿತ್ತು. ಈ ಆಸ್ತಿಯಿಂದ ಬರುತ್ತಿದ್ದ ವರಮಾನ ರಾಜನ ಭಂಡಾರಕ್ಕೆ ಸಲ್ಲುವ ಬದಲು, ದೇಶ ಬಿಟ್ಟು, ರೋಮಿಗೆ ಕಾಣಿಕೆಯಾಗಿ ಹರಿಯು ತ್ತಿತ್ತು. ರಾಜನೊಬ್ಬನೇ ಚರ್ಚನ್ನು ಎದುರಿಸಲಿಲ್ಲ. ಎಂಟನೆಯ ಪೋಪ್ ಬೋನಿಫೇಸ್ ೧೨೯೬ರಲ್ಲಿ ಹೀಗೆ ಬರೆದ: "ಲೌಕಿಕ ಜನ ಪುರೋಹಿತ ವರ್ಗದವರನ್ನು ಕಟುವಾಗಿ

ದ್ವೇಷಿಸುವರೆಂಬುದು ಬಹು ಹಳೆಯ ಮಾತು. ಇಂದಿನ ಅನುಭವವೂ ಈ ಮಾತನ್ನೇ ಸ್ಥಿರಪಡಿಸುತ್ತದೆ."[1]

ಚರ್ಚಿನ ಹಲವು ದುರ್ನಡತೆಗಳು ಸ್ಪಷ್ಟವಾಗಿ ಎಲ್ಲರಿಗೂ ಗೋಚರವಾಗುತ್ತಿದ್ದುವು. ಚರ್ಚು ಬೋಧಿಸುವುದೊಂದು, ಆಚರಿಸುವುದೊಂದು. ಇವೆರಡರ ಅಂತರವನ್ನು ದಡ್ಡರೂ ಕೂಡ ನೋಡಬಹುದಿತ್ತು. ಹೇಗಾದರೂ ಸರಿ—ಹಣ ಗಳಿಸಬೇಕು, ಎಂಬ ಅವರ ಧೋರಣೆಯನ್ನು ಎಲ್ಲರೂ ಕುರಿತಾಡುತ್ತಿದ್ದರು. ಆಮೇಲೆ ಎರಡನೆಯ ಪೋಪ್ ಪಯಸ್ ಆದ ಏನಿಯಾಸ್ ಸಿಲ್ವಿಯಸ್ ಈ ರೀತಿ ಬರೆದ: "ಹಣವಿಲ್ಲದಿದ್ದರೆ ರೋಮಿನಲ್ಲಿ ಏನನ್ನೂ ಪಡೆಯುವಂತಿಲ್ಲ."[2] ಚಾಸರ್ ಕವಿಯ ಕಾಲದಲ್ಲಿ ಜೀವಿಸಿದ್ದ ಪಿಯರ್ ಬರ್‌ಷಾಯ್ ಎಂಬವನು ಈ ರೀತಿ ಬರೆದ: "ಚರ್ಚಿನ ಹಣ ಬಡವರಿಗಾಗಿ ವಿನಿಯೋಗವಾಗುತ್ತಿಲ್ಲ, ಪುರೋಹಿತ ವರ್ಗದವರ ಬಂಧು ಬಳಗಕ್ಕಾಗಿ."[3]

ಹದಿನಾಲ್ಕನೆಯ ಶತಮಾನದ ಒಬ್ಬ ಭಾವಗೀತ ಕವಿ ಪುರೋಹಿತ ವರ್ಗದ ಬಗ್ಗೆ ಜನರಿಗಿದ್ದ ಭಾವನೆಯನ್ನು ಈ ಪದ್ಯದಲ್ಲಿ ವ್ಯಕ್ತಪಡಿಸಿದ್ದಾನೆ:

> ದಿವ್ಯ ನಂಬಿಕೆಯನ್ನು ಕಳೆದು ಕೊಂಡಿಹ ಪೋಪು,
> ಧನಿಕ ಜನ ಅವನಿಂದ ಪಡೆಯಬಹುದೆಲ್ಲ ಕೃಪೆ,
> ಬಡ ಜನಕೆ ಇಲ್ಲ ಅವನಿಂದ ಈ ಆದರ.
> ಆದಷ್ಟು ಹಣಗಳಿಕೆಗಾಗವನ ದುಡಿಮೆ,
> ಕ್ರಿಸ್ತಜನ ಅಂಧರಂತನುಸರಿಸ ಬೇಕವನ ಮಾತ,
> ಅವನೊ ಚಿನ್ನದ ವಸ್ತ್ರ ವೈಭವವೋಪೇತ....
>
> ಕಾರ್ಡಿನಲ್ಲಿಗೆ ಇದಕು ಮಿಗಿಲಾದ ಗೌರವವಿಲ್ಲ.
> ಬೆಳಗು ಬೈಗೂ ಅವಗೆ ಒಂದೆ ಕೆಲಸ.
> ಎಂಥದೋ ಹೊಲಸು ವ್ಯಾಪಾರ ಹಣ ಗಳಿಕೆ.
> ಇದಕೆ ಮೀಸಲು ಅವನ ಕಾಲ ಮೇಣ್ ಬುದ್ಧಿಶಕ್ತಿ....
>
> ನಮ್ಮ ಬಿಷಪರು ನಿರತರಿಂಥ ಪಾಪದ ಎಸಕ
> ದಲ್ಲಿ, ಸುಲಿವರು ಚರ್ಮ ನಿಷ್ಕರುಣೆಯಿಂದ.
> ಭೋಗಪ್ರಿಯ ಪೂಜಾರಿಗಳು ಇವರ ಪಾಲು.

---

1 G. G. Coulton, *Encyclopaedia Britannica*, vol. XIX, p. 34. 14th Edition. Article on the Reformation.

2 *Ibid.*

3 G. G. Coulton, *op. cit.*, p. 301.

ಇವರ ಆಜ್ಞೆಯ ಮುದ್ರೆ ಬಂಗಾರದಿಂದ
ಕೊಳ್ಳಬಹುದಿದಕಾಗದಾವ ವಿಷಯವು ಇಲ್ಲ,
ಚಿನ್ನ ಕೊಟ್ಟರೆ ಮಾತ್ರ ನಿಲಿಸಬಹುದಿವರ ಕಳವು....

ಪೂಜಾರಿ ಮುಂತಾದ ಇತರ ನೌಕರ ವರ್ಗ :
ಇವರ ದಿನಚರಿ ಕೆಲಸಕೆಲ್ಲ ದೇವರೆ ಸಾಕ್ಷಿ!
ಹೇಳುವುದು ಒಂದು, ಮಾಡುವುದು ಮತ್ತೊಂದು....
ಪ್ರತಿಯೊಂದು ಕರ್ಮವೂ ಒಂದು ವ್ಯಾಪಾರ,
ಹಣಗಳಿಕೆಗವಕಾಶ
ಆರಾಧನೆಯ ದಿನವೂ ಹಣಕಿಲ್ಲ ಸಂಚಕಾರ....

ಸನ್ಯಾಸಿ ಭಿಕ್ಷು ಜನ ತೋರುವರು ಬಲು ಬಿರುಸು
ನೇಮ ವ್ರತ ಮುಂತಾದ ಆಚರಣೆಗಳನು,
ಆದರೀ ಇವು ಎಲ್ಲ ಬರಿ ಡಂಭ ಬೂಟಾಟಕೆ.
ವ್ರತದ ನುಡಿ, ಸುಖದ ನಡೆ, ಮನೆಯೊಳೆಂತೋ ಅದಕು
ಮಿಗಿಲಾದ ವೈಭವದ ಜೀವನವ ನಡಸುವವರು.
ತೋರಿಕೆಗೊ, ಅವರಂಥ ವ್ರತ ನೇಮಿಗಳೆ ಇಲ್ಲ ![1]

ಮಾರ್ಟಿನ್ ಲೂಥರ್ ಎಂಬವನು ೧೫೧೭ರಲ್ಲಿ ತನ್ನ "ತೊಂಬತ್ತೈದು ನಿಯಮಗಳನ್ನು" ಚರ್ಚಿನ ಹೆಬ್ಬಾಗಿಲಿಗೆ ಹೊಡೆಯುವುದಕ್ಕೂ ಹಲವು ಶತಮಾನಗಳ ಹಿಂದೆಯೇ ಚರ್ಚಿನ ಈ ನಾನಾ ಅಪವಾದಗಳೂ ಅನ್ಯಾಯಗಳೂ ಜನಜನಿತವಾಗಿದ್ದುವು. ಪ್ರಾಟೆಸ್ಟೆಂಟ್ ಸುಧಾರಣೆ ಬರುವುದಕ್ಕೂ ಹಿಂದೆಯೇ ಮತೀಯ ಸುಧಾರಣೆಗಳು ನಡೆದಿದ್ದುವು. ಹೀಗಿರುವಾಗ, ಪಶ್ಚಿಮದ ಕ್ಯಾಥೊಲಿಕ್ ಚರ್ಚಿನಲ್ಲಿ ಏಕೆ ಒಡಕುಂಟಾಯಿತು ?

ಹಿಂದಣ ಮತ ಸುಧಾರಕರು ಮತವನ್ನಷ್ಟೇ ಸುಧಾರಿಸಲು ಯತ್ನಿಸಲಿಲ್ಲ. ಇದರ ಜೊತೆಗೆ ಇನ್ನೂ ಹಲವು ಸುಧಾರಣೆ ತರಲು ಯತ್ನಿಸಿದರು. ಇದು ಇವರು ಮಾಡಿದ ತಪ್ಪು. ಇಂಗ್ಲೆಂಡಿನಲ್ಲಿ ರೈತರ ದಂಗೆಗೆ ವೈಕ್ಲಿಫ್ ಎಂಬವನು ಧಾರ್ಮಿಕ ಗುರುವಾಗಿದ್ದ. ಬೊಹಿಮಿಯಾದಲ್ಲಿ ಹಸ್ ಎಂಬವನು ರೋಮನ್ನು ವಿರೋಧಿಸಿದ ಮಾತ್ರವಲ್ಲ ; ಸಮಾಜವಾದಿ ರೈತ ಚಳುವಳಿಯನ್ನು ಕೂಡ ಹೂಡಿ, ಶ್ರೀಮಂತರ ಅಧಿಕಾರ ಹಕ್ಕುಗಳಿಗೇ ಸಂಚಕಾರ ತಂದೊಡ್ಡಿದ. ತತ್ಫಲವಾಗಿ ಈ ಚಳವಳಿಗಳನ್ನು ಚರ್ಚು ಮಾತ್ರವೇ ವಿರೋಧಿಸಲಿಲ್ಲ. ಮತಾತೀತ ಅಧಿಕಾರಿಗಳೂ ಕೂಡ ಇವನ್ನು ಎದುರಿಸಿದರು. ಆದ್ದರಿಂದ ಈ ಚಳವಳಿಗಳು ಅಡಗಿಸಲ್ಪಟ್ಟುವು. ಆಮೇಲೆ ಬಂದ ಲೂಥರ್, ಕ್ಯಾಲ್ವಿನ್, ನಾಕ್ಸ್ ಮುಂತಾದ ಸುಧಾರಕರು ಹೀಗೆ ಮಾಡ

[1] J. H. Robinson, *op. cit.*, vol. I, pp. 375-7.

ಲಿಲ್ಲ. ಲೂಥರ್ ಕ್ರಾಂತಿವಾದಿ ಆಗಿರಲಿಲ್ಲ. ದಲಿತರ ಪಕ್ಷ ವಹಿಸಿ ಅವನು ತನ್ನ ಯಶಸ್ಸಿನ ಹಾದಿಗೆ ಕಲ್ಲು ಹಾಕಿಕೊಳ್ಳಲಿಲ್ಲ; ಪ್ರತಿಯಾಗಿ, ಅವನು ಸುಧಾರಣೆಯನ್ನಾರಂಭಿಸಿ ದೊಡನೆಯೇ ಜರ್ಮನಿಯಲ್ಲಿ ಒಂದು ದೊಡ್ಡ ಕ್ರಾಂತಿ ಸಂಭವಿಸಿತು. ಅವನು ತನ್ನ ಬೋಧನೆಯ ಪ್ರಭಾವದಿಂದ ಇದನ್ನು ಅಡಗಿಸಲು ಸಹಾಯ ಮಾಡಿದ. ಚರ್ಚಿನ ವಿರುದ್ಧ ಬಂಡಾಯ ಎಬ್ಬಿಸಿದ ಆತ ಹೀಗೆ ಹೇಳಿದ: "ದಂಗೆಯನ್ನು ವಿರೋಧಿಸುವವರ ಪಕ್ಷ ನಾನು; ಅದಕ್ಕೆ ಕಾರಣರಾದವರ ವಿರೋಧಿ ನಾನು."[1] ಚರ್ಚಿನ ಆಡಳಿತ ಮಂಡಲಿಯ ಮೇಲೆ ಕೆಂಡ ಕಾರುತ್ತಿದ್ದ ಈ ಸುಧಾರಕ ಹೀಗೆ ಬರೆದ: "ಸರಕಾರ ಎಷ್ಟೇ ಕೆಟ್ಟದ್ದಿರಲಿ, ಅದನ್ನು ಇರಗೊಡುತ್ತಾನೆ ದೇವರು. ಒಂದು ಗುಂಪು ಎಷ್ಟೇ ನ್ಯಾಯವಾಗಿರಲಿ, ಅದರ ದಂಗೆಯನ್ನು ಅವನು ಸಹಿಸಲಾರ."[2] ೧೫೨೫ರಲ್ಲಿ ದಂಗೆಯೆದ್ದ ರೈತರು ಹೀಗೆ ಕೂಗಿ ದರು: "ಕ್ರಿಸ್ತನ ಸೃಷ್ಟಿಯಲ್ಲಿ ಎಲ್ಲರೂ ಸಮಾನ." ಆಗ ಇವರನ್ನು ತೊಡೆದು ಹಾಕಲು ಲೂಥರ್ ಶ್ರೀಮಂತರಿಗೆ ಸಹಾಯ ಮಾಡಿದ. "ದಂಗೆಕೋರರನ್ನು ಕೊಲ್ಲುವುದು ನ್ಯಾಯವೇ . . . ಆದ್ದರಿಂದ ಯಾರೇ ಆಗಲಿ, ಸಾಧ್ಯವಾದಾಗಲೆಲ್ಲ, ಬಹಿರಂಗವಾಗಿಯೋ ರಹಸ್ಯವಾಗಿಯೋ ಅವರನ್ನು ಹೊಡೆಯಲಿ, ಕತ್ತು ಹಿಸುಕಲಿ, ತಿವಿಯಲಿ . . . . ಈ ಹೋರಾಟದಲ್ಲಿ ನೀವೇನಾದರೂ ಸತ್ತರೆ ನಿಮ್ಮದು ವೀರ ಮರಣ. ಇದಕ್ಕಿಂತ ಪವಿತ್ರವಾದ ಸಾವು ಇನ್ನಿಲ್ಲ." ಎಂದು ಲೂಥರ್ ಕ್ರಾಂತಿ ವಿರೋಧಿಗಳಿಗೆ ಪ್ರೋತ್ಸಾಹದ ನುಡಿಯಾಡಿದ.[3]

ಆದ್ದರಿಂದ ಲೂಥರನ ಗೆಲವಿನ ಗುಟ್ಟು ಇದು: ಅವನು ಅನುಕೂಲಸ್ಥರನ್ನು ಪದಚ್ಯುತಿ ಗೊಳಿಸುವ ತಪ್ಪು ಮಾಡಲಿಲ್ಲ. ಈ ಸುಧಾರಣೆ ಯಶಸ್ವಿಯಾಗಲು ಇನ್ನೊಂದು ಮುಖ್ಯ ಕಾರಣವಿತ್ತು. ಲೂಥರ್, ಕ್ಯಾಲ್ವಿನ್, ನಾಕ್ಸ್ ಇವರು ತಮ್ಮ ಹಿಂಬಾಲಕರಿಗೆ ಮಾಡಿದ ಮನವಿ ಸಮಯೋಚಿತವಾಗಿತ್ತು. ರಾಷ್ಟ್ರೀಯತೆಯ ಭಾವನೆ ಬೆಳೆಯುತ್ತಿದ್ದಾಗ ಅವರೂ ಇದೇ ಭಾವನೆಗೆ ಇಂಬುಗೊಟ್ಟರು. ರೋಮಿನ ಮತದ ವಿರುದ್ಧ ಹೂಡಿದ ಈ ಚಳವಳಿ ಅದೇ ಕಾಲಕ್ಕೆ ಬೆಳೆಯುತ್ತಿದ್ದ ರಾಷ್ಟ್ರಪ್ರಭುತ್ವದ ಹಿತಕ್ಕೆ ಅನುಗುಣವಾಗಿದ್ದುದರಿಂದ ಇದು ಗೆಲ್ಲಲು ಅವಕಾಶವಾಯಿತು.

ಪೋಪನ ಅಧಿಕಾರದ ವಿರುದ್ಧ ರಾಷ್ಟ್ರಪ್ರಭುತ್ವದ ಹೋರಾಟ ಹೆಚ್ಚು ಹೆಚ್ಚು ತೀವ್ರ ವಾಗುತ್ತಿದ್ದ ಸಮಯದಲ್ಲಿ ಲೂಥರ್ "ಜರ್ಮನಿಯ ಶ್ರೀಮಂತರನ್ನು ಉದ್ದೇಶಿಸಿ ಮಾಡಿದ ಭಾಷಣ"ದಲ್ಲಿ ರಾಜರಿಗೆ ಈ ರೀತಿಯ ಹರ್ಷದಾಯಕ ಹಿತವಚನವಿತ್ತ: "ದುಷ್ಟ ಶಿಕ್ಷಣ ಶಿಷ್ಟ ರಕ್ಷಣ ಕಾರ್ಯಕ್ಕಾಗಿ ಲೌಕಿಕ ಪ್ರಭುತ್ವವೂ ದೇವರಿಂದ ನೇಮಿತವಾದುದರಿಂದ ಇಡೀ ಕ್ರೈಸ್ತ ಭೂಮಿಯಲ್ಲಿ ಅದು ತನ್ನ ಕರ್ತವ್ಯ ನಿರ್ವಹಣೆ ಮಾಡಲು ಅವಕಾಶ ಇರ ಬೇಕು. ಪೋಪ್, ಬಿಷಪ್, ಪೂಜಾರಿ, ಸಂನ್ಯಾಸಿ, ಸಂನ್ಯಾಸಿನಿ—ಎಂಬ ಭೇದವಿಲ್ಲದೆ

---

[1] J. S. Shapiro, *Social Reform and the Reformation*, p. 78. Columbia University Press, 1909.

[2] *Ibid.*, p. 80.

[3] *Ibid.*, pp. 85, 86.

ಎಲ್ಲ ಜನರ ಮೇಲೂ ಅದರ ಅಧಿಕಾರ ವ್ಯಾಪ್ತಿ ಇರಬೇಕು."[1] ಈ ಕರ್ತವ್ಯದ ಒಂದು ಅಂಶವೆಂದರೆ ವಿದೇಶೀಯರ ಹಿಡಿತವನ್ನು ಬಿಡಿಸುವುದು, ಚರ್ಚಿನ ಭೂಮಿ ಹಾಗೂ ಹಣವನ್ನು ವಶಪಡಿಸಿಕೊಳ್ಳುವುದು. ಹೀಗೆಂಬುದಾಗಿಯೂ ಇವರಲ್ಲಿ ಸೂಚಿಸಿದೆ. ಚರ್ಚಿನ ಬಗ್ಗೆ ಇಲ್ಲಿ ಆಡಿರುವ ಮಾತು ಗಮನಾರ್ಹ. "ಮೂರು ಸಾವಿರ ಗಿಲ್ಡರಿಗಿಂತಲೂ ಹೆಚ್ಚು ಹಣವನ್ನು ಜರ್ಮನಿಯಿಂದ ರೋಮಿಗೆ ಪ್ರತಿವರ್ಷವೂ ಕಳಿಸಲಾಗುತ್ತಿದೆಯೆಂದು ಕೆಲವರ ಭಾವನೆ. ಇಷ್ಟು ಹಣ ಕಳಿಸುತ್ತಿರುವುದರಿಂದ ಯಾವ ಪ್ರಯೋಜನವೂ ದೊರಕುತ್ತಿಲ್ಲ.... ಬಹು ಹಿಂದೆ ಜರ್ಮನಿಯ ರಾಜರೂ ಚಕ್ರವರ್ತಿಗಳೂ ಜರ್ಮನಿಯ ಎಲ್ಲ ಮಠ ವೃತ್ತಿಗಳಿಂದಲೂ ವರಮಾನದ ಒಂದು ಭಾಗವನ್ನು—ಎಂದರೆ ಪ್ರತಿಯೊಂದು ವೃತ್ತಿಯಿಂದಲೂ ಬರುವ ಮೊದಲ ವರ್ಷದ ವರಮಾನದಲ್ಲಿ ಅರ್ಧವನ್ನು—ಪಡೆಯಲು ಪೋಪನಿಗೆ ಅವಕಾಶವಿತ್ತರು . . . . ಈ ವರಮಾನವನ್ನು ಹಲವರು ನಾಚಿಕೆಯಿಲ್ಲದೆ ಹೀನರೀತಿಯಲ್ಲಿ ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಳ್ಳುತ್ತಿದ್ದಾರೆ. ಭೂಮಿಯೂ ಪ್ರಜೆಗಳೂ ಈ ರೀತಿ ಅನ್ಯಾಯವಾಗಿ ಸೂರೆಗೆ ಒಳಗಾಗಿ ನಾಶವಾಗುವುದನ್ನು ರಾಜರು ತಪ್ಪಿಸಬೇಕಾಗಿದೆ. ಅವರು ಶಾಸನವೊಂದನ್ನು ತರಬೇಕು. ಈ ವರಮಾನ ಶುಲ್ಕ ದೇಶದಲ್ಲೇ ಉಳಿಯುವಂತೆ ಮಾಡಬೇಕು. ಇಲ್ಲವೇ ಇದನ್ನು ಸಂಪೂರ್ಣವಾಗಿ ತೆಗೆದು ಹಾಕಬೇಕು."[2]

ದೇಶೀಯರ ಅಧಿಕಾರವನ್ನೇ—ಅದೂ ಅವರ ದೇಶದಲ್ಲೇ—ಪ್ರಶ್ನಿಸುವ ವಿದೇಶೀಯನನ್ನು, ಪ್ರಬಲನಾದ ವಿದೇಶೀಯನನ್ನು, ಹೊರದೂಡಬೇಕು, ಎಂದು ಹೇಳಿ. ಹೀಗೆ ಮಾಡುವುದು ದೇಶೀಯರ ಹಕ್ಕೇ ಅಲ್ಲ, ಅವರ ಕರ್ತವ್ಯವೂ ಹೌದು, ಎಂದು ತಿಳಿಸಿ. ಜನರ ಗುಂಪಿಗೆ ಈ ವಿದೇಶೀಯನ ಅತುಲೈಶ್ವರ್ಯವನ್ನೂ ವರ್ಣಿಸಿ. ಅವನನ್ನು ಒದ್ದೋಡಿಸಿದರೆ ಈ ಐಶ್ವರ್ಯವೆಲ್ಲ ಬಹುಮಾನವಾಗಿ ಬರುವುದೆಂದು ಈ ಗುಂಪಿಗೆ ಹೇಳಿ. ಪರಿಣಾಮ ಏನು, ಗೊತ್ತೆ ? ದೊಂಬಿ, ಕೋಲಾಹಲ. ಪ್ರಾಟೆಸ್ಟೆಂಟ್ ಸುಧಾರಣೆ ಯಾವ ಕಾಲದಲ್ಲಿ ಬಂತೋ, ಆಗ ಅದು ಬಾರದೆ ಹೋಗಿದ್ದಿದ್ದರೆ ಚರ್ಚಿನ ಅಧಿಕಾರ ಸಂಪೂರ್ಣವಾಗಿ ಹೊರಟು ಹೋಗುತ್ತಿತ್ತು. ಚರ್ಚಿನ ಉಪಯುಕ್ತತೆ ಕಡಮೆಯಾಗಿತ್ತೆಂಬ ಅರ್ಥದಲ್ಲಿ ಚರ್ಚು ವಾಸ್ತವವಾಗಿ ಆಗಲೇ ತನ್ನ ಅಧಿಕಾರ ಕಳೆದುಕೊಂಡಿತ್ತು. ಊಳಿಗಮಾನ್ಯ ಯುಗದ ಯುದ್ಧಗಳಿಂದ ಸಮಾಜಕ್ಕೆ ತಕ್ಕಮಟ್ಟಿಗೆ ಬಿಡುಗಡೆ ದೊರಕಿಸಿ ಕೊಡಲು ಚರ್ಚಿಗೆ ಸಾಧ್ಯವಾಗಿತ್ತು, ಹಿಂದೆ. ಧಾರ್ಮಿಕ ಹಬ್ಬದ ದಿನಗಳಂದು ಯುದ್ಧ ನಿಲ್ಲಿಸಲು ಅದಕ್ಕೆ ಸಾಧ್ಯವಾಗಿತ್ತು. ಈಗ ಈ ಕೋಟಲೆಯ ಯುದ್ಧ ತಪ್ಪಿಸಲು ರಾಜ ಹೆಚ್ಚು ಸಮರ್ಥನಾಗಿದ್ದ. ಹಿಂದೆ ಶಿಕ್ಷಣ ವ್ಯವಸ್ಥೆ ಸಂಪೂರ್ಣವಾಗಿ ಚರ್ಚಿನ ಅಧೀನದಲ್ಲಿತ್ತು. ಈಗ ವರ್ತಕರಿಂದ ಸ್ಥಾಪಿತವಾದ ಸ್ವತಂತ್ರ ಶಾಲೆಗಳು ಆರಂಭವಾಗಿದ್ದುವು. ಹಿಂದೆ ಚರ್ಚಿನ ಶಾಸನಕ್ಕೆ ಮಿಗಿಲಾದುದು ಇರಲಿಲ್ಲ. ಈಗ ವಾಣಿಜ್ಯ ಸಮಾಜಕ್ಕೆ ಹೆಚ್ಚು ಅನುಕೂಲಕರ

---

[1] *Address to the German Nobility*. Buchheim's translation in Harvard classics, vol. 36, p. 281.

[2] *Ibid.*, pp. 292, 293.

ವಾದ ಹಳೆಯ ರೋಮನ್ ಶಾಸನದ ಪುನರುತ್ಥಾನವಾಗಿತ್ತು. ಹಿಂದೆ ರಾಜ್ಯಾಡಳಿತ ನಿರ್ವಹಣೆಗೆ ಅಗತ್ಯವಾದ ವಿದ್ಯಾವಂತರನ್ನು ಚರ್ಚು ಮಾತ್ರ ಒದಗಿಸಬಲ್ಲುದಾಗಿತ್ತು. ವಾಣಿಜ್ಯ ವಿಧಾನದಲ್ಲಿ ನುರಿತ, ರಾಷ್ಟ್ರದ ವಾಣಿಜ್ಯ ಹಾಗೂ ಕೈಗಾರಿಕೆಯ ಅಗತ್ಯಗಳನ್ನರಿತ ಒಂದು ಹೊಸ ಪ್ರಜಾವರ್ಗವನ್ನು ದೊರೆ ಈಗ ಅವಲಂಬಿಸಬಹುದಾಗಿತ್ತು.[1]

ಹಳೆಯ ಊಳಿಗಮಾನ್ಯ ಪದ್ಧತಿ ತನ್ನ ಮುಂದಿನ ಬೆಳವಣಿಗೆಯ ಹಾದಿಯಲ್ಲಿ ಅಡ್ಡಿಯಾಗಿರುವುದೆಂಬುದನ್ನು ಜನರ ಈ ಹೊಸ ಗುಂಪು, ಈ ಉದಿತೋದಿತ ಮಧ್ಯಮವರ್ಗ, ಅರಿತುಕೊಂಡಿತು. ಈ ಊಳಿಗಮಾನ್ಯ ವ್ಯವಸ್ಥೆಯ ಭದ್ರಕೋಟೆಯೆಂದರೆ ಕ್ಯಾಥೊಲಿಕ್ ಚರ್ಚು. ಪ್ರವರ್ಧಿಸುತ್ತಿದ್ದ ಮಧ್ಯಮ ವರ್ಗದ ಪ್ರಗತಿಯ ಹಾದಿಯಲ್ಲಿ ಚರ್ಚು ಒಂದು ದೊಡ್ಡ ಪ್ರತಿಬಂಧಕವೆಂಬುದನ್ನೂ ಇದು ಅರಿತುಕೊಂಡಿತು. ಊಳಿಗಮಾನ್ಯ ವ್ಯವಸ್ಥೆಯನ್ನು ಯಾರೂ ಎದುರಿಸದಂತೆ ಚರ್ಚು ಅದರ ರಕ್ಷಣೆಗೆ ಬರುತ್ತಿತ್ತು. ಚರ್ಚೀ ಒಂದು ಊಳಿಗಮಾನ್ಯ ಪ್ರಭುತ್ವವಾಗಿತ್ತು. ನೆಲದ ಮೂರರಲ್ಲೊಂದು ಭಾಗ ಅದರ ಒಡೆತನದಲ್ಲಿತ್ತು. ನಾಡಿನ ಐಶ್ವರ್ಯದ ಬಹು ಭಾಗ ಅದರ ಕಡೆಗೆ ಹರಿದು ಹೋಗುತ್ತಿತ್ತು. ಪ್ರವರ್ಧಿಸುತ್ತಿದ್ದ ಮಧ್ಯಮ ವರ್ಗ ಪ್ರತಿಯೊಂದು ದೇಶದಲ್ಲೂ ಪ್ರತ್ಯೇಕವಾಗಿ ಈ ಊಳಿಗಮಾನ್ಯ ವ್ಯವಸ್ಥೆಯನ್ನು ತೊಡೆದು ಹಾಕುವ ಮುನ್ನ ಅದು ಈ ವ್ಯವಸ್ಥೆಯ ಕೇಂದ್ರ ಸಂಸ್ಥೆಯನ್ನು—ಚರ್ಚನ್ನು—ಎದುರಿಸಬೇಕಾಗಿತ್ತು. ಅದು ಹೀಗೆಯೇ ಮಾಡಿತು.[2]

ಈ ಹೋರಾಟ ಮತೀಯ ಸ್ವರೂಪ ತಾಳಿತು. ಪ್ರಾಟೆಸ್ಟೆಂಟ್ ಸುಧಾರಣೆಯೆಂದು ಇದಕ್ಕೆ ಹೆಸರಾಯಿತು. ಮುಖ್ಯವಾಗಿ ಇದು ಊಳಿಗಮಾನ್ಯ ವ್ಯವಸ್ಥೆಯ ವಿರುದ್ಧವಾಗಿ ಮಧ್ಯಮ ವರ್ಗ ನಡಸಿದ ಪ್ರಥಮ ನಿರ್ಣಾಯಕ ಯುದ್ಧವಾಗಿತ್ತು.

---

[1] Cf. W. Cunningham, *Western Civilization in Its Economic Aspects* (*Medieval and Modern Times*). Cambridge University Press, 1913.

[2] Cf. F. Engels, *Socialism, Utopian and Scientific*, pp. 24, 25. Kerr edition.

## ೮. "ಶ್ರೀಮಂತ...."

ಒಂದು ಡಾಲರಿನ ಒಡಲಿನಲ್ಲಿ ೨೫.೮ ಗ್ರೇನ್ ಬದಲು ೧೫.೨೪ ಗ್ರೇನ್ ಚಿನ್ನ ಇರಬೇಕೆಂದು ಸಾರುವ ಪ್ರಕಟನೆಗೆ ೧೯೩೪ರ ಜನವರಿ ೩೧ರಂದು ಮಧ್ಯಾಹ್ನ ೩.೧೦ ಘಂಟೆಗೆ ಅಮೆರಿಕಾ ಸಂಯುಕ್ತ ಸಂಸ್ಥಾನದ ಅಧ್ಯಕ್ಷರು ಸಹಿ ಹಾಕಿದಾಗ, ಅವರು ವಾಸ್ತವವಾಗಿ ಸ್ಪೈನ್ನಿನ ಹಳೆಯ ಸಂಪ್ರದಾಯವನ್ನೆ ಅನುಸರಿಸುತ್ತಿದ್ದರು. ಇದು ಇಂಗ್ಲೆಂಡಿನ, ಫ್ರಾನ್ಸಿನ, ಜರ್ಮನಿಯ ಸಂಪ್ರದಾಯವೂ ಕೂಡ ಆಗಿತ್ತು. ನಾಣ್ಯದಲ್ಲಿ ಕಡಮೆ ಬೆಲೆಯ ಲೋಹ ಬೆರಸಿ ಅದರ ಮೌಲ್ಯ ಇಳಿಸುವುದು ಹಲವು ಶತಮಾನಗಳ ಹಳೆಯ ಅಭ್ಯಾಸ. ಮಧ್ಯಯುಗದ ರಾಜರು ಮೈದಾಸನಂತೆ ಮುಟ್ಟಿದ್ದೆಲ್ಲ ಚಿನ್ನ ಮಾಡುವ ಯೋಗ್ಯತೆ ಗಳಿಸಲರಿಯದೆ, ಹಣ ಪಡೆಯಲು ನಾಣ್ಯದ ಒಡಲಿನ ಬೆಲೆ ಕಡಮೆ ಮಾಡುವ ಸುಲಭ ವಿಧಾನವನ್ನನುಸರಿಸುತ್ತಿದ್ದರು.

ಡಾಲರಿನ ಒಡಲಿನ ಚಿನ್ನವನ್ನು ಅಮೆರಿಕಾಧ್ಯಕ್ಷ ರೂಸ್ವೆಲ್ಟರು ಕಡಮೆ ಮಾಡಿದಾಗ, ಬೆಲೆಗಳನ್ನು ಹೆಚ್ಚಿಸುವುದೇ ಅವರ ಮುಖ್ಯ ಉದ್ದೇಶವಾಗಿತ್ತು. ನಾಣ್ಯದ ಈ ಅಪಮೌಲ್ಯದಿಂದ ಅಮೆರಿಕಾ ಸಂಯುಕ್ತ ಸಂಸ್ಥಾನದ ಖಜಾನೆಗೆ ಸುಮಾರು ೨೮೯,೦೦,೦೦,೦೦೦ ಡಾಲರು ಲಾಭ ಬಂತೆಂಬುದು ಪ್ರಾಸಂಗಿಕವಾದ ಅಂಶ. ಆದರೆ ಮಧ್ಯಯುಗದ ರಾಜರಾದರೋ, ಲಾಭ ಪಡೆಯುವ ಉದ್ದೇಶದಿಂದಲೇ ಈ ಹಾದಿ ಹಿಡಿಯುತ್ತಿದ್ದರು. ಬೆಲೆ ಏರಿಸುವುದು ಅವರ ಇಚ್ಛೆಯಾಗಿರಲಿಲ್ಲ. ಆದೆ ಇದನ್ನು ಅವರು ಬಯಸದಿದ್ದರೂ, ಅಪಮೌಲ್ಯದ ಫಲವಾಗಿ ಬೆಲೆಗಳು ಏರಿಯೇ ಏರುತ್ತಿದ್ದುವು.

ನಾಣ್ಯದ ಮೌಲ್ಯ ಇಳಿಸುವುದೆಂದರೇನು? ಇದರಿಂದ ತಕ್ಷಣದಲ್ಲಿ ರಾಜನಿಗೆ ಹೇಗೆ ಲಾಭ ಬರುತ್ತದೆ? ಬೆಲೆಯ ಮಟ್ಟ ಹೇಗೆ ಏರುತ್ತದೆ?

ಮೌಲ್ಯ ಇಳಿಸುವುದೆಂದರೆ ಹೀಗೆ: ನಾಣ್ಯದಲ್ಲಿರುವ ಚಿನ್ನದ ಅಥವಾ ಬೆಳ್ಳಿಯ ಅಂಶ ಇಳಿಸುವುದು. ಹಿಂದೆ ಒಂದು ನಾಣ್ಯದಲ್ಲಿದ್ದ ಬೆಳ್ಳಿಯನ್ನು ಎರಡು ನಾಣ್ಯಗಳಿಗೆ ಹಂಚಿದರೆ, ಜತೆಗೆ ಕೀಳು ಲೋಹಗಳನ್ನು ಬೆಳ್ಳಿಗೆ ಸೇರಿಸಿ ಎರಡು ನಾಣ್ಯ ಮಾಡಿದರೆ, ಈಗ ಹಳೆಯ ಒಂದು ನಾಣ್ಯದ ಬದಲು ಎರಡು ನಾಣ್ಯ ಬಂದ ಹಾಗಾಯಿತು. ನಾಣ್ಯದ ಮುಖಬೆಲೆ ಒಂದೇ. ನಾಣ್ಯಕ್ಕೆ ಅದರ ಹಿಂದಿನ ಹೆಸರೇ ಉಳಿಯುತ್ತದೆ. ಕ್ರಾನ್ ಅಥವಾ ಲೀವ್ರ್ ಎಂದೇ ಅದನ್ನು ಕರೆಯಬಹುದು. ಆದರೆ ವಾಸ್ತವವಾಗಿ ಹಿಂದಿನ ನಾಣ್ಯದ ಅರ್ಧ ಮೌಲ್ಯ ಈಗಿನ ನಾಣ್ಯಕ್ಕೆ. ಹನ್ನೆರಡು ಮೊಟ್ಟೆಗೆ ಪ್ರತಿಯಾಗಿ ಸಾಮಾನ್ಯವಾಗಿ ಒಂದು ಜೋರು ರೊಟ್ಟಿ ಕೊಡಬೇಕಾಗಿದ್ದರೆ, ನೀವು ಆರೇ ಮೊಟ್ಟೆ ಕೊಟ್ಟರೆ ಅದೇ ಗಾತ್ರದ ರೊಟ್ಟಿ ನಿಮಗೆ ದೊರಕೀತೆ? ಆರು ಮೊಟ್ಟೆಗೇ ಒಂದು ಡಜನ್ ಎಂದು ನೀವು ಕರೆದರೂ ಅದು ಮೊದಲನೆಯ ಸಂಖ್ಯೆಯಲ್ಲಿ ಅರ್ಧ ಮಾತ್ರ. ಅಂತೆಯೇ ಹಳೆಯ ಒಳ್ಳೆಯ ನಾಣ್ಯಕ್ಕೆ ಪ್ರತಿಯಾಗಿ ನೀವು ಪಡೆಯುತ್ತಿದ್ದಷ್ಟನ್ನೇ ಈಗಲೂ, ಮೌಲ್ಯ ಕಡಮೆ ಹೊಂದಿದ

ನಾಣ್ಯಕ್ಕೂ, ಪಡೆಯಲಾರಿರಿ. ಕಡಮೆ ಬೆಳ್ಳಿ ಇರುವ ನಾಣ್ಯಕ್ಕೆ ದೊರಕುವುದು ಕಡಮೆ ರೊಟ್ಟಿ. ಚಲಾವಣೆಯಲ್ಲಿದ್ದ ನಾಣ್ಯದ ಮೌಲ್ಯ ಅದರ ಒಡಲಿನ ಲೋಹವನ್ನೆ ಅವಲಂಬಿಸಿತ್ತು. ನಾಣ್ಯದ ಒಡಲಿನಲ್ಲಿ ಕಡಮೆ ಚಿನ್ನ ಅಥವಾ ಬೆಳ್ಳಿ ಇದ್ದರೆ ಅದರ ಮೌಲ್ಯ ಅಷ್ಟು ಕಡಮೆಯಾದಂತೆ. ಆ ನಾಣ್ಯಕ್ಕೆ ಹಳೆಯ ಹೆಸರೇ ಇದ್ದರೂ ಅಷ್ಟೇ. ಅದರಿಂದ ಪರಿಸ್ಥಿತಿ ಹೇಗೆ ಬದಲಾದೀತು ? 'ಒಂದು ನಾಣ್ಯದ ಬೆಲೆ ಕಡಮೆ' ಎಂದರೆ, 'ಅದು ಕೊಳ್ಳುವ ಪದಾರ್ಥದ ಪ್ರಮಾಣ ಕಡಮೆ', ಎಂದು ಮಾತ್ರ ಅರ್ಥ. ಎಂದರೆ, ಪದಾರ್ಥಗಳ ಬೆಲೆಗಳು ಹೆಚ್ಚುವುವು—ಎಂದು ಹೇಳಿದ ಹಾಗಾಯಿತು.

ನಾಣ್ಯದ ಮೌಲ್ಯ ಇಳಿಸಿದರೆ ತಕ್ಷಣ ಲಾಭ ದೊರಕುವುದೆಂಬುದನ್ನು ಎಲ್ಲ ದೊರೆಗಳೂ ಕಂಡುಕೊಂಡಿದ್ದರು. ಹಣದ ಮೌಲ್ಯ ಬೇಗ ಬೇಗ ಬದಲಾದರೆ ವ್ಯಾಪಾರಕ್ಕೆ ಧಕ್ಕೆ ಒದಗುವುದೆಂಬ ಅಂಶ, ಬೆಲೆಗಳು ಏರಿದಾಗ ಬಡವರೂ ಕ್ಲುಪ್ತ ವರಮಾನ ಪಡೆವವರೂ ಕಷ್ಟ ಅನುಭವಿಸಬೇಕಾಗುವುದೆಂಬ ಅಂಶ ರಾಜನಿಗೆ ಅಷ್ಟು ಮುಖ್ಯವಾಗಿದ್ದಿಲ್ಲದಿರಬಹುದು ; ಆದರೆ ಕೆಲವು ಪ್ರಜೆಗಳಿಗೆ ಇದು ಬಹು ಮುಖ್ಯವಾದದ್ದಾಗಿತ್ತು. ನಾಣ್ಯ ಬೆಲೆಯ ಇಳಿತಕ್ಕೂ ಪದಾರ್ಥಗಳ ಬೆಲೆಗಳ ಏರಿಕೆಗೂ ಗಂಟು—ಎಂಬ ಸತ್ಯವನ್ನು ರಾಜನೂ, ಅವನಂತೆಯೇ ಹಲವರೂ ಅರಿತಿರಲಿಲ್ಲ. ಆದರೆ ಕೆಲವರು ಇದನ್ನು ಕಂಡುಕೊಂಡರು. ೧೩೫೮ರ ಅಕ್ಟೋಬರ್ ತಿಂಗಳಿಂದ ೧೩೬೦ರ ಮಾರ್ಚ್ ವರೆಗಿನ ಹದಿನೇಳು ತಿಂಗಳಲ್ಲಿ ಫ್ರಾನ್ಸಿನಲ್ಲಿ ಹದಿನೇಳು ಸಾರಿ ಬೆಳ್ಳಿಯ ನಾಣ್ಯದ ಮೌಲ್ಯ ವ್ಯತ್ಯಾಸವಾಯಿತು. ಆಗ ಒಬ್ಬ ಪ್ಯಾರಿಸಿನವ ಹೀಗೆ ಬರೆದ: "ಚಿನ್ನ ಬೆಳ್ಳಿ ನಾಣ್ಯಗಳ ಅಧಿಕ ದರದ ಫಲವಾಗಿ ಆಹಾರವೇ ಮುಂತಾದ ಸರ್ವಜನಾಗತ್ಯ ವಸ್ತುಗಳು ಬಹು ತಗ್ಗಾಗಿವೆ. ಸಾಮಾನ್ಯ ಪ್ರಜೆ ಬದುಕುವ ಮಾರ್ಗವೇ ಇಲ್ಲದಂತಾಗಿದೆ."[1]

೧೩೭೭ರಲ್ಲಿ ಲಿಸೇ ಎಂಬಲ್ಲಿನ ಧರ್ಮಗುರುವಾಗಿದ್ದ ನಿಕೊಲಾಸ್ ಒರೆಸ್ಮೆ ಎಂಬವನು ಹಣವನ್ನು ಕುರಿತ ಒಂದು ಪ್ರಸಿದ್ಧ ಗ್ರಂಥ ಬರೆದ. ನಾಣ್ಯದ ಮೌಲ್ಯ ಇಳಿಸುವುದರಿಂದ ತಾತ್ಕಾಲಿಕವಾಗಿ ದೊರೆಗೆ ಲಾಭ ದೊರಕಿದರೂ ಇದು ಒಂದು ರೀತಿಯಲ್ಲಿ ಜನಗಳಿಗೆ ಎಸಗಿದ ಮೋಸ—ಎಂದು ಇವನು ಬರೆದ. "ಗೋಧಿ, ಮದ್ಯ ಮುಂತಾದ ಪದಾರ್ಥಗಳ ಅಳತೆಯ ಸಾಧನಗಳ ಮೇಲೆ ಸಾಮಾನ್ಯವಾಗಿ ರಾಜನ ಮುದ್ರೆ ಇರುತ್ತದೆ. ಇವುಗಳನ್ನು ಬದಲಾಯಿಸುವುದು ಮೋಸ, ಅಪರಾಧ. ಅಂತೆಯೆ ಒಂದು ನಾಣ್ಯದ ಮೇಲೆ ಅಚ್ಚೊತ್ತಿದ ಬರಹ ಆ ನಾಣ್ಯದ ತೂಕ ಬೆಲೆಗಳ ನಿಖರತೆಯನ್ನು ಸೂಚಿಸುತ್ತದೆ. ಆದ್ದರಿಂದ ತನ್ನ ಮುದ್ರೆ ಇರುವ ಹಣದ ತೂಕ ಗುಣಗಳನ್ನು ಇಳಿಸುವ ರಾಜನನ್ನು ಯಾರು ತಾನೇ ನಂಬುವರು ?.....ಹಣದ ಸಹಜವಾದ ಉಪಯೋಗವಲ್ಲದೆ ಇನ್ನೂ ಮೂರು ವಿಧವಾಗಿ ಅದರಿಂದ ಲಾಭ ಪಡೆಯಬಹುದೆಂದು ನನ್ನ ಅಭಿಪ್ರಾಯ. ಮೊದಲನೆಯದು ವಿನಿಮಯ ಕಲೆ—ಹಣದ ಒಡೆತನ ಅಥವಾ ವ್ಯವಹಾರ. ಎರಡನೆಯದು ಬಡ್ಡಿಯ ಮೇಲೆ ಹಣ

---

[1] E. Levasseur, *Histoire des classes ourvriéres et de L'industrie en France avant, 1789.* 2 vols., vol. I, p. 685. Roussean, Paris, 1900, 1901.

ಸಾಲ ಕೊಡುವುದು. ಹಣವನ್ನೇ ಬದಲಿಸುವುದು ಮೂರನೆಯ ವಿಧಾನ. ಮೊದಲನೆಯದು ನೀಚಕೃತ್ಯ, ಎರಡನೆಯದು ಕೆಟ್ಟ ಕೆಲಸ, ಮೂರನೆಯದು ಮಹಾ ಹೇಯ."[1]

ರಿಚರ್ಡ್ ಕ್ಯಾಂಟಿಲಾನ್ ಎಂಬ ಆಂಗ್ಲನೊಬ್ಬ ಸುಮಾರು ನಾನೂರು ವರ್ಷಗಳ ಅನಂತರ ಬರೆಯುತ್ತ, ನಾಣ್ಯದ ಮೌಲ್ಯದ ಇಳಿತಾಯದಿಂದ ಬೆಲೆಗಳ ಮೇಲೆ ಆಗುವ ಪರಿಣಾಮವನ್ನು ಬಹು ಚೆನ್ನಾಗಿ ಸಂಕ್ಷೇಪವಾಗಿ ಹೇಳಿದ: "ಎಲ್ಲ ಕಾಲದ ಚರಿತ್ರೆಯಿಂದಲೂ ನಾವು ಅರಿಯಬಹುದಾದ ಅಂಶವೊಂದಿದೆ: ರಾಜರು ತಮ್ಮ ನಾಣ್ಯದ ಮುಖಮೌಲ್ಯವನ್ನು ಮಾತ್ರ ಹಾಗೆಯೇ ಉಳಿಸಿಕೊಂಡು ಅದರ ನಿಜಮೌಲ್ಯವನ್ನು ಇಳಿಸಿದಾಗಲೆಲ್ಲ—ಅದನ್ನು ಹಲಬೆರಕೆ ಮಾಡಿ ಕುಲಗೆಡಿಸಿದಾಗಲೆಲ್ಲ—ನಾಣ್ಯದ ಬೆಲೆಯಲ್ಲಿ ಎಷ್ಟರ ಮಟ್ಟಿನ ಇಳಿತಾಯವಾಗಿದೆಯೋ ಅಷ್ಟೇ ಪ್ರಮಾಣದಲ್ಲಿ ಎಲ್ಲ ಅಸಿದ್ಧ ವಸ್ತುಗಳೂ ಸಿದ್ಧ ವಸ್ತುಗಳೂ ಬೆಲೆಯಲ್ಲಿ ಏರಿವೆ."[2]

ಕೋಪರ್ನಿಕಸನ ಹೆಸರು ಕೇಳಿರಬೇಕು ನೀವು. ಆತನೊಬ್ಬ ಮಹಾವಿಜ್ಞಾನಿ. ೧೫೩೦ ರಲ್ಲಿ, ಮೊಟ್ಟ ಮೊದಲಿಗೆ, ಆತ ಸೂರ್ಯನ ಸುತ್ತ ಭೂಮಿ ತಿರುಗುವುದೆಂಬ ಪ್ರಮೇಯವನ್ನು ಪ್ರತಿಪಾದಿಸಿದ. ಆದರೆ ಕೋಪರ್ನಿಕಸ್ ಹಣದ ವಿಷಯವನ್ನೂ ಅಭ್ಯಾಸ ಮಾಡಿದ್ದ. ತನ್ನ ನಾಡಾದ ಪೋಲೆಂಡಿನ ಹಣದ ವ್ಯವಸ್ಥೆಯನ್ನು ಬದಲಾಯಿಸಬೇಕೆಂದು ಅವನು ವಾದಿಸಿದ. ಹಲವು ಬಗೆಯ ಪ್ರತ್ಯೇಕ ನಾಣ್ಯಪದ್ಧತಿಗಳಿಂದ ವಾಣಿಜ್ಯಕ್ಕೆ ಅಡ್ಡಿಯೆಂಬುದನ್ನು ಅವನು ಅರಿತಿದ್ದ. ಹಲವು ಸಣ್ಣಪುಟ್ಟ ಪ್ರಭುಗಳು ನಾಣ್ಯ ಅಚ್ಚಿಸಲು ಅವಕಾಶ ಕೊಡಬಾರದು. ಅದರ ಬದಲು ಒಂದು ಏಕೀಕೃತ ನಾಣ್ಯ ಪದ್ಧತಿ ಏರ್ಪಡಬೇಕೆಂದು ಅವನು ಸಾಧಿಸಿದ. ಎಲ್ಲಕ್ಕಿಂತಲೂ ಮಿಗಿಲಾಗಿ, ನಾಣ್ಯವನ್ನು ಕುಲಗೆಡಿಸಲೇ ಬಾರದೆಂದು ಅವನು ಒತ್ತಿ ಹೇಳಿದ: "ರಾಜ್ಯಗಳೂ ಪಾಳೆಯಪಟ್ಟುಗಳೂ ಪ್ರಜಾಪ್ರಭುತ್ವಗಳೂ ಕ್ಷೀಣದೆಸೆಗೆ ಬರಲು ಕಾರಣವಾದ ಪೀಡೆಗಳು ಅಸಂಖ್ಯಾತವಿರಬಹುದು. ಇವುಗಳಲ್ಲಿ ನಾಲ್ಕು ಅತಿಭಯಂಕರ: ಕಲಹ, ಪ್ಲೇಗು, ಬಂಜರು ನೆಲ, ಹಣದ ಮೌಲ್ಯದ ಇಳಿತ—ಇವೇ ಆ ನಾಲ್ಕು."[3] ಹಣವನ್ನು ಕುಲಗೆಡಿಸುವುದನ್ನು ಇವನು ವಿರೋಧಿಸಲು ಕಾರಣಗಳು ಯಾವುವೆಂಬುದನ್ನು ಒರೆಸ್ಮೆ ಚೆನ್ನಾಗಿ ವಿವರಿಸುತ್ತಾನೆ: "ತನ್ನ ಸೀಮೆಯ ಹಣದ ಮೌಲ್ಯ ಸ್ಥಿರವಾಗಿಲ್ಲದೆ, ಅದು ದಿನದಿಂದ ದಿನಕ್ಕೆ ವ್ಯತ್ಯಾಸವಾಗಲು ಅವಕಾಶ ಮಾಡಿಕೊಡುವುದು ದೊರೆಗೆ ನಾಚಿಕೆಗೇಡು, ಅಪಮಾನಕರ....ಮೌಲ್ಯ ಹೀಗೆ ವ್ಯತ್ಯಾಸವಾಗುವುದರಿಂದ ಒಂದು ಮುಖ್ಯ ತೊಂದರೆ ಇದೆ: ಚಿನ್ನದ ಅಥವಾ ಬೆಳ್ಳಿಯ ಒಂದು ನಾಣ್ಯದ ಮೌಲ್ಯವೆಷ್ಟೆಂಬುದನ್ನು ಜನ ಹೇಳಲಾರರು. ತತ್ಪರಿಣಾಮವಾಗಿ ತಮ್ಮ ಪದಾರ್ಥಗಳಂತೆಯೇ ತಮ್ಮಲ್ಲಿರುವ

---

[1] Monroe, pp. 92, 95.

[2] R. Cantillon, *Essai sur la Nature du Commerce en Général* (1755), p. 113. Edited with an English translation by H. Higgs. Macmillan & Company, Ltd., London, 1931.

[3] *Traictie de la première Invention des Monnoies de Nicole Oresme et Traité de la Monnoie de Copernic Publiés et annotés par M. L. Wolowski, p. 49. Guillaumin, Paris, 1864.*

ಹಣದ ಮೌಲ್ಯದ ಬಗ್ಗೆಯೂ ಅವರು ಚೌಕಾಸಿ ಮಾಡಬೇಕಾಗುತ್ತದೆ. ಇದು ಹಣದ ಸ್ವಭಾವಕ್ಕೇ ವಿರುದ್ಧವಾದದ್ದು. ಯಾವುದು ನಿಖರವಾಗಿರಬೇಕೋ ಅದೇ ಅನಿಶ್ಚಿತ, ಗೊಂದಲಕರ....ನಾಣ್ಯವನ್ನು ಹೀಗೆ ವ್ಯತ್ಯಾಸಗೊಳಿಸುವುದರಿಂದ, ಅದನ್ನು ಕುಲಗೆಡಿಸುವುದರಿಂದ, ಒಂದು ರಾಜ್ಯದಲ್ಲಿರುವ ಚಿನ್ನ ಬೆಳ್ಳಿಯ ಪ್ರಮಾಣ ಕಡಮೆಯಾಗುತ್ತದೆ. ಎಷ್ಟೇ ಮುನ್ನೆಚ್ಚರಿಕೆ ಕ್ರಮ ಕೈಕೊಂಡರೂ ಈ ಲೋಹಗಳು ಇದಕ್ಕೆ ಎಲ್ಲಿ ಹೆಚ್ಚು ಬೆಲೆ ದೊರಕುತ್ತದೋ ಅಲ್ಲಿಗೆ ಸಾಗಿಸಲ್ಪಡುತ್ತವೆ. ಆದ್ದರಿಂದ ಎಲ್ಲಿ ಹಣವನ್ನು ಕುಲಗೆಡಿಸುವ ಅಭ್ಯಾಸವಿದೆಯೋ ಆ ದೇಶದಲ್ಲಿ ಹಣದ ವಸ್ತುವಿನ—ಅದಕ್ಕೆ ಅಗತ್ಯವಾದ ಲೋಹದ—ಸರಬರಾಜು ಕಡಮೆಯಾಗುತ್ತದೆ....ಹಣದ ಬೆಲೆಯ ವ್ಯತ್ಯಾಸ ಹಾಗೂ ಅಪಮೌಲ್ಯದ ಫಲವಾಗಿ, ಇಂಥ ಕೆಟ್ಟ ನಾಣ್ಯ ಚಲಾವಣೆಯಲ್ಲಿರುವ ರಾಜ್ಯಕ್ಕೆ ವಿದೇಶೀಯ ವರ್ತಕರು ತಿಳಿದೂ ತಿಳಿದೂ ಒಳ್ಳೆಯ ಸರಕುಗಳೊಡನೆ ಬರುವುದಿಲ್ಲ. ಇಂಥ ದೇಶದಲ್ಲಿ ಸರಕಿನ ವ್ಯಾಪಾರವೇ ಏರುಪೇರಾಗಿ, ವರ್ತಕರೂ ಕೈ ಕಸಬುದಾರರೂ ಪರಸ್ಪರವಾಗಿ ಹೇಗೆ ವ್ಯವಹರಿಸಬೇಕೆಂಬುದನ್ನೇ ಅರಿಯದಂತಾಗುತ್ತದೆ."[1]

ನಾಣ್ಯ ಕುಲಗೆಡಿಸಿದ್ದರಿಂದ ಆಗುವ ಈ ಪರಿಣಾಮಗಳ ಬಗ್ಗೆ ರಾಜನ ಸಲಹೆಗಾರರು ಬಹು ಚಿಂತಾಕ್ರಾಂತರಾದರು. ವ್ಯಾಪಾರ ವರ್ಧಿಸಬೇಕೆಂಬುದಾಗಿ ಅವರು ಬಯಸಿದರು. ವರ್ತಕರೂ ಧನವ್ಯವಹಾರ ನಿರತರೂ—ಬ್ಯಾಂಕರುಗಳೂ—ಚಿನ್ನ ಬೆಳ್ಳಿಯನ್ನು ಇತರ ದೇಶಗಳಿಗೆ ನಿರ್ಯಾತ ಮಾಡಿ, ದೇಶದಲ್ಲಿರುವ ಲೋಹದ ಪ್ರಮಾಣ ಇನ್ನೂ ಕಡಮೆಯಾಗುವಂತೆ ಮಾಡಬಾರದೆಂದೂ ಅವರು ಇಚ್ಛಿಸಿದರು. ಬೆಲೆಯ ಏರಿಳಿತಕ್ಕೆ ಬಡವನೇ ಬಲಿ. ಏಕೆಂದರೆ ಆತ ಯಾವಾಗಲೂ ಕೆಲಸದಲ್ಲೇ ನಿರತನಾಗಿರುವುದರಿಂದ ಆತ್ಮರಕ್ಷಣೆಗೆ ಅವನಿಗೆ ಕಾಲವಾಗಲಿ ಅನುಕೂಲವಾಗಲಿ ಇರುವುದಿಲ್ಲ. ಅದರೆ ಬಲ್ಲಿದರೂ, ಹಣದ ವ್ಯವಹಾರ ಮಾಡುವವರೂ ತಮ್ಮ ಸಂಪತ್ತನ್ನು ಕಾಯ್ದುಕೊಳ್ಳುವರು. ಹಣದ ಬೆಲೆಯ ಏರಿಳಿತದ ಸಂದರ್ಭದಲ್ಲಿ ಅವರು ಲಾಭವನ್ನೂ ಪಡೆಯುವರು. ಆ ಕಾಲದಲ್ಲಿ ವಾಣಿಜ್ಯದ ಬೆಳವಣಿಗೆಗೆ ಅಗತ್ಯವೆನಿಸಿದ ಚಿನ್ನ ಬೆಳ್ಳಿಯ ನಿರ್ಯಾತವನ್ನು ನಿಷೇಧಿಸಿ ಹಲವು ರಾಜ್ಯಗಳಲ್ಲಿ ಶಾಸನಗಳು ಪದೇ ಪದೇ ಜಾರಿಯಾದುವು. ೧೪೭೭ರಲ್ಲಿ ಇಂಥ ಶಾಸನ ಇಂಗ್ಲೆಂಡಿನಲ್ಲಿ ಜಾರಿಗೆ ಬಂತು: "ಗತಿಸಿದ ದೊರೆ ಆರನೆಯ ಹೆನ್ರಿಯ ಆಡಳಿತದ ದ್ವಿತೀಯ ವರ್ಷದಲ್ಲಿ ಈ ದೇಶದಿಂದ ಚಿನ್ನ ಬೆಳ್ಳಿ ಸಾಗಿಸಬಾರದೆಂದು ಶಾಸನ ಮಾಡಿದ್ದಾಗ್ಯೂ ಕೂಡ.... ಈ ಶಾಸನಕ್ಕೆ ವ್ಯತಿರಿಕ್ತವಾಗಿ ಹಣ, ಚಿನ್ನ, ಬೆಳ್ಳಿ, ಚಿನ್ನ ಬೆಳ್ಳಿಯ ಪಾತ್ರೆ, ತಟ್ಟೆ ಮುಂತಾದುವು ಇತರ ಸರಕುಗಳಂತೆ ಈ ದೇಶದಿಂದ ಸಾಗುತ್ತಿವೆ. ಇದರಿಂದ ದೇಶದ ಸಂಪತ್ತು ನಶಿಸುತ್ತಿದೆ. ಈ ಪರಿಸ್ಥಿತಿಗೆ ತಕ್ಷಣ ಕ್ರಮ ಕೈಕೊಳ್ಳದಿದ್ದರೆ ಈ ದೇಶದ ಐಶ್ವರ್ಯವೆಲ್ಲ ನಾಶವಾಗಿ ಹೋಗುತ್ತದೆ. ಆದ್ದರಿಂದ ತಾನು ಈ ಮೂಲಕ ಶಾಸನ ಮಾಡುವುದೇನೆಂದರೆ, ಈ ದೇಶದ ಅಥವಾ ಬೇರೆ ಯಾವ ದೇಶಗಳ ಅಥವಾ ನಾಡುಗಳ

---

[1] Monroe, *op. cit.*, pp. 97-8.

ನಾಣ್ಯ, ಮುದ್ರಿತ ಲೋಹ, ತಟ್ಟೆ, ಪಾತ್ರೆ, ಗಟ್ಟಿ, ಒಡವೆ ಮುಂತಾದುವನ್ನು ದೊರೆಯ ಅಪ್ಪಣೆಯಿಲ್ಲದೆ ಇಲ್ಲಿಂದ ಸಾಗಿಸಕೂಡದು, ಸಾಗಿಸಲೂ ಸಹಾಯ ಮಾಡಕೂಡದು."[1]

ದೇಶವಲ್ಲಿದ್ದ ಚಿನ್ನ ಬೆಳ್ಳಿ ದೇಶದಲ್ಲೇ ಉಳಿಯುವಂತೆ ಈ ರಾಜರು ಬಹಳ ಪ್ರಯತ್ನ ಮಾಡಿದರಷ್ಟೇ ಅಲ್ಲ. ಅವರು ಈ ಲೋಹದ ಪ್ರಮಾಣವನ್ನು ದೇಶದಲ್ಲಿ ಹೆಚ್ಚಿಸಲೂ ಪ್ರಯತ್ನಪಟ್ಟರು. ಇದಕ್ಕಾಗಿ ಗಣಿಗಾರರಿಗೆ ವಿಶೇಷ ಸೌಲಭ್ಯ ನೀಡಿದರು. "ನಮ್ಮ ರಾಜ್ಯ ದಲ್ಲಿ ಆರಂಭವಾಗಿರುವ ಹಾಗೂ ಆರಂಭವಾಗಲಿರುವ ಗಣಿಗಳಲ್ಲಿ ಕೆಲಸ ಮಾಡುವ ಎಲ್ಲರೂ—ತಮ್ಮ ಸ್ವಂತ ಖರ್ಚಿನಲ್ಲಿ ಗಣಿಗಳನ್ನಾರಂಭಿಸಿ ನಡಸಲು ನಮ್ಮ ಒಪ್ಪಿಗೆ ಇದೆ. ಇದಕ್ಕಾಗಿ ಯಾವ ಶುಲ್ಕವನ್ನೂ ಕೊಡಬೇಕಾದುದಿಲ್ಲ; ಯಾವ ನಿರ್ಬಂಧವೂ ಇಲ್ಲ; ಧರ್ಮಗುರು, ಲೌಕಿಕ ಪ್ರಭು, ವರ್ತಕ, ಅಧಿಕಾರಿ—ಹೀಗೆ ಯಾರೂ ಅವರ ಕೆಲಸದಲ್ಲಿ ಭಂಗ ತರತಕ್ಕದ್ದಲ್ಲ, ಪ್ರವೇಶಿಸತಕ್ಕದ್ದಲ್ಲ, ಹಿಂಸಿಸತಕ್ಕದ್ದಲ್ಲ—ಈ ಗಣಿಯ ಮೇಲೆ ತಮ್ಮ ಒಡೆತನ ಇದೆಯೆಂಬ ಕಾರಣದಿಂದ ಹೀಗೆ ಯಾರೂ ಮಾಡಕೂಡದು."[2]

ವ್ಯಾಪಾರ ಇನ್ನೂ ವಿಸ್ತರಿಸುವ ಪ್ರವೃತ್ತಿ ಹೊಂದಿತ್ತು. ಈ ವಿಸ್ತರಣೆ ಇನ್ನೂ ಹೆಚ್ಚಲು ಚಿನ್ನ-ಬೆಳ್ಳಿ ತುಂಬಾ ಅಗತ್ಯವಾಗಿತ್ತು. ಇದೇ ಕಾಲದಲ್ಲಿ—ಈ ವ್ಯಾಪಾರ ವಿಸ್ತರಣೆಯ ಫಲವಾಗಿಯೇ—ಈ ಲೋಹಗಳು ರಾಶಿ ರಾಶಿಯಾಗಿದ್ದ ಗಣಿಗಳೂ ಪತ್ತೆಯಾದುವು. ಇದರಿಂದ ವ್ಯಾಪಾರ ಮತ್ತೆ ವಿಸ್ತರಿಸಿತು. ಇಂದು ನಾವು ನಾನೂರು ವರ್ಷಗಳ ಹಿಂದಕ್ಕೆ ನಮ್ಮ ದೃಷ್ಟಿ ಹರಿಸಿದರೆ, ಕೊಲಂಬಸನ ಅನ್ವೇಷಣ ಯಾತ್ರೆಯ ಮಹತ್ವವನ್ನರಿಯ ಬಹುದು. ಆದರೆ ಹದಿನೈದನೆಯ ಶತಮಾನದ ಜನಕ್ಕೆ ಕೊಲಂಬಸನ ಯಾತ್ರೆ ಒಂದು ಪರಾಜಯವೆನಿಸಿತ್ತು. ಏಕೆಂದರೆ ಅವನು ಇಂಡಿಯವನ್ನು ಕಂಡು ಹಿಡಿಯಲಾರದೆ ಹೋಗಿದ್ದ. ಹದಿನಾರನೆಯ ಶತಮಾನದಲ್ಲಿ, ಮೆಕ್ಸಿಕೋ ಪೆರೂ ದೇಶಗಳ ಗಣಿಗಳಿಂದ ಸ್ಪೇಯ್ನಿಗೆ ಬೆಳ್ಳಿಯ ಹೊಳೆ ಹರಿಯಲಾರಂಭವಾದಾಗ, ಕೊಲಂಬಸನ ಯಾತ್ರೆಯ ಮಹತ್ವದ ಅರಿವಾಯಿತು.

ಪರ್ವತ ಮರಳುಗಾಡುಗಳ ಮೂಲಕ, ಒಂಟೆ ಕುದುರೆ ಹೇಸರಕತ್ತೆಗಳ ಮೇಲೆ, ಪದಾರ್ಥಗಳನ್ನು ಕಳಿಸಬೇಕಾದರೆ; ಮನುಷ್ಯರೂ ಇವನ್ನು ಇಲ್ಲಲ್ಲಿ ಹೊತ್ತು ಸಾಗಿಸ ಬೇಕಾದರೆ; ದುಷ್ಟ ಕಾಡು ಜನರು ಮೇಲೆ ಬಿದ್ದು ಲೂಟಿ ಮಾಡುವರೆಂಬ ಅಂಜಿಕೆ ಸದಾ ಇದ್ದರೆ; ಸಮುದ್ರ ಮಾರ್ಗದಲ್ಲಿ ಪ್ರಚಂಡ ಬಿರುಗಾಳಿಯ, ಕೊಲೆಗೂ ಹೇಸದ ಕಡಲುಗಳ್ಳರ ಅಪಾಯವಿದ್ದರೆ; ಈ ಮಾರ್ಗಗಳ ಮಧ್ಯದಲ್ಲಿ ಅಲ್ಲಿಂದಲ್ಲಿ ಆಡಳಿತ ನಡಸು ತ್ತಿರುವ ಸರಕಾರಗಳಿಗೆ ಅಧಿಕ ಸುಂಕ ತೆರಬೇಕಾಗಿದ್ದರೆ; ಕೊನೆಗೂ ಸರಕು ತನ್ನ ನೆಲೆ ಮುಟ್ಟಿದಾಗ, ಅಲ್ಲಿ ವ್ಯಾಪಾರದ ಏಕಸ್ವಾಮ್ಯ ಪಡೆದಿರುವ ವರ್ತಕರು ಈ ಸರಕಿನ ಬೆಲೆಯ ಮೇಲೆ ಅಧಿಕ ಲಾಭ ಹೇರಿದಾಗ—ಇಷ್ಟೆಲ್ಲಾ ಆದ ಮೇಲೆ ಈ ಸರಕಿನ ಬೆಲೆ ಅತಿಯಾಗಿ ಹೆಚ್ಚಿ ಅದನ್ನು ಕೊಳ್ಳುವುದೇ ಅಸಾಧ್ಯವೆನಿಸಿದರೆ ಆಶ್ಚರ್ಯವೆ? ಹದಿನೈದನೆಯ ಶತಮಾನ

---

[1] *Statutes of the Realm, op. cit.*, vol. II, p. 454.

[2] *Recueil Général, op. cit.*, vol. XII, part I, pp. 179-83.

ದಲ್ಲಿ ಪೂರ್ವದೇಶಗಳಿಂದ ಯೂರೋಪಿಗೆ ಆಮದಾಗುತ್ತಿದ್ದ, ಎಲ್ಲರಿಗೂ ಬೇಕಾಗಿದ್ದ, ವಸ್ತುಗಳ ಕತೆ ಇದು. ಪೂರ್ವದ ಸಂಬಾರ, ವಜ್ರ, ಔಷಧ, ಸುಗಂಧ ವಸ್ತು, ರೇಷ್ಮೆ ಮುಂತಾದುವು ಯೂರೋಪಿಗೆ ಬರುವ ವೇಳೆಗೆ, ವೆನಿಸಿನ ದೋಣಿಗಳು ಇವನ್ನು ಹೊತ್ತು ಸಾಗಲು ಸಿದ್ಧವಾಗಿ ನಿಂತಿದ್ದುವು. ಆದರೆ ಈ ವೇಳೆಗಾಗಲೇ ಈ ವಸ್ತುಗಳ ಬೆಲೆ ದುಬಾರಿಯಾಗಿರುತ್ತಿತ್ತು. ವೆನಿಸಿಗರು ಇವನ್ನು ದಕ್ಷಿಣ ಜರ್ಮನ್ ನಗರಗಳ ವರ್ತಕರಿಗೆ ಮಾರುತ್ತಿದ್ದರು. ಈ ವರ್ತಕರು ಇವನ್ನು ಯೂರೋಪಿನಲ್ಲೆಲ್ಲ ಹಂಚುತ್ತಿದ್ದರು. ಆದರೆ ಈ ವೇಳೆಗೆ ಈ ವಸ್ತುಗಳ ಬೆಲೆ ಗಗನ ಚುಂಬಿಸುವಷ್ಟು ಮೇಲೇರುತ್ತಿತ್ತು.

ಪೂರ್ವದೇಶಗಳೊಡನೆ ವ್ಯಾಪಾರವೆಲ್ಲಾ ವೆನಿಸಿಗರಿಗೇ ಮೀಸಲಾಗಿರುವುದನ್ನು ನೋಡುತ್ತಾ ಕುಳಿತಿರಲು ಇತರ ದೇಶಗಳ ವರ್ತಕರು ಇಷ್ಟಪಡಲಿಲ್ಲ. ಅವರು ಇದರಲ್ಲಿ ತಮಗೂ ಒಂದು ಭಾಗ ಬೇಕೆಂದು ಬಯಸಿದರು. ಪೂರ್ವದೇಶಗಳ ವಸ್ತುಗಳ ಮಾರಾಟದಿಂದ ಹಣ ದೋಚಬಹುದೆಂಬುದು ಅವರಿಗೆ ಗೊತ್ತಿತ್ತು. ಆದರೆ ವೆನಿಸಿನ ಏಕಸ್ವಾಮ್ಯವನ್ನು ಮುರಿಯುವುದು ಅಸಾಧ್ಯವಾಗಿತ್ತು. ಪೂರ್ವ ಮೆಡಿಟರೇನಿಯನ್ನು ವೆನಿಸಿನ ಸರೋವರದಂತಿತ್ತು. ಅವರು ಈ ವಿಚಾರದಲ್ಲಿ—ಅಲ್ಲಿ—ಏನೂ ಮಾಡುವಂತಿರಲಿಲ್ಲ.

ಆದರೆ ವೆನಿಸಿನ ಹತೋಟಿಗೆ ನಿಲುಕದ ಇನ್ನೊಂದು ಮಾರ್ಗವಾಗಿ ಇಂಡಿಯನ್ ದ್ವೀಪಗಳನ್ನು ತಲುಪಲು ಅವರು ಯತ್ನಿಸಬಹುದಾಗಿತ್ತು. ಇದಕ್ಕೆ ಅನುಕೂಲಕರವಾದ ಹಲವು ಘಟನೆಗಳೂ ನಡೆದಿದ್ದುವು. ಹದಿಮೂರನೆಯ ಶತಮಾನದಲ್ಲಿ ಮೊಟ್ಟ ಮೊದಲನೆಯದಾಗಿ ಇಟಲಿಯ ನಾವಿಕರು ಬಳಸಿದ್ದ ದಿಕ್ಸೂಚಿಯನ್ನು ಈಗ ರಟ್ಟು ಬಿಲ್ಲೆಯ ಮೇಲೆ ಅಳವಡಿಸಲು ಸಾಧ್ಯವಾಗಿತ್ತು. ಗ್ರಹೋನ್ನತಿ ಮಾಪಕದ ಸಹಾಯದಿಂದ ಅಕ್ಷಾಂಶವನ್ನರಿಯುವುದು ಸಾಧ್ಯವಾಗಿತ್ತು. ಇಟಲಿಯ ನಾವಿಕರು ಈಗ ಅವರಿವರು ಹೇಳಿದ ಮಾತಿನ ಮೇಲೆ ರಚಿತವಾದ ನಕ್ಷೆಯನ್ನವಲಂಬಿಸುವ ಬದಲು ಸ್ವತಃ ಅವಲೋಕಿಸಿ ನಕ್ಷೆ ರಚಿಸಲು ಆರಂಭಿಸಿದ್ದರು. ದಡವನ್ನೇ ತಬ್ಬಿಕೊಂಡು ಸರಿದಾಡುತ್ತಿರಬೇಕಾದ ಅಗತ್ಯ ಈಗ ಇರಲಿಲ್ಲ. ಸಂಬಾರದ, ಚಿನ್ನದ, ವಜ್ರ ವೈಡೂರ್ಯದ ಪೌರ್ವಾತ್ಯ ನಾಡಿಗೆ ಸಾಹಸಿಗಳು ಯಾರಾದರೂ ದಾರಿ ಕಂಡು ಹಿಡಿಯಬಹುದಿತ್ತು.

ಎಲ್ಲ ದಿಕ್ಕಿಗೂ ಹಡಗುಗಳು ಧೈರ್ಯದಿಂದ ಸಾಗಿದುವು. ಕೊಲಂಬಸ್ ಮಾಡಿದ ಪಶ್ಚಿಮದ ಪ್ರಯಾಣ ಇಂಥ ಹಲವು ಪ್ರಯಾಣಗಳಲ್ಲೊಂದು. ಇತರ ಕೆಲವರು ಎದೆಗಾರ ನಾವಿಕರು ಈಶಾನ್ಯ ಮಾರ್ಗವೊಂದನ್ನು ಕಂಡು ಹಿಡಿಯುವ ಆಸೆಯಿಂದ ಉತ್ತರ ಸಮುದ್ರದಿಂದಾಚೆ ಪ್ರಯಾಣ ಮಾಡಿದರು. ಇನ್ನು ಕೆಲವರು ಆಫ್ರಿಕದ ತೀರದಲ್ಲಿ ಸಾಗಿದರು. ಕೊನೆಗೆ, ೧೪೯೭ರಲ್ಲಿ, ವಾಸ್ಕೋಡಗಾಮಾ ಎಂಬವನು ಆಗ್ನೇಯ ಮಾರ್ಗವಾಗಿ ಆಫ್ರಿಕವನ್ನು ಬಳಸಿದ. ೧೪೯೮ರಲ್ಲಿ ಅವನು ಭಾರತದ ಕಲ್ಲೀಕೋಟೆಯಲ್ಲಿ ಲಂಗರು ಹಾಕಿದ. ಇಂಡೀಸ್ ದ್ವೀಪಗಳಿಗೆ ಸಂಪೂರ್ಣ ಸಮುದ್ರ ಮಾರ್ಗವೊಂದು ಪತ್ತೆಯಾಯಿತು.

ಇದರಿಂದ ಇತರ ದಿಕ್ಕುಗಳಲ್ಲಿ ನಡೆಯುತ್ತಿದ್ದ ಶೋಧ ನಿಲ್ಲಲಿಲ್ಲ. ಕೊಲಂಬಸ್ ಮತ್ತೆ ಮತ್ತೆ ಯತ್ನಿಸಿದ. ಅಮೆರಿಕಾ ಖಂಡದ ಅಡಚಣೆಯನ್ನು ದಾಟಿ ಸಾಗುವ ಯತ್ನ

ಮಾಡಿದ; ಪದೇ ಪದೇ ಅತ್ತ ಪ್ರಯಾಣ ಬೆಳೆಸಿದ. ಪಶ್ಚಿಮಾಭಿಮುಖವಾಗಿ ಯಾನ ಮಾಡಿದ ಹಲವರಿಗೂ ಇದೇ ಅಡಚಣೆ ಒದಗಿತು. ಇವರು ಉತ್ತರಕ್ಕೆ, ದಕ್ಷಿಣಕ್ಕೆ ಸಾಗಿದರು. ಅನ್ವೇಷಣೆ....ಅನ್ವೇಷಣೆ....ಇದರ ಉದ್ದೇಶ. ೧೬೦೯ರಷ್ಟು ಈಚಿನವರೆಗೂ ಕೂಡ ಹೆನ್ರಿ ಹಡ್ಸನ್ ಎಂಬವನು ಪೂರ್ವಕ್ಕೆ ಮಾರ್ಗವೊಂದನ್ನು ಹುಡುಕುತ್ತಲೇ ಇದ್ದ.

ಈ ಹುಡುಕಾಟವಲ್ಲಿ ಅರ್ಥವಿತ್ತು. ಇದರಿಂದ ಪೂರ್ವ ಮಾರ್ಗದಿಂದ ಹಣ ಯಥೇಚ್ಛವಾಗಿ ದೊರಕುವ ಸಂಭವವಿತ್ತು. ವಾಸ್ಕೋಡಗಾಮಾ ಮೊದಲ ಬಾರಿಗೆ ಭಾರತಕ್ಕೆ ಪ್ರಯಾಣ ಮಾಡಿದಾಗ ದೊರಕಿದ ಲಾಭ ಶೇಕಡ ೬೦೦೦! ಇತರ ಹಡಗುಗಳೂ ಕೂಡ ಅಪಾಯಕರವಾದ—ಆದರೆ ಲಾಭಕರವಾದ—ಇಂಥ ಯಾನ ಮಾಡಿದುವೆಂಬುದರಲ್ಲಿ ಆಶ್ಚರ್ಯವಿಲ್ಲ. ವ್ಯಾಪಾರ ಅಗಾಧವಾಗಿ ಹೆಚ್ಚಿತು. ಹಿಂದೆ ವೆನಿಸ್ಸು ಈಜಿಪ್ಟಿನ ಸುಲ್ತಾನನಿಂದ ವರ್ಷಕ್ಕೆ ೪೨೦೦೦೦ ಪೌಂಡು ಮೆಣಸು ಕೊಳ್ಳುತ್ತಿತ್ತು. ಈಗ ಪೋರ್ಚುಗಲ್ಲಿಗೆ ಅಭಿಮುಖವಾಗಿ ಸಾಗಿದ ಒಂದೇ ಒಂದು ಹಡಗಿನಲ್ಲಿ ೨೦೦೦೦೦ ಪೌಂಡು ಮೆಣಸಿತ್ತು! ತುರ್ಕಿಯವರು ಪೂರ್ವದೇಶದ ಹಳೆಯ ಮಾರ್ಗವನ್ನು ಹಿಡಿದುಕೊಂಡಿದ್ದರೂ ಚಿಂತೆಯಿರಲಿಲ್ಲ. ವೆನಿಸಿಗರು ಅಗಾಧ ಬೆಲೆ ವಿಧಿಸಿದರೂ ಚಿಂತೆಯಿರಲಿಲ್ಲ. ಗುಡ್‌ಹೋಪ್ ಭೂಶಿರದ ಮಾರ್ಗವಾಗಿ ಪೂರ್ವದ ಮಾರ್ಗ ಏರ್ಪಟ್ಟ ಫಲವಾಗಿ ತುರ್ಕಿಯವರನ್ನು ಅನುಸರಿಸಬೇಕಾದ ಪ್ರಮೇಯ ತಪ್ಪಿತ್ತು. ವೆನಿಸಿಗರ ಸ್ವಾಮ್ಯ ಮುರಿದಿತ್ತು.

ಈಗ ವಾಣಿಜ್ಯ ಪ್ರವಾಹದ ದಿಕ್ಕು ಬದಲಿಸಿತು. ಹಿಂದೆ ವೆನಿಸ್ಸಿನ, ದಕ್ಷಿಣ ಜರ್ಮನ್ ನಗರಗಳ ಭೌಗೋಲಿಕ ಸನ್ನಿವೇಶದಿಂದ ಅವುಗಳಿಗೆ ಪಶ್ಚಿಮಕ್ಕಿದ್ದ ದೇಶಗಳಿಗಿಂತ ಹೆಚ್ಚಿನ ಅನುಕೂಲ ಒದಗಿತ್ತು. ಈಗ ಅಟ್ಲಾಂಟಿಕ್ ಸಾಗರದ ಅಂಚಿನ ದೇಶಗಳಿಗೆ ಅನುಕೂಲ ಪರಿಸ್ಥಿತಿ ಲಭಿಸಿತ್ತು. ವೆನಿಸ್ಸೂ ಅದಕ್ಕೆ ವಾಣಿಜ್ಯದ ಮೂಲಕ ಹೊಂದಿಕೊಂಡಿದ್ದ ಇತರ ನಗರಗಳೂ ಈಗ ವಾಣಿಜ್ಯದ ಮುಖ್ಯ ಮಾರ್ಗದಿಂದ ದೂರ ಉಳಿದುವು. ಹಿಂದೆ ವ್ಯಾಪಾರದ ಮುಖ್ಯ ಮಾರ್ಗವಾಗಿದ್ದುದು ಈಗ ಕವಲು ಮಾರ್ಗವಾಯಿತು. ಅಟ್ಲಾಂಟಿಕ್ಕು ಹೊಸ ಮುಖ್ಯಮಾರ್ಗವಾಯಿತು. ಪೋರ್ಚುಗಲ್, ಸ್ಪೈಯ್ನ್, ಹಾಲೆಂಡ್, ಇಂಗ್ಲೆಂಡ್, ಫ್ರಾನ್ಸು—ಇವು ವಾಣಿಜ್ಯ ಲೋಕದಲ್ಲಿ ಪ್ರಾಮುಖ್ಯ ಪಡೆದುವು.

ಇತಿಹಾಸದ ಈ ಕಾಲವನ್ನು "ವಾಣಿಜ್ಯಕ್ರಾಂತಿ"ಯ ಕಾಲವೆಂದು ಕರೆಯಲು ಕಾರಣವಿದೆ. ಏಕಪ್ರಕಾರವಾಗಿ ಮುನ್ನಡೆಯುತ್ತಿದ್ದ ವಾಣಿಜ್ಯ ಈಗ ದಾಪುಗಾಲಿನಿಂದ ಮುನ್ನಡೆಯಿತು. ಹಳೆಯ ಜಗತ್ತೆನಿಸಿದ ಯೂರೋಪು, ಏಷ್ಯದ ಭಾಗ—ಇವು ಮಾತ್ರವೇ ಸಾಹಸಿಗರಾದ ವ್ಯಾಪಾರಿಗಳಿಗೆ ತೆರೆಯಲಿಲ್ಲ. ಅಮೆರಿಕಾ ಆಫ್ರಿಕಾಗಳಲ್ಲಿ ಇಡೀ ಹೊಸ ಜಗತ್ತು ಇವರಿಗಾಗಿ ತೆರೆಯಿತು. ನದಿಗಳಿಗೂ, ಬಾಲ್ಟಿಕ್ ಮೆಡಿಟರೇನಿಯನ್ ಮುಂತಾದ ಭೂಮಧ್ಯ ಸಮುದ್ರಗಳಿಗೂ ವ್ಯಾಪಾರ ಪರಿಮಿತವಾಗಿರುವ ಪರಿಸ್ಥಿತಿ ತಪ್ಪಿತು. ಏಷ್ಯದ ಒಂದು ಭಾಗದೊಡನೆ ಯೂರೋಪು ನಡಸುತ್ತಿದ್ದ ವ್ಯಾಪಾರವೇ ಹಿಂದೆ ಅಂತರರಾಷ್ಟ್ರೀಯ ವ್ಯಾಪಾರವೆನಿಸಿಕೊಳ್ಳುತ್ತಿತ್ತು. ಈಗ ಅಂತರರಾಷ್ಟ್ರೀಯ ವ್ಯಾಪಾರದ ವ್ಯಾಪ್ತಿ ಹೆಚ್ಚಿತು: ನಾಲ್ಕು ಖಂಡಗಳಿಗೆ ಆವರಿಸಿತು, ಸಮುದ್ರವೇ ಮುಖ್ಯ ಮಾರ್ಗವುಳ್ಳದ್ದಾಯಿತು. ಈ

ಹೊಸ ಪ್ರದೇಶಗಳನ್ನೂ ಮಾರ್ಗಗಳನ್ನೂ ಕಂಡು ಹಿಡಿದದ್ದರ ಫಲವಾಗಿ ಪಶ್ಚಿಮ ಯೂರೋಪಿನ ಇಡೀ ಆರ್ಥಿಕ ಜೀವನವೇ ಮಾರ್ಪಟ್ಟಿತು. ಇದರ ವಿಸ್ತರಣದ ಯುಗ ಆರಂಭವಾಯಿತು. ಆರ್ಥಿಕ ಚಟುವಟಿಕೆ ಹೆಚ್ಚಲು ಬಹು ಪ್ರಬಲವಾದ ಪ್ರಚೋದಕ ಶಕ್ತಿಯೆಂದರೆ ಮಾರುಕಟ್ಟೆಯ—ಪೇಟೆಯ—ವಿಸ್ತರಣ. ಹಿಂದೆ ಎಂದೂ ಆಗದಿದ್ದ ರೀತಿಯಲ್ಲಿ, ಪ್ರಮಾಣದಲ್ಲಿ ಪೇಟೆ ವಿಸ್ತಾರಗೊಂಡಿತು. ವ್ಯಾಪಾರ ಮಾಡಲು ಹೊಸ ಪ್ರದೇಶಗಳು ಲಭಿಸಿದುವು. ದೇಶದಲ್ಲಿ ಉತ್ಪಾದನೆಯಾದ ವಸ್ತುವಿನ ಮಾರಾಟಕ್ಕೆ ಹೊಸ ಪೇಟೆಗಳ ಉದಯವಾಯಿತು. ವ್ಯಾಪಾರಿಗಳು ಮರಳಿ ಬರುವಾಗ ಸ್ವದೇಶಕ್ಕೆ ತರಲು ಹೊಸ ವಸ್ತುಗಳು ದೊರಕಿದುವು. ಇವೆಲ್ಲ ಸಾಂಕ್ರಾಮಿಕವಾಗಿ ಹಬ್ಬಿದುವು; ಉತ್ತೇಜಕವಾಗಿದ್ದುವು. ಹೊಸ ಅನ್ವೇಷಣೆಯ, ವಿಸ್ತರಣೆಯ, ತೀವ್ರ ವಾಣಿಜ್ಯ ಚಟುವಟಿಕೆಯ ಯುಗದ ಆರಂಭವಾಯಿತು.

ಅಪಾಯಕರವೂ, ಆದರೆ ರೋಮಾಂಚಕಾರಿಯೂ ಲಾಭಕರವೂ ಆದ ಅವಕಾಶಗಳನ್ನು ಉಪಯೋಗಿಸಿಕೊಳ್ಳುವ ಉದ್ದೇಶದಿಂದ ವರ್ತಕರ ಸಂಸ್ಥೆಗಳು ಹುಟ್ಟಿಕೊಂಡುವು. ಬಹು ಪುರಾತನವೂ ಪ್ರಸಿದ್ಧವೂ ಆದ ಕಂಪೆನಿಗಳಲ್ಲೊಂದರ ಹೆಸರನ್ನು ನೋಡಿ: "ಅಪರಿಚಿತ ಪ್ರದೇಶ, ಆಧಿಪತ್ಯ, ದ್ವೀಪ ಮುಂತಾದ ಸ್ಥಳಗಳನ್ನು ಕಂಡು ಹಿಡಿಯ ಬಯಸುವ ಸಾಹಸಿ ವರ್ತಕರ ರಹಸ್ಯ ಸಂಸ್ಥೆ." ಈ ಹೆಸರೇ ಸಾಕು—ಈ ಸಂಸ್ಥೆ ಎಂಥದೆಂದು ಹೇಳಲು. ಆದರೆ ಈ ಹೆಸರಿನಿಂದ ಈ ಸಂಸ್ಥೆಯ ಪ್ರತಾಪದಲ್ಲಿ ಅರ್ಧವೂ ಗೊತ್ತಾಗುವುದಿಲ್ಲ. ಹೊಸ ಪ್ರದೇಶವೊಂದನ್ನು ಕಂಡು ಹಿಡಿದ ಕೂಡಲೇ ಇತರ ಕಾರ್ಯಗಳು ಆರಂಭವಾಗುತ್ತಿದ್ದುವು. ಕೋಟೆ ಕಟ್ಟಬೇಕಿತ್ತು. ಆ ತಾಣದಲ್ಲಿ ದಂಡೊಂದನ್ನು ಸ್ಥಾಪಿಸಬೇಕಿತ್ತು. ಸ್ಥಳೀಯ ಜನರೊಂದಿಗೆ ಏರ್ಪಾಡು ಮಾಡಿಕೊಳ್ಳಬೇಕಿತ್ತು. ವ್ಯಾಪಾರ ನಡಸಬೇಕಿತ್ತು. ಈ ವ್ಯಾಪಾರದಲ್ಲಿ ಇತರರು ಪ್ರವೇಶಿಸದಂತೆ ಕ್ರಮ ಕೈಕೊಳ್ಳಬೇಕಿತ್ತು. ಇವುಗಳ ಜತೆಗೆ ಇನ್ನೂ ಕೆಲವು ದೀರ್ಘ ಹಾಗೂ ವೆಚ್ಚದಾಯಕ ಪೂರ್ವಭಾವಿ ಕಾರ್ಯಗಳು ಆಗಬೇಕಿದ್ದುವು: ಹಡಗು ಕೊಳ್ಳುವುದು ಅಥವಾ ನಿರ್ಮಿಸುವುದು, ಹಡಗು ಕೆಲಸಗಾರರನ್ನು ನೇಮಿಸಿಕೊಳ್ಳುವುದು, ಅನಿಶ್ಚಿತವಾದ ಹಾಗೂ ಅಪಾಯಕರವಾದ ಪ್ರಯಾಣಕ್ಕೆ ಅಗತ್ಯವಾದ ಆಹಾರ ಉಪಕರಣಗಳನ್ನು ಸಜ್ಜುಗೊಳಿಸಿಕೊಳ್ಳುವುದು—ಈ ಕಾರ್ಯಗಳೆಲ್ಲ ಆಗಬೇಕಿದ್ದುವು.

ಇದಕ್ಕೆಲ್ಲಾ ಹಣ ಬೇಕಿತ್ತು, ಅಗಾಧ ಹಣ ಬೇಕಿತ್ತು. ಯಾರೊಬ್ಬರ ಬಳಿ ಇರಬಹುದಾದ್ದಕ್ಕಿಂತ, ಧೈರ್ಯಮಾಡಿ ಈ ಕೆಲಸದಲ್ಲಿ ಹೂಡಬಹುದಾದ್ದಕ್ಕಿಂತ ಹೆಚ್ಚು ಹಣ ಬೇಕಿತ್ತು. ಈ ಕಾರ್ಯ ಅಷ್ಟು ದೊಡ್ಡದು, ಅಷ್ಟು ಅಪಾಯಕಾರಿ.

ಹಳೆಯ ಪದ್ಧತಿಯ ವ್ಯಾಪಾರಗಳಿಗೂ ಮಾರ್ಗಗಳಿಗೂ ತಕ್ಕಂತೆ ಬೆಳೆದುಕೊಂಡು ಬಂದಿದ್ದ ಸಂಪ್ರದಾಯಬದ್ಧ ವ್ಯಾಪಾರ ಸಂಸ್ಥೆಗಳು ಹೊಸ ಪರಿಸ್ಥಿತಿಗೆ ಅನುಗುಣವಾಗಿರಲಿಲ್ಲ. ದೂರದ ಅಪರಿಚಿತ ನಾಡುಗಳಲ್ಲಿ, ಅಪರಿಚಿತ ಜನರೊಂದಿಗೆ, ಅಪರಿಚಿತ ಪರಿಸ್ಥಿತಿಯಲ್ಲಿ ವ್ಯಾಪಾರ ಮಾಡಬೇಕಾಗಿ ಬಂದದ್ದರ ಫಲವಾಗಿ ಹೊಸ ಮಾದರಿಯ ವ್ಯಾಪಾರ

ಸಂಸ್ಥೆಯ ಅಗತ್ಯವಾಯಿತು. ಈ ಅಗತ್ಯಕ್ಕೆ ತಕ್ಕಂತೆ ಹೊಸ ಮಾದರಿಯ ಸಂಸ್ಥೆಯೂ ಉದಿಸಿತು.

ಒಬ್ಬರು, ಇಬ್ಬರು ಅಥವಾ ಮೂವರು ಪ್ರತ್ಯೇಕವಾಗಿ ಮಾಡಲಾಗದುದನ್ನು ಹಲವು ವ್ಯಕ್ತಿಗಳು ಒಂದಾಗಿ, ಒಂದು ಸಂಸ್ಥೆಯಾಗಿ ಸೇರಿ, ಒಂದು ಅಂಗದಂತೆ, ಒಂದು ಆಡಳಿತ ವ್ಯವಸ್ಥೆಯ ಅಡಿಯಲ್ಲಿ ಮಾಡುವುದು ಸಾಧ್ಯವಾಯಿತು. ಅಮೆರಿಕಾ ಆಫ್ರಿಕಾ ಏಷ್ಯಾಗಳೊಡನೆ ವ್ಯಾಪಾರ ನಡಸುವಂಥ ದೊಡ್ಡ ಉದ್ಯಮಗಳಿಗೆ ಅಗತ್ಯವಾದ ಹಣ ದೊರಕಿಸುವ ಸಮಸ್ಯೆಗೆ ಹದಿನಾರು-ಹದಿನೇಳನೆಯ ಶತಮಾನಗಳ ವರ್ತಕರು ನೀಡಿದ ಪರಿಹಾರವೆಂದರೆ 'ಜಾಯಿಂಟ್ ಸ್ಟಾಕ್ ಕಂಪೆನಿ' ಅಥವಾ ಕೂಡು ಬಂಡವಾಳ ಸಂಸ್ಥೆ. 'ಮರ್ಚೆಂಟ್ ಅಡ್ವೆಂಚರರ್ಸ್' ಅಥವಾ 'ವರ್ತಕ ಸಾಹಸಿಗಳು' ಎಂಬುದೇ ಮೊಟ್ಟ ಮೊದಲ ಇಂಗ್ಲಿಷ್ ಕೂಡು ಬಂಡವಾಳ ಸಂಸ್ಥೆ. ಇದರಲ್ಲಿ ೨೪೦ ಜನ ಷೇರುದಾರರಿದ್ದರು. ಇವರು ತಲಾ ಇಪ್ಪತ್ತೈದು ಪೌಂಡು ಹಾಕಿದರು. ಆಗಿನ ಕಾಲಕ್ಕೆ ಅದೇ ಬಹು ದೊಡ್ಡ ಮೊಬಲಗು. ವ್ಯಾಪಾರ, ಶತ್ರು ಹಡಗುಗಳ ಸೂರೆ, ವಸಾಹತು ನಿರ್ಮಾಣ ಮುಂತಾದ ಕಲಾಪಕ್ಕೆ ಬೇಕಾದ ಹಣ ಎತ್ತಲು ಸಾಧ್ಯವಾದದ್ದು ಈ ಷೇರುಗಳನ್ನು ಹಲವರಿಗೆ ಮಾರಾಟ ಮಾಡಿದ್ದರಿಂದ. ಇಂದಿನ ಕಾರ್ಪೊರೇಷನ್‌ಗಳ ಮೂಲ ಸಂಸ್ಥೆಗಳು ಇವು—ಈ ಕೂಡು ಬಂಡವಾಳ ಸಂಸ್ಥೆಗಳು. ಇಂದಿನಂತೆ ಅಂದೂ ಹಣ ಇರುವ ಯಾರಾದರೂ ಕೂಡು ಬಂಡವಾಳ ಸಂಸ್ಥೆಯ ಷೇರು ಕೊಂಡು ಅದರಲ್ಲಿ ಭಾಗಸ್ಥನಾಗಬಹುದಿತ್ತು. ಕಡಲುಗಳ್ಳತನಕ್ಕೂ ಕೂಡ ಕೂಡು ಬಂಡವಾಳ ಸಂಸ್ಥೆ ರಚನೆಯಾಗಿತ್ತು. ಸ್ಪೇಯ್ನಿನ ವಿರುದ್ಧ ಡ್ರೇಕ್ ಮಾಡಿದ ಇಂಥ ಯಾತ್ರೆಗೆ ಸಂಬಂಧಿಸಿದ ಷೇರುಗಳನ್ನು ಎಲಿಜಬೆತ್ ರಾಣಿಯೇ ಹೊಂದಿದ್ದಳು. ಕೆಲವು ಹಡಗುಗಳನ್ನು ಸಾಲವಾಗಿ ಕೊಟ್ಟದ್ದಕ್ಕೆ ಪ್ರತಿಯಾಗಿ ಆವಳು ಈ ಷೇರುಗಳನ್ನು ಪಡೆದಿದ್ದಳು. ಈ ಒಂದೇ ಒಂದು ಸಂದರ್ಭದಲ್ಲಿ ಶೇಕಡ ೪೭೦೦ ರಷ್ಟು ಲಾಭ ಬಂತಂತೆ! ಇದರಲ್ಲಿ ರಾಣಿ ತನ್ನ ಭಾಗವಾಗಿ ಎರಡೂವರೆ ಲಕ್ಷ ಪೌಂಡು ಪಡೆದಳು![1]

ಈ ಕೊಳ್ಳೆಯ ಸಾಹಸ ಯಾತ್ರೆಗಳಲ್ಲಿ ರಾಣಿಯೂ ರಹಸ್ಯವಾಗಿ ಹಣ ಹಾಕಿದ್ದಳೆಂಬುದು ಅಷ್ಟೇನೂ ರಹಸ್ಯವಾಗಿರಲಿಲ್ಲ. ೧೫೬೭ರ ಡಿಸೆಂಬರ್ ಏಳರಂದು ಬರೆದ ಒಂದು ಪತ್ರದಲ್ಲಿ ಇದು ಸ್ಪಷ್ಟವಾಗಿದೆ: "ಈ ಹಾಕಿನ್ಸ್ ಎಂಬವನು ರಾಣಿಯ ಸಹಾಯ ಹಾಗೂ ರಹಸ್ಯ ಒಪ್ಪಿಗೆಯಿಲ್ಲದೆ ಇಷ್ಟೊಂದು ಸಂಖ್ಯೆಯ ಇಷ್ಟೊಂದು ಸುಸಜ್ಜಿತ ನೌಕೆಗಳನ್ನು ನಿರ್ಮಿಸಿ ಹೊರತರುವುದು ಸಾಧ್ಯವಿರುತ್ತಿರಲಿಲ್ಲ. ಇದು ನಮ್ಮೆರಡು ದೇಶಗಳ ಒಪ್ಪಂದಕ್ಕೆ ವಿರೋಧವಾಗಿದೆ. ಈ ಒಪ್ಪಂದಕ್ಕಾಗಿ ನಮ್ಮ ದೊರೆ ಇಂಗ್ಲೆಂಡಿನ ರಾಣಿಯ ಬಳಿಗೆ ಒಬ್ಬ ವಿಶೇಷ ರಾಯಭಾರಿಯನ್ನು ಕಳುಹಿಸಿದ್ದರು. ನಂಬಿಕೆ ದ್ರೋಹ ಎಸಗುವುದೇ ಈ ದೇಶದ ಜನರ ಸ್ವಭಾವ, ಸಂಪ್ರದಾಯ. ಇದಕ್ಕನುಗುಣವಾಗಿ ರಾಣಿ ನಡೆದುಕೊಂಡಿದ್ದಾಳೆ. ತನ್ನ

---

[1] Cf. W. R. Scott, *The Constitution and Finance of English, Scottish and Irish Joint Stock Companies to 1720.* 3 vols., vol. I, p. 81. Cambridge. 1910-12.

ಅರಿವು ಇಚ್ಛೆ ಇಲ್ಲದೆಯೇ ಇದೆಲ್ಲಾ ನಡೆದಿದೆಯೆಂದು ಅವಳು ನಟಿಸುತ್ತಾಳೆ."[1]

ಹದಿನಾರು–ಹದಿನೇಳನೆಯ ಶತಮಾನಗಳಲ್ಲಿ ಸಂಘಟಿತವಾದ ಈ ಕೆಲವು ಸಂಸ್ಥೆಗಳ ಹೆಸರುಗಳನ್ನು ಅವಲೋಕಿಸಿದರೆ, ಇವುಗಳು ಎಲ್ಲಿ ಚಟುವಟಿಕೆ ನಡೆಸುತ್ತಿದ್ದುವೆಂಬುದು ಗೊತ್ತಾಗುತ್ತದೆ. ಇವುಗಳಲ್ಲಿ ಕೆಲವು ವ್ಯಾಪಾರ ನಡಸುತ್ತಿದ್ದುವು; ಕೆಲವು ವಸಾಹತು ನಿರ್ಮಾಣಕಾರ್ಯದಲ್ಲಿ ತೊಡಗಿದ್ದುವು; ಇನ್ನು ಕೆಲವು ಎರಡರಲ್ಲೂ ತೊಡಗಿದ್ದುವು. ಆಗ ಏಳು "ಈಸ್ಟ್ ಇಂಡಿಯಾ" ಅಥವಾ "ಪೂರ್ವ ಭಾರತ" ಕಂಪೆನಿಗಳಿದ್ದವು. ಇವುಗಳಲ್ಲಿ ಬ್ರಿಟಿಷ್ ಹಾಗೂ ಡಚ್ ಕಂಪೆನಿಗಳು ಬಹು ಪ್ರಸಿದ್ಧ. ನಾಲ್ಕು "ಪಶ್ಚಿಮ ಇಂಡಿಯಾ" ಕಂಪೆನಿಗಳಿದ್ದುವು. ಹಾಲೆಂಡ್, ಫ್ರಾನ್ಸ್, ಸ್ವೀಡನ್, ಡೆನ್ಮಾರ್ಕ್ ದೇಶಗಳಲ್ಲಿ ಇವು ಸ್ಥಾಪಿತವಾಗಿದ್ದುವು. 'ಲೆವಾಂಟ್' ಹಾಗೂ 'ಆಫ್ರಿಕನ್' ಕಂಪೆನಿಗಳೂ ಪ್ರಸಿದ್ಧವಾಗಿದ್ದುವು. ಅಮೆರಿಕನರಿಗೆ ಸಂಬಂಧಿಸಿದ 'ಪ್ಲಿಮತ್' ಮತ್ತು 'ವರ್ಜಿನಿಯಾ' ಕಂಪೆನಿಗಳು ಇಂಗ್ಲೆಂಡಿನಲ್ಲಿ ಸ್ಥಾಪಿತವಾಗಿದ್ದುವು.

ಈ ದುಬಾರಿ ಹಾಗೂ ಅಪಾಯಕಾರಿ ಉದ್ಯಮಗಳಲ್ಲಿ ನಿರತವಾದ ಕಂಪೆನಿಯು ಸರಕಾರದಿಂದ ಆದಷ್ಟು ಹೆಚ್ಚಿನ ವ್ಯಾಪಾರದ ಹಕ್ಕು ಪಡೆಯಲು ಯತ್ನಿಸುತ್ತಿತ್ತು. ವ್ಯಾಪಾರದ ಏಕಸ್ವಾಮ್ಯ ಈ ಹಕ್ಕುಗಳಲ್ಲಿ ಬಹು ಮುಖ್ಯ. ತಾನು ವ್ಯಾಪಾರ ನಡಸುವ ಪ್ರದೇಶದಲ್ಲಿ ಹೊರಗಿನ ವ್ಯಾಪಾರಿಗಳು ಪ್ರವೇಶಿಸಬಾರದೆಂಬುದು ಅದರ ಇಚ್ಛೆಯಾಗಿತ್ತು. ವ್ಯಾಪಾರ ಹೆಚ್ಚಾಗಿ ವಿಸ್ತರಿಸಲು ಈ ವ್ಯಾಪಾರ ಸಂಸ್ಥೆಗಳ ಸಾಹಸದ ಮಾರ್ಗದರ್ಶನವೇ ಕಾರಣವೆಂಬುದು ಆಗ ಇದ್ದ ನಂಬಿಕೆ. ಈಗಣ ಇತಿಹಾಸಕಾರರು ಕೆಲವರು ಇದನ್ನು ಒಪ್ಪುವುದಿಲ್ಲ ಈ ಕಂಪೆನಿಗಳ ಹೊರಗೆ ಅಸಂಖ್ಯಾತ ವರ್ತಕರು ಇದ್ದರು. ಇವರು ಈ ಏಕಸ್ವಾಮ್ಯದ ಕಟ್ಟು ಮುರಿಯಲು ಸದಾ ಯತ್ನಿಸುತ್ತಿದ್ದರು. ಆದ್ದರಿಂದ ಈ ಏಕಸ್ವಾಮ್ಯ ಸಂಸ್ಥೆಗಳಿಲ್ಲದಿದ್ದರೆ ವ್ಯಾಪಾರ ಇನ್ನೂ ಹೆಚ್ಚುತ್ತಿತ್ತೆಂಬುದು ಈ ಇತಿಹಾಸಕಾರರ ವಾದ.

ಅಂತೂ ಇಷ್ಟು ಹೇಳಬಹುದು. ಷೇರುದಾರರಿಗಾಗಿ ಲಾಭ ಗಳಿಸುವ ಮುಖ್ಯ ಉದ್ದೇಶದಿಂದ ಈ ಕಂಪೆನಿಗಳು ವ್ಯಾಪಾರ ನಡಸುತ್ತಿದ್ದುವು. ಉತ್ಪಾದನೆ ಹೆಚ್ಚಿಸಿ ಮಾರಾಟ ವಿಸ್ತರಿಸುವುದು ಸಾಧ್ಯವಿದ್ದೆಡೆಯಲ್ಲೆಲ್ಲ ಅವು ಹಾಗೆ ಮಾಡಿದುವು. ಉತ್ಪಾದನೆಯನ್ನು ತಗ್ಗಿಸಿ ಬೆಲೆ ಏರಿಸಿ ಲಾಭ ಹೆಚ್ಚಿಸಿಕೊಳ್ಳುವುದು ಸಾಧ್ಯವೆನಿಸಿದಾಗ ಹಾಗೆಯೇ ಮಾಡಿದುವು. ಪ್ರಥಮ ದ್ವಿತೀಯ ಮಹಾಯುದ್ಧಗಳ ನಡುವಣ ಕಾಲದಲ್ಲಿ ಮಹಾ ಆರ್ಥಿಕ ಮುಗ್ಗಟ್ಟು ಒದಗಿದ್ದಾಗ ಅಮೆರಿಕದಲ್ಲಿ ವ್ಯವಸಾಯ ಪದಾರ್ಥಗಳ ಬೆಲೆಗಳು ಕುಸಿದಿದ್ದುವು. ಆಗ ಅಲ್ಲಿ ಅಧ್ಯಕ್ಷರಾಗಿದ್ದ ರೂಸ್ವೆಲ್ಟರು ವ್ಯವಸಾಯ ಸ್ಥಿಮಿತಗೊಳಿಸುವ ಶಾಸನವೊಂದನ್ನು ತಂದರು. ಕೃಷಿಯನ್ನು ಕಡಮೆ ಮಾಡಿ, ಕಡಮೆ ಫಸಲು ತೆಗೆದು, ಸರಬರಾಯಿ ತಗ್ಗಿಸಿ, ವ್ಯವಸಾಯ ಪದಾರ್ಥಗಳ ಬೆಲೆ ಏರಿಸಬೇಕೆಂಬುದು ಅದರ ಉದ್ದೇಶಗಳಲ್ಲೊಂದು. ಈ ಶಾಸನದ ಈ

---

[1] *The Fugger News Letters*. Edited by V. Von Klarwill. Translated by P. de Chary, Ist series, 1924 ; 2nd series. 1926, 2nd series, No 11. Bodley Head, London.

ಬಗೆಯ ಕಾರ್ಯಕ್ರಮ ಹೊಸದೇನೂ ಅಲ್ಲ. ಬಹು ಹಿಂದೆಯೇ ಡಚ್ಚರು ಈ ಕೆಲಸ ಮಾಡಿದ್ದರು. "ಇತರ ದ್ವೀಪಗಳಲ್ಲಿದ್ದ ಲವಂಗ ಜಾಕಾಯಿ ಬೆಳೆ ನಾಶಪಡಿಸಲು ಸ್ಥಳೀಯ ಆಳರಸರಿಗೆ ೩೩೦೦ ಪೌಂಡು ಸಹಾಯ ಧನ ನೀಡಿದರು. ಆಮ್ಬೋಯ್ನಾದಲ್ಲಿನ ಬೆಳೆಯನ್ನು ತಾವೇ ನಿರ್ವಹಿಸುವುದು ಸಾಧ್ಯವಿದ್ದದ್ದರಿಂದ ಅಲ್ಲಿ ಬೇಸಾಯಕ್ಕೆ ಹೆಚ್ಚು ಗಮನ ಕೊಟ್ಟರು. 'ಈಸ್ಟ್ ಇಂಡಿಯಾ' ವ್ಯಾಪಾರ ವರ್ಧಿಸುವುದರಲ್ಲಿ ಅವರಿಗೆ ಆಸಕ್ತಿ ಇರಲಿಲ್ಲ. ಅಲ್ಲಿ ವ್ಯಾಪಾರ ಮಿತಗೊಳಿಸಿ, ಹೆಚ್ಚು ಲಾಭದ ದರ ಪಡೆಯಲಿಚ್ಛಿಸಿದರು."[1]

ಹೀಗೆ ವ್ಯಾಪಾರ ವಿಸ್ತರಿಸುವ ಬದಲು ಅದನ್ನು ಸಂಕುಚಿತಗೊಳಿಸಿ, ಲಾಭ ಹೆಚ್ಚಿಸಿಕೊಳ್ಳಬಹುದೆಂಬುದು ಈ ಒಂದು ಸಂದರ್ಭದಲ್ಲಿ ನಿಜವಾದರೂ, ಸಾಮಾನ್ಯವಾಗಿ ವ್ಯಾಪಾರ ವಿಸ್ತರಣೆಯಲ್ಲಿ ಹೆಚ್ಚು ಲಾಭವಿತ್ತು. ಇದು ವಾಣಿಜ್ಯದ ಸುವರ್ಣ ಯುಗವಾಗಿತ್ತು. ಹಲವರಿಗೆ ಅದೃಷ್ಟ ಖುಲಾಯಿಸಿತು. ಬಂಡವಾಳ ಕೂಡಿಬಂತು. ಹದಿನೇಳು ಹದಿನೆಂಟನೆಯ ಶತಮಾನಗಳ ಅದ್ಭುತ ಕೈಗಾರಿಕೆ ಬೆಳವಣಿಗೆಗೆ ಇದು ತಳಹದಿಯಾಯಿತು.

ದೊಡ್ಡ ರಾಜರುಗಳ ಮಹಾಕಾಂಕ್ಷೆಗಳ, ವಿಜಯೋತ್ಸವಗಳ, ಯುದ್ಧಗಳ ದೀರ್ಘ ವರದಿಯನ್ನು ನಾವು ಚರಿತ್ರೆಯ ಪುಸ್ತಕದಲ್ಲಿ ಕಾಣಬಹುದು. ಆದರೆ ಹೀಗೆ ಮೆರೆದ ಸಿಂಹಾಸನಗಳ ಹಿಂದೆ ವಾಸ್ತವವಾಗಿ ಇದ್ದ ಶಕ್ತಿಗಳ—ಆ ಕಾಲದ ಹಣವಂತ ವರ್ತಕರ, ಬಂಡವಾಳಗಾರರ, ಧನಕಾರ್ಯ ನಿರ್ವಾಹಕರ—ವಿಚಾರವನ್ನು ವಿಶದವಾಗಿ ವಿವರಿಸಿದರೆ ಈ ಚರಿತ್ರೆ ಹೆಚ್ಚು ಸಾರ್ಥಕವೆನಿಸೀತು. ಸಿಂಹಾಸನಗಳ ಹಿಂದೆ ಈ ಶಕ್ತಿಪುರುಷರು ಇದ್ದರು—ಎನ್ನುವುದು ನಿಜ. ಏಕೆಂದರೆ ರಾಜರಿಗೆ ಪ್ರತಿ ಘಟ್ಟದಲ್ಲಿಯೂ ಹಣದ ನೆರವು ಬೇಕಾಗಿತ್ತು. ಹದಿನಾರು ಹದಿನೇಳನೆಯ ಶತಮಾನಗಳ ಪೂರ್ತಿ—ಇನ್ನೂರು ವರ್ಷಕಾಲ—ಹೆಚ್ಚು ಕಡಮೆ ನಿರಂತರವಾಗಿ ಯುದ್ಧ ಸಾಗಿತು. ಯುದ್ಧಕ್ಕೆ ಹಣ ಬೇಕು. ಹಣವಿದ್ದವರು—ವರ್ತಕರು, ಬ್ಯಾಂಕರುಗಳು—ಈ ಹಣ ನೀಡಿದರು.

ಪವಿತ್ರ ರೋಮನ್ ಚಕ್ರಾಧಿಪತ್ಯದ ಕಿರೀಟವನ್ನು ಧರಿಸಬೇಕಾದವರು ಯಾರು? ಸ್ಪೈನಿನ ಐದನೆಯ ಚಾರ್ಲ್ಸ್ ದೊರೆಯೇ, ಫ್ರಾನ್ಸಿನ ಮೊದಲನೆಯ ಫ್ರಾನ್ಸಿಸ್ ದೊರೆಯೇ? ಈ ವಿಚಾರವನ್ನು ನಿರ್ಣಯಿಸಿದವನು ಜರ್ಮನಿಯ ಜೇಕಬ್ ಫಗ್ಗರ್ ಎಂಬವನು—ಒಬ್ಬ ಯಃಕಶ್ಚಿತ್ ಬ್ಯಾಂಕರು. ಇವನು ಫಗ್ಗರ್ ಎಂಬ ಬ್ಯಾಂಕು ಸಂಸ್ಥೆಯ—ಧನಾಗಾರದ—ಮುಖ್ಯನಾಗಿದ್ದ. ಈ ಕಿರೀಟಕ್ಕಾಗಿ ಚಾರ್ಲ್ಸ್ ಎಂಟೂವರೆ ಲಕ್ಷ ಫ್ಲಾರಿನ್ ಕೊಟ್ಟ. ಇದರಲ್ಲಿ ೫,೪೩,೦೦೦ವನ್ನು ಫಗ್ಗರ್ ಧನಸಂಸ್ಥೆ ಸಾಲವಾಗಿ ನೀಡಿತು. ಪಡೆದ ಸಾಲವನ್ನು ಹಿಂತಿರುಗಿಸಲು ಫಗ್ಗರ್ ನಿಧಾನ ಮಾಡಿದಾಗ ಜೇಕಬ್ ಫಗ್ಗರ್ ಬರೆದ ಪತ್ರವೊಂದರ ಧೋರಣೆಯಿಂದ ಈತನ ಪ್ರಭಾವ ಎಷ್ಟಿದ್ದಿರಬಹುದೆಂಬುದು ವೇದ್ಯವಾಗುತ್ತದೆ. ಹಣದ ಮಹತ್ವದ ಬಲದಿಂದಲೇ ಜೇಕಬ್ ಫಗ್ಗರ್ ಗರ್ವದಿಂದ ಹೀಗೆ ಬರೆದ: "....ಪ್ರಭುಗಳ ಪ್ರತಿನಿಧಿಗಳಿಗೂ ನಾವು ಅಧಿಕ ಮೊತ್ತವನ್ನು ಸಾಲವಾಗಿ ನೀಡಿದ್ದೇವೆ. ಇದರಲ್ಲಿ ಬಹುಭಾಗ ನಾವೇ ನಮ್ಮ ಸ್ನೇಹಿತರಿಂದ ಪಡೆದದ್ದು. ನನ್ನ ನೆರವಿಲ್ಲದಿದ್ದರೆ ಮಹಾಪ್ರಭುಗಳಾದ

---

[1] **W. Cunningham, *op. cit.*, vol. II, p. 175.**

ತಮಗೆ ರೋಮನ್ ಚಕ್ರಾಧಿಪತ್ಯದ ಕಿರೀಟ ಲಭಿಸುತ್ತಿರಲಿಲ್ಲ. ತಮ್ಮ ಪ್ರತಿನಿಧಿಗಳೇ ಸ್ವಹಸ್ತದಿಂದ ಬರೆದಿರುವ ಪತ್ರಗಳನ್ನು ಈ ಮಾತಿಗೆ ರುಜುವಾತಾಗಿ ನೀಡಬಲ್ಲೆ. ಇದರಲ್ಲಿ ನನ್ನ ಲಾಭದ ಕಡೆಗೆ ನಾನು ಲಕ್ಷ್ಯ ಕೊಡಲಿಲ್ಲ. [ನೀವು ಇದನ್ನು ನಂಬಲಾರಿರಿ!] ಏಕೆಂದರೆ ನಾನು ಆಸ್ಟ್ರಿಯಾ ಮನೆತನವನ್ನು ಬಿಟ್ಟು ಫ್ರಾನ್ಸಿನ ಮುನ್ನಡೆಗಾಗಿ ಶ್ರಮಿಸಿದ್ದರೆ ಹೆಚ್ಚು ಹಣ, ಆಸ್ತಿ ದೊರಕುತ್ತಿದ್ದುವು. ಇವನ್ನು ಕೊಡುವುದಾಗಿ ವಾಗ್ದಾನವೂ ಆಗಿತ್ತು. ನಾನು ಹೀಗೆ ಮಾಡಿದ್ದರೆ ಮಹಾಪ್ರಭುಗಳಾದ ತಮಗೂ, ಆಸ್ಟ್ರಿಯಾ ಮನೆತನಕ್ಕೂ ಎಷ್ಟು ತೊಂದರೆ ಆಗುತ್ತಿತ್ತೆಂಬುದು ಮಹಾಪ್ರಭುಗಳ ಘನ ಚಿತ್ತಕ್ಕೆ ವೇದ್ಯವಾಗದ ವಿಚಾರವೇನಲ್ಲ."[1] ಈ ಪತ್ರದ ಸೊಕ್ಕು ನೋಡಿ.

ಹದಿನಾರನೆಯ ಶತಮಾನದಲ್ಲಿ ಫಗ್ಗರ್ ಸಂಸ್ಥೆಯ ನೆರಳು ಇಷ್ಟಸ್ಟೂ ಇಲ್ಲದೆ ಯಾವ ಮುಖ್ಯ ಘಟನೆಯೂ ನಡೆಯುತ್ತಿರಲಿಲ್ಲ. ಇದು ಹದಿನೈದನೆಯ ಶತಮಾನದಲ್ಲಿ ಉಣ್ಣೆ ಸಂಬಾರ ಪದಾರ್ಥಗಳ ವ್ಯಾಪಾರ ಸಂಸ್ಥೆಯಾಗಿ ಆರಂಭವಾಯಿತು. ಆದರೆ ಧನವ್ಯವಹಾರ ದಲ್ಲಿ—ಬ್ಯಾಂಕಿಂಗ್ ವ್ಯವಹಾರದಲ್ಲಿ—ಇದರ ಅದೃಷ್ಟ ಖುಲಾಯಿಸಿತು. ಇತರ ವರ್ತ ಕರಿಗೂ ರಾಜ ಮಹಾರಾಜರುಗಳಿಗೂ ಹಣ ಸಾಲ ನೀಡಿತು ; ಪ್ರತಿಯಾಗಿ ಗಣಿಗಳಿಂದಲೂ, ವ್ಯಾಪಾರೋದ್ಯಮಗಳಿಂದಲೂ, ಪ್ರಭುತ್ವದ ಭೂಮಿಯಿಂದಲೂ, ಲಾಭ ತರುವ ಎಲ್ಲ ಬಗೆಯ ಉದ್ಯಮಗಳಿಂದಲೂ ವರಮಾನ ಪಡೆಯಿತು. ನೀಡಿದ ಸಾಲ ಮರಳಿ ಬಾರದಿದ್ದಾಗ ಈ ಸಂಸ್ಥೆ ಈ ಆಸ್ತಿಗಳ, ಗಣಿಗಳ, ನೆಲದ ಒಡೆತನ ಪಡೆಯಿತು ; ಆಧಾರ ಮಾಡಿದ್ದು ಇವರದೇ ಆಯಿತು. ಫಗ್ಗರ್ ಮನೆತನಕ್ಕೆ ಪೋಪ್ ಕೂಡ ಋಣಿಯಾಗಿದ್ದ. ಈ ಸಂಸ್ಥೆ ಎಲ್ಲೆಲ್ಲೂ ಶಾಖೆಗಳನ್ನೂ ಪ್ರತಿನಿಧಿಗಳನ್ನೂ ಪಡೆದಿತ್ತು. ಜರ್ಮನ್ ಚಕ್ರವರ್ತಿ, ಆಂಟ್ ವರ್ಪ್ ನಗರ, ಇಂಗ್ಲೆಂಡ್ ಪೋರ್ಚುಗಲ್ ದೊರೆಗಳು, ನೆದರ್ಲೆಂಡಿನ ರಾಣಿ—ಎಲ್ಲರೂ ಈ ಸಂಸ್ಥೆಗೆ ಹಣ ತೆರಬೇಕಾಗಿತ್ತು. ಈ ಅಂಶ ಈ ಸಂಸ್ಥೆಯ ೧೫೪೬ರ ಆಸ್ತಿ–ಹೊಣೆ ತಃಖ್ತೆ ಯಿಂದ ವೇದ್ಯವಾಗುತ್ತದೆ. ಆ ವರ್ಷ ಈ ಸಂಸ್ಥೆಯ ಬಂಡವಾಳ ಐವತ್ತು ಲಕ್ಷ ಗುಲ್ಡೆನ್. ಚರಿತ್ರೆಯ ಈ ಕಾಲವನ್ನು ಇಂಥ ದೊರೆಯ ಆಳಿಕೆಯ ಕಾಲ ಎನ್ನುವ ಬದಲು, "ಫಗ್ಗರ್ ಸಂಸ್ಥೆಯ ಯುಗ" ಎಂದು ಕರೆವರೆ ಹೆಚ್ಚು ಸೂಕ್ತವೆನಿಸುತ್ತದೆ.

ಫಗ್ಗರ್ ಮನೆತನ ಈ ಕಾಲದ ಅತ್ಯಂತ ಮುಖ್ಯ ಹಣ ಸಂಸ್ಥೆಯಾಗಿದ್ದರೂ, ಬಹುಶಃ ಇದರಷ್ಟೇ ದೊಡ್ಡದಾದ ಇತರ ಹಲವು ಸಂಸ್ಥೆಗಳೂ ಇದ್ದುವು. 'ವೆಸ್ಲರ್' ಎಂಬುದು ಇನ್ನೊಂದು ಜರ್ಮನ್ ಬ್ಯಾಂಕಿಂಗ್ ಸಂಸ್ಥೆ. ಇದು ಐದನೆಯ ಛಾರ್ಲ್ಸ್ ದೊರೆಗೆ ಸುಮಾರು ೧,೪೩,೦೦೦ ಫ್ಲಾರಿನ್‌ನಷ್ಟು ಸಹಾಯ ನೀಡಿತ್ತು. ವ್ಯಾಪಾರೋದ್ಯಮಗಳಲ್ಲಿ, ಗಣಿಗಳಲ್ಲಿ, ಜಮೀನಿನಲ್ಲಿ ಇದೂ ಹಣ ಹೂಡಿತ್ತು. ಹಾಚ್ ಸ್ಟೆಟರ್, ಹಾಗ್, ಇಮ್‌ಹಾಫ್ ಇವೂ ಇಂಥದೇ ವ್ಯವಹಾರ ಮಾಡುತ್ತಿದ್ದುವು. ಈ ಕಾಲದಲ್ಲಿ ಇಟಲಿಯಲ್ಲೂ ಫ್ರೆಸ್ಕೊಬಾಲ್ಡಿ, ಗ್ವಾಲ್ಟರೋಟಿ, ಸ್ಟ್ರಾಸಿ ಎಂಬ ಸಂಸ್ಥೆಗಳು ಪ್ರಸಿದ್ಧವಾಗಿದ್ದುವು. ಒಂದೆರಡು ಶತಮಾನಗಳಲ್ಲಿ

[1] R. Ehrenberg, *Capital and Finance in the Age of the Renaissance*, p. 80. Harcourt, Brace and Company, Inc., N.Y.

ಪೆರುಸಿ ಮತ್ತು ಮೆಡಿಸಿ ಎಂಬುವು ಮನೆ ಮಾತಾಗಿದ್ದುವು. ಈ ಸಂಸ್ಥೆಗಳ ಹಣಕಾಸಿನ ವಹಿವಾಟು ಹಾಗೂ ವಾಣಿಜ್ಯ ಚಟುವಟಿಕೆಯ ಪ್ರಮಾಣ ಎಷ್ಟು ಅಗಾಧವಾಗಿ ಹೆಚ್ಚಿತೆಂಬುದಕ್ಕೆ ಈ ಮನೆತನಗಳ ಸಂಪತ್ತನ್ನು ಫಗ್ಗರ್ಸ್ ಸಂಸ್ಥೆಯದರೊಡನೆ ಹೋಲಿಸಿ ನೋಡಬಹುದು:

"ಕ್ರಿ. ಶ. ೧೩೦೦—ಫೆರುಸಿ ೮೦೦,೦೦೦ ಡಾಲರು
,, ೧೪೮೦—ಮೆಡಿಸಿ ೭,೫೦೦,೦೦೦ ಡಾಲರು
,, ೧೫೪೬—ಫಗ್ಗರ್ಸ್ ೪೦,೦೦೦,೦೦೦ ಡಾಲರು."[1]

ಈ ಎಲ್ಲ ಧನಕಾರ್ಯ ಹಾಗೂ ವಾಣಿಜ್ಯ ಚಟುವಟಿಕೆಯ ಕೇಂದ್ರ ಆಂಟ್‌ವರ್ಪ್. ವ್ಯಾಪಾರದ ಪ್ರವಾಹ ಮೆಡಿಟರೇನಿಯನ್ನಿನಿಂದ ಅಟ್ಲಾಂಟಿಕ್ ಸಾಗರದ ಕಡೆಗೆ ಹರಿದಾಗ, ಇಟಲಿಯ ನಗರಗಳು ಕ್ಷೀಣಿಸಿದುವು. ಇವುಗಳ ಸ್ಥಾನವನ್ನು ಆಂಟ್‌ವರ್ಪ್ ಆಕ್ರಮಿಸಿತು. ಅದು ಹಿರಿಮೆ ಪಡೆಯಲು ಕಾರಣ ಅದರ ಗಾತ್ರವಲ್ಲ. ಅದರ ಪ್ರಜಾಸಂಖ್ಯೆ ಒಂದು ಲಕ್ಷ ಮಾತ್ರ. ಅದರ ಹಿರಿಮೆಗೆ ಅದು ಹೊಂದಿದ್ದ ಸ್ವಾತಂತ್ರ್ಯವೇ ಕಾರಣ. ಯಾವ ರೀತಿಯ ನಿರ್ಬಂಧಕ್ಕೂ ಅದು ಒಳಗಾಗಿರಲಿಲ್ಲ. ವಿದೇಶೀಯ ವರ್ತಕರು ತಮ್ಮ ಎಲ್ಲೆಯೊಳಗೆ ವ್ಯಾಪಾರ ನಡಸಲು ಮಧ್ಯ ಯುಗದ ಇತರ ನಗರಗಳು ಹಲವು ಆತಂಕಗಳನ್ನೊಡ್ಡುತ್ತಿದ್ದುವು. ಆದರೆ ಆಂಟ್‌ವರ್ಪ್ ನಗರವಾದರೋ, ಎರಡೂ ಕೈ ಚಾಚಿ ಅವರನ್ನು ಸ್ವಾಗತಿಸಿತು. ಅದು ನಿಜವಾಗಿಯೂ ಅಂತರರಾಷ್ಟ್ರೀಯ ವ್ಯಾಪಾರ ಕೇಂದ್ರವಾಗಿತ್ತು. ಯಾರಾದರೂ ಅಲ್ಲಿ ವ್ಯಾಪಾರ ಮಾಡಬಹುದಿತ್ತು. ಪ್ರತಿಯೊಬ್ಬರೂ ಅಲ್ಲಿ ವ್ಯಾಪಾರ ನಡಸುತ್ತಿದ್ದರು. ವರ್ತಕರು, ದಳ್ಳಾಳಿಗಳು, ಬ್ಯಾಂಕರುಗಳು ಸಂಧಿಸಿ ವ್ಯವಹಾರ ನಡಸುತ್ತಿದ್ದ ಅಲ್ಲಿನ ಸಭಾಂಗಣದ ಮೇಲೆ ಈ ರೀತಿಯ ವಚನ ಕೆತ್ತಿತ್ತು: "ಎಲ್ಲ ರಾಷ್ಟ್ರೀಯರೂ ಎಲ್ಲ ಭಾಷೆಗಳವರೂ ಇಲ್ಲಿ ವ್ಯವಹಾರ ನಡಸಬಹುದು"—ಎಂಬ ವಾಕ್ಯ ಅಲ್ಲಿ ಮೆರೆಯುತ್ತಿತ್ತು. ಪ್ರಪಂಚದ ಎಲ್ಲ ಭಾಗಗಳ ವರ್ತಕರೂ ಈ ಆಹ್ವಾನವನ್ನಂಗೀಕರಿಸಿದರು. ಇಂಗ್ಲಿಷ್ ವಸ್ತ್ರ ವ್ಯಾಪಾರದ ಕೇಂದ್ರ ಆಂಟ್‌ವರ್ಪ್ ಆಗಿತ್ತು. ಪೂರ್ವದೇಶಗಳ ಸಂಬಾರಕ್ಕೆ ಇದು ಮುಖ್ಯವಾದ ಮಾರುಕಟ್ಟೆಯಾಗಿತ್ತು. ವೆನಿಸಿಗರು ಸಂಬಾರದ ವ್ಯಾಪಾರದ ಸ್ವಾಮ್ಯ ಕಳೆದುಕೊಂಡಾಗ ಈ ಸ್ವಾಮ್ಯ ಪೋರ್ಚುಗೀಸರಿಗೆ ಹೋಯಿತು. ಪೋರ್ಚುಗೀಸರು ಈ ವ್ಯಾಪಾರವನ್ನೆಲ್ಲ ಸಾಮಾನ್ಯವಾಗಿ ಆಂಟ್‌ವರ್ಪ್ ಮುಖಾಂತರವಾಗಿಯೇ ಮಾಡುತ್ತಿದ್ದರು. ಪ್ರಮಾಣಭೂತ, ಸ್ವೀಕೃತ ಸರಕಿನ ಮಾದರಿ (ಸ್ಯಾಂಪಲ್) ನೋಡಿ ವ್ಯಾಪಾರ ಮಾಡುವ ಪದ್ಧತಿ ಜಾರಿಗೆ ಬಂತು. ವ್ಯಾಪಾರ, ಕೈಗಾರಿಕೆ ಎಂಥ ಅದ್ಭುತ ಪ್ರಗತಿ ಸಾಧಿಸಿದುವೆಂಬುದನ್ನು ತೋರಿಸುವ ಬಹು ಮುಖ್ಯವಾದ ಪದ್ಧತಿ ಇದು. ಕೊಳ್ಳುವವರಿಗೆ ಕೊಡಬೇಕಾದ ಎಲ್ಲ ಸರಕನ್ನೂ ಒಟ್ಟಾಗಿ ಕೈಯಲ್ಲಿ ಹೊಂದಿರುವ ಬದಲು, ಆಧುನಿಕ ಮಾದರಿಯ ದಳ್ಳಾಳಿ,

---

[1] C. J. Hayes, *A Political and Social History of Modern Europe*. 2 vols. p. 66, footnote. The Macmillan Company, N.Y., Revised edition, 1921.

ಪಟ್ಟದ ಪ್ರತಿನಿಧಿ, ಕಮಿಷನ್ ಏಜೆಂಟ್ ಇವರು ಹುಟ್ಟಿಕೊಂಡರು. ಸ್ವೀಕೃತವಾದ ಪ್ರಮಾಣಿತವಾದ ಮಾದರಿಯನ್ನು ತೋರಿಸಿ ಮಾರಾಟ ಮಾಡುತ್ತಿದ್ದರು ಇವರು. ಯಾವಾಗಲೂ ಯಾವ ನಿರ್ಬಂಧಕ್ಕೂ ಒಳಗಾಗದಿದ್ದ ಈ ಮಾರುಕಟ್ಟೆಯಿಂದ ಪರಿಷೆಗೆ ಮಾರಕವಾದ ಪೆಟ್ಟು ಬಿತ್ತು. ಈ ಪರಿಷೆಯ ಪ್ರಾಮುಖ್ಯವಿದ್ದುದು ಏಕೆಂದರೆ ಇದು ನಡೆಯುತ್ತಿದ್ದ ಕಾಲದಲ್ಲಿ ವ್ಯಾಪಾರದ ವಾಡಿಕೆಯ ದಿಗ್ಬಂಧನ ತೆಗೆಯುತ್ತಿದ್ದುದರಿಂದ. ದಿಗ್ಬಂಧನವೇ ಇಲ್ಲದ ವ್ಯಾಪಾರ ವ್ಯವಸ್ಥೆ ಬೆಳೆದಾಗ ಪರಿಷೆಗೆ ಸ್ಥಾನವೆಲ್ಲಿ? ಹಳೆಯ ಪೇಟೆ ನಶಿಸಿ ಅದರ ಸ್ಥಾನದಲ್ಲಿ ಆಧುನಿಕ ವಿನಿಮಯ ವ್ಯವಸ್ಥೆ ಬೆಳೆದುಕೊಂಡಿತು.

ಆಂಟ್‌ವರ್ಪು ಇಂಥ ಮುಖ್ಯ ವಾಣಿಜ್ಯ ಪ್ರಾಮುಖ್ಯ ಪಡೆದಿದ್ದುದರಿಂದ ಇದು ಹಣ ಕಾಸಿನ ಕೇಂದ್ರವೂ ಆಯಿತು. ಇಲ್ಲಿ ಜರ್ಮನಿಯ, ಇಟಲಿಯ ಮಹಾ ಧನಸಂಸ್ಥೆಗಳು ತಮ್ಮ ಕೇಂದ್ರ ಕೋಠಿಗಳನ್ನು ತೆರೆದುವು. ವಾಸ್ತವವಾಗಿ ವ್ಯಾಪಾರಕ್ಕಿಂತ ಹಣದ ವಹಿವಾಟು ತುಂಬಾ ಹೆಚ್ಚಿತು. ಹಣದ ಆಧುನಿಕ ಪತ್ರಗಳ—ದಸ್ತೈವಜುಗಳ—ದಿನಬಳಕೆ ಆರಂಭವಾದುದು ಈ ಕಾಲದಲ್ಲಿಯೇ. ವಸ್ತುವಿನ ವಿನಿಮಯದಲ್ಲಿ ಹಣದ ಪಾವತಿ ಸುಲಭವೂ ತ್ವರಿತವೂ ಆಗುವಂತೆ ಮಾಡುವ ಉಪಾಯಗಳನ್ನು ಈ ಕಾಲದ ಬ್ಯಾಂಕರುಗಳು ಕಂಡು ಹಿಡಿದರು. ಒಂದು ದೇಶದ—ಉದಾಹರಣೆಗೆ ಇಂಗ್ಲೆಂಡಿನ—ವರ್ತಕ ದೂರದೇಶದ—ಇಟಲಿಯ—ವರ್ತಕನಿಂದ ಪದಾರ್ಥ ಕೊಂಡರೆ ಇದಕ್ಕೆ ಪ್ರತಿಯಾಗಿ ಅವನು ಹಣ ಕೊಡುವುದು ಹೇಗೆ? ಇಂಗ್ಲಿಷ್ ವರ್ತಕ ಇಟಲಿಯವನಿಗೆ ಚಿನ್ನ ಅಥವಾ ಬೆಳ್ಳಿ ಕಳಿಸಬೇಕೆ? ಇದು ಅಪಾಯಕರ, ವೆಚ್ಚಕರ. ಹೀಗೆ ಚಿನ್ನ ಕಳಿಸುವುದನ್ನು ತಪ್ಪಿಸುವ ಒಂದು ಉದ್ದರಿ ವ್ಯವಸ್ಥೆಯ—ಪತ್ತಿನ ವ್ಯವಸ್ಥೆಯ—ರಚನೆ ಅಗತ್ಯವಾಯಿತು. ಇಂಗ್ಲಿಷ್ ವರ್ತಕ ಇಟಲಿಯ ವರ್ತಕನಿಗೆ ತೆರಬೇಕಾದುದಕ್ಕೆ ಒಂದು ಕಾಗದದ ಚೂರನ್ನು—ತಾನು ಕೊಂಡ ಪದಾರ್ಥಕ್ಕೆ ಇಷ್ಟು ಹಣ ಕೊಡಬೇಕಾಗಿದೆಯೆಂದು, ತಾನು ಇಷ್ಟಕ್ಕೆ ಋಣಿಯೆಂದು—ಬರೆದುಕೊಡುತ್ತಿದ್ದ. ಇಂಥದೇ ಇನ್ನೊಂದು ವ್ಯವಹಾರದಲ್ಲಿ ಇಟಲಿಯವನು ಆಂಗ್ಲನಿಂದ ಪದಾರ್ಥ ಕೊಂಡಾಗ, ಇಟಲಿಯವನು ಇಂಗ್ಲಿಷನಿಗೆ ಹಣ ಕೊಡಬೇಕಾಗಿದೆಯೆಂದು ಹೀಗೆಯೆ ಬರೆದುಕೊಡುತ್ತಿದ್ದ. ಈ ಎರಡು ದೇಶಗಳ ಪರಸ್ಪರ ಋಣವನ್ನು ಮಾರುವೆ ಮಾಡುವ—ಉತ್ತಾರ ಹಾಕುವ—ಒಂದು ಕೇಂದ್ರ ತೀರುವೆ ಮನೆ ಇದ್ದರೆ ತೀರಿತು. ಇಂಗ್ಲೆಂಡಿನಿಂದ ಇಟಲಿಗೂ ಇಟಲಿಯಿಂದ ಇಂಗ್ಲೆಂಡಿಗೂ ಇಷ್ಟೊಂದು ದೂರ ಹಣ ಕಳಿಸದೆ ಈ ಪರಸ್ಪರ ಋಣ ತೀರುವೆಯಾಗುತ್ತದೆ. ಇಂಥ ಉಪಾಯವನ್ನು ಹಲವು ಶತಮಾನಗಳ ಹಿಂದೆ ಕಂಡು ಹಿಡಿಯಲಾಯಿತು. ಹದಿನಾರನೆಯ ಶತಮಾನದ ಲೇಖಕನೊಬ್ಬ ಇದನ್ನು ಹೀಗೆ ವರ್ಣಿಸುತ್ತಾನೆ: "ಲಯನ್ಸಿನ (ಆಂಟ್‌ವರ್ಪಿನಂತೆ ಇದೂ ಒಂದು ಹಣಕಾಸಿನ ಕೇಂದ್ರ) ವರ್ತಕರಿಗೂ ಇತರ ದೇಶಗಳ ಹಾಗೂ ನಗರಗಳ ವರ್ತಕರಿಗೂ ಹಣ ಕೊಡಬೇಕಾದರೆ ಇದು ಪತ್ರಗಳ ಮೂಲಕ ಪಾವತಿಯಾಗುತ್ತದೆ. 'ನೀನು ನನಗೆ ಇಷ್ಟು ಕೊಡಬೇಕು; ನಾನು ನಿನಗೆ ಇಷ್ಟು ಕೊಡಬೇಕು; ಕೊಡಬೇಕಾದುದನ್ನೂ ಬರಬೇಕಾದುದನ್ನೂ ಒಂದಕ್ಕೊಂದು ವಜಾ ಮಾಡೋಣ. ಇದು ಈ ಪತ್ರಗಳ ಫಲಿತಾಂಶ.

ಈ ವ್ಯವಹಾರಗಳಲ್ಲಿ ಹಣವನ್ನೇ ತೆರಬೇಕಾದ ಸಂದರ್ಭ ಬಹು ಅಪುರೂಪ."[1]

ವಾಸ್ತವವಾಗಿ ಹಣದ ರವಾನೆಯಿಲ್ಲದೆ ವ್ಯವಹಾರ ಮಾಡುವ ಈ ಸೋಜಿಗವನ್ನು ಕ್ಯಾಂಟಿಲಾನ್ ಎಂಬವನೂ ವರ್ಣಿಸಿದ್ದಾನೆ: "ಇಂಗ್ಲೆಂಡು ಫ್ರಾನ್ಸಿನೊಡನೆ ಮಾಡಿದ ವ್ಯಾಪಾರದಲ್ಲಿ ಅಂತಿಮವಾಗಿ ಅದು ಫ್ರಾನ್ಸಿಗೆ ಒಂದು ಲಕ್ಷ ಔನ್ಸು ಬೆಳ್ಳಿ ಕೊಡಬೇಕಾದರೆ, ಫ್ರಾನ್ಸು ಹಾಲೆಂಡಿಗೆ ಕೊಡಬೇಕಾದ ವ್ಯಾಪಾರದ ಶಿಲ್ಕೂ ಒಂದು ಲಕ್ಷ ಔನ್ಸು ಬೆಳ್ಳಿ ಆದರೆ, ಹೀಗೆಯೇ ಹಾಲೆಂಡು ಇಂಗ್ಲೆಂಡಿಗೆ ಒಂದು ಲಕ್ಷ ಔನ್ಸು ವ್ಯಾಪಾರದ ಶಿಲ್ಕು ತೆರಬೇಕಾದರೆ, ಯಾರು ಯಾರಿಗೂ ಬೆಳ್ಳಿ ಕಳಿಸದೆಯೇ, ಮೂರುನೆ ಹುಂಡಿಗಳ ಮೂಲಕ, ಇವನ್ನು ಪರಸ್ಪರವಾಗಿ ತೊಡೆದು ಹಾಕಬಹುದು. ಈ ಕೆಲಸ ಮಾಡುವವರು ಈ ದೇಶಗಳ ಬ್ಯಾಂಕರುಗಳು."[2]

ಪ್ರತ್ಯೇಕವಾಗಿ ನೋಡಿದುದಾದರೆ ಇದೆಲ್ಲಾ ಅಷ್ಟು ಮುಖ್ಯ ಸಂಗತಿಯಲ್ಲವೆನಿಸಬಹುದು. ವಿಸ್ತಾರಗೊಳ್ಳುತ್ತಿದ್ದ ವಾಣಿಜ್ಯದ ಅಗತ್ಯಗಳನ್ನು ಪೂರೈಸಲು ಹಣದ ಸಾಧನವನ್ನು ಹದಿನಾರನೆಯ ಶತಮಾನದ ವರ್ತಕರೂ ಬ್ಯಾಂಕರುಗಳೂ ಕಂಡು ಹಿಡಿದಿದ್ದರು—ಎಂಬ ಕಾರಣದಿಂದ ಈ ಪ್ರಸ್ತಾಪವೆಲ್ಲ ಇಲ್ಲಿ ಮುಖ್ಯವೆನಿಸುತ್ತದೆ. ಆಗಿನಿಂದ ಈಗಿನವರೆಗೆ ಹಲವು ಹೊಸ ಹಾಗೂ ಉತ್ತಮ ವ್ಯವಸ್ಥೆಗಳು ಜಾರಿಗೆ ಬಂದಿವೆ, ನಿಜ. ಆದರೆ ಹಲವು ಶತಮಾನಗಳ ಹಿಂದೆಯೇ ಇವೆಲ್ಲದರ ಅಸ್ತಿಭಾರ ರಚನೆ ಆಗಿತ್ತು.

ಅಂತೂ ಸಂಪತ್ತು ಹಿಂಡಲು ಹೊಸ ಹೊಸ ನೆಲದ ಗಳಿಕೆಯಾಗಿತ್ತು ; ವ್ಯಾಪಾರ ನಾಗಾಲೋಟದಿಂದ ಮುಂದೆ ಸಾಗುತ್ತಿತ್ತು. ವರ್ತಕರೂ ಬ್ಯಾಂಕರುಗಳೂ ಐಶ್ವರ್ಯವಂತರಾಗುತ್ತಿದ್ದರು. ಈ ಎಲ್ಲ ಲಕ್ಷಣಗಳಿಂದ ಈ ಯುಗವನ್ನು ಏಳಿಗೆಯ, ಮಾನವ ಸೌಖ್ಯದ ಸುವರ್ಣ ಯುಗವೆಂದು ಕರೆಯಬಹುದಲ್ಲವೆ? ಆದರೆ ಹೀಗೆ ಕರೆಯುವುದು ತಪ್ಪು.

---

[1] Levasseur, *op. cit.*, vol. II, p. 45.

[2] Cantillon, *op. cit.*, p. 257.

## ೯. "…. ಬಡವ, ಭಿಕ್ಷುಕ, ಕಳ್ಳ"

ಫಗ್ಗರ್ ಸಂಸ್ಥೆಯ ಯುಗವೇ ಭಿಕ್ಷುಕರ ಯುಗವೂ ಆಗಿತ್ತು. ಹದಿನಾರು ಹದಿನೇಳನೆಯ ಶತಮಾನಗಳಲ್ಲಿದ್ದ ಭಿಕ್ಷುಕರ ಸಂಖ್ಯೆ ಅಚ್ಚರಿಗೊಳಿಸುತ್ತದೆ. ಪ್ಯಾರಿಸಿನಲ್ಲಿ ೧೬೩೦ರ ಮುಂದಣ ದಶಕದಲ್ಲಿದ್ದ ಜನಸಂಖ್ಯೆಯ ಕಾಲು ಭಾಗ ಭಿಕ್ಷುಕರು. ಗ್ರಾಮಾಂತರ ಜಿಲ್ಲೆಗಳಲ್ಲೂ ಭಿಕ್ಷುಕರ ಸಂಖ್ಯೆ ಇಷ್ಟೇ ಅಧಿಕವಾಗಿತ್ತು. ಇಂಗ್ಲೆಂಡಿನಲ್ಲೂ ಪರಿಸ್ಥಿತಿ ಇಷ್ಟೇ ಹದಗೆಟ್ಟಿತ್ತು. ಹಾಲೆಂಡಿನಲ್ಲಿ ಭಿಕ್ಷುಕರು ತುಂಬಿದ್ದರು. ಹದಿನಾರನೆಯ ಶತಮಾನದ ಸ್ವಿಟ್ಜರ್ಲೆಂಡಿನಲ್ಲಿ ಭಿಕ್ಷುಕರ ಸಮಸ್ಯೆಯಂತೂ ಶೋಚನೀಯ: "ತಮ್ಮ ಮನೆಗಳನ್ನು ಮುತ್ತುತ್ತಿದ್ದ, ರಸ್ತೆ ಕಾಡುಗಳಲ್ಲಿ ತಂಡ ತಂಡವಾಗಿ ಅಲೆದಾಡುತ್ತಿದ್ದ ಭಿಕ್ಷುಕರನ್ನು ನಿವಾರಿಸುವ ಮಾರ್ಗ ಬೇರೆ ಯಾವುದೂ ಇಲ್ಲದಿದ್ದಾಗ ಅಲ್ಲಿನ ಶ್ರೀಮಂತರು ಈ ಅನಾಥರನ್ನು ಬೇಟೆಯಾಡಲು ಸಂಘ ಕಟ್ಟಿಕೊಂಡರು."[1]

ಕೆಲವರು ಅತಿಶಯವಾಗಿ ಅಭ್ಯುದಯ ಹೊಂದುತ್ತಿದ್ದ ಈ ಕಾಲದಲ್ಲಿ ಜನಸ್ತೋಮದಲ್ಲಿ ಹೀಗೆ ದುಃಖ ಸಂಕಟ ಹಬ್ಬಿರಲು ಕಾರಣವೇನು ? ಎಂದಿನಂತೆ ಯುದ್ಧ ಒಂದು ಕಾರಣ. ೧೯೧೪–೧೮ರ ಮಹಾಯುದ್ಧ ಯೂರೋಪಿನಲ್ಲಿ ಎಲ್ಲೆಲ್ಲಿ ನಡೆಯಿತೋ ಅಲ್ಲೆಲ್ಲಾ ಅನಾಹುತ ಸಂಕಟ ಶಿಖರ ಮುಟ್ಟಿತೆಂಬುದಾಗಿ ಒಂದು ಭಾವನೆ. ಆದರೆ ಹದಿನಾರು–ಹದಿನೇಳನೆಯ ಶತಮಾನಗಳ ಕಾಲದ ಯುದ್ಧಗಳು ಇನ್ನೂ ಹೆಚ್ಚು ಅನಾಹುತ ತಂದುವು. ೧೬೧೮ರಿಂದ ೧೬೪೮ರ ವರೆಗೆ ನಡೆದ ಮೂವತ್ತು ವರ್ಷಗಳ ಯುದ್ಧದಿಂದ ಜರ್ಮನಿಯಲ್ಲಾದ ಪರಿಣಾಮ ಬಹುಶಃ ಅತ್ಯಂತ ಭಯಂಕರ. "ಒಟ್ಟು ಜನಸಂಖ್ಯೆಯ ಮೂರರಲ್ಲೊಂದು ಪಾಲು ನಿರ್ನಾಮವಾಯಿತು. ಸಾಯದೆ ಉಳಿದುಕೊಂಡವರ ಸಂಕಟ ಕರುಣಾಜನಕ. ಈ ಚಕ್ರಾಧಿಪತ್ಯದ ಆರರಲ್ಲೈದು ಪಾಲು ಹಳ್ಳಿಗಳು ನಾಶವಾದುವು. ಜೋಡಿ ಗ್ರಾಮವೊಂದು ಇಪ್ಪತ್ತೆಂಟು ಸಾರಿ ಕೊಳ್ಳೆಗೆ ಈಡಾಯಿತು. ಉತ್ತರದಲ್ಲಿ ಸುಮಾರು ಮೂರನೇ ಒಂದು ಭಾಗ ಬೇಸಾಯದ ನೆಲ ಬೀಳು ಬಿಟ್ಟಿದ್ದರಿಂದ ಸ್ಯಾಕ್ಸೊನಿಯಲ್ಲಿ ತೋಳಗಳು ಹಿಂಡು ಹಿಂಡಾಗಿ ಅಲೆದಾಡುತ್ತಿದ್ದುವು."[2]

ಜನರ ತೀವ್ರ ದುಃಖ ಸಂಕಟಗಳಿಗೆ ಯುದ್ಧ ಹೀಗೆ ಒಂದು ಕಾರಣವಾಗಿತ್ತು. ಇನ್ನೂ ಒಂದು ಕಾರಣವಿತ್ತು—ಅಮೆರಿಕಾ. ಭಿಕ್ಷುಕರ ಯುಗದ ನಿರ್ಮಾಣದಲ್ಲಿ ಈ ಹೊಸ ಜಗತ್ತೂ ಪಾತ್ರ ವಹಿಸಿತ್ತು. ಈ ಪಾತ್ರ ಪ್ರತ್ಯಕ್ಷವಲ್ಲ, ಪರೋಕ್ಷ; ಆದರೂ ಮುಖ್ಯ. ಇದು ಹೀಗೆ :

ಇಂಗ್ಲೆಂಡ್ ಹಾಲೆಂಡ್ ಫ್ರಾನ್ಸ್‌ಗಳ ವರ್ತಕರು ವಾಣಿಜ್ಯದಿಂದ ಅಗಾಧ ಐಶ್ವರ್ಯ

---

[1] G. Renard and G. Weulersse, *Lift and Work in Modern Europe* (*Fifteenth to Eighteenth Centuries*), p. 287. Alfred A. Knopf, N.Y., 1926.

[2] Quoted in Hayes, *op.cit.*, p. 229.

ಸಂಪಾದಿಸುತ್ತಿದ್ದಾಗ ಸ್ಪೈಯ್ನಿನ ಜನ ತಮ್ಮ ಭಂಡಾರ ತುಂಬಿಕೊಳ್ಳಲು ಸುಲಭೋಪಾಯ ವೊಂದನ್ನು ಕಂಡು ಹಿಡಿದಿದ್ದರು. ವ್ಯಾಪಾರದ ಮೂಲಕ ಲಾಭ ತರುವ ಇಂಡೀಸ್ ದ್ವೀಪ ಗಳಿಗೆ ಸ್ಪೈಯ್ನಿನ ಯಾತ್ರಿಕರು ಮಾರ್ಗ ಕಂಡುಹಿಡಿಯುವ ಯತ್ನದಲ್ಲಿ ಸಫಲರಾಗಲಿಲ್ಲ ವಾದರೂ ಅವರು ಉತ್ತರ ದಕ್ಷಿಣ ಅಮೆರಿಕಾ ಖಂಡಗಳ ಮೇಲೆ ಎಡವಿ ಬಿದ್ದಿದ್ದರು. ಇಲ್ಲಿನ ಮೆಕ್ಸಿಕೋ ಪೆರೂಗಳಲ್ಲಿ ಅಮೂಲ್ಯವಾದ ಚಿನ್ನ ಬೆಳ್ಳಿಯ ಗಣಿಗಳಿದ್ದುವು. ಕದ್ದಷ್ಟೆಲ್ಲಾ ಇವರದೇ ಎಂಬಷ್ಟು ಈ ಲೋಹಗಳಿದ್ದುವು. ಸ್ಪೈಯ್ನ್ ದೇಶದ ಹಡಗುಗಳ ಸಾಮಾನು ಕುಳಿ ಗಳಲ್ಲಿ ಲಾಭಕ್ಕೆ ಮಾರಬೇಕಾದ ಸರಕು ತುಂಬಿರಲಿಲ್ಲ, ಅವುಗಳ ತುಂಬಾ ಚಿನ್ನ-ಬೆಳ್ಳಿ, ಮುಖ್ಯವಾಗಿ ಬೆಳ್ಳಿ. ಸ್ಯಾಕ್ಸೊನಿ ಆಸ್ಟ್ರಿಯಾ ಗಣಿಗಳಲ್ಲಿ ಹೆಚ್ಚು ಪ್ರಮಾಣದಲ್ಲಿ ಬೆಳ್ಳಿ ಉತ್ಪಾದನೆಯಾಗುತ್ತಿತ್ತು. ಆದರೆ ಅಮೆರಿಕಾಗಳಲ್ಲಿ ಸ್ಪೈಯ್ನಿಗೆ ಸೇರಿದ್ದ ಪ್ರದೇಶಗಳಿಂದ ಹರಿದು ಬರುತ್ತಿದ್ದ ಬೆಳ್ಳಿಯ ಹೊಳೆಯ ಮುಂದೆ ಇದು ಬಹು ಅಲ್ಪವೆನಿಸಿತು. ೧೫೪೫ರಿಂದ ೧೬೦೦ರ ವರೆಗೆ ಐದು ವರ್ಷಗಳಲ್ಲಿ ಪ್ರತಿ ವರ್ಷವೂ ಅಮೆರಿಕದ ಗಣಿಗಳಿಂದ ಸುಮಾರು ಇಪ್ಪತ್ತು ಲಕ್ಷ ಪೌಂಡು ಬೆಲೆಯ ಲೋಹ ಬರುತ್ತಿತ್ತು. ಒಂದು ಗಣಿಯ ಸಂಪತ್ತೆಲ್ಲಾ ಇನ್ನೇನು ಮುಗಿಯಿತು—ಎನ್ನುವಷ್ಟರಲ್ಲಿ ಇನ್ನೊಂದು ಗಣಿಯ ಪತ್ತೆಯಾಗಿ ಐಶ್ವರ್ಯದ ಹೊಳೆ ಅವ್ಯಾಹತವಾಗಿ ಮುಂದುವರಿಯುತ್ತಿತ್ತು. ೧೫೦೦ರಿಂದ ೧೫೨೦ರ ವರೆಗಿನ ಕಾಲ ದಲ್ಲಿ ಸ್ಪೈಯ್ನಿನ ಟಂಕಸಾಲೆ ಕೇವಲ ೪೫೦೦೦ ಕಿಲೋಗ್ರಾಮಿನಷ್ಟು ಬೆಳ್ಳಿಯ ನಾಣ್ಯ ಗಳನ್ನು ಮುದ್ರಿಸಿತು. ೧೫೪೫ರಿಂದ ೧೫೬೦ರ ವರೆಗಿನ ಹದಿನೈದು ವರ್ಷಗಳ ಕಾಲದಲ್ಲಿ ಅದರ ಉತ್ಪಾದನೆ ಆರರಷ್ಟು—ಎಂದರೆ ೨೭೦೦೦೦ ಕಿಲೋಗ್ರಾಮಿಗೆ—ಏರಿತು. ೧೫೮೦ ರಿಂದ ೧೬೦೦ರ ವರೆಗಿನ ಇಪ್ಪತ್ತು ವರ್ಷಗಳ ಕಾಲದಲ್ಲಿ ಬೆಳ್ಳಿಯ ಉತ್ಪಾದನೆ ೩೪೦,೦೦೦ ಕಿಲೋಗ್ರಾಮಿಗೆ ಹೆಚ್ಚಿತು—ಎಂದರೆ ೧೫೨೦ರ ಉತ್ಪಾದನೆಯ ಎಂಟರಷ್ಟು!

| ವರ್ಷ | ಸ್ಪೈಯ್ನಿನ ಟಂಕಸಾಲೆಯ ಬೆಳ್ಳಿಯ ಉತ್ಪಾದನೆ |
|---|---|
| ೧೫೦೦—೧೫೨೦ | — |
| ೧೫೪೫—೧೫೬೦ | — — — — — — |
| ೧೫೮೦—೧೬೦೦ | — — — — — — — — |

ಅಮೆರಿಕದಿಂದ ಸ್ಪೈಯ್ನಿಗೆ ಬಂದ ಬೆಳ್ಳಿಯ ಈ ಅಗಾಧ ಪ್ರಮಾಣ ಅಲ್ಲಿಯೇ ಉಳಿ ಯಿತೆ? ಖಂಡಿತ ಇಲ್ಲ. ಅದು ಸ್ಪೈಯ್ನಿಗೆ ಬಂದಷ್ಟೇ ಶೀಘ್ರವಾಗಿ ಯೂರೋಪಿನಲ್ಲೆಲ್ಲಾ ಪ್ರಸರಿಸಿತು. ಒಂದಾದ ಮೇಲೊಂದರಂತೆ ಅರ್ಥಹೀನ ಕದನಗಳ ಸಾಲನ್ನೇ ನಡಸಿದರು ಸ್ಪೈಯ್ನಿನ ದೊರೆಗಳು. ಇವಕ್ಕೆ ಬೇಕಾದ ವಸ್ತು ಹಾಗೂ ಸಿಪಾಯಿಗಳಿಗಾಗಿ ಹಣ ತೆತ್ತರು. ಸ್ಪೈಯ್ನಿನ ಜನ ಮಾರಾಟ ಮಾಡುತ್ತಿದ್ದುದಕ್ಕಿಂತ ಹೆಚ್ಚು ಸರಕು ಕೊಳ್ಳುತ್ತಿದ್ದರು. (ಬೆಳ್ಳಿ ಯನ್ನೇ ಅವರು ತಿನ್ನಲಾಗುತ್ತಿರಲಿಲ್ಲ. ಈ ಸರಕು ಮಾರಿದ ವರ್ತಕರ ಜೇಬಿಗೆ ಇವರ ಕೈ ಬೆರಳ ಸಂದಿಯಿಂದ ಹಣ ಹರಿದುಹೋಯಿತು.)

ಹಿಂದೆಂದೂ ಕಾಣದಷ್ಟು ಅಧಿಕ ಪ್ರಮಾಣದಲ್ಲಿ ಯೂರೋಪಿಗೆ ಬೆಳ್ಳಿಯ ಹೊಳೆ

ಹರಿದುದುರ ಪರಿಣಾಮವೇನಾಯಿತು? ಬೆಲೆಗಳು ಕೋಲಾಹಲಕರ ರೀತಿಯಲ್ಲಿ ಹೆಚ್ಚಾದುವು. ಅಲ್ಲಿ ಇಲ್ಲಿ ಒಂದೊಂದು ಪದಾರ್ಥದ ಬೆಲೆ ಒಂದೆರಡು ಪೆನ್ನಿ ಹೆಚ್ಚಲಿಲ್ಲ. ಪ್ರತಿಯೊಂದು ಪದಾರ್ಥದ ಬೆಲೆಯೂ ಕಣ್ಣು ಕೋರೈಸುವಂತೆ ಹೆಚ್ಚಿತು. ಪ್ರಪಂಚ ಚರಿತ್ರೆಯ ಕಳೆದ ಒಂದು ಸಾವಿರ ವರ್ಷದಲ್ಲಿ ಈ ರೀತಿ ಬೆಲೆಗಳಲ್ಲಿ ನಿಜವಾದ ಕ್ರಾಂತಿ ಸಂಭವಿಸಿರುವುದು ಕೇವಲ ಮೂರು ನಾಲ್ಕು ಬಾರಿ. ೧೬೦೦ರಲ್ಲಿದ್ದ ಬೆಲೆಗಳು ೧೫೦೦ರಲ್ಲಿದ್ದ ಬೆಲೆಗಳ ಎರಡರಷ್ಟಕ್ಕಿಂತ ಹೆಚ್ಚಿದ್ದುವು. ೧೭೦೦ರ ವೇಳೆಗೆ ಅವು ಇನ್ನೂ ಹೆಚ್ಚಿದುವು. ಬೆಲೆಗಳಲ್ಲಿ ಕ್ರಾಂತಿ ಆರಂಭವಾದಾಗ ಇದ್ದುದರ ಮೂರೂವರೆಯಷ್ಟಕ್ಕೂ ಅಧಿಕವಾಗಿ ಬೆಲೆಗಳು ಏರಿದ್ದುವು.

ನಾಣ್ಯ ಕುಲಗೆಡಿಸುವುದರಿಂದ ಹಣದ ಮೌಲ್ಯ ಹೇಗೆ ಕಡಮೆಯಾಗುವುದೆಂಬುದನ್ನು ನೋಡಿದ್ದೇವೆ. ಪ್ರಸಾರದಲ್ಲಿರುವ ಹಣದ ಪ್ರಮಾಣ ಹೆಚ್ಚಾದಾಗಲೂ ಇದೇ ಪರಿಣಾಮ. ಜನಗಳು ಬಯಸುವ ಇತರ ಪದಾರ್ಥಗಳಂತೆಯೇ ಹಣವೂ ಕೂಡ. ಇತರ ಪದಾರ್ಥಗಳಂತೆಯೇ ಇದರ ಸರಬರಾಯಿಯೂ ಕೂಡ ಪರಿಮಿತವಾದದ್ದು. ನಮಗೆಲ್ಲಾ ಗಾಳಿ ತುಂಬಾ ಅಗತ್ಯ. ಆದರೆ ಇದು ಅಪಾರವಾಗಿ ಲಭಿಸುತ್ತದೆ. ಆದ್ದರಿಂದ ಇದಕ್ಕೆ ನಾವು ಏನೂ ಹಣ ತೆರಬೇಕಾಗಿಲ್ಲ. ಆರ್ಥಿಕವಾಗಿ ಇದಕ್ಕೆ ಮೌಲ್ಯವಿಲ್ಲ. ನೀರಿನ ವಿಚಾರ ತೆಗೆದುಕೊಳ್ಳಿ. ನೀರನ್ನು ನಾವು ಕೊಳ್ಳುವುದಿಲ್ಲ, ಮಾರುವುದಿಲ್ಲ. ಆದರೆ ನೀರಿಲ್ಲದ ಉಷ್ಣ ಪ್ರದೇಶದಲ್ಲಿ, ಮರಳುಗಾಡಿನಲ್ಲಿ, ನೀರಿನ ಮಾರಾಟವಾಗುತ್ತದೆ. ಏಕೆಂದರೆ ಅದಕ್ಕೆ ಬೇಡಿಕೆ ಇರುವ ಪ್ರಮಾಣದಲ್ಲಿ ಅದರ ಸರಬರಾಯಿ ಆಗುವುದಿಲ್ಲ. ಪದಾರ್ಥಗಳ ಅದಲುಬದಲಿನ ವ್ಯವಸ್ಥೆ ಇದ್ದ ಕಾಲದ ಒಂದು ಉದಾಹರಣೆ ತೆಗೆದುಕೊಳ್ಳೋಣ. ಒಂದು ವರ್ಷದಲ್ಲಿ ಮದ್ಯದ ಉತ್ಪಾದನೆ ಹೆಚ್ಚಾಗಿದ್ದು ಗೋಧಿ ಬೆಳೆ ಕಡಮೆಯಾದರೆ ಏನಾಗುತ್ತದೆ? ಹಿಂದೆ ಪಡೆಯುತ್ತಿದ್ದಷ್ಟೇ ಗೋಧಿ ಪಡೆಯಲು ಹಿಂದೆ ಕೊಡುತ್ತಿದ್ದುದಕ್ಕಿಂತ ಹೆಚ್ಚು ಮದ್ಯ ಕೊಡಬೇಕಾಗುತ್ತದೆ. ಇದೇ ತತ್ವವನ್ನು ಹಣಕ್ಕೂ ಅನ್ವಯಿಸಬಹುದು. ಹಣಕ್ಕೆ ಪ್ರತಿಯಾಗಿ ಪಡೆಯತಕ್ಕ ಪದಾರ್ಥಗಳಿಗಿಂತ ಹಣದ ಸರಬರಾಯಿ ಹೆಚ್ಚಿದಾಗ, ಈ ಪದಾರ್ಥಗಳ ದೃಷ್ಟಿಯಿಂದ ಹಣದ ಮೌಲ್ಯ ಕಡಮೆಯಾಗುತ್ತದೆ. ಹಣದ ಮೌಲ್ಯ ಇಳಿಯಿತು, ಎಂದರೆ ಬೆಲೆಗಳು ಹೆಚ್ಚಿದುವು, ಎಂದರ್ಥ. ಹಣದ ಮೌಲ್ಯ ಹೆಚ್ಚಿತೆಂದರೆ ಬೆಲೆಗಳು ಇಳಿದಂತೆ. ಪ್ರಸಾರದಲ್ಲಿರುವ ಹಣದ ಪ್ರಮಾಣ ಹೆಚ್ಚು ಅಥವಾ ಕಡಮೆಯಾದಂತೆಲ್ಲ ಹೀಗೆ ಬೆಲೆಗಳು ವ್ಯತ್ಯಾಸವಾಗುತ್ತವೆ.

ಹೀಗೆ ಯೂರೋಪಿಗೆ ಅಮೂಲ್ಯ ಲೋಹಗಳ ಪ್ರವಾಹ ಹರಿದಾಗ ಬೆಲೆಗಳು ಏರಿದುವು, ವಿಷದಂತೆ ಏರಿದುವು! ಜನರ ದಿನನಿತ್ಯದ ಸಂಭಾಷಣೆಗೆ ಇದೇ ಸಾಮಗ್ರಿಯಾಯಿತು. "ನನಗೆ ಇನ್ನೂ ಜ್ಞಾಪಕ ಇದೆ, ಸ್ವಾಮಿ. ಈಗ ಕೊಡುವುದರ ಕಾಲು ಬೆಲೆಗೆ ಬೆಣ್ಣೆ ಸಿಕ್ಕುತಾ ಇತ್ತು. ಇನ್ನು ಮೊಟ್ಟೆಯೋ—ಪುಕ್ಕಟೆಯಾಗೇ ಸಿಕ್ಕುವುದೋ ಎನ್ನುವಷ್ಟು ಅಗ್ಗವಾಗಿತ್ತು. ಅದು ಒಳ್ಳೆಯ ಕಾಲ." ಇದು ದಿನ ನಿತ್ಯದ ಸಂಭಾಷಣೆಯಾಗಿತ್ತು.

ಅಮೆರಿಕದ ಸಂಪತ್ತು ಮೊದಲು ಸ್ಪೈನ್ನಿಗೆ ಬಂತು. ಬೆಲೆಗಳು ನೆಗೆದದ್ದು ಮೊದಲು

ಅಲ್ಲಿ. ನಿಕೊಲಾಸ್ ಕ್ಲೇನಾರ್ಟ್ ಎಂಬ ಡಚ್ಚನೊಬ್ಬ ಸ್ಪೈಯ್ನ್ ಪೋರ್ಚುಗಲ್‌ಗಳಲ್ಲಿ ೧೫೩೬ ರಲ್ಲಿ ಸಂಚರಿಸುತ್ತಿದ್ದಾಗ ಅಲ್ಲಿನ ಏರು ಬೆಲೆಗಳನ್ನು ನೋಡಿ ಅವನ ಹೃದಯ ಕುಸಿಯಿತು. ಒಂದು ಕ್ಷೌರ ಹೊಡೆಯಿಸಬೇಕಾದರೆ ಅಗಾಧ ಹಣ ತೆರಬೇಕಾಗಿತ್ತಂತೆ. "ಸಾಲಮಾಂಕಾ ದಲ್ಲಿ ಒಂದು ಕ್ಷೌರಕ್ಕೆ ಒಂದು ಬೆಳ್ಳಿಯ ನಾಣ್ಯ ಕೊಡಬೇಕು. ಫ್ಲಾಂಡರ್ಸ್‌ಗಿಂತ ಸ್ಪೈಯ್ನ್‌ನಲ್ಲಿ ಹೆಚ್ಚು ಸಂಖ್ಯೆಯಲ್ಲಿ ದಾಡಿಧಾರಿಗಳು ಇರುವುದರಲ್ಲಿ ಏನಾಶ್ಚರ್ಯ?" ಹೀಗೆಂದು ಆತ ತನ್ನೂರಿಗೆ ಪತ್ರ ಬರೆದ.[1]

ಅಮೆರಿಕದ ಬೆಳ್ಳಿ ಸ್ಪೈಯ್ನಿನಿಂದ ಯೂರೋಪಿನಲ್ಲೆಲ್ಲಾ ಹರಡಿದಾಗ ಎಲ್ಲ ದೇಶಗಳಲ್ಲೂ ಇದೇ ಪರಿಸ್ಥಿತಿ ಏರ್ಪಟ್ಟಿತು. ಸಾಮಾನ್ಯ ಪ್ರಜೆಗೆ ಇದರ ಕಾರಣ ಗೊತ್ತಾಗಲಿಲ್ಲ. ಬೆಲೆಯ ಕ್ರಾಂತಿ ತನ್ನ ಸೀಮೆಗೆ ಮಾತ್ರವೇ ಮಿತವಾದದ್ದಲ್ಲ; ಇದು ಅಂತರರಾಷ್ಟ್ರೀಯ—ಎಂಬ ವಿಚಾರ ಅವನಿಗೆ ಗೊತ್ತಿರಲಿಲ್ಲ. ಅವನು ಸುಮ್ಮನೆ ಗೊಣಗುತ್ತಿದ್ದ. ಆಶೆಬಡಕರೇ ಇದಕ್ಕೆ ಕಾರಣವೆಂದು ಅವನು ಬಗೆದ. ಹದಿನಾರನೆಯ ಶತಮಾನದಲ್ಲಿ ಬರೆದ "ನಮ್ಮ ಇಂಗ್ಲೆಂಡಿನ ಕಲ್ಯಾಣ ಸಾಧನೆ" ಎಂಬ ಪುಸ್ತಕದಲ್ಲಿ ಅದರ ಲೇಖಕ ಈ ವಿಚಾರವನ್ನು ಪ್ರಸ್ತಾಪಿಸಿದ್ದಾನೆ. ನೆಲದ ಒಡೆಯರು ಹೆಚ್ಚು ಗೇಣಿ ಕೇಳುತ್ತಿದ್ದುದರಿಂದ ಬೆಲೆಗಳು ಹೆಚ್ಚಿವೆಯೆಂದು ರೈತರು ಆಕ್ಷೇಪಿಸುತ್ತಿದ್ದರಂತೆ. ವ್ಯವಸಾಯ ಪದಾರ್ಥಕ್ಕೆ ಹೆಚ್ಚು ಬೆಲೆ ಕೇಳುತ್ತಿರುವುದರಿಂದ ಗೇಣಿಯ ಹಣ ಹೆಚ್ಚಿದೆಯೆಂದು ನೆಲಮೊಡೆಯರು ವಾದಿಸುತ್ತಿದ್ದರಂತೆ, ಇವರ ಸಂಭಾಷಣೆ ಯನ್ನೇ ಓದಿ :

"ರೈತ—ನಿಮ್ಮದೇ ಸ್ವಾಮಿ, ತಪ್ಪು. ನಿಮ್ಮ ಜಮೀನಿಗೆ ಹೆಚ್ಚು ಹೆಚ್ಚು ಗುತ್ತಿಗೆ ಕೇಳುತಾ ಇದ್ದೀರಿ. ಇಷ್ಟೊಂದು ಗೇಣಿ ಕೊಟ್ಟು ಬದುಕಬೇಕಾದರೆ ಜಮೀನು ಉಳುವ ರೈತ ಕಾಳು ಕಡಿ ಹೆಚ್ಚು ಬೆಲೆಗೆ ಮಾರಲೇಬೇಕು.

"ಶ್ರೀಮಂತ—ರೈತರು, ನೀವು, ಮಾಡುತ್ತಾ ಇರುವುದೇನು? ಕಾಳು ಕಡಿ, ದನ, ಬಾತು, ಹಂದಿ, ಹುಂಜ, ಕೋಳಿ ಮರಿ, ಬೆಣ್ಣೆ, ಮೊಟ್ಟೆ ಇವನ್ನೆಲ್ಲಾ ಹೆಚ್ಚು ದುಡ್ಡು ಕೊಟ್ಟು ನಿಮ್ಮಿಂದ ಪಡೆಯಬೇಕು. ನಾವು ಗೇಣಿ ಹೆಚ್ಚಿಸದೆ ಏನು ಮಾಡುವುದು? ಈ ಎಂಟು ವರ್ಷದ ಹಿಂದೆ ಒಂದು ನಾಣ್ಯಕ್ಕೆ ಎಷ್ಟು ಕೊಡುತ್ತಾ ಇದ್ದಿರೋ, ಈಗ ಅದರಲ್ಲಿ ಅರ್ಧ ಕೂಡ ಕೊಡೋದಿಲ್ಲ ನೀವು. ಈ ಊರಿನಲ್ಲಿ ಯಾರು ಬೇಕಾದರೂ ಹೇಳುತ್ತಾರೆ—ಎಂಟು ವರ್ಷದ ಹಿಂದೆ ಒಂದು ಒಳ್ಳೇ ಬಾತಿಗೆ ನಾಲ್ಕು ಪೆನ್ನಿ; ಈಗ ಎಂಟು ಪೆನ್ನಿ. ಒಂದು ಕೊಬ್ಬಿದ ಹುಂಜಕ್ಕೆ ಆಗ ಮೂರು ಅಥವಾ ನಾಲ್ಕು ಪೆನ್ನಿ, ಒಂದು ಕೋಳಿಮರಿಗೆ ಒಂದು ಪೆನ್ನಿ, ಒಂದು ಕೋಳಿಗೆ ಎರಡು ಪೆನ್ನಿ. ಈಗ ಎರಡರಷ್ಟು ಬೆಲೆ ತೆರಬೇಕು ಇವಕ್ಕೆ. ಮಾಂಸದ ಮಾತು ಕೇಳಲೇ ಬೇಡಿ. ಅದು ಇವುಗಳ ಅಪ್ಪ, ಬೆಲೆಯಲ್ಲಿ."[2]

ಆರ್ಥಿಕ ತೊಂದರೆಗಳಿಗೆಲ್ಲಾ ಮನುಷ್ಯನ ಪಾಪಕೃತ್ಯಗಳೇ ಕಾರಣವೆಂದು ತಿಳಿಯು

---

[1] *La Réponse de Jean Bodin á M. de Malestroit* (1568). Nouvelle edition par H. Hauser. Colin. Paris, 1932. Introduction, p. 16.

[2] *A Discourse of the Common Weal of This Realm of England* (1581), p. 19. Edited by Elizabeth Lamond. Cambridge Univ. Press, 1893.

ವುದು ಮಧ್ಯಯುಗದ ಅಭ್ಯಾಸವಾಗಿತ್ತು. ಈ ಅಭ್ಯಾಸವನ್ನು ಬಿಟ್ಟು, ಈ ತೊಂದರೆಗಳಿಗೆ ನಿಜವಾದ ಕಾರಣವೇನೆಂಬುದನ್ನು ಬೆದಕುವ ಚಿಂತನಶೀಲರು ಈ ಕಾಲದಲ್ಲಿ ಹುಟ್ಟಿ ಕೊಂಡರು. ಜೀನ್ ಬೋಡಿನ್, ಕ್ಯಾಂಟಿಲಾನ್ ಇವರು ಪ್ರಮುಖರು. ಇದಕ್ಕೆ "ಒಳ್ಳೆಯ" ಅಥವಾ "ಕೆಟ್ಟ" ಜನರ ಪ್ರಭಾವ ಕಾರಣವಲ್ಲ. ವ್ಯಕ್ತಿ ಸಂಬಂಧವಿಲ್ಲದ ಹೃದಯ ಹೀನ ವ್ಯವಸ್ಥೆಯೇ ಇದಕ್ಕೆ ಕಾರಣ—ಎಂಬ ಸತ್ಯ ಸಂಗತಿಯನ್ನು ಇವರು ಕಂಡುಕೊಂಡರು. "ನಾವು ಈಗ ಕಾಣುತ್ತಿರುವ ಅಧಿಕ ಬೆಲೆಗೆ ಕಾರಣಗಳು ಮೂರು: ಇವುಗಳಲ್ಲಿ ಒಂದು ಬಹು ಮುಖ್ಯವಾದದ್ದು. ಇದೊಂದೇ ಕಾರಣವೆಂದು ಬೇಕಾದರೂ ಹೇಳಬಹುದು. ಚಿನ್ನ ಬೆಳ್ಳಿ ಧಾರಾಳವಾಗಿರುವುದೇ ಈ ಕಾರಣ. (ಈ ಕಾರಣವನ್ನು ಯಾರೂ ಇದುವರೆಗೂ ಕೊಟ್ಟಿಲ್ಲ.) ಕಳೆದ ನಾನೂರು ವರ್ಷಗಳಲ್ಲಿ ಯಾವಾಗಲೂ ಇಲ್ಲದಷ್ಟು ಅಧಿಕ ಪ್ರಮಾಣ ದಲ್ಲಿ ಈ ಲೋಹ ಇಂದು ಪ್ರಸಾರವಾಗಿದೆ...."[1] ಈ ಮಾತನ್ನು ಬೋಡಿನ್ ಹದಿನಾರನೆಯ ಶತಮಾನದ ಉತ್ತರಾರ್ಧದಲ್ಲಿ ಬರೆದ.

ಬೋಡಿನ್ ಈ ಮಾತು ಬರೆದ ಮೇಲೆ ಚಿನ್ನ ಬೆಳ್ಳಿಯ ಪ್ರವಾಹಕ್ಕೂ ಅಧಿಕ ಬೆಲೆಗೂ ಸಂಬಂಧವಿದೆಯೆಂಬ ವಿಚಾರ ಇತರರ ಮನಸ್ಸನ್ನೂ ಆವರಿಸಿತು. "ಇಂಗ್ಲೆಂಡಿನ ಪ್ರಜಾ ಸಮುದಾಯದಲ್ಲಿ ಹಬ್ಬಿರುವ ವ್ರಣದ ಪರಿಶೀಲನೆ," ಎಂಬ ಪುಸ್ತಕವೊಂದನ್ನು ಗೆರ್‍ರಾರ್ಡ್ ಡೀ ಮಾಲಿಸೆನ್ ಎಂಬ ಒಬ್ಬ ವರ್ತಕ ೧೬೦೧ರಲ್ಲಿ ಬರೆದ. "....ಹೆಚ್ಚು ಹಣದಿಂದ ಅಧಿಕ ಬೆಲೆ ಸಾಮಾನ್ಯ. ಹಣದ ಅಭಾವದಿಂದ ಬೆಲೆ ಇಳಿಯುತ್ತದೆ....ಎಂದರೆ ಹಣದ ಅತಿ ಅಥವಾ ಮಿತಿಗೆ ತಕ್ಕಂತೆ ಪದಾರ್ಥದ ಬೆಲೆ ಹೆಚ್ಚು ಅಥವಾ ಕಡಮೆ ಆಗುತ್ತದೆ. ಪಶ್ಚಿಮ ಇಂಡೀಸ್ ನಿಂದ ಕ್ರಿಸ್ತ ಜಗತ್ತಿಗೆ ಈಚಿನ ವರ್ಷಗಳಲ್ಲಿ ಬಂದಿರುವ ಅಗಾಧ ಹಣ ಹಾಗೂ ಲೋಹ ದಿಂದ ಎಲ್ಲ ಬೆಲೆಗಳು ಹೆಚ್ಚಿವೆ." ಹೀಗೆಂದು ಆತ ಈ ಪುಸ್ತಕದಲ್ಲಿ ಬರೆದ.[2]

ಹದಿನಾರು ಹದಿನೇಳನೆಯ ಶತಮಾನಗಳಲ್ಲಿ ತೀವ್ರವಾದ ವಿವಾದಗಳಿಗೆ ಕಾರಣವಾಗಿದ್ದ ಈ ಅಂಶ ಹದಿನೆಂಟನೆಯ ಶತಮಾನದ ವೇಳೆಗೆ ಸರ್ವ ಜನ ವಿದಿತವಾಯಿತು. ಕ್ಯಾಂಟಿ ಲಾನ್ ಹೇಳುವುದನ್ನು ಕೇಳಿ: "ಚಿನ್ನ ಬೆಳ್ಳಿಗಳ ಗಣಿಗಳು ಪತ್ತೆಯಾಗಿ....ಧಾರಾಳವಾಗಿ ಇವನ್ನು ನೆಲದಿಂದ ತೆಗೆದಾಗ....ಈ ಹಣವೆಲ್ಲ ಪ್ರಸಾರಕ್ಕೆ ಬರುತ್ತದೆ. ಅದನ್ನು ಸಾಲವಾಗಿ ಕೊಡಲಿ, ವೆಚ್ಚ ಮಾಡಲಿ, ಅದು ಮುಖ್ಯವಲ್ಲ. ಹೀಗೆ ಈ ಹಣ ಎಲ್ಲೆಲ್ಲಿ ಪ್ರಸಾರವಾಗುತ್ತ ದೆಯೋ ಅಲ್ಲೆಲ್ಲ ಪದಾರ್ಥಗಳ ಬೆಲೆ ಹೆಚ್ಚುವುದು ಖಂಡಿತ....ಹಣದ ಅತಿ ಪ್ರಸಾರದಿಂದ ....ಪ್ರತಿಯೊಂದು ಪದಾರ್ಥದ ಬೆಲೆಯೂ ಹೆಚ್ಚುವುದೆಂಬುದನ್ನು ಎಲ್ಲರೂ ಒಪ್ಪುವರು. ಕಳೆದ ಎರಡು ಶತಮಾನಗಳಲ್ಲಿ ಅಮೆರಿಕದಿಂದ ಯೂರೋಪಿಗೆ ತಂದ ಹಣದ ಅಧಿಕ ಪ್ರಮಾಣದಿಂದ ಆದ ಅನುಭವ ಈ ಮಾತನ್ನು ಸಮರ್ಥಿಸುತ್ತದೆ."[3]

ಇಂಥ ಏರುಬೆಲೆಯ ಪರಿಣಾಮಗಳೇನು ? ಇದರಿಂದ ಅನುಕೂಲ ಯಾರಿಗೆ ? ತೊಂದರೆಗೆ

---

[1] Bodin, *op. cit.*, p. 9.

[2] *Tudor Economic* Documents, *op. cit.*, vol. III, pp. 386, 387.

[3] Cantillon, *op. cit.*, pp. 159, 161.

ಒಳಗಾಗುವವರು ಯಾರು? ಇವರಿಂದ ಲಾಭ ಪಡೆದವರು ವರ್ತಕರು. ಅವರ ವೆಚ್ಚ ಹೆಚ್ಚಿದುದು ನಿಜ. ಆದರೆ ಅವರ ವ್ಯಾಪಾರ ಇದಕ್ಕೂ ಮಿಗಿಲಾಗಿ ಹೆಚ್ಚಿತು. ಅವರು ಕೊಟ್ಟದ್ದಕ್ಕೆ ಹೆಚ್ಚು ಹಣ ಕೊಟ್ಟರು. ಆದರೆ ಅವರು ಮಾರಿದ್ದಕ್ಕೆ ಹಿಂದೆ ಹಾಕುತ್ತಿದ್ದುದಕ್ಕಿಂತ ಹೆಚ್ಚು ಬೆಲೆ ಹಾಕಿದರು. ತಮ್ಮ ವೆಚ್ಚ ಮಾತ್ರ ಹಿಂದಣ ಮಟ್ಟದಲ್ಲೇ ಇದ್ದು, ತಾವು ಉತ್ಪಾದಿಸಿದ ಪದಾರ್ಥಗಳ ಬೆಲೆ ಹೆಚ್ಚಿದ್ದರಿಂದ ಲಾಭ ಪಡೆದವರದು ಇನ್ನೊಂದು ಗುಂಪು. ಇವರು ಹಳೆಯ, ವಾಡಿಕೆಯ, ಗೇಣಿಯ ಮೇಲೆ ಜಮೀನು ಪಡೆದಿದ್ದರು. ಆದರೆ ಒಮ್ಮಿಂದೊಮ್ಮೆಗೇ ಪದಾರ್ಥಗಳ ಬೆಲೆ ಏರಿದುದರಿಂದ ಇವರು ಉತ್ಪಾದಿಸುತ್ತಿದ್ದ ಮೊಟ್ಟೆ, ಗೋಧಿ, ಬಾರ್ಲಿ ಮುಂತಾದವುಗಳನ್ನು ಹೆಚ್ಚು ಬೆಲೆಗೆ ಮಾರಲು ಸಾಧ್ಯವಾಯಿತು.

ಬೆಲೆಯ ಕ್ರಾಂತಿಯಿಂದ ಹಲವು ಗುಂಪುಗಳಿಗೆ ಬಹು ಬಲವಾಗಿ ಪೆಟ್ಟು ತಾಕಿತು. ಉದಾಹರಣೆಗೆ ಸರಕಾರ. ಇದರ ವರಮಾನ–ವೆಚ್ಚ ಸರಿತೂಗಿಸುವುದು ವರ್ಷೇ ವರ್ಷೇ ಹೆಚ್ಚು ಕಷ್ಟವಾಗುತ್ತ ಬಂತು. ಸರಕಾರದ ವರಮಾನ ಸ್ಥಿರವಾಗಿತ್ತು. ವೆಚ್ಚವಾದರೋ, ಸದಾ ಏರುತ್ತಲೇ ಇತ್ತು. ರಾಷ್ಟ್ರ ಪ್ರಭುತ್ವದ ಅವತಾರವಾಗುತ್ತಿದ್ದ ಆ ಕಾಲ ಪರಿವರ್ತನೆಯ ಕಾಲ. ಆದರೆ ಸರಕಾರದ ಹಣಕಾಸಿನ ವ್ಯವಸ್ಥೆ ಮಾತ್ರ ಓಬೀರಾಯನ ಕಾಲದ್ದಾಗಿತ್ತು. ಹೊಸ ಪರಿಸ್ಥಿತಿಗೆ ಅದು ಇನ್ನೂ ಹೊಂದಿಕೊಂಡಿರಲಿಲ್ಲ. ಅದು ನಿಧಾನವಾಗಿ ವ್ಯತ್ಯಾಸಗೊಳ್ಳುತ್ತಿತ್ತು. ಆದರೆ ಆ ವೇಳೆಗೆ ಅದು ಇಲ್ಲಲ್ಲಿ ಜರ್ಝರಿತವಾಗಿತ್ತು. ಮೊದಲೇ ಇದ್ದ ಕಷ್ಟದ ಜತೆಗೆ ಬೆಲೆಯ ಏರಿಕೆಯ ಫಲವಾಗಿ ಇನ್ನಷ್ಟು ತೊಂದರೆ ಆಯಿತು. ಹಣದ ತೊಂದರೆಯಿಂದ ರಾಜರು ಆಗ ಪ್ರವರ್ಧಮಾನಕ್ಕೆ ಬರುತ್ತಿದ್ದ ಹಣವಂತರ ಉಡಿಯಲ್ಲಿ ಹೆಚ್ಚು ಹೆಚ್ಚಾಗಿ ಬಿದ್ದರು. ಈ ಕಾಲದಲ್ಲಿ ರಾಜರಿಂದ ಇವರು ಹೆಚ್ಚು ಹೆಚ್ಚು ಸವಲತ್ತುಗಳನ್ನು ಕಸಿದುಕೊಂಡರು. ಹೀಗೆ ಮಧ್ಯಮ ವರ್ಗದ ಜನರಿಗೆ ಹೆಚ್ಚು ಹೆಚ್ಚು ರಾಜಕೀಯಾಧಿಕಾರ ತಂದುಕೊಟ್ಟ ಈ ಕಾಲದ ಕ್ರಾಂತಿಗಳಿಗೂ ಬೆಲೆಗಳ ಕ್ರಾಂತಿಗೂ ಹೀಗೆ ನಿಕಟ ಸಂಬಂಧವಿತ್ತು.

ಕೂಲಿಗಾರರೂ ತೊಂದರೆಗೆ ಈಡಾದರು. ಹೆಚ್ಚು ಬೆಲೆಗಳ ಕಾಲದಲ್ಲಿ ಕೂಲಿಯೂ ಹೆಚ್ಚುತ್ತದೆ, ನಿಜ. ಆದ್ದರಿಂದ ಕೊನೆಗೆ ಎಲ್ಲಾ ಸೆಟ್ಟಗೇ ಆಗುವುದೆಂದು ನೀವು ನಿರೀಕ್ಷಿಸಬಹುದು. ಆದರೆ ಹಾಗಾಗದು. ಈ ವಾದದಲ್ಲಿ ನೀವು ಗಮನಿಸದಿರುವ ಒಂದು ಅಂಶವಿದೆ. ಬೆಲೆಗಳು ಹೆಚ್ಚುವ ಪ್ರಮಾಣದಲ್ಲೇ ಕೂಲಿಯೂ ಹೆಚ್ಚುವುದಿಲ್ಲವೆಂಬುದು ಆ ಅಂಶ. ಕೂಲಿ ಹೆಚ್ಚಿಸಬೇಕಾದರೆ ಅದಕ್ಕಾಗಿ ಸಾಮಾನ್ಯವಾಗಿ ಹೋರಾಟ ನಡಸಬೇಕು. ಅದಕ್ಕಾಗಿ ಉದ್ದೇಶ ಪೂರ್ವಕವಾಗಿ ಜನಸಾಮಾನ್ಯರು ಚಳವಳಿ ಹೂಡಬೇಕು. ಈ ಚಳವಳಿಗೆ ವಿರೋಧವನ್ನೂ ಎದುರಿಸಬೇಕಾಗುತ್ತದೆ. ಆದರೆ ಬೆಲೆಗಳಾದರೋ, ಪೇಟೆಯಲ್ಲಿನ ಕಾರ್ಯಾಚರಣೆಯಿಂದ ಏರುತ್ತದೆ. ಆದ್ದರಿಂದ ಕಾರ್ಮಿಕ ಈ ಬೆಲೆ ಏರಿಕೆಯನ್ನು ವಿರೋಧಿಸಿದ. ಹದಿನೈದನೆಯ ಶತಮಾನದಲ್ಲಿ ಫ್ರಾನ್ಸಿನಲ್ಲಿ ಕಾರ್ಮಿಕ ಪಡೆಯುತ್ತಿದ್ದ ಒಂದು ದಿನದ ಕೂಲಿಯಿಂದ ೪.೩ ಕಿಲೋಗ್ರಾಮ್ ಮಾಂಸ ಕೊಳ್ಳಬಹುದಿತ್ತು. ಒಂದು ಶತಮಾನದ ಅನಂತರ ಅದರಿಂದ ಕೇವಲ ೧.೮ ಕಿಲೋಗ್ರಾಮ್ ಕೊಳ್ಳಬಹುದಿತ್ತು. ಹದಿನೈದನೆಯ ಶತಮಾನದಲ್ಲಿ

ನಾಲ್ಕು ಫ್ರಾಂಕಿಗೆ ಕೊಳ್ಳುತ್ತಿದ್ದಷ್ಟೇ ಧಾನ್ಯವನ್ನು ಹದಿನಾರನೆಯ ಶತಮಾನದಲ್ಲಿ ಕೊಳ್ಳಲು ಇಪ್ಪತ್ತು ಫ್ರಾಂಕಿಗೆ ಕಡಮೆಯಿಲ್ಲದಷ್ಟು ಹಣ ತೆರಬೇಕಾಗಿತ್ತು. ರೋಜರ್ಸ್ ಎಂಬವನ ಲೆಕ್ಕಾಚಾರದ ಪ್ರಕಾರ ೧೪೯೫ರಲ್ಲಿ ಒಬ್ಬ ರೈತ ಹದಿನೈದು ದಿನ ದುಡಿದು ಸಂಪಾದಿಸಿದ ಹಣದಿಂದ ಅವನ ಸಂಸಾರಕ್ಕೆ ಒಂದು ವರ್ಷಕ್ಕೆ ಬೇಕಾಗುವಷ್ಟು ದಿನಸಿ ಕೊಳ್ಳಬಹುದಿತ್ತಂತೆ. ಆದರೆ ೧೬೧೦ರ ವೇಳೆಗೆ ಪರಿಸ್ಥಿತಿ ತುಂಬಾ ಬದಲಾಯಿಸಿತ್ತು. ವರ್ಷವಿಡೀ, ಒಂದು ವಾರವೂ ಬಿಡದೆ, ದುಡಿದರೂ ಆತ ಇಷ್ಟನ್ನು ಸಂಪಾದನೆ ಮಾಡಲು ಸಾಧ್ಯವಿರಲಿಲ್ಲ. "೧೬೧೦ರಲ್ಲಿ....ಇಂಗ್ಲೆಂಡಿನ ಒಬ್ಬ ಕುಶಲ ಕಾರ್ಮಿಕ ನಲವತ್ತುಮೂರು ವಾರ ಕಾಲ ದುಡಿದು ಸಂಪಾದಿಸಿದಷ್ಟನ್ನು ಸಂಪಾದಿಸಲು ೧೪೯೫ರಲ್ಲಿ ಕೇವಲ ಹತ್ತು ವಾರ ಕಾಲ ದುಡಿದರೆ ಸಾಕಾಗಿತ್ತು."[1] ಕಾರ್ಮಿಕನಿಗೆ ಇದರ ಪರಿಣಾಮ ಇಷ್ಟು: ಹೊಟ್ಟೆ ಕಟ್ಟಬೇಕು, ಇಲ್ಲವೇ ಹೆಚ್ಚು ವೆಚ್ಚ ತೂಗಿಸಲು ಹೆಚ್ಚು ಕೂಲಿಗಾಗಿ ಹೋರಾಡಬೇಕು. ಇವೆರಡೂ ಮಾಡದಿದ್ದರೆ ಭಿಕ್ಷುಕನಾಗಬೇಕು. ಬೆಲೆಗಳ ಕ್ರಾಂತಿಯಿಂದ ಈ ಮೂರೂ ಸಂಭವಿಸಿದುವು.

ಸ್ಥಿರವಾದ ಹಣದ ವರಮಾನ ಪಡೆಯುತ್ತಿದ್ದವರೂ ಬೆಲೆಗಳ ಏರಿಕೆಯಿಂದ ತೊಂದರೆಗೀಡಾದರು. ವರ್ಷಾಶನ ಪಡೆಯುತ್ತಿದ್ದವರು, ಪೆನ್ಶನ್‌ದಾರರು, ಹಣ ಹೂಡಿ, ಸ್ಥಿರವಾದ ಬಡ್ಡಿಯ ದರ ಪಡೆಯುತ್ತಿದ್ದವರು, ಲಾಭಾಂಶ ಜೀವಿಗಳು ಇವರು ಈ ಗುಂಪು. ಮಿಸ್ ರೇನೆರ್ಸ್ಸ್ ಎಂಬವಳ ದೃಷ್ಟಾಂತ ತೆಗೆದುಕೊಳ್ಳಿ. ಹದಿನಾಲ್ಕನೆಯ ಶತಮಾನದ ಅಂತ್ಯದಲ್ಲಿ ಈಕೆ ಆಜೀವ ವರ್ಷಾಶನ ಪಡೆಯುವ ಉದ್ದೇಶದಿಂದ ತನ್ನ ಹಣವನ್ನು ಹೂಡಿವಳು: "ಹಾಲ್ಬರ್‌ಸ್ಟಾಟ್ ನಗರದ ಪೌರಸಭೆಯ ಸದಸ್ಯರೂ ಅಧ್ಯಕ್ಷರೂ ವೃತ್ತಿಸಂಘದ ಯಜಮಾನರೂ ಆದ ನಾವು ಈ ಮೂಲಕ ತಿಳಿಯಪಡಿಸುವುದೇನೆಂದರೆ, ಶ್ರದ್ಧಾವಂತ ಕನ್ನಿಕೆಯಾದ ಅಲ್‌ಹೈಡ್ ರೇನೆರ್ಸ್ಸಳು ನಮಗೆ ಐದು ಲಾಡಿಗೆ ಮಾರ್ಕ್ ಹಣ ಕೊಟ್ಟಿರುವುದರಿಂದ ಇದಕ್ಕೆ ಪ್ರತಿಯಾಗಿ ಆಕೆಗೆ ಅರ್ಧ ಲಾಡಿಗೆ ಮಾರ್ಕ್ಸ್ ವರ್ಷಾಶನ ಕೊಡುವುದಾಗಿ ಒಪ್ಪಿಕೊಂಡಿದ್ದೇವೆ." ಹೀಗೆಂದು ಅಲ್ಲಿನ ಪೌರಸಭೆ ಒಪ್ಪಿ ಬರೆದುಕೊಟ್ಟಿತು.[2]

ಮಿಸ್ ರೇನೆರ್ಸ್ಸಳು ವಾರ್ಧಕ್ಯದಲ್ಲಿ ಈ ವರ್ಷಾಶನದಿಂದ ನೆಮ್ಮದಿಯಾಗಿರಬಹುದೆಂದು ಕೊಂಡಿದ್ದಳೋ ಏನೋ. ಇದೇನೋ ಸರಿ. ಬೆಲೆ ಏರಿಕೆಯ ಕಾಲದಲ್ಲಿ ಆಕೆ ಏನಾದರೂ ಜೀವಿಸಿದ್ದಿದ್ದರೆ ಅವಳು ಹಸಿವಿನ ಕಟು ಅನುಭವ ಪಡೆಯ ಬೇಕಾಗುತ್ತಿತ್ತು. ಏಕೆಂದರೆ ಅವಳ ವರಮಾನ ಒಂದೇ ಸಮನಾಗಿರುತ್ತಿತ್ತು. ಆದರೆ ಈ ವರಮಾನದಿಂದ ಅವಳು ಕೊಳ್ಳಬಹುದಾದ ಪದಾರ್ಥಗಳ ಬೆಲೆ ಬಹಳ ಏರಿರುತ್ತಿತ್ತು. ಆದ್ದರಿಂದ ಅವಳು ಈ ಪದಾರ್ಥಗಳನ್ನು ಕಡಮೆ ಕೊಳ್ಳಬೇಕಾಗುತ್ತಿತ್ತು. ಅವಳ ನಾಮ ಮಾತ್ರದ ವರಮಾನ ಹಿಂದಿನಷ್ಟೇ ಇರುತ್ತಿತ್ತು. ಆದರೆ ಅವಳ ವಾಸ್ತವ ವರಮಾನ ಕಡಮೆಯಾಗಿರುತ್ತಿತ್ತು. ಸ್ಥಿರ ವರಮಾನ ಪಡೆಯುವವರಿಗೆಲ್ಲಾ ಬೆಲೆ ಏರಿಕೆಯ ಕಾಲದಲ್ಲಿ ಇದೇ ಗತಿ.

---

[1] J. E. Thorold Rogers. *Six Centuries of Work and Wages*, pp. 389-392. G. P. Putnam's Sons, N.Y., 1884.

[2] *Urkundenbuch der Stadt Halberstadt*, vol. I, p. 523, Bearbeitet von G. Schmidt, Halle, 1878.

ಹೀಗೆಯೆ ಭೂಮಿಯಿಂದ ಸ್ಥಿರ ವರಮಾನ—ಕ್ಲುಪ್ತ ವರಮಾನ—ಪಡೆಯುತ್ತಿದ್ದವರೂ ತೊಂದರೆಗೆ ಈಡಾದರು. ಭೂಮಿಯ ಬೇಸಾಯಕ್ಕೆ ಪ್ರತಿಯಾಗಿ ಅವರ ಒಡೆಯರಿಗೆ ಸೇವೆ ಸಲ್ಲಿಸುವ ಸಂಪ್ರದಾಯದ ಬದಲು, ಗೇಣಿಯನ್ನು ಹಣದ ರೂಪದಲ್ಲಿ ಸಲ್ಲಿಸುವ ಪದ್ಧತಿ ಜಾರಿಗೆ ಬಂದದ್ದು ನಿಮಗೆ ಗೊತ್ತಿದೆ. ಬೆಲೆಯ ಕ್ರಾಂತಿ ಸಂಭವಿಸುವ ವರೆಗೂ ಈ ಪದ್ಧತಿ ನೆಲದೊಡೆಯರಿಗೆ ಅನುಕೂಲಕರವಾಗಿಯೇ ಇತ್ತು, ಬೆಲೆಯ ಕ್ರಾಂತಿಯಿಂದ ಅವರ ಸ್ಥಿತಿ ಬದಲಾಯಿತು. ಹಳೆಯ ಮಟ್ಟದಲ್ಲೇ ಅವರಿಗೆ ಗೇಣಿ ದೊರಕುತ್ತಿತ್ತು. ಆದರೆ ಅವರು ಕೊಳ್ಳುವ ಪದಾರ್ಥಗಳಿಗೆ ಹೆಚ್ಚು ಬೆಲೆ ಕೊಡಬೇಕಾಗಿತ್ತು. ಅವರು ಇಕ್ಕಟ್ಟಿನಲ್ಲಿ ಸಿಕ್ಕಿದ್ದರು. ಇದಕ್ಕೆ ಅವರೇನು ಮಾಡಬೇಕು ? ಗೇಣಿಯ ದರ ಬದಲಾಗದೆ ಬೆಲೆ ಮಾತ್ರ ಹೆಚ್ಚಿದಾಗ, ಚರ್ಚಿನಿಂದ ವಶಪಡಿಸಿಕೊಂಡ ಭೂಮಿಯನ್ನು ಸರಕಾರದಿಂದ ಕೊಂಡ ಪ್ರಭುಗಳಿಗೂ ಸಿರಿ ವಂತರಿಗೂ ಏನು ಮಾಡಬೇಕೆಂಬುದು ತೋರಲಿಲ್ಲ. ತಮ್ಮ ನೆಲದಿಂದ ಹೆಚ್ಚು ಹಣ ದೊರಕ ಬೇಕೆಂದು ಅವರು ಭಾವಿಸಿದರು. ಆದರೆ ಹೇಗೆ?

ಆಗ ಅವರಿಗಿದ್ದದ್ದು ಎರಡು ಮಾರ್ಗ—ನೆಲದ ಆವರಣ ಮತ್ತು ದುಬಾರಿ ಕಂದಾಯ.

ನೆಲದ ಆವರಣ ಕಾರ್ಯ ಇಡೀ ಯೂರೋಪಿನಲ್ಲಿ ಸ್ವಲ್ಪ ಮಟ್ಟಿಗೆ ಹಬ್ಬಿತು; ಇಂಗ್ಲೆಂಡಿನಲ್ಲಿ ಹೆಚ್ಚಾಗಿ ಆಯಿತು. ಮೊದಲನೆಯ ಅಧ್ಯಾಯದಲ್ಲಿ ವರ್ಣಿಸಿದ ಅನಾವೃತ ನೆಲದ ಬೇಸಾಯ ಪದ್ಧತಿ ನಿಮ್ಮ ನೆನಪಿನಲ್ಲಿರಬಹುದು. ಅದು ಒಳ್ಳೆಯ ಪದ್ಧತಿಯಾಗಿರ ಲಿಲ್ಲ. ಏಕೆಂದರೆ ಅದರಿಂದ ಹೆಚ್ಚು ವ್ಯರ್ಥವಾಗುತ್ತಿತ್ತು. ಇನ್ನೂ ಒಂದು ಕಾರಣದಿಂದ ಅದು ಕೆಟ್ಟ ಪದ್ಧತಿಯಾಗಿತ್ತು. ಎಚ್ಚತ್ತ, ಪ್ರಗತಿ ಪ್ರಿಯ, ಕ್ರಿಯಾಶೀಲ ರೈತ ತಾನು ಇಚ್ಛಿಸಿದ ವೇಗದಲ್ಲಿ ಬೇಸಾಯ ನಡಸುವುದಾಗಲಿ, ಹೊಸ ಪ್ರಯೋಗ ಮಾಡುವುದಾಗಲಿ, ಸಾಧ್ಯ ವಿರಲಿಲ್ಲ. ಅವನ ನೆಲದ ನೆರೆಯ ಚೂರಿನಲ್ಲಿ ಯಾವ ವೇಗದಲ್ಲಿ ನೆರೆಯವನು ಬೇಸಾಯ ನಡಸುತ್ತಿದ್ದನೋ ಅದಕ್ಕೆ ತಕ್ಕಂತೆ ಇವನೂ ಹೊಂದಿಕೊಳ್ಳಬೇಕಾಗುತ್ತಿತ್ತು. ದಡ್ಡರೂ ಅವಿವೇಕಿಗಳೂ ಆದ ಕೆಲವು ರೈತರು ಇಡೀ ಹಳ್ಳಿಯೇ ಮುಂದುವರಿಯದಂತೆ ತಡೆಯ ಬಹುದಿತ್ತು. ಆದ್ದರಿಂದ ಕೆಲವು ಎಡೆಗಳಲ್ಲಿ ರೈತರು ತಮ್ಮ ತಮ್ಮಲ್ಲಿ ಈ ಜಮೀನಿನ ತುಕಡಿಗಳ ಅದಲುಬದಲು ಮಾಡಿಕೊಳ್ಳಲಾರಂಭಿಸಿದರು. ಮೂವತ್ತು ಎಕರೆ ನೆಲ ತುಂಡಾಗಿ ಒಡೆದು ಹಲವು ಕಡೆ ಹರಡಿರುವ ಬದಲು ಅವುಗಳನ್ನು ಸಾಧ್ಯವಾದಷ್ಟು ಒಂದುಗೂಡಿಸಿ, ತಲಾ ಆರೇಳು ಎಕರೆಯ ಅಡಕವಾದ ಭೂಮಿಗಳಾಗಿ ಮಾಡುವುದು ಸಾಧ್ಯವಾಯಿತು. ಈ ಅದಲು ಬದಲು ಕಾರ್ಯದಲ್ಲಿ ಕೆಲವರ ಅದೃಷ್ಟ ಚೆನ್ನಾಗಿರುತ್ತಿತ್ತು. ಬುದ್ಧಿ ಉಪಯೋಗಿ ಸುತ್ತಿದ್ದವರೂ ಉಂಟು. ಇಂಥವರು ತಮ್ಮ ನೆಲದ ತುಂಡುಗಳನ್ನೆಲ್ಲಾ ಅವರಿವರಿಗೆ ಕೊಟ್ಟು ಪ್ರತಿಯಾಗಿ ಒಂದೇ ಒಂದು ದೊಡ್ಡ ಜಮೀನು ಹೊಂದುವ ಯತ್ನದಲ್ಲಿ ಸಫಲರಾಗುತ್ತಿ ದ್ದರು, ಈ ತೊಡಕು ಬಿಡಿಸಿಕೊಳ್ಳುತ್ತಿದ್ದರು. ಹೀಗೆ ಒಂದಾದ ಜಮೀನಿನ ಸುತ್ತ ಬೇಲಿ ಹಾಕುವುದು ಮುಂದಣ ಹೆಜ್ಜೆ. ಹಿಂದೆ ತೆರವಾಗಿದ್ದ ನೆಲ, ಅನಾವೃತ ನೆಲ, ಈಗ ಆವೃತ ವಾಯಿತು. ಬೇಲಿ ಬಿಗಿಯಲ್ಪಟ್ಟಿತು. ನ್ಯೂ ಇಂಗ್ಲೆಂಡ್ ಪ್ರದೇಶದಲ್ಲಿ ನೀವೇನಾದರೂ ಸಂಚಾರ ಮಾಡಿದ್ದರೆ, ಪ್ರತಿಯೊಬ್ಬ ರೈತನ ಜಮೀನಿನ ಸುತ್ತಲೂ ಇರುವ ಕಲ್ಲು ಗೋಡೆ

ನೋಡಿದ್ದುದು ಜ್ಞಾಪಕದಲ್ಲಿರಬಹುದು. ಹಳೆಯ ಇಂಗ್ಲೆಂಡಿನಲ್ಲೂ, ಕಲ್ಲು ಸುಲಭವಾಗಿ ದೊರಕುತ್ತಿದ್ದೆಡೆಯಲ್ಲೆಲ್ಲಾ, ಈ ರೀತಿಯ ಆವರಣದ ರಚನೆಯಿಂದ ಯಾರಿಗೂ ತೊಂದರೆಯಾಗಲಿಲ್ಲ. ಇದರಿಂದ ಉತ್ಪಾದನೆಯೂ ಹೆಚ್ಚಿತು. ಇದನ್ನು ಯಾರೂ ವಿರೋಧಿಸಲಿಲ್ಲ. ಬಡವ ಬಲ್ಲಿದರೆನ್ನದೆ ಎಲ್ಲ ರೈತರೂ ಈ ಹಾದಿ ಅನುಸರಿಸಿದರು. ಇದರಿಂದ ಅವರಿಗೆ ಲಾಭವೇ ಆಯಿತು.

ಆದರೆ ಇನ್ನೂ ಒಂದು ರೀತಿಯ ಆವರಣ ಕಾರ್ಯ ನಡೆಯಿತು. ಇದು ಸಾವಿರಾರು ಜನರಿಗೆ ತೊಂದರೆ ಉಂಟು ಮಾಡಿತು. ಕುರಿ ಸಾಕಲು ಕಲ್ಪಿಸಿಕೊಂಡ ಆವರಣ ಇದು. ಉಣ್ಣೆಯ ಬೆಲೆ ಹೆಚ್ಚುತ್ತಿದ್ದುದರಿಂದ (ಉಣ್ಣೆ ಇಂಗ್ಲೆಂಡಿನ ಮುಖ್ಯ ನಿರ್ಯಾತ ವಸ್ತುವಾಗಿತ್ತು.) ತಮ್ಮ ಬೇಸಾಯದ ನೆಲವನ್ನು ಕುರಿ ಸಾಕುವ ನೆಲವಾಗಿ ಪರಿವರ್ತಿಸುವುದರಿಂದ ಹೆಚ್ಚು ಹಣ ದೊರಕುವುದೆಂಬುದನ್ನು ಪ್ರಭುಗಳು ಕಂಡುಕೊಂಡರು. ಬೆಲೆಯ ಕ್ರಾಂತಿ ಆಗುವ ಮುನ್ನವೇ ಹೀಗಾಗಿತ್ತು. ಆದರೆ ಈಗ ಹೆಚ್ಚಿದ್ದ ಬೆಲೆಗಳಿಂದ ಈ ಚಳವಳಿಗೆ ಇನ್ನೂ ಉತ್ತೇಜನ ದೊರಕಿತು. ಹೆಚ್ಚು ಹೆಚ್ಚು ಮಂದಿ ಪ್ರಭುಗಳು ಕುರಿ ಸಾಕುವ ಉದ್ದೇಶದಿಂದ ತಮ್ಮ ನೆಲವನ್ನು ಅಡಕ ಮಾಡಿ, ಬೇಲಿ ಹಾಕಲಾರಂಭಿಸಿದರು. ನೆಲದಲ್ಲಿ ಉತ್ತು ಬಿತ್ತಿ ಬೆಳೆ ತೆಗೆಯುವ ಉದ್ಯಮಕ್ಕಿಂತ ಕುರಿ ಸಾಕಲು ಕಡಮೆ ಜನ ಇದ್ದರೆ ಸಾಕು. ಹೆಚ್ಚಾದ ಜನ ನಿರ್ಗತಿಕರಾದರು. ತಮ್ಮ ನೆಲದ ತುಂಡುಗಳನ್ನೆಲ್ಲಾ ಒಂದು ಮಾಡಿ ಒಂದು ದೊಡ್ಡ ಜಮೀನಾಗಿ ಪರಿವರ್ತಿಸಲು ತಮ್ಮ ನೆಲದಲ್ಲಿ ಬೇಸಾಯ ಮಾಡುತ್ತಿದ್ದ ಗೇಣಿದಾರರನ್ನು ಹೊರಗೆಸೆಯಬೇಕಾಯಿತು. ಇವರಿದ್ದರೆ ಈ ಕಾರ್ಯಕ್ಕೆ ವಿಘ್ನ. ಆದ್ದರಿಂದ ಅವರು ಹೀಗೆ ಮಾಡಿದರು. ಹಲವು ಜನ ತಮ್ಮ ಜೀವನೋಪಾಯ ಕಳೆದುಕೊಂಡರು. ಆ ಕಾಲದಲ್ಲಿ ಚಳವಳಿ ಎಬ್ಬಿಸಿದ ಜನರು ಹಾಕಿದ ಬೊಬ್ಬೆಯಿಂದ, ಕುರಿ ಸಾಕುವುದಕ್ಕಾಗಿ ಮಾಡಿಕೊಂಡ ಈ ಆವರಣದಿಂದ ಬಡ ರೈತನಿಗೆ ಎಷ್ಟೊಂದು ಕಷ್ಟ ಸಂಭವಿಸಿತೆಂಬುದು ಗೊತ್ತಾಗುತ್ತದೆ.

ಕೆಲವು ಸಂದರ್ಭಗಳಲ್ಲಿ ಪ್ರಭು ಊರೊಟ್ಟಿನ ಜಮೀನನ್ನೂ, ಗೋಮಾಳವನ್ನೂ, ಆಕ್ರಮಿಸಿಕೊಂಡು ಆವರಣ ಹಾಕಿಕೊಳ್ಳುತ್ತಿದ್ದ. ಇದರಿಂದ ಬಡ ಗೇಣಿದಾರನ ದನಕ್ಕೆ ಮೇವಿನ ಸ್ಥಳ ಹೋದಂತಾಯಿತು. ಇದರಿಂದ ಅವನ ಸರ್ವನಾಶವಾಯಿತು. ಈ ವಿಚಾರದಲ್ಲಿ ರೈತರನ್ನು ಕೇಳುವವರೇ ಇರಲಿಲ್ಲವೆ? ಅವರಿಗೆ ಯಾವ ಹಕ್ಕೂ ಇರಲಿಲ್ಲವೆ? ಅವರು ಈ ಬಗ್ಗೆ ನ್ಯಾಯಾಸ್ಥಾನಕ್ಕೆ ಹೋಗುವಂತಿರಲಿಲ್ಲವೆ? ಹೌದು, ಹೋಗಬಹುದಿತ್ತು. ಆದರೆ ನ್ಯಾಯದ ವೆಚ್ಚ ಭರಿಸಬಲ್ಲ ಹಣವಂತನಿಗೆ ನ್ಯಾಯಾಲಯಕ್ಕೆ ಹೋಗುವುದು ಯಾವಾಗಲೂ ಸುಲಭ. ರೈತರೇ ಗೆಲ್ಲಬಹುದಾಗಿದ್ದ ಸಂದರ್ಭಗಳಲ್ಲೂ ಅವರು ಈ ಹೋರಾಟ ಮುಂದುವರಿಸಲು ಬೇಕಾದ ಹಣ ಇರಲಿಲ್ಲ. ಹಣ ಇದ್ದ ಪ್ರಭುವಾದರೋ, ರೈತರ ಶಕ್ತಿ ಕುಂದಿ, ಹೋರಾಟ ವ್ಯರ್ಥವೆಂದು ಅವರು ಕೈ ಬಿಡುವ ವರೆಗೂ ಈ ವ್ಯಾಜ್ಯ ಮುಂದುವರಿಸಲು ಶಕ್ತನಾಗಿದ್ದ. ಆಗ ಪ್ರಭು ಮಾಡುತ್ತಿದ್ದುದೇನು? ರೈತರ ನೆಲ ಕೊಂಡು ತನ್ನ ನೆಲಕ್ಕೆ ಸೇರಿಸಿಕೊಂಡು ಆವರಣ ಹಾಕಿಕೊಳ್ಳುತ್ತಿದ್ದ, "ಊರೊಟ್ಟಿನ ನೆಲದ ಹಕ್ಕು ಮತ್ತೆ ದೊರಕಿಸಿಕೊಡಬೇಕೆಂದು" ವುಟ್ಟನ್ ಬಾಸ್ಸೆಟ್ ಎಂಬಲ್ಲಿಯ ರೈತರು ಕಾಮನ್ಸ್ ಸಭೆಗೆ

(ಶಾಸನ ಸಭೆಗೆ) ಮಾಡಿಕೊಂಡ ಮನವಿಯಲ್ಲಿ ಈ ಕರುಣೆಯ ಕತೆ ಇದೆ :

"ಈ ಊರಿನ ಪೌರಸಭೆಯ ಅಧ್ಯಕ್ಷರೂ ಸ್ವತಂತ್ರ ಗೇಣಿಗಾರರೂ....ಕೂಡಿ ಹೊಂದಿದ್ದ ನೆಲವನ್ನು, ಪಶುಗಳ ಮೇವಿಗಾಗಿ ಹೊಂದಿದ್ದ ಊರೊಟ್ಟಿನ ಉಚಿತ ಭೂಮಿಯನ್ನು.... ಸರ್ ಫ್ರಾನ್ಸಿಸ್ ಎಂಗಲ್‌ಫೀಲ್ಡ್ ಎಂಬೊಬ್ಬ ಆಕ್ರಮಿಸಿಕೊಂಡಿದ್ದಾನೆ....ಅವನು ತುಂಬಾ ಬಲಿಷ್ಠನಾದುದರಿಂದ ಈ ಸ್ಥಿತಿ ಬಹುಕಾಲದಿಂದ ಮುಂದುವರಿದುಕೊಂಡು ಬಂದಿದೆ; ಈ ಸ್ವತಂತ್ರ ಗೇಣಿದಾರರು ನ್ಯಾಯಕ್ಕಾಗಿ ಹೊಡೆದಾಡುವುದು ಅಸಾಧ್ಯವಾಗಿದೆ. ಜಾನ್ ರಾಸ್ ಎಂಬ ಸ್ವತಂತ್ರ ಗೇಣಿದಾರನೊಬ್ಬ ಸುಮಾರು ಐನೂರು ಪೌಂಡು ಬೆಲೆಯ ತನ್ನ ಎಲ್ಲ ಜಮೀನನ್ನೂ ಮಾರಬೇಕಾಯಿತು. ನ್ಯಾಯಾಸ್ಥಾನದಲ್ಲಿ ವ್ಯಾಜ್ಯ ಹೂಡಿದುದರಿಂದ ಅವನಿಗೆ ಈ ಸ್ಥಿತಿ ಒದಗಿತು. ಇತರರೂ ಇದರಿಂದ ನಿರ್ಗತಿಕರಾದರು. ಊರೊಟ್ಟಿನ ಗೋಮಾಳವೆಲ್ಲಾ ಈಗ ಮಾಯವಾಗಿದೆ. ಒಂದು ಅಡಿ ಗೋಮಾಳವೂ ನಮಗಾಗಿ ಉಳಿದಿಲ್ಲ. ದಾರಿದ್ರ್ಯ ನಮ್ಮನ್ನು ಮುಸುಕಿದೆ. ದೇವರ ದಯೆಯಿಂದ ಈ ಸಭೆಯ ಮಾನ್ಯ ಸದಸ್ಯರ ಹೃದಯ ಕರಗಿ ನಮಗೆ ಸಹಾಯ ದೊರಕಿಸಿಕೊಡಬೇಕು. ನಮ್ಮ ಹಕ್ಕುಗಳನ್ನು ನಾವು ಮತ್ತೆ ಅನುಭವಿಸುವಂತೆ ಶಾಸನ ಜಾರಿಗೆ ತರಬೇಕು....

(ಇದರ ಕೊನೆಯಲ್ಲಿ ಇಪ್ಪತ್ತುಮೂರು ಜನ ಸಹಿ ಹಾಕಿದ್ದಾರೆ.)

"ಇನ್ನೂ ಹಲವರು ಈ ಮನವಿಗೆ ಸಹಿ ಹಾಕಬಹುದಿತ್ತು. ಆದರೆ ಅವರಲ್ಲಿ ಹಲವರು ಪ್ರಭುವಿನ ಕೆಲಸ ಮಾಡುತ್ತಿದ್ದಾರೆ. ಅವರು ಇದಕ್ಕೆ ಸಹಿ ಹಾಕಿದರೆ ಇದರಿಂದ ಉಚ್ಚಾಟನೆ ಆದೀತೆಂದು ಅವರ ಅಂಜಿಕೆ. ಆಮೇಲೆ ಅವರಿಗೆ ಜೀವನವೇ ಸಾಗದು....ಈ ಅಂಜಿಕೆ ಇಲ್ಲದಿದ್ದರೆ ಅವರೂ ಕೂಡ ಸಹಿ ಹಾಕುತ್ತಿದ್ದರು."[1]

ಹೀಗೆ ಆವರಣ ಕಾರ್ಯ ಕೈಕೊಳ್ಳುತ್ತಿದ್ದುದೆಲ್ಲಾ ಕುರಿ ಮೇಯುವ ನೆಲಕ್ಕಾಗಿಯೇ ಅಲ್ಲ. ಹಲವು ಸಣ್ಣ ಪುಟ್ಟ ಜಮೀನುಗಳಿಗಿಂತ ಒಂದು ದೊಡ್ಡ ಜಮೀನಿನ ನಿರ್ವಹಣೆ ಸುಲಭವೂ ಕಡಮೆ ವೆಚ್ಚಕರವೂ ಆದುದರಿಂದ ಮೇನರಿನ ಪ್ರಭುಗಳು ಉತ್ತಮ ರೀತಿಯ ಬೇಸಾಯಕ್ಕಾಗಿ ಆವರಣ ಕಾರ್ಯ ಕೈಕೊಂಡರು. ಪ್ರಭುವಿಗೆ ಬೇಕಾದ ಜಮೀನು ತುಕಡ ಹೊಂದಿದ್ದವರೆಲ್ಲಾ ತಮ್ಮ ಜಮೀನು ಕಳೆದುಕೊಂಡು, ನೆಲವಿಲ್ಲದ ನೆಲೆಯಿಲ್ಲದ ದುರ್ದೈವಿಗಳ ಬೆಳೆಯುತ್ತಿದ್ದ ಗುಂಪಿಗೆ ಸೇರಿದರು.

ಈ ಕಾಲದಲ್ಲಿ ಜಾರಿಯಲ್ಲಿದ್ದ ದುಬಾರಿ ಗೇಣಿಯ ಪದ್ಧತಿಗಿಂತ ಆವರಣ ಚಳವಳಿಯ ವಿಚಾರ ನಮಗೆ ಹೆಚ್ಚಾಗಿ ತಿಳಿದಿದೆ. ಆದರೆ ದುಬಾರಿ ಗೇಣಿಯ ದುಷ್ಟ ಪದ್ಧತಿಯೇ ಹೆಚ್ಚು ಮುಖ್ಯವಾದದ್ದು. ಜಮೀನಿನ ಗೇಣಿಯೂ ಹೊಸ ಗೇಣಿದಾರ ಗೇಣಿಕರಾರು ಮಾಡಿಕೊಂಡಾಗ ಕೊಡಬೇಕಾದ ದಂಡವೂ ಸಾಮಾನ್ಯವಾಗಿ ಸ್ಥಿರವಾಗಿಯೇ ಇದ್ದುವು. ಇವು ವಾಡಿಕೆಯಿಂದ ನಿಶ್ಚಿತವಾಗಿದ್ದುವು. ಹಿಂದೆ ಸಂಪ್ರದಾಯ ಶಾಸನದಷ್ಟೇ ಬಲವಾಗಿತ್ತು. ಆದರೆ ಈಗ, ಬೆಲೆಗಳ ಕ್ರಾಂತಿ ಸಂಭವಿಸಿದ ಫಲವಾಗಿ, ಪ್ರಭು ತನ್ನ ನೆಲದಿಂದ ಹೆಚ್ಚು ಪಡೆಯು

---

[1] **Bland, Brown, and Tawney, *op. cit.*, pp. 255-8.**

ವುದು ಅಗತ್ಯವಾಯಿತು. ಆದ್ದರಿಂದ ಅವನು ರೈತನಿಗೆ ಹಿಂದೆ ರಕ್ಷಣೆ ನೀಡಿದ್ದ ಸಂಪ್ರದಾಯ ವನ್ನು ಬದಿಗೊತ್ತಿದ. ಗೇಣಿದಾರನ ಗೇಣಿಯ ಅವಧಿ ಪೂರೈಸಿದಾಗ ಸಂಪ್ರದಾಯದ ಪ್ರಕಾರ ನಿಶ್ಚಿತವಾದ ಹಳೆಯ ಗುತ್ತಿಗೆಯ ಷರತ್ತುಗಳ ಮೇಲೆಯೇ ಇದನ್ನು ಪುನರ್ನವಗೊಳಿಸುವ ಬದಲು, ಗೇಣಿದಾರ ಕೊಡಲು ಸಾಧ್ಯವಾಗದಷ್ಟು ದುಬಾರಿ ಗೇಣಿಯನ್ನು ಪ್ರಭು ವಿಧಿಸು ತ್ತಿದ್ದ. ತತ್ಫಲವಾಗಿ ಆತ ನೆಲವನ್ನೇ ಬಿಟ್ಟುಕೊಡುತ್ತಿದ್ದ. ಇದು ಗೇಣಿದಾರರ ಮೇಲೆ ಆದ ಪರಿಣಾಮ. ಗೇಣಿಗೆ ನೆಲ ಪಡೆಯುವುದು ಆಮೇಲೆ ಬಹು ಮುಖ್ಯವಾಯಿತಾದರೂ, ಈ ಕಾಲದಲ್ಲಿ ರೈತರಲ್ಲಿ ಹೆಚ್ಚು ಜನ ಪಟ್ಟೆದಾರರಾಗಿದ್ದರು. ಎಂದರೆ ಮೇನರಿನ ಪದ್ಧತಿಗೆ ಅನು ಸಾರವಾಗಿ, "ಪ್ರಭುವಿನ ಇಚ್ಛೆಯ ಮೇರೆಗೆ, ಪಟ್ಟೆಯಲ್ಲಿ" ಈ ಜಮೀನು ಹಿಡುವಳಿ ಪಡೆ ದಿದ್ದರು. ಈ ಹಿಡುವಳಿದಾರರ ಅಥವಾ ಪಟ್ಟೆದಾರರ ದುರ್ದೈವಕ್ಕೆ ಕಾರಣವಾದ ಸಂಗತಿ ಯೆಂದರೆ ಈ ಮೇನರಿನ ಪದ್ಧತಿಯನ್ನು ಕುರಿತದ್ದು. ಪ್ರಭು ತನ್ನ ಇಷ್ಟ ಬಂದಂತೆ ವರ್ತಿಸಲು ಅಧಿಕಾರವಿತ್ತು. ಪ್ರಭುವಿಗೆ ಆಗ ಬೇಕಾಗಿದ್ದದ್ದು ಇಷ್ಟೇ: ಹೆಚ್ಚು ಗೇಣಿ, ಅಥವಾ ಜಮೀನು ವಾಪಸು. ಮರಳಿ ಜಮೀನು ಬಂದರೆ ಅದನ್ನು ಹೆಚ್ಚು ಗೇಣಿ ಕೊಡುವ ಬೇರೆ ಯಾರಿಗಾದರೂ ಕೊಡಬಹುದಿತ್ತು. ಗೇಣಿದಾರನನ್ನು ಹೊರ ಹಾಕಲು ಎಲ್ಲ ಉಪಾಯ ವನ್ನೂ ಅನುಸರಿಸಲಾಗುತ್ತಿತ್ತು. ಕುಟುಂಬದ ಯಜಮಾನ ಸತ್ತಾಗ—ಪಟ್ಟೆ ಕೈಯಿಂದ ಕೈಗೆ ಬದಲಿಸಿದಾಗ—ಪದ್ಧತಿಯಂತೆ ಅಲ್ಪ ದಂಡ ತೆತ್ತು ತಂದೆಯ ಜಮೀನನ್ನು ಮಗ ಸಾಗುವಳಿ ಮಾಡಲು ಬಯಸಿದಾಗ—ಈ ದಂಡ ಹಿಂದಿನಂತೆ ಅಲ್ಪವಲ್ಲವೆಂಬುದನ್ನು ಅವನು ಕಂಡುಕೊಳ್ಳುತ್ತಿದ್ದ. ಪ್ರಭು ದಂಡವನ್ನು ಅತಿಯಾಗಿ ಹೆಚ್ಚಿಸುತ್ತಿದ್ದ. ರೈತ ಇಷ್ಟೊಂದು ಅಧಿಕ ದಂಡ ತೆರಲಾರದೆ ತನ್ನ ಹಳೆಯ ಹಕ್ಕು ಬಿಟ್ಟು ಕೊಡಬೇಕಾಗುತ್ತಿತ್ತು. ಆಗ ಪ್ರಭು ಈ ನೆಲವನ್ನು ಮಾರುತ್ತಿದ್ದ; ಅಥವಾ ಅಧಿಕ ಗೇಣಿ ಕೊಡಬಲ್ಲ, ಕೊಡಲು ಇಚ್ಛೆ ಇದ್ದ, ಬೇರೆ ಯಾರಿಗಾದರೂ ಗೇಣಿಗೆ ಕೊಡುತ್ತಿದ್ದ.

ವ್ಹಿಟ್‌ಬಿ ಎಂಬಲ್ಲಿಯ ನಿವಾಸಿಗಳು, 1533ರಲ್ಲಿ ಸಲ್ಲಿಸಿದ ಮನವಿಯೊಂದರಲ್ಲಿ, ಗೇಣಿ ಗಳು ಹೇಗೆ ಹೆಚ್ಚಿದುವೆಂಬುದನ್ನು ಈ ರೀತಿ ತಿಳಿಸುತ್ತಾರೆ:

| | ಹಳೆಯ ಗೇಣಿ | ಹೊಸ ಗೇಣಿ | ದಂಡ |
|---|---|---|---|
| "ಹೆನ್ರಿ ರಸೆಲ್ಲನಿಂದ | 42 ಷಿ. 11½ ಪೆ. | 4 ಪೌಂ. 7 ಷಿ. 3 ಪೆ. | 6 ಷಿ. 8 ಪೆ. |
| ಥಾಮಸ್ ರಾಬಿನ್ಸನ್‌ನಿಂದ | 13 ಷಿ. 11½ ಪೆ. | 40 ಷಿ. 7 ಪೆ. | 33 ಷಿ. 4 ಪೆ. |
| ಥಾಮಸ್ ಕವರ್ಡನಿಂದ | 14 ಷಿ. 9 ಪೆ. | 31 ಷಿ. | 2 ಷಿ. 6 ಪೆ. |
| ವಿಲಿಯಂ ವಾಕರನಿಂದ | 7 ಷಿ. 3 ಪೆ. | 17 ಷಿ. | 5 ಷಿ. |
| ರಾಬರ್ಟ್ ಬಾರ್ಕರನಿಂದ | 14 ಷಿ. 6 ಪೆ. | 30 ಷಿ. | 2 ಷಿ. 3 ಪೆ."[1] |

ಆರನೆಯ ಎಡ್ವರ್ಡ್ ದೊರೆಯ ಆಸ್ಥಾನಿಕರ ಮುಂದೆ ಮಾಡಿದ ಧರ್ಮೋಪದೇಶದಲ್ಲಿ ಬಿಷಪ್ ಲಾಟಿಮರ್ ಆಡಿದ ಬಿಚ್ಚು ನುಡಿಯನ್ನೋದಿ: "ನೆಲಮೊಡೆಯರೇ, ಗೇಣಿ ಹಿಂದು

[1] *Ibid.*, pp. 252-3.

ವವರೇ, ಅವಿನೀತ ಕೃತಕ ಪ್ರಭುಗಳೇ, ಅಗತ್ಯವಾದ್ದಕ್ಕಿಂತ ಬಹು ಹೆಚ್ಚಿನ ವಾರ್ಷಿಕಾದಾಯ ಬರುವಷ್ಟು ಆಸ್ತಿ ಹೊಂದಿದ್ದೀರಿ ನೀವು. ವರ್ಷಕ್ಕೆ ಇಪ್ಪತ್ತು ಅಥವಾ ಐವತ್ತು ಪೌಂಡು ಗೇಣಿ ಬರುತ್ತಿದ್ದ ನೆಲಕ್ಕೆ ಈಗ ಐವತ್ತು ಅಥವಾ ನೂರು ಪೌಂಡು ವಸೂಲಿ ಮಾಡುತ್ತಿದ್ದೀರಿ. ಇನ್ನೊಬ್ಬ ಬೆವರು ಹರಿಸಿ ಪಟ್ಟ ಶ್ರಮಕ್ಕೆ ಒಬ್ಬ ಪ್ರಭುವಿಗೆ ಪುಕ್ಕಟೆಯಾಗಿ ನ್ಯಾಯವಾಗಿ ಕೊಡಬಹುದಾದ್ದಕ್ಕಿಂತ ಬಹು ದುಬಾರಿ ಇದು."[1]

ಈ ಆಸೆಬಡಕ ಜಮೀನುದಾರರನ್ನು ಹೀಗಳೆಯುವ ಕಾರ್ಯ ಮಾಡಿದವನು ಲ್ಯಾಟಿಮರ್ ಒಬ್ಬನೇ ಅಲ್ಲ. ನೆಲದ ಆಕ್ರಮಣ, ಆವರಣ, ದುಬಾರಿ ಗೇಣಿ ವಸೂಲಿ, ಅನ್ಯಾಯವಾದ ದಂಡವ ವಸೂಲಿ, ಇವುಗಳ ಮೂಲಕ ರೈತರನ್ನು ನೆಲದಿಂದ ಉಚ್ಚಾಟನೆ ಮಾಡಿ, ಅಲೆಮಾರಿಗಳ, ಭಿಕ್ಷುಕರ ತಂಡವನ್ನು ಬೆಳೆಯಿಸುತ್ತಿದ್ದ ಜಮೀನ್ದಾರರನ್ನು ಆಗಿನ ಕಾಲದ ಇತರ ಭಾಷಣಕಾರರೂ ಲೇಖಕರೂ ತೀವ್ರವಾಗಿ ಖಂಡಿಸಿದರು. "ಜಮೀನ್ದಾರರಿಗಾಗಿ" ಮಾಡಿದ "ಪ್ರಾರ್ಥನೆ"ಯಲ್ಲಿ ಈ ಮಾತು ಇದೆ: "ಜಮೀನು, ಗೋಮಾಳ, ನಿವಾಸ ಇವುಗಳನ್ನು ಹೊಂದಿರುವವರು ತಮ್ಮ ಹೊಲ ಮನೆಗಳಿಗೆ ದುಬಾರಿ ಗೇಣಿ ವಿಧಿಸಿ ವಸೂಲಿ ಮಾಡುವುದನ್ನು ಬಿಡಬೇಕು; ಅನ್ಯಾಯವಾಗಿ ದಂಡ ಮುಂತಾದ ಶುಲ್ಕ ವಸೂಲು ಮಾಡಬಾರದು. ಇದು ನಮ್ಮ ಹೃತ್ಪೂರ್ವಕ ಪ್ರಾರ್ಥನೆ. ಸಾಕಷ್ಟು ಇರುವುದರಲ್ಲೇ ಅವರು ತೃಪ್ತಿ ಹೊಂದಲಿ. ಮನೆಗೆ ಮನೆ, ನೆಲಕ್ಕೆ ನೆಲ ಸೇರಿ, ಇತರರ ಮನೆ ಹಾಳು ಮಾಡದಿರಲಿ. ಅವರಿಗೆ ಒಳ್ಳೆಯ ಬುದ್ಧಿ ಕರುಣಿಸು, ದೇವರೇ...."[2]

ಆದರೆ ಪ್ರಾರ್ಥನೆಯೆಲ್ಲ ನಿಷ್ಫಲವಾಯಿತು. ಆಕ್ರಮಣ, ಆವರಣ, ದುಬಾರಿ ಗೇಣಿ ವಸೂಲಿಗಳ ಹಾದಿಯಲ್ಲಿ ಪ್ರಭುಗಳು ಮುಂದುವರಿದರು. ಇಡೀ ಹಳ್ಳಿಗಳು ಹಾಳು ಹಾಳು ಸುರಿದುವು. ಹೊರಹಾಕಲ್ಪಟ್ಟ ಜನ ಉಪವಾಸದಿಂದ ನರಳಿದರು, ಕಳವು ಭಿಕ್ಷೆಗಳ ಹಾದಿ ಹಿಡಿದರು. ಬೀದಿಗಳು ಭಿಕ್ಷುಕರಿಂದ ತುಂಬಿದುವು. ಇದನ್ನು ತಪ್ಪಿಸಲು ಪ್ರಾರ್ಥನೆಯೇ ಅಲ್ಲದೆ ಇತರ ವಿಧಾನಗಳನ್ನು ಅನುಸರಿಸಬೇಕಾಯಿತು. ಶಾಸನಗಳು ಜಾರಿಗೆ ಬಂದುವು. ರಾಜರಿಗೆ ನಿಜವಾಗಿಯೂ ತಲೆ ನೋವು ಉಂಟಾಯಿತು. ಹಳ್ಳಿ ನಿರ್ಜನವಾಗದಂತೆ ತಡೆಯಬೇಕಾಯಿತು. ಸೈನ್ಯಕ್ಕೆ ಹೆಚ್ಚಾಗಿ ಸೇರುತ್ತಿದ್ದವರು ರೈತರೇ, ಸಣ್ಣ ಜಮೀನು ಒಡೆಯರೇ. ಆದ್ದರಿಂದ ಅವರ ಅಂಜಿಕೆ ಸಹಜವಾಗಿಯೇ ಇತ್ತು. ತಮ್ಮ ಜೀವನೋಪಾಯ ಕಳೆದುಕೊಂಡಿದ್ದ ಈ ರೈತರು ಯಾವಾಗಲೂ ತಮ್ಮ ಕಂದಾಯಗಳನ್ನು ಕ್ಲುಪ್ತವಾಗಿ ಸಲ್ಲಿಸುತ್ತಿದ್ದವರು. ಸರಕಾರದ ಆದಾಯ ಹೆಚ್ಚಿಸಲು ಮುಖ್ಯ ಕಾರಣವಾಗಿದ್ದವರು ಇವರೇ. ಈಗ ಇವರು ದುರ್ಗತಿಗಿಳಿದಿದ್ದರು. ಈ ಅಲೆಮಾರಿ ಭಿಕ್ಷುಕ ತಂಡಗಳು ಬಹು ಅಪಾಯಕಾರಿಗಳಾಗಿದ್ದುವು. ಇವರು ಬೆಂಕಿ ಇಟ್ಟರು, ಬೇಲಿ ಕಿತ್ತೊಗೆದರು, ದಂಗೆ ಎದ್ದರು. ಆದ್ದರಿಂದ

---

[1] Quoted in E. P. Cheyney, *Social Changes in England in the 16th Century*, p. 45. Ginn and Company, Boston, 1895.

[2] R. Crowley, *Select Works*. Introduction, p. XXII. Ed. by J. M. Cowper. Early English Text Society. London, 1872.

ನೆಲದ ಆಕ್ರಮಣ ಆವರಣಗಳ ವಿರುದ್ಧ ಶಾಸನಗಳು ಜಾರಿಗೆ ಬಂದುವು. ಇಂಥ ಮೊದಲನೆಯ ಶಾಸನ ಬಂದದ್ದು ೧೪೮೯ರಲ್ಲಿ. ಅನಂತರ ಉದ್ದಕ್ಕೂ, ಹದಿನಾರನೆಯ ಶತಮಾನ ಪೂರ್ತ, ಒಂದಾದ ಮೇಲೊಂದು ಶಾಸನ ಬಂತು. ಹೀಗೆ ಪದೇ ಪದೇ ಇಂಥ ಶಾಸನ ಬರುತ್ತಿದ್ದುದರಿಂದ ಒಂದು ವಿಚಾರ ಸ್ಪಷ್ಟ. ಈ ಶಾಸನಗಳು ಸಾಮಾನ್ಯವಾಗಿ ಅಲಕ್ಷಿಸಲ್ಪಡುತ್ತಿದ್ದುವು. ಆದ್ದರಿಂದ ಈ ಶಾಸನಗಳನ್ನು ತಿದ್ದಿ ತಿದ್ದಿ ಹೊಸ ಹೊಸ ಶಾಸನ ಜಾರಿಗೆ ತರಬೇಕಾದ ಅಗತ್ಯ ಉಂಟಾಯಿತು. ಈ ಶಾಸನಗಳ ದುರುಪಯೋಗವಾಗದಂತೇನೋ ಕ್ರಮ ಕೈಕೊಳ್ಳಲಾಯಿತು. ಸ್ಥಳೀಯ ಜಮೀನುದಾರರೇ ಸ್ಥಳೀಯ ನ್ಯಾಯಾಧಿಪತಿಗಳೂ ಆಗಿದ್ದಾಗ ಈ ಶಾಸನ ಕಟ್ಟುನಿಟ್ಟಾಗಿ ಜಾರಿಗೆ ಬರುತ್ತಲೇ ಇರಲಿಲ್ಲ. ನೆಲದ ಆವರಣದ ವಿರುದ್ಧ ರೈತರು ದಂಗೆ ಎದ್ದಾಗ ಶಾಸನ ಮುರಿಯುತ್ತಿದ್ದವರು ಅವರಲ್ಲ—ಜಮೀನುದಾರರೇ ಶಾಸನ ಭೇದಕರಾಗಿದ್ದರು. ಆದರೂ ರೈತರ ದಂಗೆಗಳನ್ನು ಹತ್ತಿಕ್ಕಲು ಬಹು ಉಗ್ರ ಕ್ರಮವನ್ನೇ ಕೈಕೊಳ್ಳಲಾಗುತ್ತಿತ್ತು. ಯಾವಾಗಲೂ ಹೀಗೆಯೇ.

ಈ ಕಾಲದಲ್ಲಿ ಆದ ಒಂದು ಮುಖ್ಯ ವ್ಯತ್ಯಾಸವನ್ನು ನೀವು ಕಾಣಬಹುದು. ನೆಲದ ಮೇಲೆ ಎಷ್ಟು ಜನ ದುಡಿಯುವರೋ, ಅದಕ್ಕೆ ತಕ್ಕಂತೆ ಆ ಭೂಮಿಗೆ ಬೆಲೆ—ಎಂಬ ಹಳೆಯ ಭಾವನೆ ಮರೆಯಾಯಿತು. ವಾಣಿಜ್ಯ ಕೈಗಾರಿಕೆಗಳ ಬೆಳೆವಣಿಗೆಯಿಂದ, ಬೆಲೆಯ ಕ್ರಾಂತಿಯಿಂದ, ಮನುಷ್ಯರಿಗಿಂತ ಹಣವೇ ಪ್ರಧಾನವಾಯಿತು. ನೆಲದ ಬಗ್ಗೆ ಇದ್ದ ಹಳೆಯ ದೃಷ್ಟಿ ಹೋಗಿ, ಅದು ಹಣಗಳಿಸುವ ಸಾಧನವಾಯಿತು. ಇತರ ಆಸ್ತಿಯಂತೆಯೇ ಇದನ್ನೂ ಪರಿಗಣಿಸುವುದನ್ನು ಜನ ಕಲಿತರು; ಹಣ ಗಳಿಸುವ ಉದ್ದೇಶದಿಂದ ಇದನ್ನು ಕೊಂಡು ಮಾರುವ ಸಟ್ಟಾ ವ್ಯಾಪಾರಿಗಳ ದಾಳದ ಆಟದ ಕಾಯಾಯಿತು, ಇದು.

ನೆಲದ ಆವರಣ ಚಳುವಳಿಯಿಂದ ಬಹು ಜನರು ದುಃಖಕ್ಕೀಡಾದರು. ಆದರೆ ಇದರಿಂದ ವ್ಯವಸಾಯಾಭಿವೃದ್ಧಿಯೂ ಹೆಚ್ಚು ಸಾಧ್ಯವಾಯಿತು. ತಮ್ಮ ದುಡಿಮೆಯ ಶಕ್ತಿಯಲ್ಲದೆ ಬೇರೇನೂ ಜೀವನೋಪಾಯವಿಲ್ಲದ ಈ ಭೂಹೀನರು ಬಂಡವಾಳಗಾರರು ಸ್ಥಾಪಿಸಿದ ಕೈಗಾರಿಕೆಗೆ ಒದಗಿದರು. ಕೈಗಾರಿಕೆಗೆ ದುಡಿಮೆಗಾರರ ಆವಶ್ಯಕತೆಯಿತ್ತು. ಈ ಆವಶ್ಯಕತೆ ಇವರಿಂದ ಸ್ವಲ್ಪ ಮಟ್ಟಿಗೆ ಪೂರೈಸಿತು.

# ೧೦. ದುಡಿಮೆಗಾರರು ಬೇಕು – ಎರಡು ವರ್ಷದವರೂ ಅರ್ಜಿ ಹಾಕಿಕೊಳ್ಳಬಹುದು

ಪೇಟೆಯ ವಿಸ್ತರಣೆ. ಈ ಮಾತಿನ ಪುನಶ್ಚರಣೆ ಮಾಡಿ. ನಿಮ್ಮ ನಾಲಗೆಯ ಮೇಲೆ ಕುಣಿದ ಈ ಮಾತು ನಿಮ್ಮ ಮನಸ್ಸಿನಲ್ಲೂ ಶಾಶ್ವತವಾಗಿ ಅಚ್ಚೊತ್ತಲಿ. ನಮಗೆ ಪರಿಚಿತ ವಾದ ಬಂಡವಾಳ ವ್ಯವಸ್ಥೆಯಲ್ಲಿ ಉದ್ಯಮ ಬೆಳೆಯಲು ಕಾರಣವಾದ ಪ್ರವೃತ್ತಿಗಳನ್ನರಿಯಲು ಇದು ಮುಖ್ಯ.

ಒಂದು ಸಣ್ಣ ಸ್ಥಿರವಾದ ಪೇಟೆಗಾಗಿ ಪದಾರ್ಥ ಉತ್ಪಾದಿಸುವುದು ಒಂದು ತೆರ. ಇಲ್ಲಿ ಗಿರಾಕಿ ತಾನಾಗಿಯೇ ಉತ್ಪಾದಕನ ವ್ಯಾಪಾರಕೇಂದ್ರಕ್ಕೆ ಬಂದು ತನಗೆ ಇಂಥ ಪದಾರ್ಥ ಬೇಕೆಂದು ಆದೇಶ ನೀಡುತ್ತಾನೆ. ಈ ಆದೇಶಕ್ಕೆ ಅನುಸಾರವಾಗಿಯೇ ಉತ್ಪಾದನೆ. ಆದರೆ ಒಂದು ನಗರದ ಪರಿಮಿತಿಯನ್ನೂ ಮೀರಿ ಬೆಳೆದು, ಇಡೀ ರಾಷ್ಟ್ರವನ್ನೇ ಆಕ್ರಮಿಸಿ, ಅದರ ಎಲ್ಲೆಯನ್ನೂ ದಾಟಿ ವಿಸ್ತರಿಸಿದ ವಿಶಾಲ ಪೇಟೆಗಾಗಿ ಪದಾರ್ಥ ಉತ್ಪಾದಿಸುವುದೇ ಬೇರೆ ತೆರ. ಇದರ ಸ್ವರೂಪ ವಿಲಕ್ಷಣಯುತ. ಸ್ಥಳೀಯವಾದ ಸಣ್ಣ ಪೇಟೆಯ ಚೌಕಟ್ಟಿನಲ್ಲಿ ಹೊಂದಿಕೊಂಡಿತ್ತು, ಹಳೆಯ ವೃತ್ತಿಸಂಘ ವ್ಯವಸ್ಥೆ. ಪೇಟೆ ರಾಷ್ಟ್ರೀಯವೂ ಅಂತರರಾಷ್ಟ್ರೀಯವೂ ಆದಾಗ, ವೃತ್ತಿಸಂಘದ ವ್ಯವಸ್ಥೆ ಇದಕ್ಕೆ ಹೊಂದಿಕೊಳ್ಳಲಾರದೆ ಹೋಯಿತು; ಹೊಂದಿಸುವುದು ಅಸಾಧ್ಯವಾಯಿತು. ಸ್ಥಳೀಯ ಕೈ ಕಸಬುದಾರನಿಗೆ ನಗರದ ಪೇಟೆಯ ವ್ಯಾಪಾರ ಅವನ ಹಸ್ತಗತ, ಪರಿಚಿತ; ಅವನ ಚಟುವಟಿಕೆ ಪರಿಮಿತ. ಆದರೆ ವಿಶ್ವ ವ್ಯಾಪಾರ ಬೇರೆ ತೆರ. ವಿಸ್ತಾರಗೊಳ್ಳುತ್ತಿದ್ದ ಪೇಟೆಗೆ ಅನುವಾಗಿ ಮಧ್ಯಸ್ಥಗಾರ ಆವಿರ್ಭವಿಸಿದ. ಉತ್ಪಾದನೆಯಾದ ವಸ್ತು ನೂರಾರು ಮೈಲಿ, ಸಹಸ್ರಾರು ಮೈಲಿ ಆಚೆ ಇರುವ ಬಳಕೆದಾರನ ಕೈ ಸೇರುವಂತೆ ಮಾಡುವ ಕೆಲಸ ಮಧ್ಯಸ್ಥಗಾರನದಾಯಿತು.

ವೃತ್ತಿಸಂಘದ ಕೈ ಕಸಬುದಾರ ಯಜಮಾನ ಕೇವಲ ಪದಾರ್ಥೋತ್ಪಾದಕನಷ್ಟೇ ಆಗಿರಲಿಲ್ಲ. ಅವನು ಅದಕ್ಕಿಂತ ಮಿಗಿಲಾಗಿದ್ದ. ಉತ್ಪಾದನೆಯೇ ಅಲ್ಲದೆ ಇನ್ನೂ ನಾಲ್ಕು ಕರ್ತವ್ಯಗಳಿದ್ದುವು ಆತನಿಗೆ. ಪಂಚರಂಗಿ ಆತ. ಐದು ವಿಧದ ಕೆಲಸ ಆತನಲ್ಲಿ ಅಂತರ್ಗತವಾಗಿತ್ತು. ಉತ್ಪಾದನೆಗೆ ಬೇಕಾದ ಕಚ್ಚಾ ವಸ್ತುವಿನ ಅನ್ವೇಷಣೆ, ವ್ಯಾಪಾರ ಮಾಡಬೇಕಾಗಿತ್ತು ಈತ; ಈ ದೃಷ್ಟಿಯಿಂದ ಇವನು ವರ್ತಕ; ಕಾರೇಗಾರರೂ ಅಭ್ಯಾಸಿಗಳೂ ಇವನ ಕೈಕೆಳಗೆ ಕೆಲಸ ಮಾಡುತ್ತಿದ್ದುದರಿಂದ ಧಣಿ; ಇವರ ಕೆಲಸದ ಮೇಲುಸ್ತುವಾರಿ ಮಾಡಬೇಕಾಗಿದ್ದುದರಿಂದ ಮೇಲ್ವಿಚಾರಕ; ಸಿದ್ಧವಸ್ತುಗಳನ್ನು ಅಂಗಡಿಯಲ್ಲಿಟ್ಟು ಮಾರುತ್ತಿದ್ದುದರಿಂದ ಅಂಗಡಿಕಾರ.[1]

ಮಧ್ಯಸ್ಥಗಾರ ಪ್ರವೇಶಿಸಿದ. ಆಗ ಉದ್ಯಮಗೃಹದ ಯಜಮಾನನ ಐದು ಕೆಲಸಗಳಲ್ಲಿ

---

[1] Cf. G. Unwin, *Industrial Organization in the Sixteenth and Seventeenth Centuries,* p. 10. Clarendon Press, Oxford, 1904.

ಎರಡು ಹೋಗಿ ಮೂರು ಉಳಿದುವು. ಅವನು ಕೆಲಸಗಾರ, ಯಜಮಾನ, ಮೇಲ್ವಿಚಾರಕನಾಗಿ ಮಾತ್ರ ಉಳಿದ. ಕಚ್ಚಾವಸ್ತುವಿನ ಕೊಳ್ಳಿಕೆ ಹಾಗೂ ಸಿದ್ಧವಸ್ತುವಿನ ಮಾರಾಟ ಅವನಿಗೆ ಸಂಬಂಧಿಸಿದವಲ್ಲವಾದುವು. ಮಧ್ಯಸ್ಥಗಾರ ಅವನಿಗೆ ಬೇಕಾದ ಅಸಿದ್ಧವಸ್ತು ತಂದುಕೊಟ್ಟು, ಸಿದ್ಧವಸ್ತು ಪಡೆಯುತ್ತಿದ್ದ. ಅವನಿಗೂ ಗಿರಾಕಿಗೂ ನಡುವೆ ಮಧ್ಯಸ್ಥಗಾರ ಬಂದ. ಕಚ್ಚಾಪದಾರ್ಥ ಎಷ್ಟೆಷ್ಟು ಶೀಘ್ರವಾಗಿ ಬರುತ್ತಿತ್ತೋ ಅಷ್ಟಷ್ಟು ಶೀಘ್ರವಾಗಿ ಪದಾರ್ಥೋತ್ಪಾದನೆ ಮಾಡುವುದು ಮಾತ್ರ ಕೈ ಕಸಬು ಯಜಮಾನನ ಕೆಲಸವಾಯಿತು.

ಮಧ್ಯಸ್ಥಗಾರನೇ ಹಲವು ಮಂದಿ ಕೆಲಸಗಾರರನ್ನು ನೇಮಿಸಿ, ಅವನು ತಂದುಕೊಟ್ಟ ವಸ್ತುವಿನಿಂದ ಈ ಕೆಲಸಗಾರರು ತಂತಮ್ಮ ಮನೆಗಳಲ್ಲೇ ಪದಾರ್ಥೋತ್ಪಾದನೆ ಮಾಡುವ ಈ ವ್ಯವಸ್ಥೆಗೆ ಗೃಹೋದ್ಯಮ ಪದ್ಧತಿ ಅಥವಾ ಹೊರಗೆಲಸ ಮಾಡುವ ಪದ್ಧತಿ ಎಂದು ಹೆಸರು. ಉತ್ಪಾದನೆಯ ತಂತ್ರದ ದೃಷ್ಟಿಯಿಂದ ಇದಕ್ಕೂ ವೃತ್ತಿಸಂಘ ಪದ್ಧತಿಗೂ ಏನೂ ವ್ಯತ್ಯಾಸವಿರಲಿಲ್ಲ. ಯಜಮಾನನೂ ಅವನ ಸಹಾಯಕರೂ ಮನೆಯಲ್ಲೇ, ಹಿಂದಿನಂತೆಯೇ, ಅದೇ ಉಪಕರಣಗಳಿಂದ ಪದಾರ್ಥ ತಯಾರಿಸುತ್ತಿದ್ದರು. ಉತ್ಪಾದನೆಯ ವಿಧಾನ ಬದಲಾಗಿರಲಿಲ್ಲ. ಆದರೆ ವರ್ತಕನ ಪಾತ್ರ ವಹಿಸಿದ ಮಧ್ಯಸ್ಥಗಾರ ಪದಾರ್ಥದ ಮಾರಾಟದ ವ್ಯವಸ್ಥೆಯನ್ನು ರೂಪಿಸಿದ.

ಉತ್ಪಾದನೆಯ ವ್ಯವಸ್ಥೆಯನ್ನು ಮಧ್ಯಸ್ಥಗಾರ ಬದಲಾಯಿಸಲಿಲ್ಲ, ನಿಜ. ಆದರೆ ಉತ್ಪಾದನೆ ಹೆಚ್ಚಿಸಲು ಸಾಧ್ಯವಾಗುವಂತೆ ಅದನ್ನು ಪುನರ್ರಚಿಸಿದನೇನೋ ಹೌದು. ವಿಶೇಷ ಪರಿಶ್ರಮದ (specialisation) ಅನುಕೂಲಗಳೇನೆಂಬುದನ್ನು ಅವನು ಬೇಗ ಕಂಡುಕೊಂಡ. ಮಧ್ಯಸ್ಥಗಾರ ಏನನ್ನು ಸಾಧಿಸಲೆತ್ನಿಸಿದನೆಂಬುದನ್ನು ವಿಲಿಯಂ ಪೆಟ್ಟಿ ಎಂಬ ಹದಿನೇಳನೆಯ ಶತಮಾನದ ಸುಪ್ರಸಿದ್ಧ ಅರ್ಥಶಾಸ್ತ್ರಜ್ಞ ಈ ರೀತಿ ಹೇಳುತ್ತಾನೆ: "ಒಬ್ಬ ಹತ್ತಿ ಎಕ್ಕುವ, ಇನ್ನೊಬ್ಬ ನೂಲು ತೆಗೆಯುವ, ಮತ್ತೊಬ್ಬ ನೇಯುವ, ಮಗದೊಬ್ಬ ತೊಳೆಯುವ, ಬೇರೊಬ್ಬ ಉಡುಪು ಸಿದ್ಧಗೊಳಿಸುವ, ಇನ್ನೂ ಒಬ್ಬ ಇಸ್ತ್ರಿ ಮಾಡಿ ಕಟ್ಟುವ ಕೆಲಸ ವಹಿಸಿಕೊಂಡರೆ, ಆಗ ಬಟ್ಟೆಯ ಬೆಲೆ ಅಗ್ಗವಾಗುವುದು—ಈ ಎಲ್ಲ ಕೆಲಸವನ್ನೂ ಒಡ್ಡೊಡ್ಡಾಗಿ ಒಬ್ಬನೇ ಮಾಡುವಾಗ ಇರುವುದಕ್ಕಿಂತ ಹೆಚ್ಚು ಅಗ್ಗವಾಗುವುದು. ಇದು ಸಹಜ."[1] ಒಂದು ಪದಾರ್ಥದ ಉತ್ಪಾದನೆಗಾಗಿ ಹಲವು ಜನರನ್ನು ನೇಮಿಸಿದಾಗ ಈ ಕೆಲಸವನ್ನು ಅವರಲ್ಲಿ ವಿಭಾಗಿಸಿ ಹಂಚಬಹುದು. ಪ್ರತಿ ಕೆಲಸಗಾರನಿಗೂ ಒಂದೇ ಕೆಲಸ. ಅದೇ ಕೆಲಸವನ್ನು ಅವನು ಮತ್ತೆ ಮತ್ತೆ ಮಾಡುವುದರಿಂದ ಆ ಕೆಲಸದಲ್ಲಿ ಆತ ಪ್ರಾವೀಣ್ಯ ಪಡೆಯುವನು. ಇದರಿಂದ ಸಮಯದ ಉಳಿತಾಯವೂ ಆಗುವುದು, ಉತ್ಪಾದನೆಯ ವೇಗವೂ ಹೆಚ್ಚುವುದು. ವಿಸ್ತಾರಗೊಳ್ಳುತ್ತಿದ್ದ ಪೇಟೆಯ ಅಗತ್ಯ ಪೂರೈಸಲು ಇಷ್ಟೇ ಬದಲಾವಣೆ ಸಾಲದಿತ್ತು. ಇನ್ನೂ ಹಲವು ತೆರನ ಪರಿವರ್ತನೆ ಅಗತ್ಯವಾಗಿತ್ತು. ಸಾಹಸಿ ಮಧ್ಯಸ್ಥಗಾರ ಯೋಚಿಸಿದ್ದು ಇದೇ.

---

[1] W. Petty, *Economic Writings*, vol. I, p. 260. Edited by C. H. Hull, 2 vols. Cambridge University Press, 1899.

ಆದರೆ ವೃತ್ತಿಸಂಘವ ಮುಂದಿ ಬೇರೆ ರೀತಿ ಆಲೋಚಿಸಿದರು. ಈ ವೃತ್ತಿಸಂಘಗಳು ತಮ್ಮ ಪದಾರ್ಥಗಳ ಉತ್ಪಾದನೆ ಹಾಗೂ ಮಾರಾಟವ ಏಕಸ್ವಾಮ್ಯದ ವಿಚಾರದಲ್ಲಿ ಇತರರು ತಲೆ ಹಾಕುವುದನ್ನು ಸಹಿಸುತ್ತಿರಲಿಲ್ಲ. ಇವು ತಮ್ಮ ಹಕ್ಕನ್ನು ಬಹು ಜಾಗರೂಕತೆಯಿಂದ ಕಾಯ್ದುಕೊಳ್ಳುತ್ತಿದ್ದುವು. ಈ ಪ್ರವೃತ್ತಿ ಎಷ್ಟು ದೂರ ಸಾಗಿತ್ತೆಂದರೆ, ಹಬೆ ಇಂಜನ್ ಕಂಡು ಹಿಡಿದ ಜೇಮ್ಸ್‌ವಾಟ್ ಈ ಯಂತ್ರದ ಮಾದರಿಯನ್ನು ಕುರಿತು ಪ್ರಯೋಗ ಪರೀಕ್ಷೆ ನಡಸುತ್ತಿದ್ದಾಗ, ಆತ ಗ್ಲಾಸ್ಗೋ ನಗರದ ವರ್ತಕಸಂಘದ ಸದಸ್ಯನಲ್ಲವೆಂಬ ಕಾರಣದಿಂದ, ಅವನು ಈ ಪ್ರಯೋಗ ಪರೀಕ್ಷೆಯನ್ನೇ ನಡಸಬಾರದೆಂದು ಈ ಸಂಘ ನಿಷೇಧ ಹಾಕಲು ಯತ್ನಿಸಿತಂತೆ! ಯಾವುದಾದರೊಂದು ಪದಾರ್ಥದ ಉತ್ಪಾದನೆಯ ವಿಶಿಷ್ಟ ಹಕ್ಕು ತಮ್ಮದು—ಎಂದು ಬಹುಕಾಲದಿಂದ ನಂಬಿಕೊಂಡು ಬಂದಿದ್ದ ವೃತ್ತಿದಾರರು, ತಮ್ಮ ಹಳೆಯ ಉತ್ಪಾದನೆಯ ವಿಧಾನಗಳಲ್ಲಿ ಮಧ್ಯಸ್ಥಗಾರರು ಬದಲಾವಣೆ ಮಾಡುವ ಸಾಹಸ ಮಾಡಿದಾಗ, ಗಟ್ಟಿಯಾಗಿಯೂ ದೀರ್ಘವಾಗಿಯೂ ಬೊಬ್ಬೆ ಇಟ್ಟದ್ದರಲ್ಲಿ ಆಶ್ಚರ್ಯವಿಲ್ಲ. ಸಂಪ್ರದಾಯವೇ ವೃತ್ತಿಸಂಘಗಳನ್ನಾಳುತ್ತಿತ್ತು. ಹಳೆಯ ವಿಧಾನ, ಹಳೆಯ ಪೇಟೆ, ಹಳೆಯ ವಿಶಿಷ್ಟ ಹಕ್ಕುದಾರಿಕೆ, ಎಂದಿನಂತೆ ವ್ಯಾಪಾರ—ಇದು ಈ ವೃತ್ತಿದಾರರಿಗೆ ಬಹು ಅನುಕೂಲವಾಗಿತ್ತು. ಆದರೆ ಸಾಹಸ ಪ್ರಿಯನಾದ ಎಚ್ಚತ್ತ ಮಧ್ಯಸ್ಥಗಾರನಿಗೆ ಇದು ಹಿಡಿಸಲಿಲ್ಲ. ಪದಾರ್ಥಕ್ಕಾಗಿ ಹೆಚ್ಚು ಬೇಡಿಕೆ ಬರುತ್ತಿದ್ದ ಕಾಲದಲ್ಲಿ ಸಂಪ್ರದಾಯಕ್ಕೆ ಮಣೆ ಹಾಕಲು ಅವನಿಗೆ ಸಮುಂಪವಿರಲಿಲ್ಲ. ಅವನು ಹಳೆಯ ವಿಧಾನ ಬದಲಿಸಿ, ಹೊಸ ಪೇಟೆಯ ಬೇಡಿಕೆ ಪೂರೈಸಿ, ಹಳೆಯ ವೃತ್ತಿಸ್ವಾಮ್ಯ ವಿರುದ್ಧ ಹೋರಾಟ ನಡಸಲಿಚ್ಛಿಸಿದ. ಅಸಂಖ್ಯಾತ ನಿಯಮ ನಿಬಂಧನೆಗಳಿಂದ ಕೂಡಿದ್ದ ವೃತ್ತಿ ವ್ಯವಸ್ಥೆ ಹಳತಾಗಿತ್ತು, ಓಬೀರಾಯನ ಕಾಲದ್ದೆನಿಸಿತ್ತು, ಉದ್ಯಮದ ಬೆಳವಣಿಗೆಗೆ ಅಡ್ಡಿಯಾಗಿತ್ತು. ಈ ವ್ಯವಸ್ಥೆಯನ್ನು ಉಚ್ಚಾಟಿಸಬೇಕಾಗಿತ್ತು. ಅದರ ಉಚ್ಚಾಟನೆಯೂ ಆಯಿತು.

ಇದು ಒಮ್ಮೆಲೇ ಆಗಲಿಲ್ಲ, ಪ್ರತ್ಯಕ್ಷವಾಗಿಯೂ ಆಗಲಿಲ್ಲ. (ಮಹಾಕ್ರಾಂತಿಯ ಕಾಲದವರೆಗೂ ಫ್ರಾನ್ಸಿನಲ್ಲಿ ವೃತ್ತಿಸಂಘಗಳು ಶಾಸನಪೂರ್ವಕವಾಗಿ ರದ್ದಾಗಲಿಲ್ಲ. ಇಂಗ್ಲೆಂಡಿನಲ್ಲಿ ಹತ್ತೊಂಬತ್ತನೆಯ ಶತಮಾನದ ಆದಿಕಾಲದ ವರೆಗೂ ಅವುಗಳ ಕೆಲವು ಹಕ್ಕುಗಳು ಉಳಿದುಕೊಂಡೇ ಬಂದುವು.) ವೃತ್ತಿ ವ್ಯವಸ್ಥೆಯ ಚೌಕಟ್ಟಿನಲ್ಲೇ ಮಧ್ಯವರ್ತಿಗಳೂ ಸಾಮಾನ್ಯವಾಗಿ ತಮ್ಮ ಕಾರ್ಯಾಚರಣೆ ನಡಸುತ್ತಿದ್ದರು ; ಇವರು ತೋರಿಕೆಗೆ ಅದರ ಸ್ವರೂಪವನ್ನು ಒಪ್ಪಿದ್ದರು ; ಆದರೆ ವಸ್ತುತಃ ಅದನ್ನು ಆಂತರಿಕವಾಗಿ ಶಿಥಿಲಗೊಳಿಸುತ್ತಿದ್ದರು. ಒಮ್ಮೊಮ್ಮೆ ಒಂದು ವೃತ್ತಿ ಸಂಘದ ಶ್ರೀಮಂತ ಯಜಮಾನ ಸದಸ್ಯರು ಆ ಸಂಘದ ಇತರ ಯಜಮಾನ ಸದಸ್ಯರನ್ನೂ ಕೆಲಸಕ್ಕೆ ನೇಮಿಸಿಕೊಳ್ಳುತ್ತಿದ್ದರು ; ಒಮ್ಮೊಮ್ಮೆ ಒಂದು ಕೈಗಾರಿಕೆಯ ಕೆಲವು ವೃತ್ತಿ ಸಂಘಗಳು ಕ್ರಮೇಣ ವ್ಯಾಪಾರಕಾರ್ಯವನ್ನೂ ಕೈಕೊಂಡು, ಆ ಕೈಗಾರಿಕೆಯ ಇತರ ವೃತ್ತಿ ಸಂಘಗಳಿಗೆ 'ಹೊರಗೆಲಸ ಕೊಡಲು' ಆರಂಭಿಸಿದುವು. ಯಜಮಾನರ ನಡುವಣ ಹಳೆಯ ಸಮಾನತೆ ಮರೆಯಾಯಿತು. ಈ ಸಮಾನತೆಯೇ ವೃತ್ತಿ ಸಂಘ ವ್ಯವಸ್ಥೆಯ ತಿರುಳಾಗಿತ್ತು.

ತಮಗೆ ಪ್ರತಿಬಂಧಕಗಳಾಗಿದ್ದ ವೃತ್ತಿಸಂಘ ನಿಯಮಗಳನ್ನೂ ನಿಬಂಧನೆಗಳನ್ನೂ ಉಲ್ಲಂಘಿಸುವುದು ಅಗತ್ಯವಾದಾಗ ಮಧ್ಯಸ್ಥಗಾರರು ಇದಕ್ಕೆ ತಕ್ಕ ಉಪಾಯ ಹೂಡುತ್ತಿದ್ದರು. ತಮ್ಮ ಕೈಗಾರಿಕೆಯನ್ನು ವೃತ್ತಿಸಂಘದ ಎಲ್ಲೆಯೊಳಗಿಂದ ಹೊರಕ್ಕೆ, ಗ್ರಾಮಾಂತರ ಪ್ರದೇಶಕ್ಕೆ, ಸಾಗಿಸುತ್ತಿದ್ದರು. ಇಲ್ಲಿ ಕೂಲಿ, ಅಭ್ಯಾಸಿಗಳ ಸಂಖ್ಯೆ ಮುಂತಾದ ವಿಚಾರಗಳಲ್ಲಿ ವೃತ್ತಿ ಸಂಘದ ನಿಬಂಧನೆಗಳಿಗೆ ಬದ್ಧರಾಗಿರಬೇಕಾಗಿರಲಿಲ್ಲ; ಸಮಯೋಚಿತ ವಿಧಾನಗಳಿಂದ ಉತ್ಪಾದನ ಕಾರ್ಯ ನಡಸಬಹುದಿತ್ತು. ಉದಾಹರಣೆಗೆ, ಗ್ರೀನ್‌ವಿಚ್ಚಿನ ಕಬ್ಬಿಣದ ಸಾಮಾನು ವ್ಯಾಪಾರಿ ಆಂಬ್ರೋಸ್ ಕ್ರೌಲಿ ಎಂಬಾತ ಡರ್ಹ್ಯಾಮ್ ಎಂಬಲ್ಲಿಗೆ ಹೋಗಿ ನೆಲಸಿ, 'ಹೊರಗೆಲಸ ಕೊಡುವ' ಪದ್ಧತಿಯ ಮೇರೆಗೆ ಕಬ್ಬಿಣದ ಸಾಮಾನಿನ ದೊಡ್ಡ ಪ್ರಮಾಣದ ತಯಾರಿಕೆ ವ್ಯವಸ್ಥೆಯನ್ನು ಸಂಘಟಿಸಿದ. "ಹಿಂದೆ ಸಣ್ಣ ಹಳ್ಳಿಯಾಗಿದ್ದ ಇಲ್ಲಿ ೧೫೦೦ ಪ್ರಜಾಸಂಖ್ಯೆ ಹೊಂದಿದ್ದ ಪ್ರವರ್ಧಮಾನ ಕೈಗಾರಿಕೆಯ ನಗರವೊಂದನ್ನು ಕ್ರೌಲಿ ಸ್ಥಾಪಿಸಿದ. ಮೊಳೆ, ಬೀಗ, ಅಗುಳಿ, ಉಳಿ, ಗುದ್ದಲಿ ಮುಂತಾದ ಉಕ್ಕಿನ ಉಪಕರಣಗಳ ತಯಾರಿಕೆಯ ವ್ಯವಸ್ಥೆ ನಿರ್ಮಿಸಿದ. ಈ ಉದ್ಯಮ ಗೃಹಗಳು ಕ್ರೌಲಿಗೆ ಸೇರಿದ್ದುವೆಂದು ಕಾಣುತ್ತದೆ. ಕಚ್ಚಾ ವಸ್ತು, ಉಪಕರಣ ಇವನ್ನು ಕ್ರೌಲಿಯೇ ಕೆಲಸಗಾರರಿಗೆ ಕೊಡುತ್ತಿದ್ದ. ಇವನ್ನು ಪಡೆಯಲು ಅವರು ಸಾಕಷ್ಟು ಮೊತ್ತಕ್ಕೆ ಒಂದು ಪತ್ರ ಬರೆದುಕೊಡಬೇಕಾಗಿತ್ತು. ಇದನ್ನು ಕೊಟ್ಟವನಿಗೆ ಕಾರ್ಯಾಗಾರ ಹೊಂದುವ ಅಧಿಕಾರವಿರುತ್ತಿತ್ತು. ಅವನು ಈ ಕಾರ್ಯಾಗಾರದ ಯಜಮಾನನಾಗಿ, ತನ್ನ ಸಂಸಾರದ ಜನರೊಡನೆ ದುಡಿಯುವುದಲ್ಲದೆ, ಒಬ್ಬಿಬ್ಬ ಕಾರೇಗಾರರನ್ನೂ ಒಬ್ಬ ಅಭ್ಯಾಸಿಯನ್ನೂ ನೇಮಕ ಮಾಡಿಕೊಳ್ಳುವ ಅಧಿಕಾರವನ್ನೂ ಹೊಂದಿದ್ದ. ಕಾರ್ಮಿಕ ಯಜಮಾನನ ಕಾರ್ಯಾಗಾರವೇ, ಉದ್ಯಮ ಗೃಹವೇ, ಕೆಲಸದ ಸ್ಥಳ. ಮಾಡಿದ ಕೆಲಸಕ್ಕೆ ತಕ್ಕಂತೆ ಅವನಿಗೆ ಹಣ ಸಲ್ಲುತ್ತಿತ್ತು....೧೭೦೭ರಲ್ಲಿ 'ಸರ್' ಎಂಬ ಬಿರುದಾಂಕಿತನಾದ ಆಂಬ್ರೋಸ್ ಕ್ರೌಲಿ ಅನಂತರ ಪಾರ್ಲಿಮೆಂಟ್ ಸದಸ್ಯನೂ ಆದ. ಆ ವೇಳೆಗೆ ಅವನು ಎರಡು ಲಕ್ಷ ಪೌಂಡಿನ ಸ್ಥಿತಿವಂತನಾಗಿದ್ದ."[1]

ಕೈಗಾರಿಕೆಯ ವ್ಯವಸ್ಥೆಯಲ್ಲಿ ಈ ರೀತಿಯ ಬದಲಾವಣೆಯನ್ನು ವೃತ್ತಿಸಂಘದ ಮಂದಿ ವಿರೋಧಿಸಿದುದು ಸಹಜ. ತಮ್ಮ ಹಳೆಯ ಸ್ವಾಮ್ಯವನ್ನುಳಿಸಿಕೊಳ್ಳಲು ಅವರು ಹೋರಾಡಿದರು. ಆದರೆ ವೃತ್ತಿಸಂಘಗಳ ಸುಗ್ಗಿಯ ಕಾಲ ಆಗಿ ಹೋಗಿತ್ತು. ಸೋಲಿನ ಹೋರಾಟ ನಡಸುತ್ತಿದ್ದರು ಅವರು. ಪೇಟೆಯ ವಿಸ್ತರಣದಿಂದ ಅವರ ವ್ಯವಸ್ಥೆ ಹಳತಾಯಿತು. ಪದಾರ್ಥಕ್ಕೆ ಬರುತ್ತಿದ್ದ ಹೆಚ್ಚಿನ ಬೇಡಿಕೆಯನ್ನು ಪೂರೈಸಲು ಈ ವ್ಯವಸ್ಥೆ ಅಸಮರ್ಥವಾಗಿತ್ತು. "೧೭೪೭ರ ಫೆಬ್ರುವರಿ ನಾಲ್ಕನೆಯ ದಿನಾಂಕದ ದೂರು ಪತ್ರವೊಂದರಲ್ಲಿ, ಗ್ರಾಮಾಂತರ ಪ್ರದೇಶದಲ್ಲಿ ರಿಬ್ಬನ್ ತಯಾರಿಕೆ ಉದ್ಯಮದ ಬೆಳವಣಿಗೆಯ ಬಗ್ಗೆ ಇವರು ಆಕ್ಷೇಪಿಸಿದರು. ೧೭೧೨ ರಿಂದೀಚೆಗೆ ಪರಿಸ್ಥಿತಿ ಸಂಪೂರ್ಣವಾಗಿ ಬದಲಾಗಿದೆಯೆಂದು, 'ಹೊರಗೆಲಸ ಕೊಡುತ್ತಿದ್ದವರು' ಇದಕ್ಕೆ ಉತ್ತರವನ್ನೂ ನೀಡಿದರು. ವ್ಯಾಪಾರ ಮಹತ್ತರ

---

[1] M. Dobb, *Capitalist Enterprise and Social Progress*, p. 310. Routledge & Sons, London, 1925.

ವಾಗಿ ಬೆಳೆದಿದೆ .... ವೃತ್ತಿ ಸಂಘದ ಸದಸ್ಯರ ಸಂಖ್ಯೆ ಬಹು ಅಲ್ಪ. ಪದಾರ್ಥ ತಯಾರಿಕೆಗಾಗಿ 'ಹೊರಗೆಲಸ ಕೊಡುವವರ' ಪೈಕಿ ಒಬ್ಬರ ಬೇಡಿಕೆಯನ್ನೂ ಕೂಡ ಇಡೀ ವರ್ಷ ಪರ್ಯಂತರ ದುಡಿದರೂ ಇವರು ಪೂರೈಸಲಾರರು"—ಎಂದು ಇವರು ವಾದಿಸಿದರು.

ಎಲ್ಲರಿಗಿಂತ ಹೆಚ್ಚಾಗಿ ಬಟ್ಟೆ ವ್ಯಾಪಾರ ನಡಸುತ್ತಿದ್ದ ಮಧ್ಯಸ್ಥಗಾರರು ಉತ್ಪಾದನೆಯ ವೇಗ ಹೆಚ್ಚಿಸಲು ಬಹು ಉತ್ಸುಕರಾಗಿದ್ದರು. ಕಾರಣ ಇಷ್ಟೆ: ಯೂರೋಪು ಪೂರ್ವದೇಶಗಳಿಗೆ ಬಹು ಕಾಲದಿಂದ ಬಟ್ಟೆಯನ್ನು ಹೆಚ್ಚಿನ ಪ್ರಮಾಣದಲ್ಲಿ ಕಳಿಸುತ್ತಿತ್ತು. ಏರುತ್ತಿದ್ದ ಬೇಡಿಕೆ ಪೂರೈಸಲು ಹೆಚ್ಚು ಹೆಚ್ಚು ಕೆಲಸಗಾರರು ಬೇಕಾಗಿದ್ದರು. ಆದ್ದರಿಂದ ಈ ಮಧ್ಯಸ್ಥಗಾರರು ತಮಗಾಗಿ ಕೆಲಸ ಮಾಡಲೊಪ್ಪಿದ್ದ ನಗರದ ವೃತ್ತಿ ಸಂಘ ಸದಸ್ಯರಿಗೇ ಅಲ್ಲದೆ ಹಳ್ಳಿಗಳಲ್ಲಿದ್ದ ಗಂಡು, ಹೆಣ್ಣು, ಮಕ್ಕಳು ಮುಂತಾಗಿ ಎಲ್ಲರಿಗೂ ಕೆಲಸ ದೊರಕಿಸುವಷ್ಟು ಕಚ್ಚಾ ಸಾಮಗ್ರಿ ಒದಗಿಸಿದರು.

ನೆಲದ ಆವರಣ ಕಾರ್ಯದಿಂದ ತೊಂದರೆಗೀಡಾಗಿದ್ದ ರೈತರಿಗೆ ಗ್ರಾಮಾಂತರ ಪ್ರದೇಶದಲ್ಲಿ ಕೈಗಾರಿಕೆ ಹಬ್ಬಿದ್ದರಿಂದ ಅವರ ಅಲ್ಪ ವರಮಾನದ ಜತೆಗೆ ಇನ್ನು ಕೆಲವು ಷಿಲ್ಲಿಂಗ್ ಗಳಿಸುವ ಅವಕಾಶ ದೊರಕಿತು. ಹಳ್ಳಿಯನ್ನು ಬಿಡಲೇ ಬೇಕಾಗಿದ್ದ ಹಲವರು ಅಲ್ಲೇ ಕಾಲ ತಳ್ಳಲು ಸಾಧ್ಯವಾಯಿತು. ಏಕೆಂದರೆ ವರ್ತಕ ಇವರಿಗೆ ಮಾಡಲು ಕೆಲಸ ಒದಗಿಸಿದ. 'ರಾಬಿನ್ಸನ್ ಕ್ರೂಸೋ' ಎಂಬ ಪ್ರಸಿದ್ಧ ಕಾದಂಬರಿ ಬರೆದ ಡ್ಯಾನಿಯಲ್ ಡೀಫೋ ಎಂಬವನು ೧೭೨೪ರಲ್ಲಿ ಇನ್ನೊಂದು ಪ್ರಸಿದ್ಧ ಪುಸ್ತಕ ಬರೆದ. ಅದರ ಹೆಸರು "ಬ್ರಿಟನ್ನಿನ ಯಾತ್ರೆ" ಮಧ್ಯಸ್ಥಗಾರರು ಒದಗಿಸಿದ ಕೆಲಸವನ್ನು ಹಳ್ಳಿಗರು ಮಾಡುತ್ತಿದ್ದ ಪರಿಯನ್ನು ಈತ ಈ ರೀತಿ ವರ್ಣಿಸಿದ್ದಾನೆ: "ತಯಾರಿಕೆಗಾರರ ಮನೆಗಳ ನಡುವೆ ಅಸಂಖ್ಯಾತ ಗುಡಿಸಿಲುಗಳು—ಅಥವಾ ಸಣ್ಣ ಮನೆಗಳು—ಹರಡಿವೆ. ಇವುಗಳಲ್ಲಿ ಕೆಲಸ ಮಾಡಲು ನೇಮಕವಾದ ದುಡಿಮೆಗಾರರಿದ್ದಾರೆ. ಹೆಂಗಸರು ಮಕ್ಕಳಾದಿಯಾಗಿ ಎಲ್ಲರೂ ಇಲ್ಲಿ ಎಕ್ಕುವ, ನೂಲುವ ಮುಂತಾದ ಕಾರ್ಯದಲ್ಲಿ ನಿರತರು. ಆಬಾಲವೃದ್ಧರೂ ತಂತಮ್ಮ ಜೀವನೋಪಾಯ ಸಂಪಾದನ ನಿರತರು. ನಾಲ್ಕು ವರ್ಷವೂ ಆಗಿದೆಯೋ ಇಲ್ಲವೋ—ಅಂಥ ಮಕ್ಕಳೂ ಕೂಡ ಕೈಯಿಂದ ಕೆಲಸ ಮಾಡುತ್ತವೆ. ಮನೆಯ ಹೊರಗಡೆ ಇದ್ದವರು ಬಹು ಕಡಮೆ ಜನ. ಆದರೆ ಉದ್ಯಮಿ ಯಜಮಾನರ ಮನೆಯ ಬಾಗಿಲು ತಟ್ಟಿದಾಗ ನಾವು ಕಾಣುವ ನೋಟ ಬೇರೆ. ಉತ್ಸಾಹಶಾಲಿ ಜನ ಒಳಗೆ ತುಂಬಿದಾರೆ. ಕೆಲವರು ಬಣ್ಣ ಹಾಕುವರು, ಕೆಲವರು ಬಟ್ಟೆ ಮಡಿಸುವರು, ಕೆಲವರು ಮಗ್ಗದ ಮುಂದೆ ನೇಯುವರು. ಎಲ್ಲರೂ ಶ್ರಮ ಕಾರ್ಯ ನಿರತರು, ಉತ್ಪಾದನೆಯ ಕಾರ್ಯದಲ್ಲಿ ತಲ್ಲೀನರು, ಎಲ್ಲರೂ ಮಾಡಲು ಸಾಕಷ್ಟು ಕೆಲಸವಿದ್ದಂತೆ ತೋರ್ಪಡಿಸಿಕೊಳ್ಳುವರು...."[1]

ವಿಸ್ತರಿಸುತ್ತಿದ್ದ ಪೇಟೆಯ ಅಪೇಕ್ಷೆಗೆ ಅನುಗುಣವಾಗಿ ಪದಾರ್ಥ ಒದಗಿಸಲು ವ್ಯವಸ್ಥೆ ಮಾಡಿ ಕಬ್ಬಿಣದ ಸಾಮಾನು ತಯಾರಕ ಕ್ರಾಲಿ ಐಶ್ವರ್ಯವಂತನಾದಂತೆ ಜವಳಿ

---

[1] Daniel Defoe, *A Tour Thro' the Whole Island of Great Britain* (1724-1726), 2 vols. vol. II, p. 602, Peter Davies, London, 1927.

ವ್ಯಾಪಾರದ ಮಧ್ಯಸ್ಥಗಾರರೂ ಹಣವಂತರಾದರು. ಡೀಫೋ ಈ ವಿಚಾರವಾಗಿಯೂ ಬರೆದಿದ್ದಾನೆ :

"ಬ್ರಾಡ್‌ಫರ್ಡಿನವರು ನನಗೆ ಹೀಗೆ ಹೇಳಿದರು : ಒಬ್ಬೊಬ್ಬರೂ ಹತ್ತು ಸಾವಿರದಿಂದ ನಲವತ್ತು ಸಾವಿರ ಪೌಂಡು ಆಸ್ತಿ ಹೊಂದಿರುವ ಜವಳಿ ವ್ಯಾಪಾರಿಗಳು ಅಲ್ಲಿ ಸಾಮಾನ್ಯ. ಹಲವು ಹಿರಿಯ ಸಂಸಾರಗಳು ಈ ಶ್ರೇಷ್ಠ ಉತ್ಪಾದನೆಯಿಂದಲೇ ಮುಂದಕ್ಕೆ ಬಂದುವು. ಇನ್ನು ನ್ಯೂಬೆರಿಯ ವಿಚಾರ, ನ್ಯೂಬೆರಿಯ ಪ್ರಸಿದ್ಧ ಪುರುಷ ಜಾಕನ ವಿಚಾರ. ಜವಳಿ ತುಂಬಿದ ಗಾಡಿಗಳು ಲಂಡನ್ನಿಗೆ ಹೋಗುತ್ತಿದ್ದಾಗ ಎದುರುಗೊಂಡ ದೊರೆ ಜೇಮ್ಸ್ ಇವು ಯಾರವೆಂದು ಕೇಳಿದನಂತೆ. ಇವು ನ್ಯೂಬೆರಿಯ ಜಾಕನವೆಂದು ಅವರೆಲ್ಲ ಹೇಳಿದಾಗ ದೊರೆ ಹೇಳಿದನಂತೆ—ನ್ಯೂಬೆರಿಯ ಜಾಕ್ ತನಗಿಂತಲೂ ಶ್ರೀಮಂತ ಎಂದು ! ಈ ಕತೆ ನಿಜವೋ ಸುಳ್ಳೋ. ಅಂತೂ ಜಾಕ್ ಅಷ್ಟು ದೊಡ್ಡ ಮನುಷ್ಯ."[1]

ನ್ಯೂಬೆರಿಯ ಈ ಪ್ರಸಿದ್ಧ ಪುರುಷ ಜಾಕ್ ಬಹು ಮುಖ್ಯ ಮನುಷ್ಯ. ಏಕೆಂದರೆ ಇವನು ಇತರ ಮಧ್ಯಸ್ಥಗಾರರಂತಲ್ಲ. ಕಚ್ಚಾ ಸಾಮಗ್ರಿ ತಂದು ಕೆಲಸಗಾರರಿಗೆ ಅವರವರ ಮನೆಯಲ್ಲೇ ಉತ್ಪಾದನೆಯ ಕಾರ್ಯ ನಡಸಲು ಕೊಡದೆ ಅವನೇ ಒಂದು ಕಟ್ಟಡ ನಿರ್ಮಿಸಿ ಅದರಲ್ಲಿ ಇನ್ನೂರು ಮಗ್ಗ ಸ್ಥಾಪಿಸಿದ. ಇಲ್ಲಿ ಸುಮಾರು ಆರುನೂರು ಗಂಡಸರು, ಹೆಂಗಸರು, ಮಕ್ಕಳು ದುಡಿಯುತ್ತಿದ್ದರು. ಇದು ಹದಿನಾರನೆಯ ಶತಮಾನದ ಆದಿಕಾಲದಲ್ಲಿ ಇದ್ದದ್ದು. ಮುನ್ನೂರು ಶತಮಾನಗಳ ಅನಂತರ ಅವತಾರವೆತ್ತಿದ ಗಿರಣಿ ವ್ಯವಸ್ಥೆಯ ಆರಂಭ ಇದು.

ನ್ಯೂಬೆರಿಯ ಜಾಕನೂ, ಕೆಲಸಗಾರರು ತಂತಮ್ಮ ಮನೆಯಲ್ಲೇ ಹೆಕ್ಕಿ, ನೂತು, ನೇಯಲು ಕಚ್ಚಾ ವಸ್ತು ಒದಗಿಸುತ್ತಿದ್ದ ಮಧ್ಯಸ್ಥಗಾರರೂ ಬಂಡವಾಳಗಾರರಾಗಿದ್ದರು. ನೇದ ಬಟ್ಟೆ ಅವರದು. ಅದನ್ನು ಅವರು ಮಾರುತ್ತಿದ್ದರು. ಅವರೇ ಲಾಭ ಪಡೆಯುತ್ತಿದ್ದರು. ಯಜಮಾನ ಕೆಲಸಗಾರರೂ ಅವರ ಅಡಿಯಲ್ಲಿದ್ದ ಕಾರೇಗಾರರೂ ಕೂಲಿ ಪಡೆಯುತ್ತಿದ್ದರು. ಅವರು ತಮ್ಮ ಮನೆಯಲ್ಲೇ ಕೆಲಸ ಮಾಡುತ್ತಿದ್ದರು. ತಮಗೆ ಅನುಕೂಲವೆನಿಸಿದ ಸಮಯದಲ್ಲಿ ಕೆಲಸ ಮಾಡುತ್ತಿದ್ದರು. ಅವರು ಕೆಲಸ ಮಾಡಲು ಬಳಸುತ್ತಿದ್ದ ಉಪಕರಣ ಅವರದೇ. (ಆದರೆ ಯಾವಾಗಲೂ ಹೀಗೆಯೇ ಇರಲಿಲ್ಲ.) ಆದರೆ ಅವರು ಸ್ವಾತಂತ್ರ್ಯ ಕಳೆದುಕೊಂಡಿದ್ದರು. ಕಚ್ಚಾ ವಸ್ತು ಅವರದಲ್ಲ. ಮಧ್ಯಸ್ಥಗಾರರೂ ಉದ್ಯಮ ಶೀಲರೂ ಇದನ್ನು ಒದಗಿಸುತ್ತಿದ್ದರು. (ಇದೂ ಯಾವಾಗಲೂ ನಿಜವಲ್ಲ. ಕೆಲವರು ತಮಗೆ ಬೇಕಾದ ಕಚ್ಚಾ ಸಾಮಗ್ರಿಯನ್ನು ತಾವೇ ಕೊಳ್ಳುತ್ತಿದ್ದರು.) ಈಗ ಅವರು ಮಾಡಿದ ಕೆಲಸಕ್ಕೆ ತಕ್ಕಂತೆ ಕೂಲಿ ಪಡೆವ ಪದಾರ್ಥ ತಯಾರಕರು. ಅವರಿಗೂ ಬಳಕೆದಾರರಿಗೂ ನೇರ ವ್ಯಾಪಾರವಿಲ್ಲ. ಅವರ ವ್ಯಾಪಾರ ಕಾರ್ಯವನ್ನು ಈಗ ಬಂಡವಾಳಗಾರ ಉದ್ಯಮಿಗಳು ವಹಿಸಿಕೊಂಡಿದ್ದರು. ಅವರು ಈಗ 'ಕೈಗಾರಿಕೆ' ಎಂಬ ಪದದ ಅರ್ಥದಂತೆ ನಿಜಕ್ಕೂ ಕೈಗಾರಿಕೆಗಾರರು. ('ಕೈ' ಎಂದರೆ ಕೈಯಿಂದ, 'ಕಾರಿಕೆ' ಎಂದರೆ ಮಾಡುವುದು—ಎಂದರೆ ಕೈಯಿಂದ ಮಾಡುವುದು.)

---

[1] Defoe, *op. cit.*, vol. I, pp. 282, 290.

ನಗರದ ಅರ್ಥ ವ್ಯವಸ್ಥೆಯೊಡನೆ ಬೆಳೆದಿದ್ದ ವೃತ್ತಿಸಂಘ ವ್ಯವಸ್ಥೆಯಲ್ಲಿ ಬಂಡವಾಳ ವಹಿಸಿದ್ದ ಪಾತ್ರ ಅಲ್ಪ. ರಾಷ್ಟ್ರೀಯ ಅರ್ಥವ್ಯವಸ್ಥೆಯಿಂದ ಬೆಳೆದ, 'ಹೊರಗೆಲಸ ಕೊಡುವ' ಪದ್ಧತಿಯಲ್ಲಿ ಬಂಡವಾಳ ಪ್ರಧಾನ ಪಾತ್ರ ವಹಿಸಿತು. ಹಲವು ಕೆಲಸಗಾರರಿಗೆ ಒದಗಿಸುವ ಸಲುವಾಗಿ ಕಚ್ಚಾ ಸಾಮಗ್ರಿ ಕೊಳ್ಳಲು ಅಗಾಧ ಹಣ ಬೇಕಾಯಿತು. ಈ ಕಚ್ಚಾ ಸಾಮಗ್ರಿ ಹಂಚಲೂ, ಅನಂತರ ಸಿದ್ಧ ವಸ್ತುವನ್ನು ಹಂಚಲೂ ಅಗಾಧ ಹಣ ಬೇಕಾಯಿತು. ಹಣ ಹೊಂದಿದ್ದವನು—ಬಂಡವಾಳಗಾರ—ಈ ಹೊರಗೆಲಸ ಕೊಡುವ ಪದ್ಧತಿಯ ನಿರ್ದೇಶಕನಾದ, ತಲೆಯಾಳಾದ.

ಪದಾರ್ಥಕ್ಕೆ ಹೆಚ್ಚು ಬೇಡಿಕೆ ಬಂದ ಪರಿಣಾಮವಾಗಿ ಹೆಚ್ಚು ಬೆಲೆಯ ಯಂತ್ರ ಸಾಮಗ್ರಿಯನ್ನೊಳಗೊಂಡ ಭಾರಿ ಕೈಗಾರಿಕೆಗಳು ಬಂಡವಾಳ ವ್ಯವಸ್ಥೆಯ ಮೇಲೆ ನಿರ್ಮಿತವಾದುವು. ಹದಿನಾರನೆಯ ಶತಮಾನದ ಇಂಗ್ಲೆಂಡಿನ ಕಲ್ಲಿದ್ದಲು ಕೈಗಾರಿಕೆ ಒಂದು ಒಳ್ಳೆಯ ಉದಾಹರಣೆ. ಹೊರಮೈಯ ಕಲ್ಲಿದ್ದಲ ಅದಿರೆಲ್ಲ ಆಗಿ ಹೋಗಿತ್ತು. ಆಳಕ್ಕೆ ಹೋಗಿ ಖನಿಜ ತೆಗೆಯುವುದು ಅಗತ್ಯವಾಗಿತ್ತು. ಎಂದರೆ ಬಂಡವಾಳಗಾರನ ಆಗಮನವಾಯಿತು.

ಗಣಿಯಿಂದ ಲೋಹ ತೆಗೆಯುವ ಉದ್ಯಮದಲ್ಲೂ ಹೆಚ್ಚು ಹಣ ಹೂಡಲ್ಪಟ್ಟಿತು. ಕೈಗಾರಿಕೆಗೂ ಯುದ್ಧ ನಿರತ ಸೇನೆಗಳಿಗೂ ಬೇಕಾದ ಕಬ್ಬಿಣ, ಹಿತ್ತಾಳೆ, ತಾಮ್ರ ಮುಂತಾದುವುಗಳ ಬೇಡಿಕೆ ಹೆಚ್ಚಿದುದರಿಂದ ಈ ಬೆಳವಣಿಗೆ ಅಗತ್ಯವಾಯಿತು. ಲೋಹ ಕೈಗಾರಿಕೆಗಳಿಗೆ ಬೇಕಾಗಿದ್ದ ಬಂಡವಾಳದ ಹಣ ಎಷ್ಟೊಂದು ಅಗಾಧವೆಂದರೆ, ಹಲವರು ಬಂಡವಾಳಿಗರು ಒಂದಾಗಿ, ಅಗತ್ಯವಾದ ಹಣ ಸಂಗ್ರಹಿಸಲು ಕೂಡುಬಂಡವಾಳ ಸಂಸ್ಥೆಗಳನ್ನು ರಚಿಸಿಕೊಂಡರು. ವ್ಯಾಪಾರ ಕ್ಷೇತದಲ್ಲಿ ಹಿಂದೆ ಈ ಕಾರ್ಯವಾಗಿತ್ತು. ಈಗ ಇದು ಕೈಗಾರಿಕೆಯ ಕ್ಷೇತ್ರದಲ್ಲೂ ಆರಂಭವಾಯಿತು.

ಇದುವರೆಗೂ ಅಪರಿಚಿತವಾಗಿದ್ದ ಪ್ರದೇಶಗಳ ಪತ್ತೆಯಿಂದ ಹಲವು ಹೊಸ ಕೈಗಾರಿಕೆಗಳು ಜನ್ಮ ತಾಳಿದುವು. ಸಕ್ಕರೆ ಶುದ್ಧೀಕರಣ, ಹೊಗೆಸೊಪ್ಪು ಮುಂತಾದವು ಇಂಥವು. ಈ ಹೊಸ ಉದ್ಯಮಗಳಲ್ಲಿ ತೊಡಗುವ ಸಾಹಸ ಮಾಡಬಯಸಿದವರಿಗೆ ಸರಕಾರಗಳು ಸಂಪೂರ್ಣಾಧಿಕಾರ ನೀಡಿದುವು. ಈ ಹೊಸ ಕೈಗಾರಿಕೆಗಳು ಆರಂಭದಿಂದಲೇ ಬಂಡವಾಳ ವ್ಯವಸ್ಥೆಯ ಅಸ್ತಿಭಾರದ ಮೇಲೆ ಸಂಘಟಿಸಲ್ಪಟ್ಟುವು.

ಹದಿನಾರರಿಂದ ಹದಿನೆಂಟನೆಯ ಶತಮಾನದ ವರೆಗಿನ ಕಾಲದಲ್ಲಿ ಮಧ್ಯಯುಗದ ಸ್ವತಂತ್ರ ಕೈಕಸಬುದಾರರು ಕ್ರಮೇಣ ಕಣ್ಮರೆಯಾದರು. ಬಂಡವಾಳಿಗ-ವರ್ತಕ-ಮಧ್ಯಸ್ಥಗಾರ-ಉದ್ಯಮಿಯನ್ನು ಅವಲಂಬಿಸಿದ ಕೂಲಿಗಾರ ವರ್ಗ ಈ ಕೈಕಸಬುದಾರರ ಸ್ಥಾನದಲ್ಲಿ ಜನ್ಮ ತಾಳಿತು.

ಕೈಗಾರಿಕೆ ವ್ಯವಸ್ಥೆಯ ಬೆಳವಣಿಗೆಯಲ್ಲಿ ಕ್ರಮವಾಗಿ ಆವಿರ್ಭವಿಸಿ ಅಳಿಸಿಹೋದ ಹಲವು ಘಟ್ಟಗಳ ಸ್ಥೂಲ ಪರಿಚಯ ಹೊಂದುವುದು ಉಪಯುಕ್ತವಾಗಬಹುದು. ಅವು ಇಂತಿವೆ :

**೧. ಕುಟುಂಬ ವ್ಯವಸ್ಥೆ :** ಕುಟುಂಬದ ಜನರು ತಮ್ಮ ಸ್ವಂತ ಉಪಯೋಗಕ್ಕಾಗಿ, ಮಾರಾಟಕ್ಕಾಗಿ ಅಲ್ಲ, ಪದಾರ್ಥ ತಯಾರಿಸುತ್ತಿದ್ದರು. ಹೊರಗಿನ ಪೇಟೆಗಾಗಿ ಪದಾರ್ಥ

ತಯಾರಿಕೆಯ ಕೆಲಸ ನಡೆಯುತ್ತಿರಲಿಲ್ಲ. ಮಧ್ಯಯುಗದ ಪೂರ್ವಕಾಲದಲ್ಲಿ ಈ ವ್ಯವಸ್ಥೆ ಇತ್ತು.

**೨. ವೃತ್ತಿಸಂಘ ವ್ಯವಸ್ಥೆ :** ಸ್ವತಂತ್ರ ಯಜಮಾನರಿಂದ, ಸಣ್ಣ ಸ್ಥಿರವಾದ ಪೇಟೆಗಾಗಿ, ಉತ್ಪಾದನೆ. ಈ ಯಜಮಾನರು ತಮ್ಮ ನೆರವಿಗಾಗಿ ಇಬ್ಬರು ಮೂವರು ಜನರ ನೇಮಕ ಮಾಡಿಕೊಳ್ಳುತ್ತಿದ್ದರು. ಕೆಲಸಗಾರರಿಗೆ ಅಗತ್ಯವಾದ ಕಚ್ಚಾ ಸಾಮಗ್ರಿಯನ್ನೂ ಉಪಕರಣಗಳನ್ನೂ ಅವರೇ ಒದಗಿಸಿಕೊಳ್ಳಬೇಕಾಗಿತ್ತು. ಅವರು ಮಾರಾಟ ಮಾಡುತ್ತಿದ್ದುದು ತಮ್ಮ ದುಡಿಮೆಯನ್ನಲ್ಲ, ತಮ್ಮ ದುಡಿಮೆಯ ಫಲವಾದ ಪದಾರ್ಥವನ್ನು. ಮಧ್ಯಯುಗದ ಪೂರ್ತಿ ಈ ವ್ಯವಸ್ಥೆ ಇತ್ತು.

**೩. ಹೊರಗೆಲಸ ಕೊಡುವ ವ್ಯವಸ್ಥೆ :** ಬೆಳೆಯುತ್ತಿದ್ದ ಹೊರ ಪೇಟೆಗಾಗಿ ಉತ್ಪಾದನೆ. ಯಜಮಾನ ಕೆಲಸಗಾರರೂ ಅವರ ಸಹಾಯಕರೂ ಉತ್ಪಾದನೆ ನಡಸುತ್ತಿದ್ದರು—ವೃತ್ತಿಸಂಘ ವ್ಯವಸ್ಥೆಯಂತೆಯೇ. ಆದರೆ ಮುಖ್ಯ ವ್ಯತ್ಯಾಸ ಇದು : ಯಜಮಾನರು ಈಗ ಸ್ವತಂತ್ರರಾಗಿರಲಿಲ್ಲ. ಉಪಕರಣವೇನೋ ಅವರದೇ. ಆದರೆ ಅವರಿಗೂ ಬಳಕೆದಾರನಿಗೂ ನಡುವೆ ಬಂದಿದ್ದ ಉದ್ಯಮಿ ಅವರಿಗೆ ಕಚ್ಚಾ ಸಾಮಗ್ರಿ ಒದಗಿಸಬೇಕಾಗಿತ್ತು. ಅವರು ಈಗ ಕೇವಲ ತುಂಡು ಕೆಲಸ ಮಾಡಿ ಕೂಲಿ ಗಳಿಸುವವರು—ಕೂಲಿಗುತ್ತಿಗೆದಾರರು. ಹದಿನಾರರಿಂದ ಹದಿನೆಂಟನೆಯ ಶತಮಾನದ ಕಾಲದಲ್ಲಿ ಈ ವ್ಯವಸ್ಥೆ ಇತ್ತು.

**೪. ಕಾರ್ಖಾನೆ ವ್ಯವಸ್ಥೆ :** ದಿನೇ ದಿನೇ ಬೆಳೆಯುತ್ತಿರುವ—ಹೆಚ್ಚು ಏರಿಳಿಕೆಯ ಪ್ರವೃತ್ತಿಗೆ ಒಳಗಾದ—ಪೇಟೆಗಾಗಿ, ಮನೆಯ ಹೊರಗಡೆ, ಧಣಿಗೆ ಸೇರಿದ ಕಟ್ಟಡದಲ್ಲಿ, ಕಟ್ಟುನಿಟ್ಟಾದ ಮೇಲ್ವಿಚಾರಣೆಯಲ್ಲಿ, ಉತ್ಪಾದನೆ. ಕೆಲಸಗಾರರ ಸ್ವಾತಂತ್ರ್ಯ ಸಂಪೂರ್ಣವಾಗಿ ಹೋಯಿತು. ವೃತ್ತಿ ಸಂಘ ವ್ಯವಸ್ಥೆಯಲ್ಲಿದ್ದಂತೆ ಕಚ್ಚಾ ಸಾಮಗ್ರಿಯಾಗಲಿ, ಹೊರಗೆಲಸ ಕೊಡುವ ವ್ಯವಸ್ಥೆಯಲ್ಲಿದ್ದಂತೆ ಉಪಕರಣವಾಗಲಿ ಅವರದಲ್ಲ. ಕೌಶಲ ಹಿಂದಿನಷ್ಟು ಮುಖ್ಯವಲ್ಲ. ಏಕೆಂದರೆ ಯಂತ್ರ ಹೆಚ್ಚು ಹೆಚ್ಚಾಗಿ ಬಳಕೆಗೆ ಬಂತು. ಬಂಡವಾಳದ ಪ್ರಾಮುಖ್ಯ ಹಿಂದಿಗಿಂತ ಹೆಚ್ಚಿತು. ಹತ್ತೊಂಬತ್ತನೆಯ ಶತಮಾನದಿಂದ ಇಂದಿನವರೆಗೂ ಈ ವ್ಯವಸ್ಥೆ ಜಾರಿಯಲ್ಲಿದೆ.

ಆದರೆ ಒಂದು ಎಚ್ಚರಿಕೆ.

ನಿಲ್ಲಿ
ನೋಡಿ
ಮತ್ತು
ಆಲಿಸಿ.

ಮೇಲೆ ಕೊಟ್ಟಿರುವ ಸ್ಥೂಲಾಕೃತಿ ನಿಮ್ಮ ನೆರವಿಗಾಗಿ ಮಾತ್ರ. ಆದರೆ ಇದೇ ವೇದವಾಕ್ಯವಲ್ಲ. ಇದು ಸಂಪೂರ್ಣ ಸತ್ಯವೆಂದು ಒಪ್ಪಿಕೊಳ್ಳುವುದು ಬಹು ಅಪಾಯ. ಇದು ಸಂಪೂರ್ಣ ಸತ್ಯವಲ್ಲ. ಕೆಲವು ಷರತ್ತುಗಳೊಡನೆ ಇದನ್ನು ಅವಲೋಕಿಸುವುದಾದರೆ

ಒಳ್ಳೆಯದು. ಇವನ್ನು ಮರೆತು ಇದನ್ನು ಹಾಗೆಯೇ, ಇಡಿಯಾಗಿ, ಒಪ್ಪಿಕೊಂಡರೆ ನೀವು ದಾರಿ ತಪ್ಪಿ ಬಳಲಬೇಕಾದೀತು.

ಉದಾಹರಣೆಗೆ, ಮೇಲೆ ಕೊಟ್ಟಿರುವ ಸ್ಥೂಲರೂಪರೇಖೆಯಲ್ಲಿ ಹೇಳಿರುವಂತೆಯೇ, ಎಲ್ಲ ಕೈಗಾರಿಕೆಯೂ ಈ ನಾಲ್ಕು ಘಟ್ಟಗಳನ್ನೂ ಕ್ರಮವಾಗಿ ಹೊಂದಿತೆಂದು ನಂಬುವುದು ತಪ್ಪಾದೀತು. ಕೆಲವು ಕೈಗಾರಿಕೆಗಳ ವಿಚಾರದಲ್ಲಿ ಇದು ಸತ್ಯ; ಎಲ್ಲ ಕೈಗಾರಿಕೆಗಳ ವಿಚಾರದಲ್ಲೂ ಅಲ್ಲ. ಮೂರನೆಯ ಘಟ್ಟದಲ್ಲೇ ಆರಂಭವಾದ ಹೊಸ ಕೈಗಾರಿಕೆಗಳೂ ಜನ್ಮ ತಾಳಿದ್ದುಂಟು. ಕೆಲವು ಕೈಗಾರಿಕೆಗಳು ಹಲವು ಘಟ್ಟಗಳನ್ನು ಮುಟ್ಟದೆ ದಾಟಿ ಸಾಗಿದುವು.

ಈ ನಾಲ್ಕು ಘಟ್ಟಗಳು ಯಾವ ಯಾವ ಕಾಲದಲ್ಲಿದ್ದುವೆಂಬುದೂ ಸ್ಥೂಲವಾಗಿ ಮಾತ್ರ ನಿಜ. ಒಂದು ಘಟ್ಟ ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ—ಸರ್ವ ಸಾಮಾನ್ಯವಾಗಿದ್ದಾಗ—ಅದರ ಇಳಿಮೆಯ ಲಕ್ಷಣಗಳೂ ಆಗಲೇ ಕಾಣಿಸಿಕೊಂಡಿದ್ದುವು; ಮುಂದಣ ಘಟ್ಟದ ಅಂಕುರಾರ್ಪಣ ಆಗಲೇ ಆಗಿತ್ತು. ಉದಾಹರಣೆಗೆ, ಹದಿಮೂರನೆಯ ಶತಮಾನದಲ್ಲಿ—ವೃತ್ತಿ ಸಂಘಗಳು ಬಹು ಪ್ರವರ್ಧಮಾನ ಸ್ಥಿತಿಯಲ್ಲಿದ್ದಾಗ—ಹೊರಗೆಲಸ ಕೊಡುವ ಪದ್ಧತಿಯ ದೃಷ್ಟಾಂತಗಳು ಉತ್ತರ ಇಟಲಿಯಲ್ಲಿ ಆಗಲೇ ಇದ್ದುವು. ಅಂತೆಯೇ, ಹೊರಗೆಲಸ ಕೊಡುವ ಪದ್ಧತಿಯ ಕಾಲದಲ್ಲಿ ನಾವು ಇಂದು ಅರಿತಿರುವ ರೀತಿಯ ಕಾರಖಾನೆಗಳು ಇದ್ದುದನ್ನೂ ನಾವು ಕಾಣಬಹುದು. ಹದಿನಾರನೆಯ ಶತಮಾನದಲ್ಲಿದ್ದ ನ್ಯೂಬೆರಿಯ ಜಾಕ್ ಜ್ಞಾಪಕವಿರಬಹುದಲ್ಲವೆ ?

ಇದಕ್ಕೆ ವ್ಯತಿರಿಕ್ತವಾದ ದೃಷ್ಟಾಂತಗಳೂ ಇದ್ದುದುಂಟು. ಒಂದು ಘಟ್ಟ ದಾಟಿ ಕೈಗಾರಿಕೆ ಬೆಳೆವಣಿಗೆಯ ಮುಂದಿನ ಘಟ್ಟದ ಲಕ್ಷಣಗಳು ಸಾರ್ವಜನಿಕವಾಗಿ ಹಬ್ಬಿದ್ದ ಕಾಲದಲ್ಲೂ ಹಿಂದಣ ಘಟ್ಟದ ವ್ಯವಸ್ಥೆ ಸಂಪೂರ್ಣವಾಗಿ ಮರೆಯಾಗಿರಲಿಲ್ಲ. ಹೊರಗಲಸ ಕೊಡುವ ಪದ್ಧತಿ ಜಾರಿಗೆ ಬಂದ ಮೇಲೂ ಬಹು ಕಾಲ ವೃತ್ತಿ ಸಂಘ ವ್ಯವಸ್ಥೆ ಸಾಯದೆ ಹೆಣಗಾಡುತ್ತಿತ್ತು. ಮುಂದಣ ಘಟ್ಟ ಬಂದ ಮೇಲೂ ಹಳೆಯ ವ್ಯವಸ್ಥೆ ಬಹುಕಾಲ ಮುಂದುವರಿಯಿತೆಂಬುದಕ್ಕೆ ಮುಂದೆ ಕೊಟ್ಟಿರುವ ಅಂಕಿ-ಅಂಶ ಸಾಕ್ಷಿ: ಹೊರಗೆಲಸ ಕೊಡುವ ಪದ್ಧತಿಯನ್ನು—ಗೃಹೋದ್ಯಮ ವ್ಯವಸ್ಥೆಯನ್ನು—ಕುರಿತದ್ದು ಇದು : "ಲೋಹ ವಸ್ತು ಕೈಗಾರಿಕೆಯಲ್ಲಿ ಗೃಹೋದ್ಯಮವನ್ನು ಕುರಿತ ಪರಿಶೀಲನೆ....ಕೊಂಡಿ, ಕಂಡಿ, ಅಗುಳಿ, ಪಿನ್ನು, ಲೋಹದ ಗುಂಡಿ, ತಂತಿ ಮುಂತಾದ ಪದಾರ್ಥಗಳ ಗೃಹೋತ್ಪಾದನೆಯನ್ನು ಕುರಿತ ಅಧ್ಯಯನ....

ಗಂಟೆಗೆ ಸರಾಸರಿ ೧ ಸೆಂಟಿನಿಂದ ೨ ಸೆಂಟ್ ವರೆಗೆ ವರಮಾನ ಇರುವ ಸಂಸಾರಗಳ ಸಂಖ್ಯೆ : ೫
,, ,, ೨ ,, ೩ ,, ,, ,, ,, ,, ,, ೯
,, ,, ೩ ,, ೪ ,, ,, ,, ,, ,, ,, ೧೫
,, ,, ೪ ,, ೫ ,, ,, ,, ,, ,, ,, ೯
,, ,, ೫ ,, ೬ ,, ,, ,, ,, ,, ,, ೧೪

| | | | | | | | | | | |
|---|---|---|---|---|---|---|---|---|---|---|
| ಗಂಟೆಗೆ | ಸರಾಸರಿ | ೬ | ಸೆಂಟಿನಿಂದ | ೭ | ಸೆಂಟ್ ವರೆಗೆ | ವರಮಾನ | ಇರುವ | ಸಂಸಾರಗಳ | ಸಂಖ್ಯೆ: | ೮ |
| ,, | ,, | ೭ | ,, | ೮ | ,, | ,, | ,, | ,, | ,, | ೫ |
| ,, | ,, | ೮ | ,, | ೯ | ,, | ,, | ,, | ,, | ,, | ೧೫ |
| ,, | ,, | ೯ | ,, | ೧೦ | ,, | ,, | ,, | ,, | ,, | ೧೪ |
| ,, | ,, | ೧೦ | ,, | ೧೧ | ,, | ,, | ,, | ,, | ,, | ೧೩ |
| ,, | ,, | ೧೧ | ,, | ೧೨ | ,, | ,, | ,, | ,, | ,, | ೫ |
| ,, | ,, | ೧೨ | ,, | ೧೩ | ,, | ,, | ,, | ,, | ,, | ೨ |
| ,, | ,, | ೧೩ | ,, | ೧೪ | ,, | ,, | ,, | ,, | ,, | ೫ |
| ,, | ,, | ೧೪ | ,, | ೧೫ | ,, | ,, | ,, | ,, | ,, | ೩ |
| ,, | ,, | ೧೫ | ಸೆಂಟಿಗಿಂತ ಹೆಚ್ಚು | | ,, | ,, | ,, | ,, | ,, | ೭ |
| | | | | | | | | | ಒಟ್ಟು ಸಂಸಾರ | ೧೨೯ |

"....ಒಬ್ಬ ಆಳು ಮೂವತ್ತೈದು ಘಂಟೆಯಲ್ಲಿ ಮಾಡುವಷ್ಟು ಕೆಲಸವನ್ನು ಮಾಡಿದ ಒಂದು ಸರಾಸರಿ ಸಂಸಾರ ವಾರಕ್ಕೆ ೧.೬೫ ಡಾಲರ್ ಪಡೆಯುತ್ತದೆ....

"ಹಳೆಯ ಜನನಿಬಿಡ ಅನಾರೋಗ್ಯಕರ ಮುರುಕು ಮನೆ, ಹರಕು ಬಟ್ಟೆ, ಒಳ್ಳೆಯ ಆಹಾರ ಸಾಕಷ್ಟು ಇಲ್ಲನೆಂಬ ಕೊರತೆ, ಆಕ್ಷೇಪಣೆ—ಇವು ಈ ಮನೆಗಳ ಬಗ್ಗೆ ನಡಸಿದ ಪರಿಶೀಲನೆಯಿಂದ ಸ್ಪಷ್ಟವಾದ ಅಂಶಗಳು....

"ಅಧ್ಯಯನಕ್ಕೆ ಒಳಗಾದ ೧೨೯ ಸಂಸಾರಗಳ ಪೈಕಿ ೯೬ ಸಂಸಾರಗಳಲ್ಲಿ ಹದಿನಾರಕ್ಕೂ ಕಡಮೆ ವಯಸ್ಸಿನ ಮಕ್ಕಳೂ ಕೆಲಸ ಮಾಡುತ್ತಿದ್ದರು....ಇವರಲ್ಲಿ ಅರ್ಧ ಸಂಖ್ಯೆಯವರಿಗೆ ಹನ್ನೆರಡಕ್ಕಿಂತಲೂ ಕಡಮೆ ವಯಸ್ಸು....ಇವರ ಪೈಕಿ ಮೂವತ್ತಾರು ಮಕ್ಕಳ ವಯಸ್ಸು ಎಂಟನ್ನೂ ಮೀರಿರಲಿಲ್ಲ, ಹನ್ನೆರಡು ಮಕ್ಕಳು ಐದು ವರ್ಷಕ್ಕಿಂತಲೂ ಚಿಕ್ಕವರು....

"ಕೆಲಸ ಮಾಡುತ್ತಿದ್ದ ಮಕ್ಕಳ ವಯೋಗುಣ ವಿಂಗಡಣೆ ಈ ರೀತಿ :—

| ವಯಸ್ಸು | ಕೆಲಸ ಮಾಡುವ ಮಕ್ಕಳ ಸಂಖ್ಯೆ |
|---|---|
| ೨ ರಿಂದ ೩ ವರ್ಷ | ೨ |
| ೩ ,, ೪ ,, | ೨ |
| ೪ ,, ೫ ,, | ೮ |
| ೫ ,, ೬ ,, | ೨ |
| ೬ ,, ೭ ,, | ೭ |
| ೭ ,, ೮ ,, | ೧೩ |
| ೮ ,, ೯ ,, | ೧೫ |
| ೯ ,, ೧೦ ,, | ೧೯ |
| ೧೦ ,, ೧೧ ,, | ೨೩ |

| ವಯಸ್ಸು | ಕೆಲಸ ಮಾಡುವ ಮಕ್ಕಳ ಸಂಖ್ಯೆ |
|---|---|
| ೧೧ ರಿಂದ ೧೨ ವರ್ಷ | ೨೧ |
| ೧೨ ,, ೧೩ ,, | ೪೦ |
| ೧೩ ,, ೧೪ ,, | ೨೬ |
| ೧೪ ,, ೧೫ ,, | ೨೯ |
| ೧೫ ,, ೧೬ ,, | ೩೫ |
| ವಯಸ್ಸು ಗೊತ್ತಿಲ್ಲದವರು | ೪ |
| ಒಟ್ಟು | ೨೪೬"[1] |

ಅತ್ಯಂತ ಘಾಬರಿ ಹುಟ್ಟಿಸುತ್ತವೆಯಲ್ಲವೆ ಈ ವಿವರಗಳು? ಎರಡು ಮೂರು ವರ್ಷದ ಮಕ್ಕಳು ಕೆಲಸ ಮಾಡುವುದೆಂದರೇನು? ಹದಿನಾರರಿಂದ ಹದಿನೆಂಟನೆಯ ಶತಮಾನದ ವರೆಗಿನ ಕಾಲದ ಹೊರಗೆಲಸ ಕೊಡುವ ಪದ್ಧತಿಯನ್ನು ಕುರಿತ ವರದಿಯೇ ಇದು? ಖಂಡಿತ ಅಲ್ಲ. ಈ ವರದಿಯಲ್ಲಿ ವಿವರಿಸಿರುವ ಪರಿಸ್ಥಿತಿ ಇದ್ದ ಕಾಲ ಸ್ಥಳ ಯಾವುವು ಗೊತ್ತೆ?

ಕಾಲ: ಆಗಸ್ಟ್ ೧೯೩೪
ಸ್ಥಳ: ಕನೆಕ್ಟಿಕಟ್, ಅಮೆರಿಕಾ ಸಂಯುಕ್ತ ಸಂಸ್ಥಾನ.

[1] *Report on Homework in the Fabricated Metal Industry in Connecticut*, State Department of Labour, Minimum Wage Division. *Hartford*, Conn. September, 1934.

## ೧೧. "ಚಿನ್ನ, ಹಿರಿಮೆ, ಕೀರ್ತಿ"

ಒಂದು ದೇಶ ಸಂಪದ್ಯುಕ್ತವಾಗುವುದು ಯಾತರಿಂದ? ನೀವೇನಾದರೂ ಸೂಚಿಸ ಬಲ್ಲಿರಾ? ಸುಮ್ಮನೆ ತಮಾಷೆಗಾಗಿ, ಈ ಕಾರಣಗಳ ಪಟ್ಟಿಯೊಂದನ್ನು ತಯಾರಿಸಿ ನೋಡಿ. ಹದಿನೇಳು ಹದಿನೆಂಟನೆಯ ಶತಮಾನದ ಚತುರ ಜನರ ಭಾವನೆಗಳೊಡನೆ ಇದನ್ನು ಹೋಲಿಸಿ ನೋಡಿ. ಈ ವಿಚಾರದಲ್ಲಿ ಅವರು ತುಂಬಾ ಉತ್ಸುಕರಾಗಿದ್ದರು. ಏಕೆಂದರೆ ರಾಷ್ಟ್ರಪ್ರಭುತ್ವದ ದೃಷ್ಟಿಕೋನದಿಂದ, ಒಂದು ನಗರದ ಬದಲು ಇಡೀ ದೇಶದ ದೃಷ್ಟಿಯಿಂದ, ಎಲ್ಲವನ್ನೂ ಅಳೆಯ ಹತ್ತಿದ್ದ ಅವರು ಹಲವು ಹೊಸ ಸಮಸ್ಯೆಗಳನ್ನೇ ಎದುರಿಸಬೇಕಾಗಿತ್ತು. ಸೌಥಾಂಪ್ಟನ್ ನಗರಕ್ಕೋ, ಲಯನ್ಸ್ ನಗರಕ್ಕೋ, ಆಮ್‌ಸ್ಟರ್ ಡ್ಯಾಂ ನಗರಕ್ಕೊ ಯಾವುದು ಒಳ್ಳೆಯದು?—ಎಂದು ಯೋಚಿಸುವ ಬದಲು ಇಂಗ್ಲೆಂಡ್ ದೇಶಕ್ಕೆ, ಫ್ರಾನ್ಸ್ ದೇಶಕ್ಕೆ, ಹಾಲೆಂಡ್ ದೇಶಕ್ಕೆ ಯಾವುದು ಒಳ್ಳೆಯದು?—ಎಂದು ಅವರು ಚಿಂತಿಸಬೇಕಾಗಿತ್ತು. ನಗರಗಳು ಸಂಪದ್ಯುಕ್ತವೂ ಪ್ರಮುಖವೂ ಆಗಲು ಕಾರಣ ವಾದ ತತ್ವಗಳನ್ನು ಇಡೀ ದೇಶಕ್ಕೆ ಅನ್ವಯಿಸುವ ವಿಚಾರದಲ್ಲಿ ನಿರತರಾಗಿದ್ದರು. ರಾಜಕೀಯ ಪ್ರಭುತ್ವ ಸ್ಥಾಪಿಸಿ ಆದ ಮೇಲೆ ಅವರು ಆರ್ಥಿಕ ಪ್ರಭುತ್ವ ನಿರ್ಮಾಣ ಕಾರ್ಯದಲ್ಲಿ ಮನಸ್ಸು ಹರಿಯ ಬಿಡಬೇಕಾಗಿತ್ತು. ಅವರು ಬರೆದ ಬರಹ, ಸಮರ್ಥಿಸಿದ ಶಾಸನ—ಇವೆಲ್ಲಾ ಇಡೀ ದೇಶದ ದೃಷ್ಟಿಯಲ್ಲಿ. ಇಡೀ ರಾಷ್ಟ್ರಕ್ಕೇ ಐಶ್ವರ್ಯ, ಪ್ರಾಬಲ್ಯ ಗಳಿಸುವ ಉದ್ದೇಶದಿಂದ ಸರಕಾರಗಳು ಶಾಸನಗಳನ್ನು ಜಾರಿಗೆ ತಂದುವು. ಲಕ್ಷ್ಯ ಸಾಧನೆಯ ಹಾದಿಯಲ್ಲಿ ಅವು ದಿನಚರಿಯ ಜೀವನದ ಎಲ್ಲ ಅಂಶಗಳ ಮೇಲೂ ಕಣ್ಣಿಟ್ಟುವು; ಉದ್ದೇಶ ಪೂರ್ವಕವಾಗಿ ತಮ್ಮ ಪ್ರಜೆಗಳ ಎಲ್ಲ ಚಟುವಟಿಕೆಗಳನ್ನೂ ಪರಿ ವರ್ತಿಸಿದುವು, ರೂಪಿಸಿದುವು, ನಿರೂಪಿಸಿದುವು. ಹೀಗೆ ಪ್ರತಿಪಾದಿತವಾದ ತತ್ವಗಳನ್ನೂ, ಜಾರಿಗೆ ಬಂದ ಶಾಸನಗಳನ್ನೂ ಒಟ್ಟು ಮಾಡಿ, ಇದನ್ನು ಇತಿಹಾಸಕಾರರು "ಧನ ಪ್ರಾಧಾನ್ಯ ವ್ಯವಸ್ಥೆ" ಎಂದು ಸ್ಪಷ್ಟವಾಗಿ ವಿಂಗಡಿಸಿದ್ದಾರೆ. ಆದರೆ ವಾಸ್ತವವಾಗಿ ಇವು ಯಾವ ದೃಷ್ಟಿಯಿಂದಲೂ ವ್ಯವಸ್ಥಿತವಲ್ಲ. ನಾವು ಇಂದು ಹೇಳುವ ರೀತಿಯಲ್ಲಿ ಇದು ಒಂದು ವ್ಯವಸ್ಥೆಯಾಗಿರಲಿಲ್ಲ. ಐಶ್ವರ್ಯವನ್ನೂ ಪ್ರಾಬಲ್ಯವನ್ನೂ ಗಳಿಸುವ ಉದ್ದೇಶದಿಂದ ಆಗಿಂದಾಗ್ಗೆ ಸರಕಾರ ಅಂಗೀಕರಿಸಿದ ಹಲವಾರು ಪ್ರಚಲಿತ ತತ್ವಗಳನ್ನು ಈ ಹೆಸರಿನಿಂದ ಕರೆಯುವರು. ಇದಕ್ಕೆ ಸಂಬಂಧಿಸಿದ ಹಲವು ವಿಚಾರಗಳನ್ನು ಸಾವಧಾನವಾಗಿ ಕೂತು ಆಲೋಚಿಸುವ ಆಸಕ್ತಿ ಹೊಂದಿರಲಿಲ್ಲ, ಸರಕಾರ. ಆದರೆ ಪರಿಸ್ಥಿತಿಯ ಒತ್ತಡದಿಂದ ಅದು ಈ ನಾನಾ ಕ್ರಮ ಕೈಕೊಳ್ಳಬೇಕಾಯಿತು. ಈ ಸರಕಾರಗಳಿಗೆ ಯಾವಾಗಲೂ ಆರ್ಥಿಕ ಸಂಕಟ, ಹಣಕ್ಕೆ ಪರದಾಟ. ಒಂದು ದೇಶವನ್ನು ಸಂಪದ್ಯುಕ್ತವಾಗಿ ಮಾಡುವುದು ಯಾವುದು?—ಎಂಬ ಪ್ರಶ್ನೆ ಅವುಗಳ ತೀವ್ರ ಗಮನ ಸೆಳೆದುದು ಸಹಜ. ಇದು ವಾಸ್ತವ ಪ್ರಶ್ನೆಯಾಗಿತ್ತು. ಈ ಪ್ರಶ್ನೆ ಬಿಡಿಸುವುದು ಅಗತ್ಯವಾಗಿತ್ತು.

ಹದಿನಾರನೆಯ ಶತಮಾನದಲ್ಲಿ ಸ್ಪೆಯ್ನು ಜಗತ್ತಿನ ಅತ್ಯಂತ ಧನಿಷ್ಠ ಹಾಗೂ ಶಕ್ತಿಯುತ ರಾಜ್ಯವಾಗಿತ್ತು. ಇದಕ್ಕೆ ಕಾರಣವೇನೆಂದು ಇತರ ದೇಶಗಳ ಚತುರರು ತಮಗೆ ತಾವೇ ಕೇಳಿಕೊಂಡರು. ಸ್ಪೆಯ್ನಿನ ವಸಾಹತುಗಳಿಂದ ಅಲ್ಲಿಗೆ ಹರಿದು ಬರುತ್ತಿದ್ದ ಹಣದ ಹೊಳೆಯೇ ಇದಕ್ಕೆ ಕಾರಣವೆಂದು ಅವರು ಕಂಡರು. ಯಾವ ದೇಶದಲ್ಲಿ ಇದು ಹೆಚ್ಚಾಗಿದೆಯೋ ಆ ದೇಶ ಸಂಪದ್ಯುಕ್ತವೆಂದು ಬಗೆದರು ಅವರು. ವ್ಯಕ್ತಿಗಳಿಗೆ ಅನ್ವಯಿಸುವ ತತ್ವವೇ ದೇಶಗಳಿಗೂ. ವಾಣಿಜ್ಯ ಕೈಗಾರಿಕೆಗಳ ಚಕ್ರ ವೇಗವಾಗಿ ತಿರುಗಲು ಏನು ಕಾರಣ ? ಚಿನ್ನ, ಬೆಳ್ಳಿ. ಶತ್ರುಗಳೊಡನೆ ಯುದ್ಧ ಮಾಡಲು ಅಗತ್ಯವಾದ ಸೈನ್ಯ ಸ್ಥಾಪಿಸಲು ದೊರೆಗಳಿಗೆ ನೆರವಾಗುವುದು ಯಾವುದು ? ಚಿನ್ನ, ಬೆಳ್ಳಿ. ಹಡಗು ನಿರ್ಮಿಸಲು ಬೇಕಾದ ಭಾರಿ ಮರ, ಹಸಿವ ಬಾಯಿಗೆ ಗೋಧಿ, ಜನರ ಬೆನ್ನು ಮುಚ್ಚಲು ಬಟ್ಟೆ—ಇವನ್ನೆಲ್ಲ ಕೊಳ್ಳುವುದು ಯಾವುದು ? ಚಿನ್ನ, ಬೆಳ್ಳಿ. ಶತ್ರು ರಾಜ್ಯವನ್ನು ಗೆಲ್ಲಲು ಯಾವುದು ಕಾರಣ ? ಯುದ್ಧಕ್ಕೆ ಅವಶ್ಯವಾದ ಸಾಧನ ಯಾವುದು ? ಚಿನ್ನ, ಬೆಳ್ಳಿ. ಆದ್ದರಿಂದ ಒಂದು ದೇಶದ ಸಂಪತ್ತು ಶಕ್ತಿಗಳ ದ್ಯೋತಕ ಇದು—ಚಿನ್ನ, ಬೆಳ್ಳಿ ; ಈ ಅಮೂಲ್ಯ ಲೋಹಗಳ ಗಟ್ಟಿ.

"ದುಡ್ಡಿದ್ದವನು ದೊಡ್ಡಪ್ಪ," ಎಂಬಂತೆ "ಹಣವಿದ್ದ ದೇಶ ದೊಡ್ಡ ದೇಶ"—ಎಂಬ ಮಾತನ್ನು ಹಲವು ಲೇಖಕರು ಹೇಳಿದರು. "ಆದ್ದರಿಂದ ಒಂದು ದೇಶವನ್ನು ಸಂಪದ್ಯುಕ್ತವಾಗಿ ಮಾಡಬೇಕಾದರೆ ಚಿನ್ನ ಬೆಳ್ಳಿ ಆ ದೇಶವನ್ನು ಬಿಟ್ಟು ಹೋಗದಂತೆ ಮಾಡುವುದೇ ಸುಲಭೋಪಾಯ"—ಎಂದು ಭಾವಿಸಿದರು ಇವರು.[1]

ಈಚೆಗೆ, ೧೭೫೭ರಲ್ಲಿ, ಜೋಸೆಫ್ ಹ್ಯಾರಿಸ್ ಎಂಬಾತ ಹಣ ಮತ್ತು ನಾಣ್ಯಗಳ ವಿಚಾರವಾಗಿ ಬರೆದ ಪ್ರಬಂಧವೊಂದರಲ್ಲಿ ಹೀಗೆ ಬರೆದ: "ಧನ ಶೇಖರಣೆಗೆ ಅತ್ಯಂತ ಉಚಿತವಾದ ಲೋಹಗಳೆಂದರೆ ಬಂಗಾರ, ಬೆಳ್ಳಿ. ಇವು ಕೆಡುವುದಿಲ್ಲ. ಇವನ್ನು ನಷ್ಟವಿಲ್ಲದೆ ಯಾವ ರೂಪಕ್ಕಾದರೂ ಪರಿವರ್ತಿಸಬಹುದು. ಗಾತ್ರಕ್ಕೆ ತಕ್ಕಂತೆ ಹೆಚ್ಚು ಮೌಲ್ಯ ಇವಕ್ಕೆ. ಸಾರ್ವತ್ರಿಕವಾಗಿ ಹಣವೆಂದು ಸ್ವೀಕೃತವಾದ ಈ ಲೋಹಗಳನ್ನು ಸುಲಭವಾಗಿ ಯಾವ ಪದಾರ್ಥಕ್ಕಾದರೂ ಪ್ರತಿಯಾಗಿ ಕೊಡಬಹುದು. ಹಣ ಇದ್ದರೆ ಯಾವ ಕೆಲಸ ಬೇಕಾದರೂ ಮಾಡಿಸಬಹುದು ; ಕಷ್ಟವಿಲ್ಲ, ಅನುಮಾನವಿಲ್ಲ."[2]

ಹೆಚ್ಚು ಬಂಗಾರ ಬೆಳ್ಳಿ ಹೊಂದಿರುವ ದೇಶವೇ ಹೆಚ್ಚು ಸಂಪದ್ಯುಕ್ತ ದೇಶ—ಎಂಬ ತತ್ವವನ್ನು ಸರಕಾರ ಅಂಗೀಕರಿಸಿದ್ದರಿಂದ ಅದು ಇಟ್ಟ ಮುಂದಣ ಹೆಜ್ಜೆ ಸುಸ್ಪಷ್ಟ. ದೇಶದಿಂದ ಹೊರಕ್ಕೆ ಯಾರೂ ಚಿನ್ನ ಬೆಳ್ಳಿ ಸಾಗಿಸಬಾರದೆಂಬ ಕಟ್ಟಾಜ್ಞೆ. ಒಂದಾದ

---

[1] Adam Smith, *Inquiry into the Nature and Causes of the Wealth of Nations* (1776), vol. I, p. 396. Edited with an Introduction by E. Cannan. 2 vols. Mathuen & Co., London, 1930.

[2] Quoted by J. Viner in "English Theories of Foreign Trade Before Adam Smith" in *The Journal of Political Economy*, vol. 38, June, 1930, No. 3, p. 277 University of Chicago Press.

ಮೇಲೊಂದು ಸರಕಾರ ಈ ಕ್ರಮವನ್ನು ಜಾರಿಗೆ ತಂದಿತು. "ಚಿನ್ನ ಬೆಳ್ಳಿಗಳ ನಿರ್ಯಾತ ವನ್ನು ನಿಷೇಧಿಸುವ ಶಾಸನ" ಸಾಮಾನ್ಯವಾಯಿತು. ಇಂಗ್ಲೆಂಡಿನ ಶಾಸನದ ಮಾದರಿ ನೋಡಿ: "ಇಂಗ್ಲೆಂಡ್ ಅಥವಾ ವೇಲ್ಸ್‌ನಿಂದಾಗಲಿ, ಇಲ್ಲಿನ ಯಾವ ಭಾಗದಿಂದ ಆಗಲಿ, ಈ ರಾಜ್ಯದ ಅಥವಾ ಇತರ ರಾಜ್ಯಗಳ, ನಾಡುಗಳ, ಆಧಿಪತ್ಯಗಳ ನಾಣ್ಯ, ಚಿನ್ನ ಬೆಳ್ಳಿಗಳ ತಟ್ಟೆ, ಪಾತ್ರೆ, ಗಟ್ಟಿ, ಒಡವೆ ಇವನ್ನು ರಾಜಾಜ್ಞೆಯಿಲ್ಲದೆ ಯಾವ ರೂಪದಲ್ಲೂ ಸಾಗಿಸ ಕೂಡದು, ಅಥವಾ ಸಾಗಿಸಲು ಏರ್ಪಾಡು ಮಾಡಕೂಡದು."[1]

ಫಗ್ಗರ್ ಸಂಸ್ಥೆಯ ಪ್ರತಿನಿಧಿಗಳು ತಮ್ಮ ಕೇಂದ್ರ ಬ್ಯಾಂಕಿಂಗ್ ಕಚೇರಿಗೆ ಕಳುಹಿಸು ತ್ತಿದ್ದ ಸುದ್ದಿಯ ವ್ಯವಸ್ಥೆಯನ್ನು ಇಂದಿನ ವಾರ್ತಾ ಸಂಸ್ಥೆಗೆ ಹೋಲಿಸಬಹುದು. ಪ್ರತಿ ಯೊಂದು ಮುಖ್ಯ ಸ್ಥಳದಲ್ಲೂ ಸುದ್ದಿಗಾರರಿದ್ದರು. ಯಾವ ದೊಡ್ಡ ಘಟನೆ ನಡೆದರೂ ಒಡನೆಯೇ ಅವರು ಇದರ ವರದಿ ಕಳುಹಿಸುತ್ತಿದ್ದರು. ಫಗ್ಗರ್ ಸಂಸ್ಥೆಯ ವಾರ್ತಾಪತ್ರ ಗಳಲ್ಲಿ ಪ್ರಧಾನವಾಗಿ ಪ್ರಕಟಿಸಿದ ಕೆಲವು ಸುದ್ದಿಗಳನ್ನು ನೋಡಿ:—

"ವೆನಿಸ್, ೧೩ನೆಯ ಡಿಸೆಂಬರ್, ೧೫೯೬. ದೇಶದಿಂದ ಹೊರಕ್ಕೆ ಚಿನ್ನ ಬೆಳ್ಳಿ ಕಳುಹಿಸಬಾರದೆಂದೂ, ವ್ಯಾಪಾರಕ್ಕಾಗಿ ಇವನ್ನು ಬಳಸ ಬಾರದೆಂದೂ ಸ್ಪೈನಿನ ದೊರೆ ಕಟಾಜ್ಞೆ ವಿಧಿಸಿದ್ದಾರೆ."

"ರೋಂ, ೨೯ನೆಯ ಜನವರಿ, ೧೬೦೦. ಪೋಪರ ಮನೆವಾರ್ತೆಗಾರರು ಎಲ್ಲ ಸ್ಥಳೀಯ ಹಾಗೂ ವಿದೇಶಿ ನಾಣ್ಯಗಳನ್ನೂ ಮತ್ತೆ ಮೌಲ್ಯ ಮಾಪನ ಮಾಡಿಸಿ, ಇನ್ನು ಮುಂದೆ ಯಾರೂ ಐದು ಕ್ರೌನ್‌ಗಿಂತ ಹೆಚ್ಚು ಹಣ ಕೊಂಡೊಯ್ಯಬಾರದೆಂದು ಆಜ್ಞೆ ವಿಧಿಸಿದ್ದಾರೆ."[2]

ದೇಶದಲ್ಲಿದ್ದಿರಬಹುದಾದ ಚಿನ್ನ ಬೆಳ್ಳಿ ಅಲ್ಲೇ ಉಳಿಯುವಂತೆ ಮಾಡಲು ಇಂಥ ಕ್ರಮ ಗಳು ಸಹಾಯಕ. ತಮ್ಮ ಎಲ್ಲೆಯೊಳಗೇ ಗಣಿ ಇದ್ದ ದೇಶಗಳು, ಅಥವಾ ಚಿನ್ನ ಬೆಳ್ಳಿ ಧಾರಾಳವಾಗಿ ದೊರಕುವ ವಸಾಹತುಗಳನ್ನು ಹೊಂದಿದ್ದ ಸ್ಪೈನಿನಂಥ ಅದೃಷ್ಟಶಾಲಿ ರಾಜ್ಯಗಳು ತಮ್ಮ ಚಿನ್ನ ಬೆಳ್ಳಿಯ ಶೇಖರಣೆಯನ್ನು ಸದಾ ಹೆಚ್ಚಿಸಿಕೊಳ್ಳಬಹುದಿತ್ತು. ಆದರೆ, ಈ ಎರಡೂ ಬಗೆಯ ಅನುಕೂಲವಿಲ್ಲದ ದೇಶಗಳ ಪಾಡೇನು? ಹಣವೊಂದೇ ಸಂಪತ್ತು—ಎಂದು ವಾದಿಸುವವರ ಅಭಿಪ್ರಾಯವನ್ನು ಒಪ್ಪುವುದಾದರೆ, ಇಂಥ ದೇಶಗಳು ಐಶ್ವರ್ಯವಂತ ರಾಷ್ಟ್ರಗಳಾಗುವ ಬಗೆಯೆಂತು?

ಈ ರಾಷ್ಟ್ರಗಳಿಗೆ ಇವರು ಒಂದು ಅನುಕೂಲಸಿಂಧು ಒದಗಿಸಿದರು. "ಅನುಕೂಲಕರ ವ್ಯಾಪಾರ ಸಿಲ್ಕು" ಎಂಬುದು ಇವರು ತೋರಿಸಿದ ಉಪಾಯ. "ಅನುಕೂಲಕರ ವ್ಯಾಪಾರ ಸಿಲ್ಕು" ಎಂದರೆ ಏನು ಅರ್ಥ?

"ನಮ್ಮ ಇಂಗ್ಲೆಂಡ್ ದೇಶವನ್ನು ಸಂಪದ್ಯುಕ್ತವನ್ನಾಗಿ ಮಾಡುವ ವಿಧಾನ"ವನ್ನು

---

[1] *Tudor Economic Documents, op. cit.*, vol. II, pp. 177, 178

[2] *The Fugger News Letters, op. cit.*, 1st series, nos. 176, 209.

ಕುರಿತು ೧೫೪೯ರಲ್ಲಿ ಬರೆದ ಲೇಖನದಲ್ಲಿ ಈ ಪ್ರಶ್ನೆಗೆ ಉತ್ತರವಿದೆ : "ಇತರ ರಾಜ್ಯಗಳಿಂದ ನಮ್ಮ ದೊರೆಯ ಟಂಕಸಾಲೆಗೆ ಹೆಚ್ಚು ಲೋಹದ ಗಟ್ಟಿ ಬರುವಂತೆ ಮಾಡಲು ಇರುವುದೊಂದೇ ಉಪಾಯ. ನಮ್ಮ ಪದಾರ್ಥಗಳನ್ನು ಆದಷ್ಟು ಹೆಚ್ಚು ಪ್ರಮಾಣದಲ್ಲಿ ಇತರ ದೇಶಗಳಿಗೆ ಕಳಿಸಬೇಕು. ಇತರ ದೇಶಗಳ ಸರಕುಗಳನ್ನು ಆದಷ್ಟು ಕಡಿಮೆ ತರಿಸಬೇಕು . . . ನಾನು ಹೇಳಿದ ಉಪಾಯ ಅನುಸರಿಸುವುದರಿಂದ ನಮ್ಮ ದೇಶದಿಂದ ಸಮುದ್ರದ ಮೇಲೆ ಹನ್ನೊಂದು ಲಕ್ಷ ಪೌಂಡಿನಷ್ಟು ಸರಕು ಕಳಿಸಬಹುದು; ಪ್ರತಿಯಾಗಿ ಕೇವಲ ಆರು ಲಕ್ಷ ಪೌಂಡ್ ಮೌಲ್ಯದ ಸರಕು ತರಿಸಬಹುದು. ಇನ್ನು ಉಳಿದ ಐದು ಲಕ್ಷ ಪೌಂಡಿಗೆ ಅಷ್ಟು ಚಿನ್ನ ಬೆಳ್ಳಿಯಾಗಲಿ, ಇಂಗ್ಲಿಷ್ ನಾಣ್ಯವಾಗಲಿ ಬಂದೇ ಬರಬೇಕಲ್ಲವೆ ?"[1]

ವಿದೇಶಿ ವ್ಯಾಪಾರದ ಮೂಲಕ ಚಿನ್ನ ಬೆಳ್ಳಿಯ ಪ್ರಮಾಣ ಹೆಚ್ಚಿಸಿಕೊಳ್ಳಬಹುದೆಂದು ಈ ಹಣವೇ ಸಂಪತ್ತೆನ್ನುವವರು ವಾದಿಸಿದರು. ಇತರ ದೇಶಗಳಿಂದ ಕೊಳ್ಳುವುದಕ್ಕಿಂತ ಅವಕ್ಕೆ ಹೆಚ್ಚು ಮಾರಾಟ ಮಾಡಲು ಎಚ್ಚರಿಕೆ ವಹಿಸಿದರೆ ಸಾಕು. ಆಯಾತಕ್ಕಿಂತ ನಿರ್ಯಾತ ಎಷ್ಟು ಹೆಚ್ಚೋ, ಅಷ್ಟನ್ನು ಲೋಹ ರೂಪದಲ್ಲಿ ಪಾವತಿ ಮಾಡಬೇಕಾಗುತ್ತದೆ.

ಇಂಗ್ಲಿಷ್ ಈಸ್ಟ್ ಇಂಡಿಯಾ ಕಂಪೆನಿಯ ಸನ್ನದಿನಲ್ಲಿ ಅದಕ್ಕೆ ಲೋಹ ರಫ್ತು ಮಾಡುವ ಹಕ್ಕು ನೀಡುವ ಒಂದು ನಿಬಂಧನೆಯಿತ್ತು. ಇದು ಐಶ್ವರ್ಯವನ್ನು ಹೊರ ಕಳುಹುತ್ತಿದೆಯೆಂದು ಹಲವು ಜನ ಚಳವಳಿಗಾರರು ಹದಿನೇಳನೆಯ ಶತಮಾನದಲ್ಲಿ ಈ ಕಂಪೆನಿಯನ್ನು ಟೀಕಿಸಿದರು. ಈ ಸಂಸ್ಥೆಯ ನಿರ್ವಾಹಕರಲ್ಲೊಬ್ಬನಾದ ಥಾಮಸ್ ಮನ್ ಎಂಬವನು, "ವಿದೇಶಿ ವ್ಯಾಪಾರದಿಂದ ಇಂಗ್ಲೆಂಡಿನ ಸಂಪತ್ತು" ಎಂಬ ಪ್ರಸಿದ್ಧ ಪುಸ್ತಕದಲ್ಲಿ, ಈ ಕಂಪೆನಿಯನ್ನು ಸಮರ್ಥಿಸಿದ್ದಾನೆ. ಆತ ಯಾವ ರೀತಿ ಈ ಕೆಲಸ ಮಾಡಿದ್ದಾನೆಂಬುದು ಈ ಪುಸ್ತಕದ ಹೆಸರಿನಿಂದಲೇ ಗೊತ್ತಾಗುತ್ತದೆ. ಪೂರ್ವ ದೇಶಗಳಲ್ಲಿ ಪದಾರ್ಥ ಕೊಳ್ಳುವ ಉದ್ದೇಶದಿಂದ ಚಿನ್ನ-ಬೆಳ್ಳಿಯನ್ನು ಈ ಕಂಪೆನಿ ಅಲ್ಲಿಗೆ ಕಳುಹಿಸಿದರೂ ಕೂಡ, ಈ ಪದಾರ್ಥಗಳನ್ನು ಇಂಗ್ಲೆಂಡು ಮತ್ತೆ ಇತರ ದೇಶಗಳಿಗೆ ರಫ್ತು ಮಾಡುತ್ತದೆ, ಅಥವಾ ಇವುಗಳಿಂದ ಸಿದ್ಧವಸ್ತುಗಳನ್ನು ತಯಾರಿಸಿ ಇತರ ದೇಶಗಳಿಗೆ ಮಾರುತ್ತದೆ. ಇದರಿಂದ ಹೆಚ್ಚು ಹಣ ಇಂಗ್ಲೆಂಡಿನೊಳಕ್ಕೆ ಮತ್ತೆ ಪ್ರವಹಿಸುತ್ತದೆ. ಆದ್ದರಿಂದ ಚಿನ್ನ-ಬೆಳ್ಳಿಯನ್ನು ಇತರ ದೇಶಗಳಿಗೆ ಮೊದಲು ರಫ್ತು ಮಾಡಿದುದರಲ್ಲಿ ತಪ್ಪಿಲ್ಲ. ಇತರ ದೇಶಗಳಿಂದ ಕೊಳ್ಳುವುದಕ್ಕಿಂತ ಅಧಿಕವಾಗಿ ಅವಕ್ಕೆ ಮಾರುವುದು ಮುಖ್ಯ. ಇದರಿಂದ ವ್ಯಾಪಾರ ಸಿಲ್ಕು ಅನುಕೂಲಕರವಾಗಿರುತ್ತದೆ. ದೇಶದ ಸಂಪತ್ತು ಹೆಚ್ಚಿಸಲು ಇದು ಮುಖ್ಯವಾದ ದಾರಿ. ಹೀಗೆಂದು ಮನ್ ವಾದಿಸಿದ. "ನಮ್ಮ ಸಂಪತ್ತು ಹೆಚ್ಚಿಸಲು ಇರುವ ಸಾಮಾನ್ಯ ಮಾರ್ಗವೆಂದರೆ ವಿದೇಶಿ ವ್ಯಾಪಾರ. ಇದರಲ್ಲಿ ನಾವು ಒಂದು ನಿಯಮ ಪಾಲಿಸಬೇಕು : ನಾವು ಇತರರಿಂದ ಕೊಂಡು ಬಳಸುವುದಕ್ಕಿಂತ ಹೆಚ್ಚಿನ ಮೌಲ್ಯದ ಪದಾರ್ಥಗಳನ್ನು ಅವರಿಗೆ ಮಾರಬೇಕು. ನಾವು ಕೊಂಡದ್ದಕ್ಕಿಂತ ಮಾರಿದ ಹೆಚ್ಚಿನ ಪದಾರ್ಥಕ್ಕೆ ಪ್ರತಿಯಾಗಿ

---

[1] *Tudor Economic Documents, op. cit.*, p. 321.

ಸರಕಿನ ಬದಲು ಚಿನ್ನ ಬೆಳ್ಳಿ ನಮ್ಮ ದೇಶಕ್ಕೆ ಬರಲೇ ಬೇಕು. ನಮ್ಮ ದೇಶದೊಳಕ್ಕೆ ಹಣ ತುರುಕಲು ನಾವು ಯಾವ ವಿಧಾನವನ್ನೇ ಅನುಸರಿಸಲಿ, ವ್ಯಾಪಾರ ಸಿಲ್ಕಿನಿಂದ ನಾವು ಎಷ್ಟು ಗಳಿಸಬಲ್ಲೆವೋ ಅಷ್ಟು ಮಾತ್ರ ನಮ್ಮೊಡನೆ ಉಳಿಯುತ್ತದೆ."[1]

ಹೆಚ್ಚು ಮೌಲ್ಯದ ವಸ್ತುಗಳನ್ನು ನಿರ್ಯಾತ ಮಾಡಬೇಕು; ಅಗತ್ಯವಾದದ್ದನ್ನು ಮಾತ್ರ ಆಯಾತ ಮಾಡಿಕೊಳ್ಳಬೇಕು. ಇವೆರಡರ ವ್ಯತ್ಯಾಸದ ಮೊಬಲಗನ್ನು ಹಣದ ರೂಪದಲ್ಲಿ ಪಡೆಯಬೇಕು. ಇದಾಗಬೇಕಾದರೆ ಕೈಗಾರಿಕೆಯನ್ನು ಎಲ್ಲ ಬಗೆಯಲ್ಲೂ ಪ್ರೋತ್ಸಾಹಿಸಬೇಕು. ಏಕೆಂದರೆ ವ್ಯವಸಾಯ ಪದಾರ್ಥಕ್ಕಿಂತ ಕೈಗಾರಿಕೆ ಉತ್ಪನ್ನಕ್ಕೆ ಹೆಚ್ಚು ಬೆಲೆ. ವಿದೇಶಿ ಪೇಟೆಯಲ್ಲಿ ಇದರ ಮಾರಾಟದಿಂದ ಬರುವ ಹಣ ಅಧಿಕ. ಇಷ್ಟೇ ಮುಖ್ಯವಾದದ್ದು ಇನ್ನೊಂದಿದೆ. ಅಲ್ಲಿನ ಜನಕ್ಕೆ ಬೇಕಾದದ್ದನ್ನು ಆ ದೇಶದಲ್ಲೇ ತಯಾರಿಸ ಬೇಕು. ಇದರಿಂದ ಪರದೇಶದಿಂದ ಹೆಚ್ಚು ಕೊಳ್ಳಬೇಕಾಗುವುದಿಲ್ಲ. ಇದರಿಂದ ಅನುಕೂಲ ಕರ ವ್ಯಾಪಾರ ಸಿಲ್ಕು ಲಭಿಸುವುದೊಂದೇ ಅಲ್ಲ. ಇತರರನ್ನು ಅವಲಂಬಿಸದೆ ದೇಶ ಸ್ವಯಂಪೂರ್ಣವಾಗುತ್ತದೆ. ಇದು ಆಗ ಪ್ರಚಲಿತವಿದ್ದ ಭಾವನೆ.

ಆದ್ದರಿಂದ ಒಂದಾದ ಮೇಲೊಂದು ದೇಶ ಈ ಮುಖ್ಯ ಸಮಸ್ಯೆಗೆ ಗಮನ ಕೊಟ್ಟಿತು. ಹಳೆಯ ಕೈಗಾರಿಕೆಗಳು ಬೆಳೆಯುವುದೆಂತು ? ಹೊಸ ಕೈಗಾರಿಕೆಗಳನ್ನು ಆರಂಭಿಸುವುದೆಂತು ? ಮೊದಲನೆಯ ಮ್ಯಾಕ್ಸಿಮಿಲಿಯನ್ನನ ಕಾಲದಲ್ಲಿ ಬವೇರಿಯದಲ್ಲಿ ಒಂದು ಬುದ್ಧಿವಂತರ ಸಮಿತಿ ಸ್ಥಾಪಿತವಾಯಿತು. "ಹೆಚ್ಚು ಉದ್ಯಮಗಳನ್ನೂ ಕಸಬುಗಳನ್ನೂ ದೇಶದಲ್ಲಿ ಸ್ಥಾಪಿಸಿ ಬೆಳಸುವ ಬಗೆಯನ್ನು ಕುರಿತು ಕೂಲಂಕಷವಾಗಿ ಚರ್ಚಿಸಿ ಸಮಾಲೋಚನೆ ನಡಸುವ ಸಲುವಾಗಿ ಪ್ರತಿ ವಾರವೂ ಗೊತ್ತಾದ ದಿನದಂದು ಸಭೆ ಸೇರುವ ಉದ್ದೇಶದಿಂದ ತಜ್ಞರ ನೇಮಕವಾಗಬೇಕು." ಇದು ಈ ಸಮಿತಿ ಪರಿಶೀಲಿಸಬೇಕಾಗಿದ್ದ ಪ್ರಶ್ನೆ.[2]

ಈ ಬುದ್ಧಿವಂತರ ಸಮಿತಿಯನ್ನು ನೇಮಿಸಿದವರೂ ಇತರ ದೇಶಗಳಲ್ಲಿದ್ದ ಇಂಥ ಜನರೂ ಕೈಗಾರಿಕೆ ಬೆಳಸಲು ಹಲವಾರು ಉಪಾಯಗಳನ್ನು ಕುರಿತು ಚಿಂತಿಸಿದರು.

ರಫ್ತಿಗಾಗಿ ತಯಾರಾದ ವಸ್ತುಗಳಿಗೆ ಸರಕಾರ ಪ್ರೋತ್ಸಾಹದ್ರವ್ಯ ನೀಡುವುದು ಒಂದು ಉಪಾಯ. ನೀವು ಚಾಕುವಿನ ತಯಾರಕರು ಎಂದಿಟ್ಟುಕೊಳ್ಳಿ. ನೀವು ನಿರ್ಯಾತ ಮಾಡುವ ಪ್ರತಿ ಡಜನ್ ಚಾಕುಗಳಿಗೂ ಸರಕಾರದಿಂದ ಇಂತಿಷ್ಟು, ಎಂದು ಹಣ ನಿಮಗೆ ದೊರಕುವುದಾದರೆ ಆಗ ನೀವು ಬಹುಶಃ ಹೆಚ್ಚು ಹೆಚ್ಚು ಚಾಕು ತಯಾರಿಸುವಿರಿ. ಟೋಪಿ, ಉಣ್ಣೆ, ವಸ್ತ್ರ, ಮದ್ದು, ಗುಂಡು, ಲಿನನ್ ಮುಂತಾದ ವಸ್ತುಗಳ ತಯಾರಕರೂ ಹೀಗೆಯೇ ಯೋಚಿಸಿಯಾರು. ಉತ್ಪಾದನೆಯ ಮೇಲೆ ಸರಕಾರ ಪ್ರೋತ್ಸಾಹ ನೀಡುವ ಕ್ರಮ ಜಾರಿಗೆ ಬಂದದ್ದು ಉತ್ಪಾದನೆಯನ್ನು ಪ್ರಚೋದಿಸುವ ಉದ್ದೇಶದಿಂದ.

---

[1] T. Mun, *England's Treasure by Forraign Trade* (1664), pp. 7-8, 52. The Macmillan Company, N.Y., 1895.

[2] L. Memmert, *Die öffentliche Fordenrung der gewerblichen Produktionsmethoden zur Zeit des Merkantilismus in Bayern*, p. 28, Noske, Leipzig, 1930

ರಕ್ಷಣಾ ಸುಂಕದ ಉದ್ದೇಶವೂ ಇದೇ. ನಮ್ಮ ಅಮೆರಿಕನ್ ವಾಚಕರಿಗೆ ಇತರರ ಇತಿಹಾಸಕ್ಕಿಂತ ಅಮೆರಿಕದ ಚರಿತ್ರೆ ಹೆಚ್ಚು ಪರಿಚಿತ. ಆಯಾತ ವಸ್ತುವಿನ ಮೇಲೆ ರಕ್ಷಣಾಸುಂಕ ವಿಧಿಸುವ ಉಪಾಯ ಮೊಟ್ಟಮೊದಲು ಹೊಳೆದದ್ದು ಈ ದೇಶದವನೇ ಆದ ಅಲೆಕ್ಸಾಂಡರ್ ಹ್ಯಾಮಿಲ್ಟನ್ನನಿಗೆ—ಎಂದು ಇವರು ಭಾವಿಸಿರಬಹುದು. ಆದರೆ ಈ ಭಾವನೆ ತಪ್ಪು. ಇದು ನಿಜವಲ್ಲ. ಎಳೆಯ ಕೈಗಾರಿಕೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ರಕ್ಷಣಾಸುಂಕ ವಿಧಿಸುವ ಪದ್ಧತಿ ಬಹು ಹಳೆಯದು, ಹಣವೇ ಸಂಪತ್ತು ಎಂದು ಭಾವಿಸುವ ಜನರಷ್ಟೇ ಹಳೆಯದು, ಬಹುಶಃ ಇವರಿಗೂ ಹಿಂದಿನದೇ ಏನೋ. ಹ್ಯಾಮಿಲ್ಟನ್ ಹುಟ್ಟುವುದಕ್ಕಿಂತ ಮುಂಚೆ, ಇಂಗ್ಲೆಂಡಿನಲ್ಲಿ, ಬರೆದ ಈ ಮಾತು ಎಳೆಯ ಕೈಗಾರಿಕೆಗೆ ನೆರವು ನೀಡಬೇಕೆಂದು ಮಾಡಿದ ಮನವಿ : "ಲಿನನ್ ತಯಾರಿಕೆ ಬ್ರಿಟನ್ ಐರ್ಲೆಂಡ್‌ಗಳಲ್ಲಿ ಇನ್ನೂ ಶೈಶವಾವಸ್ಥೆಯಲ್ಲಿದೆಯೆಂದು ನಾನು ಮನವರಿಕೆ ಮಾಡಿದ್ದೇನೆಂದು ಭಾವಿಸಿದ್ದೇನೆ. ಆದ್ದರಿಂದ, ಈ ಕೈಗಾರಿಕೆಯನ್ನು ಬಹು ಹಿಂದೆಯೇ ಸ್ಥಾಪಿಸಿದವರು ಮಾರುವಷ್ಟು ಅಗ್ಗದ ಬೆಲೆಗೆ ನಮ್ಮ ಜನ ಮಾರುವುದು ಸಾಧ್ಯವಿಲ್ಲ. ಆದ್ದರಿಂದ ಪ್ರಭುತ್ವದ ಪ್ರೋತ್ಸಾಹವಿಲ್ಲದೆ ಈ ಕೈಗಾರಿಕೆ ಗಮನಾರ್ಹ ಹಾಗೂ ಶೀಘ್ರ ಪ್ರಗತಿ ಹೊಂದುವಂತೆ ಮಾಡುವುದು ಸಾಧ್ಯವಿಲ್ಲವೆಂಬುದೂ ನಿಮಗೆ ವೇದ್ಯವಾಗಿಯೇ ಇದೆ."[1]

ಈ ಉತ್ಪಾದಕ ಬಯಸಿದ ಪ್ರಭುತ್ವದ ಪ್ರೋತ್ಸಾಹ ದೊರಕಿತು. ಆಯಾತವಾದ ಸಿದ್ಧ ವಸ್ತುಗಳ ಮೇಲೆ ಹೆಚ್ಚು ಸುಂಕ ವಿಧಿಸಿ, ವಿದೇಶಿ ಸ್ಪರ್ಧೆಯ ವಿರುದ್ಧ ರಕ್ಷಣೆ ದೊರಕಿಸಿ ಕೊಡಲಾಯಿತು. ಯಾವುದೇ ಸಂದರ್ಭದಲ್ಲೂ ವಿದೇಶೀ ವಸ್ತುಗಳ ಆಯಾತವನ್ನೇ ಮಾಡಬಾರದೆಂಬ ನಿಷೇಧವನ್ನೂ ಸರಕಾರ ಕೆಲವು ಸಂದರ್ಭಗಳಲ್ಲಿ ವಿಧಿಸಿತು.

ಪ್ರೋತ್ಸಾಹದ್ರವ್ಯ ಹಾಗೂ ಅರ್ಧ ಸುಂಕದ ಮೂಲಕ ಕೈಗಾರಿಕೆಗೆ ಪ್ರೋತ್ಸಾಹ ದೊರಕಿಸಿದ್ದು ಒಂದು ಕ್ರಮ. ಅಲ್ಲದೆ, ಹೊಸ ಉದ್ಯಮ ಅಥವಾ ಹೊಸ ಉತ್ಪಾದನಾಕ್ರಮ ಜಾರಿಗೆ ತರಬಲ್ಲ ಪರಿಣತ ವಿದೇಶಿ ಕೆಲಸಗಾರರು ದೇಶದಲ್ಲೇ ನೆಲಸುವಂತೆ ಎಲ್ಲ ರೀತಿಯ ಪ್ರೋತ್ಸಾಹವೂ ಅವರಿಗೆ ದೊರಕುತ್ತಿತ್ತು. ತೆರಿಗೆ ವಿನಾಯಿತಿ, ಉಚಿತ ವಸತಿ, ಕೆಲವು ವರ್ಷಗಳ ಕಾಲ ಇವರಿಗೆ ತಮ್ಮ ಪದಾರ್ಥದ ಉತ್ಪತ್ತಿಯ ಸಂಪೂರ್ಣ ಅಧಿಕಾರ, ಇವರ ಉತ್ಪಾದನೆ ಸ್ಥಾಪಿಸಲು ಬಂಡವಾಳದ ಸಾಲ—ಮುಂತಾದ ನಾನಾ ರೀತಿಯ ಆಕರ್ಷಕ ಸೌಲಭ್ಯಗಳನ್ನು ಈ ವಿದೇಶೀ ಕುಶಲಕರ್ಮಿಗಳಿಗೆ ನೀಡಲಾಯಿತು. ಇವರು ತಾವಾಗಿಯೇ ಬಯಸಿ ಬಂದು ದೇಶದಲ್ಲಿ ನೆಲಸುವಂತೆ ಮಾಡುವುದು ಸಾಧ್ಯವಿಲ್ಲದೆ ಹೋದಾಗ ಒಮ್ಮೊಮ್ಮೆ ಈ ಸರಕಾರಗಳು ಈ ನುರಿತ ಕೆಲಸಗಾರರನ್ನು ಹಾರಿಸಿಕೊಂಡು ಬಂದದ್ದೂ ಉಂಟು. ಹದಿನೇಳನೆಯ ಶತಮಾನದಲ್ಲಿ ಫ್ರಾನ್ಸಿನಲ್ಲಿ ಅಧಿಕ ಸಂಖ್ಯೆಯ ಸಚಿವ ಪದವಿಗಳನ್ನು ಪಡೆದು, ಆ ಕಾಲದ ಮುಸೋಲಿನಿಯಂತಿದ್ದ ಕಾಲ್ಬರ್ಟ್ ಎಂಬವನು ವಿದೇಶೀ ಕುಶಲಕರ್ಮಿಗಳು ಫ್ರಾನ್ಸಿನಲ್ಲಿ ನೆಲಸಿ ಕೆಲಸ ಮಾಡಬೇಕೆಂದು ತುಂಬಾ ಕಾತರನಾಗಿದ್ದ.

---

[1] Quoted by J. Viner, *op. cit.*, August, 1930, p. 417.

ಹೇಗಾವರೂ ಮಾಡಿ ಈ ಕೆಲಸಗಾರರನ್ನು ಜಮಾಯಿಸುವ ಉದ್ದೇಶದಿಂದ ಇತರ ದೇಶಗಳಲ್ಲಿ ಈತ ಪ್ರತಿನಿಧಿಗಳನ್ನು ನೇಮಕಮಾಡಿದ್ದ. ೧೬೬೯ರ ಜೂನ್ ೨೮ರಂದು ಈತ ಡ್ರೆಸ್ಡೆನ್ ನಲ್ಲಿದ್ದ ಫ್ರೆಂಚ್ ಸಚಿವನಿಗೆ ಈ ರೀತಿ ಬರೆದ: "ಈ ಜಮಾವಣೆ ಪ್ರತಿನಿಧಿಯ ನಿಯೋಜಿತ ಕಾರ್ಯ ಯಶಸ್ವಿಯಾಗುವಂತೆ ಈತನಿಗೆ ಹೀಗೆಯೇ ನೆರವು ನೀಡುತ್ತಿರಬೇಕು. ಇವನು ಈಗಾಗಲೇ ಫ್ರಾನ್ಸಿಗೆ ಕರೆತಂದಿರುವ ಕಮ್ಮಾರರಿಗೆ ನಾವು ಎಲ್ಲ ಸೌಲಭ್ಯಗಳನ್ನೂ ನೀಡಿದ್ದೇವೆ. ಆದ್ದರಿಂದ ನಮ್ಮ ತಯಾರಕರಿಗಾಗಿ ಇವನು ಇನ್ನೂ ಹಲವು ಕೆಲಸ ಗಾರರನ್ನು ನೇಮಕ ಮಾಡುವುದು ಸಾಧ್ಯವಾಗಬಹುದು."[1]

ದೇಶೀಯ ಕೈ ಕೆಲಸಗಾರರು ಇತರ ದೇಶಗಳಿಗೆ ಹೋಗಿ ತಮ್ಮ ಕೆಲಸದ ರಹಸ್ಯವನ್ನು ಅವರಿಗೆ ಹೇಳಿಕೊಡದಂತೆ, ಅಥವಾ ಮಾರದಂತೆ ತಡೆಯಲು ಬಹು ಎಚ್ಚರಿಕೆಯ ಕ್ರಮ ಕೈಗೊಂಡಿದ್ದಂತೆಯೇ, ಈ ವಿದೇಶಿ ಕೆಲಸಗಾರರೂ ತಮ್ಮ ದೇಶಗಳಿಗೆ ಮರಳಿ ಹೋಗದಂತೆ ತಡೆಯಲು ಬಹು ಎಚ್ಚರಿಕೆಯ ಕ್ರಮ ಕೈಕೊಳ್ಳಲಾಗಿತ್ತು. ಇದಕ್ಕೆ ವಿರುದ್ಧವಾದ ಒಂದು ಪ್ರವೃತ್ತಿಯೂ ಇತ್ತು. ಶ್ರಮನಿರತರೂ, ಸಮರ್ಥರೂ, ಕೌಶಲಯುತರೂ ಆದ ಕೈ ಕೆಲಸ ಗಾರರ, ಉದ್ಯಮಿಗಳ ಇಡೀ ತಂಡಗಳನ್ನೇ ಮತೀಯ ಕಾರಣಗಳಿಗಾಗಿ ಉಚ್ಚಾಟನೆ ಮಾಡುತ್ತಿದ್ದುದೂ ಉಂಟು. ದೇಶದೊಳಕ್ಕೆ ನುರಿತ ಕೈ ಕೆಲಸಗಾರರನ್ನು ತರಲು ಹದಿನೇಳನೆಯ ಶತಮಾನದಲ್ಲಿ ಫ್ರಾನ್ಸು ಎಲ್ಲ ಯತ್ನವನ್ನೂ ಕೈಕೊಂಡಿತ್ತು. ಇದೇ ಸಮಯದಲ್ಲಿ ಹ್ಯೂಗ್‌ನೋ ಜನರನ್ನು ಹೊರದೂಡಿದಾಗ, ಹಲವು ಮಂದಿ ಫ್ರೆಂಚ್ ಕೈ ಕೆಲಸಗಾರರನ್ನು ಕಳೆದುಕೊಂಡೂ ಬಿಟ್ಟಿತು.

ವಿದೇಶಿ ಕೈ ಕೆಲಸಗಾರರ ಯೋಗಕ್ಷೇಮ ನಿರ್ವಹಣೆಯ ವಿಚಾರದಲ್ಲಿ ಸರಕಾರಗಳು ಬಹು ಶ್ರದ್ಧೆ ವಹಿಸಿದ್ದುವೆಂಬುವಕ್ಕೆ ೧೫೬೬ರಲ್ಲಿ ಎಲಿಜಬೆತ್ ರಾಣಿ ಕಂಬರ್‌ಲ್ಯಾಂಡ್ ಹಾಗೂ ವೆಸ್ಟ್‌ಮೋರ್‌ಲ್ಯಾಂಡಿನ ನ್ಯಾಯಾಧೀಶರಿಗೆ ಬರೆದ ಪತ್ರವೇ ಸಾಕ್ಷಿ. ಬರೆ ಹಾಕುವುದು, ಕಿವಿ ಕೊಯ್ಯುವುದು, ಕಾಲು ಕೈ ಕತ್ತರಿಸುವುದು—ಇಂಥ ಶಿಕ್ಷೆಗಳನ್ನು ಸಣ್ಣ ಪುಟ್ಟ ಅಪರಾಧಗಳಿಗೂ ವಿಧಿಸುತ್ತಿದ್ದ ಕಾಲವದು. ಜೀವಕ್ಕೆ ಆಗ ಬೆಲೆಯೆ ಇರಲಿಲ್ಲ. ಆದರೆ ಒಬ್ಬ ಜರ್ಮನನನ್ನು ಕೊಲೆ ಮಾಡಿದ್ದಕ್ಕೆ ರಾಣಿ ಎಷ್ಟೊಂದು ಪೇಚಾಡಿದಳೆಂಬುದು ಈ ಪತ್ರದಿಂದ ವೇದ್ಯವಾಗುತ್ತದೆ: "ಕೆಲವು ಆಲ್ಮೇಯ್ನ್ ಜನರು ನಮ್ಮ ಇಂಗ್ಲೆಂಡ್ ದೇಶದ ಮುದ್ರೆಯೊಡನೆ ದತ್ತವಾದ ಅಧಿಕಾರವನ್ನು ಪಡೆದು, ಅತ್ಯಂತ ಶ್ರಮ, ಜಾಣ್ಮೆ ಹಣ ವೆಚ್ಚಮಾಡಿ ನಮ್ಮ ವೆಸ್ಟ್‌ಮೋರ್‌ಲ್ಯಾಂಡ್ ಮತ್ತು ಕಂಬರ್‌ಲ್ಯಾಂಡ್ ಪ್ರದೇಶ ಗಳಲ್ಲಿ ಬೆಟ್ಟ ಬಂಡೆ ಕಡಿದು ಹೆಚ್ಚು ಖನಿಜಗಳನ್ನು ತೆಗೆದಿದ್ದಾರೆ. ಈ ಕಾರ್ಯದಲ್ಲಿ ಅವರು ಮುಂದುವರೆಯಬೇಕೆಂಬ ಖಚಿತೋದ್ದೇಶದಿಂದಿದ್ದಾಗ ಹಲವು ಪುಂಡರು ಇವರ ಮೇಲೆ ಹಲ್ಲೆ ನಡಸಿ ಕ್ರೌರ್ಯ ಪ್ರದರ್ಶನ ಮಾಡಿರುವುದು ನಮ್ಮ ದೇಶದ ಶಾಂತಿಪಾಲನೆಗೂ ಶಾಸನ ಗಳಿಗೂ ಭಂಗ ತರುವಂಥದಾಗಿದೆ. ಅಷ್ಟೇ ಅಲ್ಲ. ಇವರ ಪೈಕಿ ಒಬ್ಬನ ಕೊಲೆಯೂ

---

[1] P. Boissonnade, *Colbert*, p. 292. Revière, Paris, 1932.

ಆಗಿವೆ. ಇದರಿಂದ ಈ ಉದ್ಯಮಿಗಳು ಈ ಕಾರ್ಯದಲ್ಲಿ ಮುಂದುವರಿಯುವುದು ಸಾಧ್ಯವಿಲ್ಲವಾಗಿದೆ. ಆದ್ದರಿಂದ ಹೀಗೆ ದೌರ್ಜನ್ಯ ಕೃತ್ಯ ಎಸಗಿದ ಎಲ್ಲರನ್ನೂ ಹಿಡಿದು ಬಂಧನದಲ್ಲಿಡಬೇಕೆಂದು ನಿಮಗೆ ಆಜ್ಞಾಪಿಸುತ್ತಿದ್ದೇವೆ....ಈ ಆಲ್ಮೇಯ್ನ್ ಜನರನ್ನು ಇನ್ನು ಮುಂದೆ ಶಾಂತಿ ಸೌಹಾರ್ದದಿಂದ ನಡಸಿಕೊಳ್ಳುವಂತೆ ಮುನ್ನೆಚ್ಚರಿಕೆ ವಹಿಸಬೇಕು....ನಮ್ಮ ವಿಶ್ವಾಸ ಪಾತ್ರರಾಗಬಯಸುವ ನೀವು ಈ ಆಣತಿಗೆ ತಪ್ಪಿ ನಡೆದಲ್ಲಿ ನಿಮ್ಮ ನಾಶವನ್ನು ನೀವೇ ತಂದುಕೊಂಡಂತೆ."[1]

ಸ್ವದೇಶಕ್ಕೆ ಉಪಯುಕ್ತರಾವ ವಿದೇಶಿ ಕುಶಲ ಕರ್ಮಿಗಳ ರಕ್ಷಣೆಯ ವಿಚಾರವಷ್ಟೇ ಅಲ್ಲ. ಹೊಸ ಉತ್ಪಾದನ ವಿಧಾನವನ್ನು ಕಂಡುಹಿಡಿದವರಿಗೂ ಸರಕಾರದ ನೆರವು ದೊರಕುತ್ತಿತ್ತು. ೧೬೧೧ರಲ್ಲಿ ಜೆಹಾನ್‌ಡೀ ಬ್ರಾಸ್‌ಡಿ ಪರ್ ಎಂಬವನು ಒಂದು ಹೊಸ ರೀತಿಯ ಗಿರಣಿ ಕಂಡುಹಿಡಿದಾಗ ಅವನಿಗೆ ಇಪ್ಪತ್ತು ವರ್ಷಗಳ ಅವಧಿಯ ಪೂರ್ಣಾಧಿಕಾರವನ್ನು ಸರಕಾರ ನೀಡಿತು. ಈಗ ಸರಕಾರ ಸ್ವಾಮ್ಯದ ಸನ್ನದು (Patent) ಕೊಡುವಂತೆಯೇ ಇದು. "ಇವನೂ, ಇವನ ಜತೆಗಾರರೂ ನಮ್ಮ ದೇಶದ ಎಲ್ಲ ನಗರಗಳಲ್ಲೂ ಇವನು ಕಂಡುಹಿಡಿದಿರುವ ರೀತಿಯ ಗಿರಣಿಗಳನ್ನು ಸ್ಥಾಪಿಸಲು ನಾವು ಅನುಮತಿ ನೀಡಿದ್ದೇವೆ....ಇವನು ಕಂಡುಹಿಡಿದಿರುವ ರೀತಿಯ ಗಿರಣಿಯನ್ನು ಯಾವ ರೀತಿಯಿಂದಲಾದರೂ ಹೋಲುವ ಗಿರಣಿಗಳನ್ನು ಬೇರೆ ಯಾರೂ ನಿರ್ಮಿಸಬಾರದೆಂದು ಈ ಮೂಲಕ ನಿಷೇಧಿಸುತ್ತೇವೆ. ಅವರು ಯಾವ ಸ್ಥಾನಗಳಲ್ಲೇ ಇರಲಿ, ಈತನ ಸ್ಪಷ್ಟ ಅನುಮತಿ ಪಡೆಯದೆ ಹೀಗೆ ಮಾಡಬಾರದು. ತಪ್ಪಿ ನಡೆದವರಿಗೆ ಹತ್ತು ಸಾವಿರ ಲಿವ್ರೆ ದಂಡ; ಅಲ್ಲದೆ ಅವರ ಮಿಲ್ಲು ಮುಟ್ಟುಗೋಲಾಗಲೂಬಹುದು."[2]

ಹೊಸ ವಿಧಾನ ಕಂಡುಹಿಡಿದವರಿಗೆ ಪೂರ್ಣ ಸ್ವಾಮ್ಯ ಕೊಡುತ್ತಿದ್ದುದಷ್ಟೇ ಅಲ್ಲ. ಹೊಸ ಸುಧಾರಿತ ವಿಧಾನಗಳನ್ನು ಕಂಡುಹಿಡಿಯುವವರಿಗೆ ಬಹುಮಾನದ ಆಕರ್ಷಣೆ ನೀಡುತ್ತಿದ್ದುದೂ ಉಂಟು. ಫ್ರಾನ್ಸಿನಲ್ಲಿ ಕೋಲ್ಬರ್ಟ್ ಎಂಬವನು ತಾಂತ್ರಿಕ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದ; ಸರಕಾರವೇ ನಡಸುತ್ತಿದ್ದ ಉದ್ಯಮ ಗೃಹಗಳನ್ನೂ ಸ್ಥಾಪಿಸಿದ. ಬವೇರಿಯದಲ್ಲಿ ಹದಿನೇಳನೆಯ ಶತಮಾನದ ಅಂತ್ಯದ ವೇಳೆಗೆ ೨೦೦೦ ಜನರು ಸರಕಾರಿ ವಸ್ತ್ರ ಕೈಗಾರಿಕೆಯಲ್ಲಿ ಕೆಲಸ ಮಾಡುತ್ತಿದ್ದರು. ಈ ಸರಕಾರಿ ಉದ್ಯಮಗಳು ಇತರರಿಗೆ ಮಾದರಿಯಾಗಿ, ಸ್ಫೂರ್ತಿ ಕೇಂದ್ರಗಳಾಗಿ, ಪ್ರಯೋಗಾಲಯಗಳಾಗಿ ಇರಬೇಕೆಂಬುದು ಉದ್ದೇಶ. ಸಾಹಸಿ ಕುಶಲ ಕೆಲಸಗಾರರು ಒಬ್ಬೊಬ್ಬರೇ ಸಾಧಿಸಲಾಗದುದನ್ನು ಇವು ಸಾಧಿಸಿದುವು; ಪ್ರಯೋಗ ನಡಸಿದುವು; ಪ್ರಗತಿಯ ಚಕ್ರವನ್ನು ದೂಡಿದುವು: ವೃತ್ತಿಸಂಘಗಳ ಕಟ್ಟು ಕಟ್ಟಲೆಗಳು ಇಲ್ಲದುದರಿಂದ ಈ ದೊಡ್ಡ ಪ್ರಮಾಣದ ಕೈಗಾರಿಕೆಗಳಿಗೆ ಇದು ಸಾಧ್ಯವಾಯಿತು.

ಇದೆಲ್ಲಾ ಕಷ್ಟ ಸಾಧ್ಯವಾಯಿತು, ಅಸಾಧ್ಯವಾಗಲಿಲ್ಲ. ನೇರ ಸಹಾಯದ್ರವ್ಯವೇ

---

[1] *Tudor Economic Documents, op. cit.*, vol. I, p. 249.

[2] *Recueil Général, op. cit.*, vol. 16, pp. 18-21.

ಮುಂತಾದ ನಾನಾ ರೀತಿಯಲ್ಲಿ ಸರಕಾರ ಕೈಗಾರಿಕೆಗೆ ನೆರವು ನೀಡಲು ಸದಾ ಸಿದ್ಧವಾಗಿತ್ತು. ಕೋಲ್ಬರ್ಟ್ ಅಧಿಕಾರದಲ್ಲಿದ್ದಾಗ ಫ್ರೆಂಚ್ ವಸ್ತ್ರ ಕೈಗಾರಿಕೆಗಳಿಗೆ ನಾನಾ ರೀತಿಯಲ್ಲಿ ಒಟ್ಟು ಎಂಬತ್ತು ಲಕ್ಷ ಲಿವ್ರೆ ಧನಸಹಾಯ ದೊರಕಿತು. ರೇಷ್ಮೆ ಹಾಗೂ ಜರತಾರಿ ವಸ್ತ್ರ ತಯಾರಿಸುವ ಯಂತ್ರದ ಸ್ಥಾಪನೆ ಮಾಡಲು ಮುಂದೆ ಬಂದ ಕೆಲವರಿಗೆ ಸರಕಾರ ಹಲವು ಸೌಲಭ್ಯಗಳನ್ನೂ ನೇರವಾದ ಧನಸಹಾಯವನ್ನೂ ನೀಡಿತು. "ನಮ್ಮ ಜನಗಳ ಕ್ಷೇಮ ಸಾಧನೆಗೆ ಕುಶಲಕಲೆ ಹಾಗೂ ಕೈಗಾರಿಕೆಗಳ ಸ್ಥಾಪನೆಯೇ ಒಂದು ಮುಖ್ಯೋಪಾಯ. ಇದರಿಂದ ನಮ್ಮ ದೇಶ ಸಂಪದ್ಯುಕ್ತವಾಗುತ್ತದೆ, ಅಭಿವೃದ್ಧಿ ಹೊಂದುತ್ತದೆ. ನಮ್ಮಲ್ಲಿಲ್ಲದ್ದನ್ನು ಪಡೆಯುವುದಕ್ಕಾಗಿ ನಮ್ಮ ನೆರೆಯವರ ಮುಂದೆ ಕೈಯೊಡ್ಡಬೇಕಾದ ಪರಿಸ್ಥಿತಿ ತಪ್ಪುತ್ತದೆ. ನಿರುದ್ಯೋಗದ ದುಷ್ಪರಿಣಾಮಗಳನ್ನು ನಮ್ಮ ದೇಶದಿಂದ ತೊಡೆದು ಹಾಕಲು ಇದು ಸುಲಭೋಪಾಯ, ಉತ್ತಮ ಉಪಾಯ. ನಮ್ಮ ನೆರೆ ರಾಷ್ಟ್ರಗಳ ಬೊಕ್ಕಸ ತುಂಬಲು ನಾವು ನಮ್ಮ ಚಿನ್ನ ಬೆಳ್ಳಿ ಕಳಿಸುವುದನ್ನು ನಿಲ್ಲಿಸಲು ಇದೊಂದೇ ಸಾಧನ....[ಇನ್ನು ಹನ್ನೆರಡು ವರ್ಷ ಕಾಲ]....ಈ ಪ್ಯಾರಿಸ್ ನಗರದಲ್ಲಿ [ಮುಂದೆ ಕಾಣಿಸಿರುವ ಹನ್ನೆರಡು ಜನರ] ಅನುಮತಿಯಿಲ್ಲದೆ ಬೇರೆ ಯಾರೂ ರೇಷ್ಮೆ ಗಿರಣಿಯನ್ನು ಸ್ಥಾಪಿಸಕೂಡದು....ಈ ಉದ್ಯಮಕ್ಕೆ ಅಗತ್ಯವಾದ ಅಗಾಧ ಹಣ ಒದಗಿಸಲು ನೆರವಾಗುವ ಉದ್ದೇಶದಿಂದ ನಾವು ಈ ಉದ್ಯಮಿಗಳಿಗೆ ೧,೮೦,೦೦೦ ಲಿವ್ರೆ ಮಂಜೂರು ಮಾಡಿದ್ದೇವೆ. ತಕ್ಷಣವೇ ಈ ಹಣವನ್ನು ಇವರು ಪಡೆಯತಕ್ಕದ್ದು. ಬಡ್ಡಿಯಿಲ್ಲದೆ ಹನ್ನೆರಡು ವರ್ಷಕಾಲ ಇದನ್ನು ಪಡೆದಿರತಕ್ಕದ್ದು. ಈ ಅವಧಿ ಪೂರೈಸಿದ ಅನಂತರ ಇವರು ೧,೫೦,೦೦೦ ಲಿವ್ರೆ ಮಾತ್ರ ಹಿಂದಿರುಗಿಸತಕ್ಕದ್ದು. ಉಳಿದ ೩೦,೦೦೦ ಲಿವ್ರೆಯನ್ನು ಇವರು ಮಾಡಿದ ಅಗಾಧ ಅಗತ್ಯವೆಚ್ಚಕ್ಕಾಗಿಯೂ, ಉದ್ಯಮದ ಸ್ಥಾಪನೆಗಾಗಿ ಅನುಭವಿಸಬೇಕಾಗಿ ಬಂದ ನಷ್ಟಕ್ಕಾಗಿಯೂ ಇವರಿಗೆ ನಮ್ಮ ಕೊಡುಗೆಯೆಂದು ಪರಿಗಣಿಸತಕ್ಕದ್ದು."[1]

ಕೈಗಾರಿಕೆ ಬೆಳೆಯಬೇಕು—ಎಂದು ಹಣ ಪ್ರಭುತ್ವವಾದಿಗಳು ಹೇಳುತ್ತಿದ್ದುದಕ್ಕೆ ಇನ್ನೂ ಒಂದು ಕಾರಣ ಕೊಡುತ್ತಿದ್ದರು. ಅವರ ದೃಷ್ಟಿಯಲ್ಲಿ ಇದೂ ಒಂದು ಮುಖ್ಯ ಕಾರಣ. ಕೈಗಾರಿಕೆಯ ಬೆಳವಣಿಗೆಯಿಂದ ನಿರ್ಯಾತ ಅಧಿಕಗೊಂಡು ಅನುಕೂಲಕರ ವ್ಯಾಪಾರ ಸಿಲ್ಕು ಏರ್ಪಡುವುದಷ್ಟೇ ಅಲ್ಲ. ದೇಶದಲ್ಲಿ ಉದ್ಯೋಗವೂ ಬೆಳೆಯುತ್ತದೆ. ಮೇಲೆ ಹೇಳಿದ ಶಾಸನ ಇದಕ್ಕೆ ಅನುಕೂಲ ಪರಿಸ್ಥಿತಿ ಕಲ್ಪಿಸಿತು. ೧೬೭೭ರಲ್ಲಿ ಟಿ. ಮ್ಯಾನ್ಲೆ ಎಂಬವನು ಈ ರೀತಿ ಬರೆದ: "ಹತ್ತು ಪೌಂಡು ಕಚ್ಚಾ ಉಣ್ಣೆಯನ್ನು ಈಗಿನ ಬೆಲೆಯ ಎರಡರಷ್ಟು ಬೆಲೆಗೆ ನಿರ್ಯಾತ ಮಾಡುವುದಕ್ಕಿಂತ ಒಂದು ಪೌಂಡು ಸಿದ್ಧವಸ್ತುವನ್ನು—ನೆಯ್ದ ಬಟ್ಟೆಯನ್ನು—ನಿರ್ಯಾತ ಮಾಡುವುದು ಹೆಚ್ಚು ಉಪಯುಕ್ತ."[2] ಭಿಕ್ಷುಕರೂ

---

[1] *Recueil Général, op. cit.*, vol. 15, pp. 283-287.

[2] T. Manley, *A Discourse Shewing That the Exportation of Wooll is Destructive to this Kingdom*, p. 3. London, 1677.

ನಿರುದ್ಯೋಗಿಗಳೂ ತ್ರಾಸ ಕೊಡುತ್ತಿದ್ದ ಕಾಲದಲ್ಲಿ, ಪರಿಹಾರ ಕಾರ್ಯಗಳಿಗಾಗಿ ಹೆಚ್ಚು ಹಣ ವೆಚ್ಚಮಾಡಬೇಕಾಗಿದ್ದ ಕಾಲದಲ್ಲಿ, ಈ ವಾದ ಬಹು ಯುಕ್ತಿಯುಕ್ತವಾಗಿತ್ತು. ಜನಕ್ಷೇಮದಲ್ಲಿ ಆಸಕ್ತಿ ಹೊಂದಿದ್ದ ದೊರೆಗೆ, ಎಲ್ಲಕ್ಕಿಂತ ಮಿಗಿಲಾಗಿ ರಾಷ್ಟ್ರ ಶಕ್ತಿಯನ್ನೂ ರಾಷ್ಟ್ರೀಯ ಸಂಪತ್ತನ್ನೂ ಗಳಿಸಬೇಕೆಂದು ಬಯಸುತ್ತಿದ್ದ ಧನಪ್ರಭುತ್ವವಾದಿ ಚಿಂತಕರಿಗೆ, ದೇಶದ ಜನರ ಸುಸ್ಥಿತಿ ಕಾಯ್ದುಕೊಳ್ಳುವುದರ ಅಗತ್ಯ ಸ್ಪಷ್ಟವಾಗಿತ್ತು. ಏಕೆಂದರೆ ಯುದ್ಧ ಕಾಲದಲ್ಲಿ ಬಂದೂಕದ ಬಾಯಿಗೆ ಆಹುತಿಯಾಗಬೇಕಾಗಿದ್ದವರು ಈ ಸಾಮಾನ್ಯ ಜನರೇ. ಆದ್ದರಿಂದ ಕಾರ್ಮಿಕರಿಗೆ ಉದ್ಯೋಗ ಕಲ್ಪಿಸುವ ಕೈಗಾರಿಕೆಗೆ ಪ್ರೋತ್ಸಾಹ ನೀಡಬೇಕಾಗಿತ್ತು. ಧಾನ್ಯ ಬೆಳೆಯಲೂ ಹೆಚ್ಚು ಗಮನ ಕೊಡುವುದು ಅಗತ್ಯವಾಗಿತ್ತು. ಯುದ್ಧ ಬಂದಾಗ ಧಷ್ಟಪುಷ್ಟ ಜನ ದೊರಕಬೇಕಾದರೆ ಈ ಜನಕ್ಕೆ ಸಾಕಷ್ಟು ಆಹಾರ ದೊರಕುವಂತಾಗಬೇಕಲ್ಲವೆ? ಯುದ್ಧ ಸಂಭವಿಸಿದಾಗ ಸಾಕಷ್ಟು ಆಹಾರ ಸರಬರಾಯಿ ಎಷ್ಟು ಅಗತ್ಯವೆಂಬ ಅಂಶ ಎಲ್ಲರಿಗೂ ಮನವರಿಕೆಯಾಗಿತ್ತು. ಆದ್ದರಿಂದ ಇಂಗ್ಲೆಂಡಿನಲ್ಲಿ ಧಾನ್ಯದ ಉತ್ಪಾದನೆಗೆ ಪ್ರೋತ್ಸಾಹ ನೀಡಲು ಸಹಾಯ ದ್ರವ್ಯ ನೀಡಲಾಗುತ್ತಿತ್ತು. ಯುದ್ಧ ಕಾಲದಲ್ಲಿ ಆಹಾರದ ವಿಚಾರದಲ್ಲಿ ಸ್ವಸಂಪೂರ್ಣವಾದ ರಾಷ್ಟ್ರದ—ಧಷ್ಟಪುಷ್ಟ ಯೋಧರಿಂದ ಕೂಡಿದ ರಾಷ್ಟ್ರ ನಿರ್ಮಾಣವಾಗಬೇಕೆಂಬ ಮುಖ್ಯೋದ್ದೇಶದಿಂದ ಹಲವು ರಾಷ್ಟ್ರಗಳಲ್ಲಿ ಧಾನ್ಯ ಶಾಸನಗಳು ಜಾರಿಗೆ ಬಂದುವು.

ಯೋಧರು. ಯುದ್ಧ ಕಾಲ. ಯಾವಾಗಲೂ ಇದೇ ಯೋಜನೆ ಮಾಡುತ್ತಿದ್ದವರು ಇನ್ನೊಂದು ವಿಚಾರಕ್ಕೂ ಹೆಚ್ಚು ಗಮನ ಕೊಟ್ಟರು. ಅದು, ಹೆಚ್ಚು ಹಡಗುಗಳ ನಿರ್ಮಾಣ, ಒಳ್ಳೆಯ ಹಡಗುಗಳ ನಿರ್ಮಾಣ. ರಾಷ್ಟ್ರ ರಕ್ಷಣೆ, ಶತ್ರು ರಾಷ್ಟ್ರದ ಆಕ್ರಮಣ—ಎರಡಕ್ಕೂ ಹಡಗುಗಳು ಬೇಕು. ಅನುಕೂಲಕರ ವ್ಯಾಪಾರ ಸಿಲ್ಕು ಏರ್ಪಡಲು ಕೈಗಾರಿಕೆಗೆ ಪ್ರೋತ್ಸಾಹ ನೀಡಬೇಕೆಂದು ಧನಪ್ರಭುತ್ವವಾದಿಗಳು ಹೇಳುತ್ತಿದ್ದಂತೆಯೇ, ವ್ಯಾಪಾರ ನೌಕೆಗಳ ನಿರ್ಮಾಣವಾಗಬೇಕೆಂದೂ ಹೇಳಿದರು. ರಾಷ್ಟ್ರಶಕ್ತಿಯ ಬೆಳವಣಿಗೆಗೆ ಇದೂ ಅಗತ್ಯವೆಂದೂ ಅವರ ಕಲ್ಪನೆ. ಸರಕಾರಗಳು ವಿದೇಶೀ ವ್ಯಾಪಾರದಲ್ಲಿ ಆಸಕ್ತಿ ಹೊಂದಿದ್ದಂತೆಯೇ, ಇತರ ದೇಶಗಳಿಗೆ ಕೈಗಾರಿಕೆಯ ಸರಕು ಸಾಗಿಸಲು ಸಾಕಷ್ಟು ಹಡಗು ಸೌಲಭ್ಯ ನಿರ್ಮಾಣದ ಕಡೆಗೂ ಗಮನ ಕೊಡಬೇಕೆಂದು ಇವರು ಹೇಳಿದರು. ಆದ್ದರಿಂದ ಸರಕಾರ ಕೈಗಾರಿಕೆ ಬೆಳೆಸಲು ಎಷ್ಟು ಉತ್ಸಾಹ ತೋರಿಸಿತೋ ಅಷ್ಟೇ ಆಸಕ್ತಿಯನ್ನು ಇದರಲ್ಲೂ ವ್ಯಕ್ತಪಡಿಸಿತು. ಹಡಗು ನಿರ್ಮಾಪಕನಿಗೆ ಸರಕಾರದಿಂದ ಸಹಾಯದ್ರವ್ಯ ದೊರಕಿತು. ಡಾಂಬರೆಣ್ಣೆ (ಟಾರು), ಕಪ್ಪುರಾಳ, ಮರದ ದಿಮ್ಮಿ ಮುಂತಾದ ಪದಾರ್ಥಗಳ ಅನ್ವೇಷಣೆ ಆರಂಭವಾಯಿತು. ಇವುಗಳ ಆಮದನ್ನು ಪ್ರೋತ್ಸಾಹಿಸಲು ಇವುಗಳಿಗೆ ಸುಂಕ ವಿನಾಯಿತಿ ದೊರಕಿತು. ನೌಕಾಪಡೆಗೆ ಜನರನ್ನು ಬಲವಂತದಿಂದ ಸೇರಿಸಿಕೊಳ್ಳಲಾಯಿತು. ಫ್ರಾನ್ಸಿನಲ್ಲಿ ಅಪರಾಧಿಗಳಿಗೆ ಸಾಧ್ಯವಾದಾಗಲೆಲ್ಲ ಹಡಗು ಹುಟ್ಟುಹಾಕುವ ಶಿಕ್ಷೆ ವಿಧಿಸಲು ಪ್ರೋತ್ಸಾಹ ನೀಡಲಾಯಿತು. ಇಂಗ್ಲೆಂಡಿನಲ್ಲಿ ಮೀನುಗಾರಿಕೆಗೆ ಪ್ರೋತ್ಸಾಹ ದೊರಕಿತು. ಏಕೆಂದರೆ ನಾವಿಕರಾಗುವವರಿಗೆ ಇದು ಒಳ್ಳೆಯ ಅನುಭವ ನೀಡುತ್ತಿತ್ತು. "ಹೆಚ್ಚು ಮೀನು ತಿನ್ನಿರಿ,"

ಎಂದು ಜನರಲ್ಲಿ ಪ್ರಚಾರ ಮಾಡಲಾಯಿತು. ಆಗಿನ ಕಾಲದ ಪ್ರಚಾರಯಂತ್ರ ಈ ಕೆಲಸ ಕೈಗೊಂಡಿತು. ಮೀನು ಆರೋಗ್ಯಕಾರಿಯಷ್ಟೇ ಅಲ್ಲ, ದೀರ್ಘಾಯುಸ್ಸಿಗೆ ಅಗತ್ಯ—ಎಂದು ಜನರಲ್ಲಿ ನಂಬಿಕೆ ಹುಟ್ಟಿಸಲು ಈ ಪ್ರಚಾರ ವ್ಯವಸ್ಥೆ ಯತ್ನಿಸಿತು.

ಹದಿನಾರನೆಯ ಶತಮಾನದ ಅಂತ್ಯದಲ್ಲಿ ಸ್ಪೆಯ್ನ್ ಕ್ಷೀಣಸ್ಥಿತಿಗೆ ಬಂದಾಗ, ಆ ಕಾಲದ ಪ್ರಮುಖ ರಾಷ್ಟ್ರಗಳ ಅಗ್ರಸ್ಥಾನಕ್ಕೆ ಹಾಲೆಂಡು ಏರಿತು. ಹಾಲೆಂಡು ಪುಟ್ಟದೇಶ. ಆದರೆ ಅದು ಸಿರಿವಂತ ರಾಷ್ಟ್ರವಾಗಿತ್ತು, ಬಲಿಷ್ಠ ರಾಷ್ಟ್ರವಾಗಿತ್ತು. ಹಾಲೆಂಡು ಈ ಸ್ಥಾನ ಗಳಿಸಲು ಅದು ಸಮುದ್ರಯಾನಕ್ಕೆ ನೀಡಿದ ಆದ್ಯಗಮನ ಒಂದು ಕಾರಣ. ವೆನಿಸಿನ ಜನರಂತೆ ಹಾಲೆಂಡಿನವರೂ ಕೂಡ ತಮ್ಮ ದೇಶದ ಭೂಗೋಲಿಕ ಪರಿಸ್ಥಿತಿಯ ದೆಸೆಯಿಂದ ದೋಣಿ ವಿದ್ಯೆಯಲ್ಲಿ ಪ್ರಾವೀಣ್ಯ ಗಳಿಸಲೇಬೇಕಾಗಿತ್ತು. ಅದ್ಭುತ ಮತ್ಸ್ಯಸಂಪತ್ತು ಹೊಂದಿದ್ದ ಉತ್ತರಸಮುದ್ರ ಹಾಲೆಂಡಿನವರನ್ನು ಯಾವಾಗಲೂ ಆಕರ್ಷಿಸಿತ್ತು. ಉತ್ತರದ ಸರಕು ದಕ್ಷಿಣದ ಮೆಡಿಟರೇನಿಯನ್ನಿಗೂ, ದಕ್ಷಿಣದ ಪದಾರ್ಥ ಉತ್ತರಕ್ಕೂ ಧಾರಾಕಾರವಾಗಿ ಹರಿಯುತ್ತಿದ್ದು, ಈ ಹಾದಿಯ ಕೇಂದ್ರ ಪ್ರದೇಶವಾಗಿತ್ತು ಹಾಲೆಂಡ್. ಇದಕ್ಕೆ ತಕ್ಕಂತೆ ಡಚ್ಚರು ಸಾಹಸಿಗಳಾಗಿಯೂ ಇದ್ದರು. ಇವರು ಈ ಅವಕಾಶವನ್ನು ಸದುಪಯೋಗಪಡಿಸಿಕೊಂಡರು. ಇವರು ಸಮುದ್ರಗಾಮಿಗಳಾದರೂ ಪ್ರಪಂಚದ ಸರಕನ್ನು ಸಾಗಿಸುವ ಹೊಣೆ ಹೊತ್ತರು. ಡಚ್ ಹಡಗುಗಳು ಸಡಗರದಿಂದ ಎಲ್ಲೆಲ್ಲೂ ಸರಿದಾಡಿದುವು. ಅವರಿವರ ಸರಕನ್ನು ಎಲ್ಲೆಲ್ಲಿಗೋ ಸಾಗಿಸಿದುವು.

ಇಂಗ್ಲಿಷ್ ಫ್ರೆಂಚ್ ಸರಕು ಡಚ್ ಹಡಗುಗಳಲ್ಲಿ ಸಾಗುವುದನ್ನು ನೋಡುತ್ತಾ ಇಂಗ್ಲೆಂಡ್ ಫ್ರಾನ್ಸ್‌ಗಳು ಸುಮ್ಮನೆ ಕುಳಿತಿರಲಾರದೆ ಹೋದುವು. ತಮ್ಮ ಸರಕನ್ನು ಸಾಗಿಸಿದ್ದಕ್ಕಾಗಿ ಡಚ್ ನಾವಿಕರಿಗೆ ತಮ್ಮ ಕಷ್ಟಾರ್ಜಿತ ಧನವನ್ನು ತೆರಲು ಇವು ಒಪ್ಪಲಾರದೆ ಹೋದುವು. ಅಮೆರಿಕನ್ ಇತಿಹಾಸದಲ್ಲಿ ತುಂಬಾ ಪ್ರಸಿದ್ಧವಾಗಿರುವ ಇಂಗ್ಲಿಷ್ ನೌಕಾಯಾನ ಶಾಸನದ ಒಂದು ಮುಖ್ಯೋದ್ದೇಶವನ್ನು ಓದಿ: ಸಮುದ್ರದ ಮೇಲೆ ಸಾಮಾನು ಸಾಗಿಸುವ ಸ್ವಾಮ್ಯವನ್ನು ಡಚ್ಚರ ಬಿಗಿಮುಷ್ಟಿಯಿಂದ ಕಿತ್ತುಕೊಳ್ಳುವುದು ಆ ಉದ್ದೇಶ. ೧೬೬೦ ರ ಒಂದು ಶಾಸನದಲ್ಲಿ ಈ ಉದ್ದೇಶ ಸ್ಪಷ್ಟವಾಗಿದೆ. "ಈ ದೇಶದಲ್ಲಿ ಹಡಗುಗಳನ್ನು ಹೆಚ್ಚಿಸಲೂ, ನೌಕಾಯಾನಕ್ಕೆ ಪ್ರೋತ್ಸಾಹ ನೀಡಲೂ ಶಾಸನ ಮಾಡುವುದೇನೆಂದರೆ, ಸಾವಿರದ ಆರುನೂರ ಅರುವತ್ತರ ಡಿಸೆಂಬರ್ ಒಂದನೆಯ ತಾರೀಖಿನ ಅನಂತರ, ಏಷ್ಯಾ ಆಫ್ರಿಕಾ ಅಮೆರಿಕಾಗಳಲ್ಲಿರುವ, ಈ ದೊರೆಗೆ ಸೇರಿರುವ ಅಥವಾ ಇವರ ಒಡೆತನದಲ್ಲಿರುವ ದ್ವೀಪ, ವಸಾಹತು ಅಥವಾ ಪ್ರದೇಶಗಳೊಳಕ್ಕಾಗಲಿ, ಅಥವಾ ಇವುಗಳಿಂದ ಹೊರಕ್ಕಾಗಲಿ ಸಾಗುವ ಪದಾರ್ಥ ಬೇರೆ ಯಾವ ಹಡಗಿನಲ್ಲೂ ಸಾಗಿಸಲ್ಪಡಕೂಡದು; ಇಂಗ್ಲೆಂಡ್ ಅಥವಾ ಐರ್ಲೆಂಡ್ ಅಥವಾ ವೇಲ್ಸ್ ಪ್ರಜೆಗಳಿಗೇ, ನಿಜವಾಗಿಯೂ, ವಂಚನೆಯಿಲ್ಲದೆ, ಸೇರಿದ—ಅಥವಾ ಈ ದ್ವೀಪ, ವಸಾಹತು ಅಥವಾ ಪ್ರದೇಶಗಳಲ್ಲಿ ನಿರ್ಮಿತವಾದ—ಅಥವಾ ಇವಕ್ಕೆ ಸೇರಿದ—ಹಡಗುಗಳಲ್ಲೇ ಸಾಗಿಸಲ್ಪಡಬೇಕು. ಈ ಹಡಗುಗಳ ಯಜಮಾನರೂ ಕೊನೆಯ ಪಕ್ಷ ಮುಕ್ಕಾಲು ಪಾಲು ನಾವಿಕರೂ

ಇಂಗ್ಲಿಷರೇ ಆಗಿರಬೇಕು." ಇದು ಈ ಶಾಸನದ ಒಕ್ಕಣೆ.[1]

ಡಚ್ ಹಡಗುಗಳು⟶ ❙ ಸಾಮ್ರಾಜ್ಯ ಕೋಟೆ—ಪ್ರವೇಶವಿಲ್ಲ!

ಈ ವಿಚಾರದಲ್ಲಿ ಆಳುವ ದೇಶವೂ ಅಧೀನ ರಾಜ್ಯಗಳೂ ಒಂದೇ ಎಂಬಂತೆ ವರ್ತಿಸಬೇಕಿತ್ತು. ವಿದೇಶೀಯರ ಆಗಮನದ ವಿರುದ್ಧ ಒಂದಾಗಿ ಹೋರಾಡಬೇಕಿತ್ತು. ಅಮೆರಿಕನ್ ವಸಾಹತುಗಾರರಿಗೆ, ಡಚ್ ಹಡಗು ಹಿತಗಳ ವಿರುದ್ಧ ಹೋರಾಟದಲ್ಲಿ, ಈ ವಾದ ಮುಂದೊಡ್ಡುವುದು ಬಹು ಅನುಕೂಲಕರವಾಗಿತ್ತು. ನೌಕಾಯಾನ ಶಾಸನಗಳ ಈ ಭಾಗ ಅಮೆರಿಕನರಿಗೆ ಸಹಾಯಕವಾಗಿತ್ತು. ಅವರು ತಮ್ಮವೇ ಆದ ವ್ಯಾಪಾರ ನೌಕೆಗಳನ್ನು ಪಡೆಯಲು ಅನುಕೂಲವಾಯಿತು. ಜಗತ್ತಿನ ಪ್ರತಿ ಬಂದರಿನಲ್ಲೂ ಅಮೆರಿಕನ್ (ಯಾಂಕೀ) ಹಡಗು ಸಾಮಾನ್ಯ ನೋಟವಾಯಿತು. ಬೆಳೆಯುತ್ತಿದ್ದ ಬ್ರಿಟಿಷ್ ಚಕ್ರಾಧಿಪತ್ಯದ ಹಡಗು ವ್ಯವಸ್ಥೆಯ ಸಂಪೂರ್ಣ ಸ್ವಾಮ್ಯದಲ್ಲಿ ಒಂದು ಭಾಗವನ್ನು ಅಮೆರಿಕಾ ಹೊಂದಿದ್ದುದರಿಂದ ಅದಕ್ಕೆ ಅನುಕೂಲವಾಯಿತು. ಯಾಂಕೀ ಹಡಗು ನಿರ್ಮಾಪಕರಿಗೂ, ಹಡಗು ಮಾಲಿಕರಿಗೂ, ನಾವಿಕರಿಗೂ ಹಣ ಬಂತು.

ಆದರೆ ಈ ನೌಕಾಯಾನ ಶಾಸನಗಳ ಇತರ ಅಂಶಗಳು ಈ ವಸಾಹತುಗಳಿಗೆ ಅನುಕೂಲಕರವಾಗಿರಲಿಲ್ಲ. ವಸಾಹತುಗಳು ತಮ್ಮನ್ನು ಆಳುವ ದೇಶಕ್ಕೆ ವರಮಾನ ದೊರಕಿಸುವ ಒಂದು ಸಾಧನವೆಂಬುದು ಧನಪ್ರಭುತ್ವವಾದಿಗಳ ವಾದವಾಗಿತ್ತು. ಆದ್ದರಿಂದ ಆಳರಸರ ಕೈಗಾರಿಕೆಯೊಡನೆ ಸ್ಪರ್ಧೆಗೆ ನಿಲ್ಲುವ ಯಾವ ಕೈಗಾರಿಕೆಯನ್ನೂ ಈ ವಸಾಹತುಗಳ ಜನರು ಸ್ಥಾಪಿಸಕೂಡದೆಂಬ ಶಾಸನಗಳೂ ಜಾರಿಗೆ ಬಂದುವು. ಟೋಪಿ, ಹ್ಯಾಟು, ಉಣ್ಣೆ ಬಟ್ಟೆ, ಕಬ್ಬಿಣದ ಸಾಮಾನು ಇವನ್ನು ವಸಾಹತುಗಳ ಜನ ತಯಾರಿಸಬಾರದೆಂಬ ನಿಷೇಧವಿತ್ತು. ಈ ಪದಾರ್ಥಗಳ ತಯಾರಿಕೆಗೆ ಅಗತ್ಯವಾದ ಕಚ್ಚಾ ವಸ್ತುವೆಲ್ಲ ಅಮೆರಿಕದಲ್ಲಿತ್ತು. ಆದರೂ ಈ ವಸ್ತುಗಳನ್ನು ಸಿದ್ಧ ಪದಾರ್ಥಗಳ ತಯಾರಿಕೆಗಾಗಿ ಇಂಗ್ಲೆಂಡಿಗೆ ಕಳಿಸಬೇಕು, ತಯಾರಾದ ವಸ್ತುವನ್ನು ಮತ್ತೆ ಕೊಳ್ಳಬೇಕು. ಇದು ಆಳುವ ದೇಶದ ಇಚ್ಛೆಯಾಗಿತ್ತು.

ವಸಾಹತುಗಳ ಕಚ್ಚಾವಸ್ತು ⟶ ಇಂಗ್ಲೆಂಡಿಗೆ. ಸಿದ್ಧ ವಸ್ತು ತಯಾರಿಕೆ ಇಂಗ್ಲೆಂಡಿನಲ್ಲಿ ⟶ ಮತ್ತೆ ಅಮೆರಿಕಕ್ಕೆ ರವಾನೆ.

ಇದು ಅಂದಿನ ಕ್ರಮ.

ವಸಾಹತುಗಳ ಕಚ್ಚಾ ವಸ್ತು ⟶ ಅಮೆರಿಕದಲ್ಲೇ ಸಿದ್ಧವಸ್ತು ತಯಾರಿಕೆ. ಈ ಕ್ರಮ ಅಂದು ನಿಷಿದ್ಧ.

ಅಮೆರಿಕದ ವಿಚಾರದಲ್ಲೇ ಅಲ್ಲ, ತನ್ನ ಎಲ್ಲ ವಸಾಹತುಗಳ ವಿಚಾರದಲ್ಲೂ ಇಂಗ್ಲೆಂಡಿನದು ಇದೇ ಧೋರಣೆ. ಐರ್ಲೆಂಡಿನ ಜನ ತಮ್ಮ ಉಣ್ಣೆಯಿಂದ ಬಟ್ಟೆ ಮಾಡಲುಜ್ಜುಗಿಸಿ

[1] Bland, Brown and Tawney, *op.cit.*, pp. 670, 671.

ದಾಗ, ಅವರ ವಸ್ತ್ರ ಕೈಗಾರಿಕೆಗೆ ಪೆಟ್ಟು ಕೊಡುವ ಶಾಸನಗಳು ಜಾರಿಗೆ ಬಂದುವು. ಐರ್ಲೆಂಡಿನ ಜನಕ್ಕೆ ತಮ್ಮ ಉಣ್ಣೆಯನ್ನಾದರೂ ಬೇಕಾದಲ್ಲಿಗೆ ನಿರ್ಯಾತ ಮಾಡುವ ಸ್ವಾತಂತ್ರ್ಯವಿತ್ತೆ? ಉಹುಂ! ಅದನ್ನು ಇಂಗ್ಲೆಂಡಿಗೇ ಮಾರಬೇಕು. ಸಾಧ್ಯವಿದ್ದಷ್ಟನ್ನು ಇಂಗ್ಲೆಂಡು ಬಳಸಿಕೊಳ್ಳುವುದು. ಹೀಗೆ ಇಂಗ್ಲೆಂಡು ತನಗೆ ಇಚ್ಛೆಬಂದ ಬೆಲೆ ವಿಧಿಸಬಹುದಾಗಿದ್ದುದರಿಂದ ಹಲವು ಜನ ಐರ್ಲೆಂಡಿಗರಿಗೆ ದುರ್ಗತಿ ಬಂತು. ಹೀಗೆ ಧನ ಪ್ರಭುತ್ವ ನೀತಿಯಿಂದ ಅಮೆರಿಕದಲ್ಲೂ ಐರ್ಲೆಂಡಿನಲ್ಲೂ ಬ್ರಿಟಿಷ್ ದಾಸ್ಯ ವಿಮೋಚನೆಯ ಚಳವಳಿಗೆ ರೆಕ್ಕೆ-ಪುಕ್ಕ ದೊರಕಿತು.

ಅಂತೆಯೇ ಅಮೆರಿಕದಿಂದ ಹೊಗೆಸೊಪ್ಪು, ಅಕ್ಕಿ, ನೀಲಿ, ಕೂವೆಮರ, ಕರ್ಪೂರ ತೈಲ, ಡಾಂಬರೆಣ್ಣೆ, ಕಪ್ಪುರಾಳ, ಬೀವರ್ ಪ್ರಾಣಿಯ ಚರ್ಮ, ಬೀಡು ಕಬ್ಬಿಣ ಮುಂತಾದ ಪದಾರ್ಥಗಳನ್ನು ಇಂಗ್ಲೆಂಡಿಗೇ ಕಳುಹಿಸಬೇಕಿತ್ತು. (ಈ ವಸ್ತುಗಳ ಪಟ್ಟಿ ವರ್ಷೇ ವರ್ಷೇ ಬೆಳೆಯುತ್ತಲೇ ಇತ್ತು.) ಉತ್ಪಾದನೆಯ ಕೈಗಾರಿಕೆಗಳಿಗಾಗಿ ಇಂಗ್ಲಿಷರಿಗೇ ಈ ಪದಾರ್ಥಗಳೆಲ್ಲ ಬೇಕಿದ್ದುವು. ತಾವೇ ಬಳಸಲಾಗದುದನ್ನು ಅವರು ಮತ್ತೆ ನಿರ್ಯಾತ ಮಾಡುತ್ತಿದ್ದರು. ಇದರಲ್ಲೂ ಲಾಭ ಸಂಪಾದಿಸುತ್ತಿದ್ದರು.

ವರ್ಜೀನಿಯಾ ಹೊಗೆಸೊಪ್ಪು ⟶ ಇಂಗ್ಲಿಷ್ ವರ್ತಕನಿಗೆ ⟶ ಫ್ರೆಂಚ್ ನಶ್ಯ ತಯಾರಕನಿಗೆ.

ಇದು ಅಂದಿನ ಕ್ರಮ.

ವರ್ಜೀನಿಯಾ ಹೊಗೆಸೊಪ್ಪು ⟶ ನೇರವಾಗಿ ⟶ ಫ್ರೆಂಚ್ ನಶ್ಯ ತಯಾರಕನಿಗೆ.

ಈ ಸಹಜ ಕ್ರಮ ಸಾಧ್ಯವಿರಲಿಲ್ಲ.

ಆಳುವ ದೇಶಕ್ಕೂ ವಸಾಹತುಗಳಿಗೂ ನಡೆಯುತ್ತಿದ್ದ ಘರ್ಷಣೆಯನ್ನರಿಯಲು ಇವುಗಳ ದೃಷ್ಟಿಭೇದವನ್ನರಿಯಬೇಕು. ವಸಾಹತುಗಳು ಇರುವುದು ತನ್ನ ಉಪಯೋಗಕ್ಕಾಗಿ—ಎಂದು ಆಳುವ ದೇಶ ಭಾವಿಸಿತ್ತು. ವಸಾಹತುಗಳಾದರೋ, ತಮ್ಮಿಂದ ತಮಗೇ ಉಪಯೋಗವಾಗಬೇಕು—ಎಂದು ಭಾವಿಸಿದ್ದುವು. ಮಸ್ಸಾಚುಸೆಟ್ಸ್‌ನ ರಾಜ್ಯಪಾಲನಾಗಿದ್ದ ಸರ್ ಫ್ರಾನ್ಸಿಸ್ ಬರ್ನಾಡ್ ಎಂಬವನು ಆಳುವ ದೇಶಕ್ಕೂ ವಸಾಹತುಗಳಿಗೂ ನಡುವಣ ಸಂಬಂಧದ ಬಗ್ಗೆ ಧನಪ್ರಭುತ್ವ ವಾದಿಗಳ ಭಾವನೆಯನ್ನು ಸ್ಪಷ್ಟಪಡಿಸಿದ್ದಾನೆ: "ಅಮೆರಿಕದೊಡನೆ ಬ್ರಿಟನ್ನು ನಡಸುವ ವ್ಯಾಪಾರದಲ್ಲಿ ಎರಡು ಮುಖ್ಯೋದ್ದೇಶಗಳಿರಬೇಕು: (೧) ಅಮೆರಿಕದ ಪ್ರಜೆಗಳು ಎಲ್ಲ ಸಿದ್ಧ ವಸ್ತುಗಳನ್ನೂ ಐರೋಪ್ಯ ಸಾಮಗ್ರಿಯನ್ನೂ ಬ್ರಿಟನ್ನಿನಿಂದಲೇ ಪಡೆಯುವಂತೆ ಮಾಡಬೇಕು. (೨) ಅಮೆರಿಕನರ ವಿದೇಶಿ ವ್ಯಾಪಾರದಿಂದ **ಬಂದ ಲಾಭ ಅಂತಿಮವಾಗಿ ಬ್ರಿಟನ್ನಿನಲ್ಲೇ ಕೇಂದ್ರೀಕೃತವಾಗುವಂತೆ,** ಅಥವಾ ಬ್ರಿಟಿಷ್ ಚಕ್ರಾಧಿಪತ್ಯದ ಅಭಿವೃದ್ಧಿಗಾಗಿಯೇ ಬಳಸುವುದು ಸಾಧ್ಯವಾಗುವಂತೆ ಈ ವ್ಯಾಪಾರವನ್ನು ನಿಯಂತ್ರಣಗೊಳಿಸಬೇಕು."[1]

[1] Quoted in Charles and Mary Beard, *The Rise of American Civilization.* The Macmillan Company, N.Y., 1933. (My italics) Revised edition, vol. I, p. 115.

ರಾಷ್ಟ್ರೀಯ ಸಂಪತ್ತನ್ನೂ ಶಕ್ತಿಯನ್ನೂ ಗಳಿಸುವ ಯತ್ನದಲ್ಲಿ ಆಳುವ ದೇಶಕ್ಕೆ ಸಹಕಾರ ನೀಡುವ ಉದ್ದೇಶವನ್ನು ಮಾತ್ರ ವಸಾಹತುಗಳು ಹೊಂದಿರಬೇಕೆಂಬುದು ಮೇಲೆ ಉದ್ಧರಿಸಿರುವ ಮಾತಿನಿಂದ ವ್ಯಕ್ತವಾಗುತ್ತದೆ. ಈ ಮಾತು ಇಂಗ್ಲೆಂಡಿನ ವಿಚಾರ ದಲ್ಲಿ ಮಾತ್ರವೇ ನಿಜವಿರಲಿಲ್ಲ. ಧನಪ್ರಭುತ್ವಯುಗದ ಫ್ರಾನ್ಸ್, ಸ್ಪೆಯ್ನ್ ಮುಂತಾದ ಪ್ರತಿಯೊಂದು ಸಾಮ್ರಾಜ್ಯಶಾಹಿ ರಾಜ್ಯಕ್ಕೂ ಈ ಮಾತು ಅನ್ವಯಿಸುತ್ತಿತ್ತು. ಇದು ಜ್ಞಾಪಕವಲ್ಲಿಡಬೇಕಾದ ವಿಚಾರ.

"ರಾಷ್ಟ್ರ ಸಂಪತ್ತು," "ರಾಷ್ಟ್ರಶಕ್ತಿ"—ಈ ಮಾತುಗಳ ಅರ್ಥ ಅಸ್ಪಷ್ಟ. "ನಮ್ಮ ದೇಶ" ಸಂಪದ್ಯುಕ್ತವಾಗಬೇಕು—ಎಂದು ಹಲವು ಲೇಖಕರು ಬರೆದಾಗ, ಹೀಗೆ ಹೇಳುತ್ತಿದ್ದ ವರೂ, ಅವರ ವರ್ಗದ ಜನರೂ ತನ್ಮೂಲಕ ಶ್ರೀಮಂತರಾಗಲು ಸುಸಂಧಿ ಒದಗುತ್ತಿತ್ತು. ದೇಶದ ಐಶ್ವರ್ಯದೊಡನೆ ಇವರ ಐಶ್ವರ್ಯವೂ ಹೆಚ್ಚುತ್ತಿತ್ತು. ಇದು ಗಮನಿಸಬೇಕಾದ ವಿಚಾರ. ತಮ್ಮ ಹಣದ ಯಾವ ಭಾಗವನ್ನೂ ಇವರು ದೇಶಕ್ಕಾಗಿಯೇನೂ ಮೀಸಲಿಡು ತ್ತಿರಲಿಲ್ಲ. ತಾವು ಐಶ್ವರ್ಯವಂತರಾದರೆ ಇಡೀ ದೇಶವೇ ಸಂಪದ್ಯುಕ್ತವಾದಂತೆ—ಎಂದು ಇವರು ಭಾವಿಸಿದ್ದರು. ಆರ್ಥಿಕ ಹಿತಗಳಿಗೂ ರಾಷ್ಟ್ರೀಯ ಧೋರಣೆಗೂ ಇಷ್ಟು ನೇರ ಸಂಬಂಧ ಬೇರಾವ ಕಾಲದಲ್ಲೂ ಇದಕ್ಕಿಂತ ಹೆಚ್ಚು ಸ್ಪಷ್ಟವಾಗಿದ್ದಿರಲಿಲ್ಲ.

ಹಣ ಎತ್ತಲು ರಾಜರು ಎಷ್ಟು ತಲೆ ಕೆಡಿಸಿಕೊಳ್ಳಬೇಕಾಗಿತ್ತೆಂಬುದು ನಿಮಗೆ ನೆನಪಿರ ಬೇಕು. ವಿಸ್ತೃತವಾದ ಸುಬದ್ಧ ತೆರಿಗೆ ವ್ಯವಸ್ಥೆ ಇಲ್ಲದಿದ್ದಾಗ ಇವರು ತಮಗೆ ಬೇಕಾದಲ್ಲಿ, ಬೇಕಾದ ಕಾಲದಲ್ಲಿ ಹಣ ಪಡೆಯುವ ನಂಬಿಕೆ ಇರಲಿಲ್ಲ; ಭಂಡಾರದೊಳಕ್ಕೆ ಧಾರಾಕಾರ ವಾಗಿ ಹಣ ಬರುವ ಭರವಸೆ ಇರಲಿಲ್ಲ. ಆದ್ದರಿಂದ ದೊರೆ ತೆರಿಗೆ ವಸೂಲಿದಾರರಿಗೆ ತನ್ನ ವರಮಾನ ವಸೂಲಿಯ ಜವಾಬುದಾರಿ ಬಿಟ್ಟುಕೊಟ್ಟಿದ್ದ. ಇವರು ದೊರೆಗೆ ಮುಂಗಡ ವಾಗಿ ಹಣ ಕೊಟ್ಟು, ಬಡ ತೆರಿಗೆದಾರರಿಂದ ಬಿಡಿಕಾಸು ಸಿಕ್ಕುವಂತಿದ್ದರೂ ಬಿಡದೆ ಅವರನ್ನು ಹಿಂಡುತ್ತಿದ್ದರು. ಈ ಹಣದ ವರಮಾನದ ಅನಿಶ್ಚಯತೆ ಇದ್ದುದರಿಂದಲೇ, ದೊರೆ ಅತಿ ಹೆಚ್ಚಿನ ಬಿಡ್ಡುದಾರರಿಗೆ ಅಧಿಕಾರ ಕೊಡುತ್ತಿದ್ದ; ಹೆಚ್ಚು ಹಣ ಪಡೆದು ಇವರಿಗೆ ವಸೂಲಿಯ ಸಂಪೂರ್ಣ ಸ್ವಾಮ್ಯ ನೀಡುತ್ತಿದ್ದ. ಅರಮನೆಯ ಜಮೀನನ್ನು ಇಷ್ಟ ವಿಲ್ಲದಿದ್ದರೂ ಮಾರುತ್ತಿದ್ದುದೂ ಇದೇ ಕಾರಣದಿಂದ. ಸಾಲಕ್ಕಾಗಿ ಬ್ಯಾಂಕರುಗಳನ್ನೂ ವರ್ತಕರನ್ನೂ ಬೇಡುತ್ತಿದ್ದುದೂ ಇದೇ ಕಾರಣಕ್ಕಾಗಿ. ಬಂಗಾರ, ಬೆಳ್ಳಿ ಮುಂತಾದ ಅಮೂಲ್ಯ ಲೋಹಗಳ ಶೇಖರಣೆಗೆ ಅಷ್ಟು ಪ್ರಾಮುಖ್ಯ ನೀಡಿದುದೂ ಕೂಡ ಸರಕಾರಕ್ಕೆ ಹಣದ ಅಭಾವವಿದ್ದುದರಿಂದ. ವ್ಯಾಪಾರದಿಂದ ಹಣ ದೊರಕುವುದೆಂಬ ಭಾವನೆ ಇದ್ದುದ ರಿಂದ, ರಾಜ್ಯಕ್ಕೆ ಹೆಚ್ಚು ಹಣ ದೊರಕಬೇಕಾದರೆ ಹಣ ಗಳಿಸುವ ವರ್ತಕರ ಹಿತವನ್ನೂ ರಕ್ಷಿಸಬೇಕೆಂಬ ಭಾವನೆ ಬೆಳೆಯಿತು. ರಾಜ್ಯದ ಹಿತವೂ ವರ್ತಕರ ಹಿತವೂ ಒಂದಾಯಿತು. ವ್ಯಾಪಾರಕ್ಕೂ, ವ್ಯಾಪಾರಕ್ಕೆ ಸಂಬಂಧಿಸಿದ ಎಲ್ಲ ವಿಚಾರಗಳಿಗೂ ಪ್ರೋತ್ಸಾಹ ನೀಡ ಬೇಕೆಂಬುದು ಸರಕಾರದ ಪ್ರಮುಖ ಕರ್ತವ್ಯವೆನಿಸಿತು.

ವಾಣಿಜ್ಯ ಅಭಿವೃದ್ಧಿ ಹೊಂದಿದರೆ ದೇಶದ ಹಿರಿಮೆ ಸಾಧಿಸುವುದೆಂಬ ಭಾವನೆ ಇತ್ತು.

ವ್ಯಾಪಾರ ಹಾಗೂ ಪ್ರದೇಶ ವಿಸ್ತರಣೆಯಿಂದ ಬಂದ ಲಾಭದಲ್ಲಿ ದೇಶಕ್ಕೂ ಒಂದು ಪಾಲು. ಧನಪ್ರಭುತ್ವವಾದವೆಂದರೆ ವರ್ತಕಪ್ರಭುತ್ವವಾದವಾಗಿತ್ತು.

ಧನಪ್ರಭುತ್ವವಾದಿಗಳು ಹೀಗೆ ನಂಬಿದ್ದರು : ಒಂದು ದೇಶಕ್ಕೆ ನಷ್ಟವಾದರೆ ಇನ್ನೊಂದು ದೇಶಕ್ಕೆ ಲಾಭವೆಂದು ಇವರು ನಂಬಿದ್ದರು. ಇನ್ನೊಂದು ದೇಶ ಕಳೆದುಕೊಳ್ಳದಿದ್ದರೆ ಒಂದು ದೇಶ ವ್ಯಾಪಾರ ಬೆಳಸಿಕೊಳ್ಳಲಾರದೆಂದೇ ಇವರು ಭಾವಿಸಿದ್ದರು. ಪರಸ್ಪರಾನುಕೂಲ ದೊರಕಿಸುವುದೇ, ಪರಸ್ಪರಾನುಕೂಲಕ್ಕಾಗಿ ವಸ್ತು ವಿನಿಮಯವೇ, ವ್ಯಾಪಾರದ ಉದ್ದೇಶವೆಂದು ಇವರು ಭಾವಿಸಲಿಲ್ಲ. ವ್ಯಾಪಾರದ ಪ್ರಮಾಣ ಪೂರ್ವನಿಶ್ಚಿತವೆಂದೂ, ಸ್ಥಿರವೆಂದೂ, ಇದರಲ್ಲಿ ಪ್ರತಿಯೊಬ್ಬರೂ ಆದಷ್ಟು ಗಿಟ್ಟಿಸಿಕೊಳ್ಳಬೇಕೆಂದೂ, ಹಿರಿದುಕೊಳ್ಳಬೇಕೆಂದೂ ಇವರು ಭಾವಿಸಿದರು. ಹದಿನೆಂಟನೆಯ ಶತಮಾನದ "ವ್ಯಾಪಾರ ವಾಣಿಜ್ಯ ನಿಘಂಟು" ರಚಿಸಿದವನು ಇದನ್ನು ಹೀಗೆ ವಿವರಿಸುತ್ತಾನೆ : "ಯೂರೋಪಿನಲ್ಲಿ ಮಿತವಾದ ಪ್ರಮಾಣದ ವ್ಯಾಪಾರ ಸಾಧ್ಯವಿದೆ. ಉಣ್ಣೆಯ ವಸ್ತುವಿನ ವ್ಯಾಪಾರದ ಉದಾಹರಣೆ ತೆಗೆದುಕೊಳ್ಳುವುದಾದರೆ, ಒಂದೂವರೆ ಕೋಟಿ ಮೌಲ್ಯದ ವಸ್ತುವನ್ನು ನಿರ್ಯಾತಮಾಡಿ ಒದಗಿಸುತ್ತಿದೆ ಬ್ರಿಟನ್ನು. ಈ ವ್ಯಾಪಾರದ ನಿಶ್ಚಿತ ಪ್ರವಾಹದಲ್ಲಿ ಬ್ರಿಟನ್ನಿನ ಪಾಲು ಇಷ್ಟು. ಯಾವುದಾದರೂ ಒಂದು ವರ್ಷದಲ್ಲಿ ಇದು ಎರಡುಕೋಟಿಯಷ್ಟು ಸರಬರಾಯಿ ಮಾಡಿದ್ದೇ ಆದರೆ, ಇತರ ದೇಶಗಳು ಇಷ್ಟು ಕಳೆದುಕೊಳ್ಳಲೇಬೇಕು. ಅವುಗಳ ಮಾರಾಟ ಇಷ್ಟೊಂದು ಕಡಮೆಯಾಗಲೇಬೇಕು."[1]

ಹೇಗ್‌ನಲ್ಲಿ ಫ್ರಾನ್ಸಿನ ರಾಯಭಾರಿಯಾಗಿದ್ದ ಎಂ. ಪಾಂಪೋನ್‌ಗೆ ೧೬೭೦ರಲ್ಲಿ ಕೋಲ್ಬರ್ಟ್ ಈ ರೀತಿ ಬರೆದ : "ಹಾಲೆಂಡಿನ ವಾಣಿಜ್ಯ ಹಾಗೂ ಉತ್ಪಾದನೆ ಕಡಮೆಯಾಗಬೇಕಾದರೆ ಅದನ್ನು ಇನ್ನೊಂದು ದೇಶ ಕಸಿದುಕೊಳ್ಳಲೇಬೇಕು. ಆದ್ದರಿಂದ ನಮ್ಮ ರಾಷ್ಟ್ರದ ಸರ್ವತೋಮುಖ ಕಲ್ಯಾಣ ಸಾಧನೆಗೆ ಇದಕ್ಕಿಂತ ಮುಖ್ಯವಾದ, ಅಗತ್ಯವಾದ, ವಿಚಾರವಿಲ್ಲ. ನಮ್ಮ ದೇಶದೊಳಗೆ ವಾಣಿಜ್ಯ ಉತ್ಪಾದನೆಗಳನ್ನು ಹೆಚ್ಚಿಸುವುದೇ ಅಲ್ಲದೆ, ಇದೇ ಕಾಲಕ್ಕೆ ಹಾಲೆಂಡಿನ ವಾಣಿಜ್ಯವೂ ಉತ್ಪಾದನೆಯೂ ಕಡಮೆಯಾಗುವಂತೆ ಕ್ರಮ ಕೈಕೊಳ್ಳಬೇಕು."[2]

"ನಮ್ಮ ರಾಷ್ಟ್ರದ ಸರ್ವತೋಮುಖ ಕಲ್ಯಾಣ ಸಾಧನೆಗೆ ಇದಕ್ಕಿಂತ ಮುಖ್ಯವಾದ, ಅಗತ್ಯವಾದ ವಿಚಾರವಿಲ್ಲ," ಎಂಬ ಮಾತಿನಲ್ಲಿ ಒಂದು ದೇಶದ ಪ್ರಗತಿಗೆ ಪ್ರತಿಸ್ಪರ್ಧಿ ರಾಷ್ಟ್ರದ ವಾಣಿಜ್ಯ ಕೈಗಾರಿಕೆಗಳನ್ನು ಕುಂದಿಸಲೇಬೇಕೆಂಬ ನಂಬಿಕೆ ಸ್ಪಷ್ಟವಾಗಿದೆ. ಇದರ ಪರಿಣಾಮ ಒಂದೇ : ಯುದ್ಧ. ಧನಪ್ರಭುತ್ವ ನೀತಿಯ ಫಲವೆಂದರೆ ಯುದ್ಧ. ಪೇಟೆಗಾಗಿ

---

[1] Savary des Bruslons, *Universal Dictionary of Trade and Commerce, Translated from the French with Additions and Improvements by Malachy Posteithwayt*, 2nd ed. 2 vols. vol. II, p. 6, article on Labour, London. 1757.

[2] A. J. Sargent, *Economic Policy of Colbert*, pp. 78,79. Longmans, Green and Co., London, 1899.

ಕಚ್ಚಾಟ, ಆ ಈ ದೇಶದೊಡನೆ ವ್ಯಾಪಾರಕ್ಕಾಗಿ ತೀವ್ರ ಸ್ಪರ್ಧೆ, ಹೆಚ್ಚು ಹೆಚ್ಚು ವಸಾಹತು ಗಳಿಗಾಗಿ ಹೋರಾಟ—ಈ ಎಲ್ಲವೂ ಸೇರಿ ಈ ಪ್ರತಿಸ್ಪರ್ಧಿ ರಾಷ್ಟ್ರಗಳನ್ನು ಒಂದಾದ ಮೇಲೊಂದು ಯುದ್ಧಕ್ಕೆ ತಳ್ಳಿದುವು. ಈ ಯುದ್ಧಗಳಲ್ಲಿ ಕೆಲವನ್ನು ಅವುಗಳ ನಿಜಸ್ವರೂಪ ವನ್ನು ಸ್ಪಷ್ಟಪಡಿಸುವ ಹೆಸರಿನಿಂದಲೇ ಕರೆದರು ; "ವ್ಯಾಪಾರ ಯುದ್ಧ"ಗಳೆಂದು ಕರೆದರು. ಇನ್ನು ಕೆಲವು ಯುದ್ಧಗಳ ಸ್ವರೂಪ ಹೀಗೆ ಬಯಲಿಗೆ ಬರಲಿಲ್ಲ. ದೊಡ್ಡ ದೊಡ್ಡ ಹೆಸರು ಕೊಟ್ಟು ಇವನ್ನು ಕರೆದರು. ಇಂದೂ ಕೂಡ ಹೀಗೆ ಮಾಡುವುದೇ ವಾಡಿಕೆಯಲ್ಲವೆ ? ಆದರೆ ೧೯೬೦ರಲ್ಲಿ ಕ್ಯಾಂಟರ್‌ಬರಿಯ ಆರ್ಚ್‌ಬಿಷಪ್—ಪ್ರಮುಖ ಗುರು—ಹೇಳಿದ ಮಾತು ಸತ್ಯ. "ಜಗತ್ತಿನ ಈ ಮೂಲೆಯ ಜನರ ತಲೆಯ ಮೇಲೆ ಈಚಿನ ವರ್ಷಗಳಲ್ಲಿ ಹೇರಿಕೊಂಡಿರುವ ಈ ಹೋರಾಟ, ಈ ವ್ಯಾಜ್ಯ, ಇವೆಲ್ಲವುಗಳಿಗೂ ದಿವ್ಯವಾದ ಹೆಸರು ಕೊಟ್ಟಿದ್ದಾರಾದರೂ, ಈ ಹೆಸರೆಲ್ಲ ಬೂಟಾಟಿಕೆ. ಇವುಗಳ ಅಂತಿಮ ಗುರಿ—ನಿಜೋದ್ದೇಶ —ಇಷ್ಟೇ : ಚಿನ್ನ, ಹಿರಿಮೆ, ಪ್ರಾಪಂಚಿಕ ಕೀರ್ತಿ."[1]

ಈ ಪ್ರಮುಖ ಗುರುವಿನ ಕೊನೆಯ ಮಾತನ್ನೇ ನಾವು ಎತ್ತಿಕೊಳ್ಳೋಣ. ಚಿನ್ನ, ಹಿರಿಮೆ, ಕೀರ್ತಿ—ಸಂಗ್ರಹವಾಗಿ ಹೇಳುವುದಾದರೆ, ಧನಪ್ರಭುತ್ವ ವಾದಿಗಳು ಹೊಂದಿದ್ದ ಗುರಿ ನಿಜ ವಾಗಿಯೂ ಇದೇ.

[1] Quoted in C.J.H. Hayes, *Essays on Nationalism*, p. 37. The Macmillan Company, N.Y., 1926.

## ೧೨. ನಮ್ಮ ಪಾಡಿಗೆ ನಮ್ಮನ್ನು ಬಿಡಿ !

೧೭೭೬ನೆಯ ಇಸವಿ ಬಂಡಾಯದ ಇಸವಿ. ಇದೊಂದು ಸ್ಮರಣಾರ್ಹ ವರ್ಷ. ಸ್ವಾತಂತ್ರ್ಯ ಘೋಷಣೆಯ, ಬ್ರಿಟನ್ನಿನ ಧನಪ್ರಭುತ್ವವಾದಿ ವಸಾಹತು ಷಾಹಿಯ, ನೆನಪು ತರುತ್ತದೆ ಇದು, ಅಮೆರಿಕನರಿಗೆ. ಆಡಂ ಸ್ಮಿತ್ತನ "ರಾಷ್ಟ್ರಗಳ ಸಂಪತ್ತು" ಎಂಬ ಪುಸ್ತಕ ಪ್ರಕಟವಾದದ್ದು ಈ ವರ್ಷ. ಆದ್ದರಿಂದ ಅರ್ಥಶಾಸ್ತ್ರಜ್ಞರ ದೃಷ್ಟಿಯಲ್ಲೂ ಇದು ಸ್ಮರಣಾರ್ಹ ವರ್ಷ. ಧನ ಪ್ರಭುತ್ವ ವ್ಯವಸ್ಥೆಯ ನೀತಿಯ ವಿರುದ್ಧ, ಅದು ತಂದೊಡ್ಡಿದ್ದ ಪ್ರತಿಬಂಧನ ನಿಯಂತ್ರಣ ನಿಗ್ರಹಗಳ ವಿರುದ್ಧ, ಏಳುತ್ತಿದ್ದ ಪ್ರತಿಭಟನೆಯ ಸಾರ ಸಂಗ್ರಹವೇ ಈ ಪುಸ್ತಕ. ಧನ ಪ್ರಭುತ್ವ ವ್ಯವಸ್ಥೆಯ ರೀತಿ ನೀತಿಗಳನ್ನು ಒಪ್ಪದಿದ್ದವರ ಸಂಖ್ಯೆ ಹದಿನೆಂಟ ನೆಯ ಶತಮಾನದಲ್ಲಿ ಕ್ರಮೇಣ ಹೆಚ್ಚುತ್ತಿತ್ತು. ಅವರು ಇವುಗಳಿಂದ ಕಷ್ಟ ಅನುಭವಿಸು ತ್ತಿದ್ದುದೇ ಈ ರೀತಿನೀತಿಗಳನ್ನು ಒಪ್ಪದಿದ್ದುದಕ್ಕೆ ಕಾರಣ. ಸರಕಾರದ ಒಟ್ಟಪ್ಪಣೆ ಪಡೆದಿದ್ದ ಸಂಸ್ಥೆಗಳ ಅಗಾಧ ಲಾಭದಲ್ಲಿ ತಮಗೂ ಒಂದು ಲಾಭ ಬೇಕೆಂದು ವ್ಯಾಪಾರಿ ಗಳು ಬಯಸಿದರು. ಅವರು ಇವುಗಳ ಒಳನುಗ್ಗಲು ಯತ್ನಿಸಿದಾಗ, ಅನಧಿಕೃತ ವ್ಯಾಪಾರಿ ಗಳೆಂದು ಇವರು ಪ್ರತ್ಯೇಕಿಸಲ್ಪಟ್ಟರು. ಹಣವಿದ್ದ ಜನ, ಈ ಹಣವನ್ನು ಬೇಕಾದ ರೀತಿ ಯಲ್ಲಿ, ಬೇಕಾದ ಕಾಲದಲ್ಲಿ, ಬೇಕಾದ ಎಡೆಯಲ್ಲಿ ಬಳಸಲು ಬಯಸಿದರು. ವಿಸ್ತರಿಸುತ್ತಿದ್ದ ವ್ಯಾಪಾರ ಕೈಗಾರಿಕೆಗಳ ಫಲವಾದ ಪ್ರತಿಯೊಂದು ಸದವಕಾಶದ ಉಪಯೋಗವನ್ನೂ ಹೊಂದಲು ಇವರು ಬಯಸಿದರು. ಬಂಡವಾಳದಿಂದ ತಮಗೆ ಲಭಿಸಿದ್ದ ಶಕ್ತಿಯನ್ನು ಇವರು ಅರಿತಿದ್ದರು. ಇದನ್ನು ಸ್ವತಂತ್ರವಾಗಿ ಉಪಯೋಗಿಸಿಕೊಳ್ಳಬಯಸಿದರು ಇವರು. "ಇದು ಮಾಡಬೇಕು, ಅದು ಮಾಡಬಾರದು," ಎಂಬ ಮಾತು ಇವರಿಗೆ ಬೇಸರ ಹಿಡಿಸಿತ್ತು. "ಇದರ ವಿರುದ್ಧ ಶಾಸನ . . . . ಅದರ ಮೇಲೆ ಸುಂಕ . . . . ಇದಕ್ಕೆ ಸಹಾಯದ್ರವ್ಯ . . . ." ಮುಂತಾದುವು ಇವರಿಗೆ ತಲೆನೋವು ಬರಿಸುತ್ತಿದ್ದುವು. ಇವರಿಗೆ ಬೇಕಾಗಿದ್ದುದು ನಿರುಪಾಧಿಕ ವ್ಯಾಪಾರ.

ಸರಕಾರಗಳು ಕೈಗಾರಿಕೆಗೆ ಸಹಾಯ ನೀಡಬಯಸಿದುವು. ಅದೇನೋ ಒಳ್ಳೆಯದೇ. ಆದರೆ ಒಂದು ವರ್ಗದ ಜನಕ್ಕೆ ಸಹಾಯ ಮಾಡಿದಾಗ ಇನ್ನೊಂದು ವರ್ಗದ ಜನರನ್ನು ತೊಂದರೆಗೀಡು ಮಾಡುವುದು ಅನಿವಾರ್ಯವೇ ಏನೋ—ಎಂಬಂತೆ ಕಂಡಿತು. ತೊಂದರೆ ಗೀಡಾದ ವರ್ಗಕ್ಕೆ ಇದು ಇಷ್ಟವಿರಲಿಲ್ಲ. ಅದು ಈ ಕ್ರಮವನ್ನು ವಿರೋಧಿಸಿತು.

ಪ್ರಷ್ಯದಲ್ಲಿ, ಹದಿನೆಂಟನೆಯ ಶತಮಾನದಲ್ಲಿ ಉಣ್ಣೆ ಉತ್ಪಾದಕರು ಉಣ್ಣೆಯ ನಿರ್ಯಾತ ಮಾಡಲು ಅವಕಾಶವಿರಲಿಲ್ಲ. ಉತ್ಪಾದಕರಿಗೆ ಅಗ್ಗದ ಬೆಲೆಯಲ್ಲಿ ಸಾಕಷ್ಟು ಕಚ್ಚಾವಸ್ತು ಒದಗಿಸುವ ಭರವಸೆ ನೀಡುವುದೇ ಈ ನಿರ್ಬಂಧದ ಉದ್ದೇಶವಾಗಿತ್ತು. ಉಣ್ಣೆಯ ನಿರ್ಯಾತದ ಮೇಲಣ ಈ ಪ್ರತಿಬಂಧಕ ಉಣ್ಣೆ ವಸ್ತು ತಯಾರಕರಿಗೆ ಇಷ್ಟ ವಾಗಿತ್ತು. ಆದರೆ ಉಣ್ಣೆಯ ಉತ್ಪಾದಕರು ಇದನ್ನು ವಿರೋಧಿಸಿದರು. ಈ ಶಾಸನ ರದ್ದಾಗ

ಬೇಕೆಂದು ಇವರು ೧೭೨೧ರಲ್ಲಿ ದೊರೆಗೆ ಒಂದು ಮನವಿ ಬರೆದುಕೊಂಡರು : " . . . . ಉಗ್ರಾಣಗಳಲ್ಲಿ ಉಣ್ಣೆಯ ದಾಸ್ತಾನು ಧಾರಾಳವಾಗಿದೆಯೆಂದು ಅವರೇ ಒಪ್ಪಿಕೊಳ್ಳುತ್ತಾರೆ. . . . ಈ ವರ್ಷದ ಉಣ್ಣೆಯ ಉತ್ಪನ್ನದಲ್ಲಿ ಅರ್ಧವೂ ಮಾರಾಟವಾಗುವುದಿಲ್ಲವೆಂಬುದೂ ಸುಸ್ಪಷ್ಟ. ಉಣ್ಣೆ ವಸ್ತು ತಯಾರಕರಿಗೆ ಉಣ್ಣೆಯ ಸರಬರಾಯಿಯ ಕೊರತೆಯಾಗಬಾರದೆಂಬ—ಈ ಕೈಗಾರಿಕೆ ಬೆಳೆಯಬೇಕೆಂಬ—ಮಹಾಪ್ರಭುಗಳ ಸದಿಚ್ಛೆ ಈಗ ಸಂಪೂರ್ಣವಾಗಿ ಫಲಿಸಿದೆ. ಆದರೆ ಕುರಿ ಸಾಕುವವರ ತೊಂದರೆ ದಿನೇ ದಿನೇ ಹೆಚ್ಚುತ್ತಿದೆ . . . . ಏಕೆಂದರೆ ದಾಸ್ತಾನು ಅತ್ಯಧಿಕವಾಗಿದೆ . . . . ಈಗ ಅವರು ಕೊಳ್ಳುವವರಿಗೆ ಅನುಕೂಲವಾದ ಬೆಲೆಗೆ ಮಾರಬೇಕಾಗಿದೆ. . . . ಶಾಸನ ರೀತಿಯಾಗಿ ಉಣ್ಣೆಯ ಬೆಲೆ ಇಳಿಸಿರುವುದರಿಂದ ಇಡೀ ದೇಶವೇ ತುಂಬಾ ತೊಂದರೆಗೆ ಒಳಗಾಗಿದೆ. (ನಿರ್ಯಾತದ ಪ್ರತಿಬಂಧಕ ಮುಂದುವರಿವದ್ದೇ ಆದರೆ ಬೆಲೆ ಇನ್ನೂ ಇಳಿಯುವುದು ಖಂಡಿತ.) . . . . ಕುರಿಯಿಂದ ದೊರಕುವ ಲಾಭಕ್ಕಿಂತ ಅದಕ್ಕಾಗುವ ಖರ್ಚೇ ಹೆಚ್ಚು. ಹಲವು ಜನ ಕುರಿ ಸಾಕುವವರು ತಮ್ಮ ಕುರಿಮಂದೆಯನ್ನು ಸಾಯಗೊಡುವುದೇ ಮೇಲೆಂದು ಆಲೋಚಿಸಿದರೂ ಆಶ್ಚರ್ಯವಿಲ್ಲ."

ಆದರೆ ಆಗ ದೊರೆಯಾಗಿದ್ದ ಮೊದಲನೆಯ ಫ್ರೆಡರಿಕ್ ವಿಲಿಯಂ ಈ ನಿರ್ಬಂಧ ನೀತಿಗೇ ಪಟ್ಟಾಗಿ ಜೋತುಬಿದ್ದ. ಈ ಮನವಿಗೆ ಆತನ ಉತ್ತರವಿದು : "ಇತರ ದೇಶಗಳು, ಮುಖ್ಯವಾಗಿ ಇಂಗ್ಲೆಂಡು, ತಮ್ಮ ದೇಶದಿಂದ ಉಣ್ಣೆ ಹೊರಗೆ ಹೋಗದಂತೆ ತಡೆದಿರುವುದರಿಂದ ಈ ದೇಶಗಳು ಒಳ್ಳೆಯ ಸ್ಥಿತಿಯಲ್ಲೇ ಇವೆ. ಈ ದೇಶಗಳು ಸಂಪದ್ಯುಕ್ತವಾಗುತ್ತಿವೆ—ಎಂಬುದು ಅನುಭವವೇದ್ಯ. ಆದ್ದರಿಂದ ಉಣ್ಣೆಯ ನಿರ್ಯಾತದ ಮೇಲಣ ಪ್ರತಿಬಂಧಕವನ್ನು ಮುಂದುವರಿಸುವುದು ಅಗತ್ಯವೆಂದು ಪ್ರಷ್ಯದ ದೊರೆಗಳಾದ ಮಹಾಪ್ರಭುಗಳ ಭಾವನೆ."[1]

ಇಂಗ್ಲೆಂಡು ಹೆಚ್ಚು ಹೆಚ್ಚು ಹಣವಂತ ರಾಜ್ಯವಾಗುತ್ತಿದೆಯೆಂದು ಪ್ರಷ್ಯದ ದೊರೆ ಹೇಳಿದುದು ನಿಜವಿರಬಹುದು. ಆದರೆ ಇದಕ್ಕೆ ಏನು ಕಾರಣವೆಂಬ ಬಗ್ಗೆ ಆ ದೇಶದ ವರ್ತಕರ ಅಭಿಪ್ರಾಯ ಬೇರೆ ಇದ್ದಿರಬಹುದಿತ್ತು. ಇವರೂ ಕೂಡ ಧನ ಪ್ರಭುತ್ವವಾದಿಗಳ ಅಡೆ ತಡೆಗಳನ್ನು ಇಚ್ಛಿಸಲಿಲ್ಲ. ತಮ್ಮ ವ್ಯಾಪಾರಕ್ಕೆ ನೆರವಾಗುವಂಥ ಬದಲಾವಣೆ ಆಗಬೇಕೆಂದು ಇವರೂ ಬಯಸಿದರು. ಧನ ಪ್ರಭುತ್ವವಾದಿಗಳು ತಮ್ಮ ವಾದ ಮಂಡಿಸುವ ವಿಧಾನವನ್ನೇ ಇವರೂ ಅನುಸರಿಸಿದರು. ದೇಶದ ಸಂಪತ್ತನ್ನೂ ಏಳಿಗೆಯನ್ನೂ ಸಾಧಿಸುವ ಉತ್ತಮ ಮಾರ್ಗವನ್ನು ಸೂಚಿಸುವುದೇ ತಮ್ಮ ಉದ್ದೇಶವೆಂದರು ಇವರು. ತಮ್ಮ ಹಿತವೇ ದೇಶದ ಹಿತ—ಎಂಬ ಇವರ ವಾದ ತಪ್ಪು, ಎಂಬುದೇನೋ ನಿಜ. ಆದರೆ ಈ ವಾದ ಹೊಸದಲ್ಲ, ಹಳೆಯದು, ಕ್ಷಮಾರ್ಹವಾದದ್ದು. ೧೮೨೦ರ ಮೇ ಎಂಟನೆಯ ದಿನಾಂಕದ ಕಾಮನ್ಸ್ ಸಭೆಯ ಪತ್ರಿಕೆಯಲ್ಲಿ ನಿರುಪಾಧಿಕ ವ್ಯಾಪಾರಕ್ಕೆ ಇವರು ಮುಂದೊಡ್ಡಿದ

---

[1] G. Hinrichs, *Die Wollindustrie in Peussen*, pp. 377, 378. Parey, Berlin, 1933.

ವಾದವನ್ನು ಕಾಣಬಹುದು: "ಲಂಡನ್ ನಗರದ ವರ್ತಕರು ನೀಡಿದ ಮನವಿ ಓದ ಲಾಯಿತು. ಅನ್ಯದೇಶಗಳ ನೆಲ, ವಾಯುಗುಣ, ಬಂಡವಾಳ ಮತ್ತು ಕೈಗಾರಿಕೆ ಬಹು ಅನುಕೂಲಕರವಾಗಿದ್ದೆಡೆಯಲ್ಲೆಲ್ಲ ವಿದೇಶಿ ವ್ಯಾಪಾರದಿಂದ ದೇಶಕ್ಕೆ ಸಂಪತ್ತೂ ಶ್ರೇಯಸ್ಸೂ ಲಭಿಸುತ್ತವೆ. ಪ್ರತಿಯಾಗಿ, ಯಾವ ಪದಾರ್ಥಗಳ ಉತ್ಪಾದನೆಗೆ ಈ ದೇಶದಲ್ಲಿ ಹೆಚ್ಚು ಅನುಕೂಲಗಳಿವೆಯೋ ಅವನ್ನು ಇಲ್ಲಿಂದ ರಫ್ತು ಮಾಡಬೇಕು. ಪ್ರತಿಬಂಧಕ ನಿವಾರಣೆ ಯಿಂದ ವಿದೇಶಿ ವ್ಯಾಪಾರವನ್ನು ಪರಮಾವಧಿ ಮಟ್ಟಕ್ಕೆ ವಿಸ್ತರಿಸಬಹುದು; ದೇಶದ ಬಂಡವಾಳ ಕೈಗಾರಿಕೆಗಳು ಇದರಿಂದ ಹೆಚ್ಚು ಪ್ರೋತ್ಸಾಹ ಹೊಂದುವುವು. ಅಗ್ಗವಿದ್ದಲ್ಲಿ ಕೊಳ್ಳಬೇಕು; ಹೆಚ್ಚು ಬೆಲೆ ಇದ್ದಲ್ಲಿ ಮಾರಬೇಕು. ಇಡೀ ದೇಶದ ವ್ಯಾಪಾರ ವರ್ಧನಕ್ಕೆ ಇದು ಅತ್ಯುತ್ತಮ ಸೂತ್ರ. ಈ ತತ್ವದ ಮೇಲೆ ರಚಿತವಾದ ನೀತಿಯಿಂದ ಪ್ರಪಂಚದ ವಾಣಿಜ್ಯ ಪರಸ್ಪರಾನುಕೂಲಗಳ ವಿನಿಮಯವಾಗಿ ಪರಿಣಮಿಸುತ್ತದೆ; ವರ್ಧಿಸಿದ ಸಂಪತ್ತು ಪ್ರತಿಯೊಂದು ದೇಶದ ಜನರಲ್ಲೂ ಹರಡಿ, ಅವರ ಸುಖಕ್ಕೆ ಹಾದಿ ಮಾಡಿಕೊಡುತ್ತದೆ.... ವಿದೇಶಿ ವಸ್ತುವನ್ನು ಆಯಾತ ಮಾಡಿಕೊಂಡಾಗಲೆಲ್ಲಾ ತಮ್ಮ ಉತ್ಪಾದನೆ ಈ ಪ್ರಮಾಣ ದಲ್ಲಿ ಕಡಮೆಯಾಗುವುದೆಂಬುದು ಭ್ರಮೆ. ಸ್ವದೇಶಿ ಕೈಗಾರಿಕೆಯ ರಕ್ಷಣಾ ಪದ್ಧತಿಯೂ ನಿರ್ಬಂಧಗಳೂ ಜಾರಿಯಲ್ಲಿರುವುದಕ್ಕೂ, ಇವುಗಳ ವಿಚಾರದಲ್ಲಿ ಪೂರ್ವಾಗ್ರಹ ಹೊಂದಿರು ವುದಕ್ಕೂ ಇದೇ ಕಾರಣ. ಈ ನಿರ್ಬಂಧಗಳ ಹಿನ್ನೆಲೆಯಲ್ಲಿರುವ ಯುಕ್ತಿವಾದವನ್ನು ಮುಂದುವರಿಸಿಕೊಂಡು ಹೋದದ್ದೇ ಆದರೆ, ಕೊನೆಗೆ ವಿದೇಶಿ ವ್ಯಾಪಾರ ಕ್ಷೇತ್ರವನ್ನೇ ನಾವು ಸಂಪೂರ್ಣವಾಗಿ ಬಿಟ್ಟು ಹೋಗಬೇಕಾದೀತು."[1]

ಸಾರ್ವಜನಿಕ ಗಮನ ಸೆಳೆದು, ದೇಶ ದೇಶದಲ್ಲೂ ಹೊಸ ಭಾವನೆಗಳನ್ನು ಬಿತ್ತಿದ ಪುಸ್ತಕಗಳಲ್ಲಿ ಆಡಮ್ ಸ್ಮಿತ್ತನ ಪುಸ್ತಕವೂ ಒಂದು: "ರಾಷ್ಟ್ರ ಸಂಪತ್ತಿನ ಸ್ವರೂಪ ಕಾರಣಗಳ ವಿವೇಚನೆ," ಎಂಬುದು ಈ ಪುಸ್ತಕದ ಹೆಸರು. ಒಂದು ದೇಶ ಬಲಿಷ್ಠವಾಗ ಬೇಕಾದರೆ ಸರಕಾರ ಇಂತಿಂಥ ನೀತಿ ಅನುಸರಿಸಬೇಕು—ಎಂಬುದು ಹಿಂದಣ ಲೇಖಕರ ಒಕ್ಕಣೆಯಾಗಿತ್ತು. ಆದರೆ ಆಡಂ ಸ್ಮಿತ್ ಬೇರೆ ದಾರಿ ಹಿಡಿದ. ಸಂಪತ್ತಿನ ಉತ್ಪಾದನ ವಿತರಣಗಳ ಕಾರಣಗಳನ್ನು ಕುರಿತು ಇವನು ವಿವೇಚಿಸಿದ. ಧನ ಪ್ರಭುತ್ವವಾದಿಗಳಲ್ಲಿ ಹಲವರಿಗೆ ತಾವು ಸಾಧಿಸಿಕೊಳ್ಳಬೇಕಾದ ಸ್ವಾರ್ಥವಿತ್ತು. ಆದರೆ ಇದನ್ನು ಅವರು ತೋರ ಗೊಡಲಿಲ್ಲ. ಈ ಸ್ವಾರ್ಥ ಸಾಧನೆಯ ನೀತಿಯಿಂದ ದೇಶದ ಶಕ್ತಿ ವರ್ಧಿಸುವುದೆಂದು ಅವರು ಹೇಳುತ್ತಿದ್ದರು. ಆದರೆ ಆಡಂ ಸ್ಮಿತ್ತನಾದರೋ, ವಾದ ಸಮರ್ಥನೆ ಮಾಡುವ ಗೋಜಿಗೆ ಹೋಗದೆ, ಸ್ಥಿತಿ ವಿಶ್ಲೇಷಣೆಯಲ್ಲಿ ನಿರತನಾದ, ಈ ವಿಷಯವನ್ನು ವೈಜ್ಞಾನಿಕ ದೃಷ್ಟಿ ಯಿಂದ ನೋಡಿದ. ಅವನ ಈ ಸುಪ್ರಸಿದ್ಧ ಪುಸ್ತಕದಲ್ಲಿ ಒಂದು ಭಾಗ ಧನ ಪ್ರಭುತ್ವ ನೀತಿಯ ಪರಿಶೀಲನೆಗೆ ಮೀಸಲಾಗಿದೆ. ಅದರ ನಿಜಸ್ವರೂಪವನ್ನು ಅವನು ಬಯಲಿಗೆಳೆದ.

ಆಡಂ ಸ್ಮಿತ್ತನಿಗಿಂತ ಮುಂಚೆಯೂ ಹಲವು ಜನ ಅದನ್ನು ಬಯಲಿಗೆಳೆದಿದ್ದರು. ಧನ

[1] Journals of the House of Commons, vol. 75, 1819-1820, May 8, 1920.

ಪ್ರಭುತ್ವ ವ್ಯವಸ್ಥೆಯ ಉಚ್ಛ್ರಾಯ ಕಾಲದಲ್ಲೂ ಕೆಲವು ಮಂದಿ ವಿಚಾರಶೀಲರು ಅದರ ತತ್ವಗಳನ್ನು ಟೀಕಿಸಿದ್ದರು. ಪ್ರತಿ ಧನ ಪ್ರಭುತ್ವವಾದಿಗೂ ಒಬ್ಬೊಬ್ಬ ಟೀಕಾಕಾರ ಹುಟ್ಟಿಕೊಂಡೇ ಇದ್ದ.

ವಿದೇಶಿ ವಸ್ತುವಿನ ಆಯಾತದ ಮೇಲಣ ತೆರಿಗೆ ನಿರ್ಬಂಧಗಳನ್ನು ಕುರಿತ ವಿಚಾರವನ್ನೇ ತೆಗೆದುಕೊಳ್ಳಿ. ೧೬೯೦ ರಷ್ಟು ಹಿಂದೆಯೇ ನಿಕೋಲಾಸ್ ಬಾರ್ಬನ್ ಎಂಬವನು 'ವ್ಯಾಪಾರ ಚಿಂತನ' ಎಂಬ ಪುಸ್ತಕದಲ್ಲಿ ಹೀಗೆ ಬರೆದಿದ್ದ: "ವ್ಯಾಪಾರ ನಿಷೇಧವೇ ವ್ಯಾಪಾರ ಕ್ಷೀಣಿಸಲು ಕಾರಣ. ಎಲ್ಲ ವಿದೇಶಿ ವಸ್ತುಗಳೂ ಸ್ವದೇಶಿ ವಸ್ತುಗಳಿಗೆ ಪ್ರತಿಯಾಗಿ ಬರಬೇಕು. ಆದ್ದರಿಂದ ವಿದೇಶಿ ವಸ್ತುಗಳ ಬಹಿಷ್ಕಾರದಿಂದ, ಅದೇ ಪ್ರಮಾಣದಲ್ಲಿ ಸ್ವದೇಶಿ ವಸ್ತುಗಳ ತಯಾರಿಕೆ ರಫ್ತುಗಳಿಗೆ ಅಡ್ಡಿಯುಂಟಾಗುತ್ತದೆ. ಏಕೆಂದರೆ ಇಷ್ಟೊಂದು ಪದಾರ್ಥದ ವಿನಿಮಯ ನಿಂತು ಹೋಗುತ್ತದೆ. ಈ ವಸ್ತು ತಯಾರಿಕೆ ಹಾಗೂ ವ್ಯಾಪಾರಗಳಲ್ಲಿ ನಿರತರಾಗಿದ್ದವರು ತಮ್ಮ ಕಸಬು ಕಳೆದು ಕೊಳ್ಳುತ್ತಾರೆ . . . ."[1]

ಪ್ರಸಿದ್ಧವಾದ 'ವ್ಯಾಪಾರ ಸಿಲ್ಕಿ'ನ ವಾದವನ್ನೇ ತೆಗೆದುಕೊಳ್ಳಿ. ೧೬೯೧ರಷ್ಟು ಹಿಂದೆಯೇ ಡಡ್ಲಿ ನಾರ್ತ್ ಎಂಬವನು ಒಂದು ಸುಪ್ರಸಿದ್ಧ ಪುಸ್ತಕ ಬರೆದ. "ವ್ಯಾಪಾರ ವಿಶ್ಲೇಷಣೆ" ಎಂಬುದು ಈ ಪುಸ್ತಕದ ಹೆಸರು. "'ವ್ಯಾಪಾರ ಸಿಲ್ಕು' ಎಂಬ ವಾದ ವಿವೇಚನೆಯ ರಾದ್ಧಾಂತ ಎದ್ದು ಬಹು ಕಾಲವಾಗಿಲ್ಲ. ಹೊರಗೆ ಕಳಿಸಿದ್ದಕ್ಕಿಂತ ಹೆಚ್ಚು ವಸ್ತು ತರಿಸಿಕೊಂಡದ್ದೇ ಆದರೆ ನಾವು ವಿನಾಶದ ಹೆದ್ದಾರಿ ತುಳಿದಂತೆ—ಎಂಬುದು ಇವರ ಭ್ರಮೆ. . . . ವ್ಯಾಪಾರದ ವಿಚಾರದಲ್ಲಿ ಇಡೀ ಜಗತ್ತೇ ಒಂದು ದೇಶವಂತೆ, ಬಿಡಿ ದೇಶಗಳು ಇದರಲ್ಲಿನ ಪ್ರಜೆಗಳಂತೆ—ಎಂಬ ಮಾತು ವಿಚಿತ್ರವೆನಿಸಬಹುದು, ಆದರೆ ನಿಜ. ಸಾರ್ವಜನಿಕರಿಗೆ ಲಾಭದಾಯಕವಲ್ಲದ ವ್ಯಾಪಾರವಿಲ್ಲ. ಇದು ಲಾಭದಾಯಕವಲ್ಲವೆಂದು ಯಾರಾದರೂ ಮನವರಿಕೆ ಮಾಡಿಕೊಟ್ಟರೆ ಜನ ಆ ವ್ಯಾಪಾರವನ್ನೇ ಬಿಟ್ಟಾರು. . . . ವ್ಯಾಪಾರ ವಿಚಾರದಲ್ಲಿ ಪ್ರೋತ್ಸಾಹ ಬಹುಮಾನಗಳ ಮಾತೆತ್ತುವುದು ಅಸಹಜ. ಇಂಥ ಶಾಸನ ಅಸಂಬದ್ಧ. ವ್ಯಾಪಾರ ಬೆಲೆ ವಿಧಿ ನಿಯಮಗಳು ತಾವಾಗಿಯೇ ಏರ್ಪಡಬೇಕಲ್ಲದೆ ಇವಕ್ಕೆ ಶಾಸನ ನಿರ್ಮಿತವಾಗಬಾರದು. ಹೀಗೆ ನಿಯಂತ್ರಣಗೊಳಿಸುವ ಶಾಸನವೇನಾದರೂ ಬಂದರೆ ಅಷ್ಟರ ಮಟ್ಟಿಗೆ ವ್ಯಾಪಾರ ಕುಂಠಿತವಾದಂತೆ. ಇದು ವ್ಯಾಪಾರಕ್ಕೆ ಹಾನಿಕರ."[2]

ಜೋಸೆಫ್ ಟಕ್ಕರ್ ಎನ್ನುವವನು ಇನ್ನೊಬ್ಬ. ಈತ ೧೭೪೯ರಲ್ಲಿ ವ್ಯಾಪಾರಿಗಳಿಗೆ ಸಂಪೂರ್ಣ ಸ್ವಾಮ್ಯ ಕೊಡುವ ಈ ಧನಪ್ರಭುತ್ವವಾದದ ನೀತಿಯನ್ನು ಉಡಾಯಿಸಿದ. "ನಮ್ಮ ಏಕ ಸ್ವಾಮ್ಯಗಳು, ಸಾರ್ವಜನಿಕ ಕಂಪೆನಿಗಳು, ಸಂಘ ಸನ್ನದುಗಳು ಇವು ಸ್ವತಂತ್ರವ್ಯಾಪಾರದ ಶಾಪಗಳು, ಅನಿಷ್ಟಗಳು....ವಾಣಿಜ್ಯವಿಚಾರ ಇಡೀ ದೇಶಕ್ಕೇ

---

[1] N. Barbon, *A Discourse of Trade* (1690), p. 35. Reprinted and edited by J. H. Hollander. Johns Hopkins Press, Baltimore, 1905.

[2] D. North, *Discourses Upon Trade* (1691), pp. 12-13. Reprint edited by J. H. Hollander. Baltimore, 1907.

ಅನ್ವಯವಾಗಬೇಕು....ಕೆಲವು ಮಂದಿ ಆಶೆಬಡಕ ಡೈರೆಕ್ಟರುಗಳ ಡೊಳ್ಳು ಹೊಟ್ಟೆ ತುಂಬಿಸ ಲೋಸುಗವೇ ಜಗತ್ತಿನ ಮುಕ್ಕಾಲು ಭಾಗದೊಡನೆ ವ್ಯಾಪಾರ ನಡಸುವ ವಿಧಾನ ತ್ಯಜಿಸ ಬೇಕು. ಸಾರ್ವಜನಿಕರು ಬಡವರಾದಂತೆಲ್ಲ ಇವರು ಧನಿಕರಾಗುತ್ತಾರೆ."[1]

ಈ ಟಕ್ಕರ್ ಮಹಾಶಯ ಧನಪ್ರಭುತ್ವವಾದಿಗಳ ವಸಾಹತು ನೀತಿಯ ವಿಚಾರ ವಾಗಿಯೂ ಬರೆದಿದ್ದಾನೆ: "ನಮ್ಮ ವಿವೇಕರಹಿತ ನೀತಿ, ಐರ್ಲೆಂಡಿನ **ವಾಣಿಜ್ಯ ಕೈಗಾರಿಕೆಗಳನ್ನು** ಕುಂಠಿತಗೊಳಿಸುವ ಅನಿಷ್ಟ ಅಸೂಯೆ—ಇವು ನಮ್ಮ ವ್ಯಾಪಾರ ವರ್ಧನಕ್ಕೆ ದೊಡ್ಡ ಅಡಚಣೆ. **ಐರ್ಲೆಂಡೂ** ಸಂಪದ್ಯುಕ್ತವಾದರೆ ಅದರ ಪರಿಣಾಮವೇನು? **ಇಂಗ್ಲೆಂಡೂ** ಸಂಪದ್ಯುಕ್ತವಾಗುತ್ತದೆ; ಫ್ರಾನ್ಸಿನ ಏಳಿಗೆ ಕುಂದುತ್ತದೆ. ಇದು ಹೇಗೆಂದು ನೀವು ಕೇಳಬಹುದು. ಈಗ ಐರ್ಲೆಂಡಿನಿಂದ ಫ್ರಾನ್ಸಿಗೆ ಉಣ್ಣೆಯ ಕಳ್ಳಸಾಗಾಣಿಕೆಯಾಗುತ್ತಿದೆ. ಅಲ್ಲಿ ಸಿದ್ಧವಸ್ತು ತಯಾರಿಕೆ ಆಗಿ, ಅಲ್ಲಿಂದ ಪೇಟೆಗೆ ಈ ವಸ್ತು ಬರುತ್ತಿದೆ; ನಮ್ಮ ವಸ್ತು ಗಳೊಡನೆಯೇ ಪೈಪೋಟಿಗೆ ನಿಲ್ಲುತ್ತಿದೆ. ನಮ್ಮ ವ್ಯಾಪಾರ ನೀತಿ ಬದಲಾದರೆ, ಐರ್‌ಲೆಂಡು ಅಭಿವೃದ್ಧಿ ಹೊಂದಿದರೆ, ಈ ಪರಿಸ್ಥಿತಿ ಹೋಗುತ್ತದೆ; ಕಳ್ಳಸಾಗಾಣಿಕೆ ತಪ್ಪು ತ್ತದೆ; ಐರ್ಲೆಂಡಿನಲ್ಲೇ ತಯಾರಿಕೆ ಆರಂಭವಾಗುತ್ತದೆ....ಐರ್ಲೆಂಡಿನ ಸ್ಥಿತಿವಂತರ ಆಸ್ತಿಯ ವರಮಾನ ಹೆಚ್ಚುತ್ತದೆ. ಶೀಘ್ರವಾಗಿ ಈ ಹಣ ಇಂಗ್ಲೆಂಡಿಗೂ ಬರುತ್ತದೆ."[2]

ಚಿನ್ನ ಬೆಳ್ಳಿಯ ಶೇಖರಣೆ ಮುಖ್ಯವೆಂಬ ಧನಪ್ರಭುತ್ವವಾದಿಗಳ ಭಾವನೆಯ ವಿಚಾರ ವಾಗಿಯೂ ಟೀಕೆ ವ್ಯಕ್ತವಾಯಿತು. ಆಡಂ ಸ್ಮಿತ್ತನ ಮಿತ್ರನಾದ ಡೇವಿಡ್ ಹ್ಯೂಮ್ ೧೭೪೨ರಲ್ಲಿ ಈ ಭಾವನೆಯನ್ನೂ ಉಡಾಯಿಸಿದ. ಹೆಚ್ಚು ಹಣವಿದ್ದ ಮಾತ್ರಕ್ಕೇ ಶಾಶ್ವತಾನುಕೂಲ ಯಾವ ದೇಶಕ್ಕೂ ಲಭಿಸದೆಂದು ಈತ ಹೇಳಿದ. ಲೋಹದ ನಾಣ್ಯ ಹೊಂದಿರುವ ಪ್ರತಿ ರಾಷ್ಟ್ರಕ್ಕೂ ಅಂತರರಾಷ್ಟ್ರೀಯ ವ್ಯಾಪಾರದ ಫಲವಾಗಿ ಆದರ ಆಯಾತ ನಿರ್ಯಾತಗಳು ಒಂದಕ್ಕೊಂದು ಹೊಂದಿಕೊಳ್ಳುವಷ್ಟು ಚಿನ್ನ ದೊರಕುತ್ತದೆ—ಎಂಬುದು ಇವನ ವಾದ. ಇದು ಹೇಗೆಂಬುದನ್ನು ನೋಡೋಣ.

ಚಲಾವಣೆಯಲ್ಲಿರುವ ಹಣಕ್ಕೆ ತಕ್ಕಂತೆ ಬೆಲೆಗಳು ಏರಿಳಿಯುವುವೆಂಬುದು ಬಹು ಕಾಲದ ಹಿಂದೆಯೇ ಮನವರಿಕೆಯಾಗಿತ್ತೆಂಬ ವಿಚಾರ ನಿಮಗೆ ನೆನಪಿರಬಹುದು. ಹ್ಯೂಮ್ ಇಲ್ಲಿಂದ ಮುಂದಕ್ಕೆ ಈ ವಿಚಾರ ಬೆಳಸಿದ. ಅವನ ಮಾತುಗಳನ್ನೇ ಓದಿ: "ಯಾವುದಾದರೂ ಒಂದು ದೇಶವನ್ನು ಪ್ರತ್ಯೇಕವಾಗಿ ತೆಗೆದುಕೊಳ್ಳುವುದಾದರೆ, ಹಣದ ಪ್ರಮಾಣ ಹೆಚ್ಚೇ ಕಡಮೆಯೇ ಎಂಬುದು ಮುಖ್ಯವಲ್ಲ. ಏಕೆಂದರೆ ಹಣ ಬಾಹುಳ್ಯಕ್ಕೆ ತಕ್ಕಂತೆ ಪದಾರ್ಥಗಳ ಬೆಲೆಗಳು ನಿರ್ಣಯವಾಗುತ್ತವೆ."[3]

---

[1] J. Tucker, *Brief Essay on the Advantages and Disadvantages Which Respectively Attend France and Great Britain with Regard to Trade*, p. 25. London, 1749.

[2] *Ibid*., p. 28.

[3] D. Hume, *Essays Moral, Political and Literary*. Edited by T. H. Green and T. H. Grose, p. 309. Longmans, Green and Co., London, 1875. Essays first published in 1742.

ಬೆಲೆಗಳು ಏರಿದರೆ ದೇಶದ ವ್ಯಾಪಾರದ ಮೇಲೆ ಏನು ಪರಿಣಾಮವುಂಟಾಗುತ್ತದೆ? ಇತರ ದೇಶಗಳ ಜನ ಈ ಪದಾರ್ಥ ಕೊಳ್ಳುವುದನ್ನು ಕಡಮೆ ಮಾಡುತ್ತಾರೆ. ಏಕೆಂದರೆ ಧಾರಣೆವಾಸಿ ಹೆಚ್ಚಿದೆ. ಇದರಿಂದ ಆ ದೇಶದ ರಫ್ತು ಕಡಮೆಯಾಗುತ್ತದೆ. ಆಗ ಆ ದೇಶದ ಆಯಾತ ನಿರ್ಯಾತಗಳ—ಆಮದು ರಫ್ತುಗಳ—ಸಮತೂಕ ತಪ್ಪುತ್ತದೆ. ಆಯಾತಕ್ಕೆ ತಕ್ಕಂತೆ ನಿರ್ಯಾತ ಇರುವುದಿಲ್ಲ. ಆ ದೇಶದಿಂದ ಇತರ ದೇಶಗಳು ಕೊಳ್ಳುತ್ತಿರುವುದಕ್ಕಿಂತ ಹೆಚ್ಚಾಗಿ ಅದು ಇತರ ದೇಶಗಳಿಂದ ಕೊಳ್ಳುತ್ತದೆ. ಇವೆರಡರ ವ್ಯತ್ಯಾಸದ ಮೊಬಲಗನ್ನು ಹೇಗಾದರೂ ಪಾವತಿ ಮಾಡಲೇಬೇಕು. ಅದರ ಆಯಾತದ ಹಣವನ್ನು ನಿರ್ಯಾತದಿಂದ ಸರಿತೂಗಿಸದಿದ್ದರೆ, ಇವೆರಡರ ವ್ಯತ್ಯಾಸವನ್ನು ಹಣದ ರೂಪದಲ್ಲಿ ಸಲ್ಲಿಸಬೇಕು. ಎಂದರೆ, ಬೆಲೆಗಳು ಹೆಚ್ಚಿದಾಗ ಆ ದೇಶದಿಂದ ಚಿನ್ನ ಹೊರಕ್ಕೆ ಹರಿದು ಹೋಗುತ್ತದೆ—ಎಂದ ಹಾಗಾಯಿತು. ಹೀಗೆ ಚಿನ್ನ ಹರಿದು ಹೋದಾಗ, ದೇಶದಲ್ಲಿ ಚಲಾವಣೆಯಲ್ಲಿರುವ ಹಣದ ಪ್ರಮಾಣ ತಗ್ಗುತ್ತದೆ. ಹಣದ ಪ್ರಮಾಣ ತಗ್ಗಿದಾಗ ಬೆಲೆಗಳು ಮತ್ತೆ ಇಳಿಯುತ್ತವೆ. ಆಗ ಇತರ ದೇಶಗಳು ಮತ್ತೆ ಈ ದೇಶದಿಂದ ಅಗ್ಗವಾಗಿ ಪದಾರ್ಥ ಕೊಳ್ಳಬಹುದೆಂಬುದನ್ನು ಕಂಡುಕೊಳ್ಳುತ್ತವೆ. ಆಗ ಈ ದೇಶದ ನಿರ್ಯಾತ ಕ್ರಮವಾಗಿ ಹೆಚ್ಚಿ, ಆಯಾತ ನಿರ್ಯಾತಗಳು ಸರಿಹೋಗುತ್ತವೆ. ಇದರ ವಿಪರ್ಯಯವೂ ನಿಜ. ಒಂದು ದೇಶದಲ್ಲಿ ಚಲಾವಣೆಯಲ್ಲಿರುವ ಹಣದ ಪ್ರಮಾಣ ಕಡಮೆಯಾಗಿ, ತತ್ಫಲವಾಗಿ ಬೆಲೆಗಳು ಇಳಿದರೆ, ಇತರ ದೇಶಗಳು ಆ ದೇಶದಿಂದ ಹೆಚ್ಚು ಸಾಮಗ್ರಿ ಕೊಳ್ಳುತ್ತವೆ. ಏಕೆಂದರೆ ಸಾಮಗ್ರಿ ಅಗ್ಗವಾಗಿರುತ್ತದೆ. ಆಗ ಆ ದೇಶ ಆಯಾತ ಮಾಡಿಕೊಳ್ಳುವುದಕ್ಕಿಂತ ಹೆಚ್ಚಾಗಿ ನಿರ್ಯಾತ ಮಾಡುತ್ತದೆ; ಇವೆರಡರ ನಡುವಣ ವ್ಯತ್ಯಾಸವನ್ನು ಹಣದ ರೂಪದಲ್ಲಿ ಪಡೆಯುತ್ತದೆ. ಆಗ ಆ ದೇಶದಲ್ಲಿ ಹಣದ ಪ್ರಮಾಣ ಹೆಚ್ಚಿ, ಬೆಲೆಗಳು ಮತ್ತೆ ಏರುತ್ತವೆ. ಬೆಲೆ ಇಳಿತದಿಂದ ಆ ದೇಶದ ನಿರ್ಯಾತ ವ್ಯಾಪಾರದಲ್ಲಿ ಉಂಟಾಗಿದ್ದ ಅನುಕೂಲ ಪರಿಸ್ಥಿತಿಯನ್ನು ಅದು ಕಳೆದುಕೊಳ್ಳುತ್ತದೆ. ನಿರ್ಯಾತ ತಗ್ಗುತ್ತದೆ. ಮತ್ತೆ ಆ ದೇಶದ ಆಯಾತ ನಿರ್ಯಾತಗಳ ನಡುವೆ ಸಮತೂಕ ಏರ್ಪಡುತ್ತದೆ.

ಈ ವಿಚಾರದ ಸ್ಥೂಲ ವಿವರಣೆ ಮಾತ್ರ ಇದು. ವಾಸ್ತವವಾಗಿ ಇದು ಇಷ್ಟೊಂದು ಸುಸೂತ್ರವಾಗಿಯೇ ನಡೆಯುವುದಿಲ್ಲ. ಹೀಗೆಲ್ಲಾ ಆಗಲು ತಕ್ಕಮಟ್ಟಿನ ಕಾಲವೇ ಬೇಕು. ದೀರ್ಘಕಾಲದಲ್ಲಿ ಇದು ನಿಜ. ಆದರೆ ಹ್ಯೂಮನ ವಿವರಣೆಯಿಂದ ಒಂದಂತೂ ಆಯಿತು. ಅಮೂಲ್ಯ ಲೋಹವನ್ನು ಅಧಿಕ ಪ್ರಮಾಣದಲ್ಲಿ ಹೊಂದಿರುವುದು ಅಗತ್ಯವೆಂಬ ಧನಪ್ರಭುತ್ವವಾದಿಗಳ ಭಾವನೆಯಲ್ಲಿ ತಿರುಳಿಲ್ಲವೆಂಬುದು ಸ್ಪಷ್ಟವಾಯಿತು.

ಧನಪ್ರಭುತ್ವವಾದಿಗಳ ನಾನಾ ತತ್ವಗಳು ಕಾರ್ಯರೂಪಕ್ಕೆ ಬರುತ್ತಿದ್ದಂತೆಯೇ ಅವುಗಳು ಒಂದೊಂದೂ ಟೀಕೆಗೆ ಒಳಗಾದವು. ನಿರುಪಾಧಿಕ ವ್ಯಾಪಾರದ—ನಿರ್ಬಂಧವಿಲ್ಲದ ವ್ಯಾಪಾರದ—ಪರವಾದ ವಾದವನ್ನು ಫ್ರಾನ್ಸಿನಲ್ಲಿ 'ಫಿಸಿಯೋಕ್ರಾಟ್ಸ್' ಎಂಬ ಪ್ರಕೃತಿ ಪ್ರಾಧಾನ್ಯವಾದಿಗಳು ಮಂಡಿಸಿದರು.

ಧನಪ್ರಭುತ್ವವಾದಿ ಪ್ರತಿಬಂಧಕ, ಸೈನಿಕಶಿಸ್ತು ಇವುಗಳ ವಿರುದ್ಧ ಚಳವಳಿ ಫ್ರಾನ್ಸಿನಲ್ಲಿ

ಬೆಳೆಯಲು ಅಲ್ಲಿ ಕೈಗಾರಿಕೆಯ ಮೇಲೆ ಸರಕಾರದ ಹತೋಟಿ ಪರಮಾವಧಿ ಮುಟ್ಟಿದುದೇ ಕಾರಣವೆಂಬುದನ್ನು ನೀವು ಊಹಿಸಿರಬಹುದು. ಹಲವು ವಿಧಿ ನಿಷೇಧಗಳಿಂದ ಆವೃತ ವಾಗಿತ್ತು—ಅಲ್ಲಿನ ಕೈಗಾರಿಕೆ. ಈ ಕಿರುಕುಳದ ಕಾಯಿದೆಗಳನ್ನು ಚಲಾಯಿಸಲು ಇನಸ್ಪೆಕ್ಟರುಗಳ ತಂಡವೇ ಇತ್ತು. ಈ ನಡುವೆ ಯಾವುದಾದರೂ ಕೆಲಸವಾದರೂ ಅದು ಹೇಗಾಗುತ್ತಿತ್ತೆಂಬುದೇ ಸೋಜಿಗ. ವೃತ್ತಿಸಂಘಗಳ ನೀತಿ ನಿಬಂಧನೆಗಳು ತುಂಬಾ ಕಟು ವಾಗಿದ್ದುವು, ನಿಜ. ಈ ಕಟು ನಿಬಂಧನೆಗಳು ಹಲವೆಡೆಗಳಲ್ಲಿ ಮುಂದುವರಿದುವು. ಅವು ಇಲ್ಲದ ಎಡೆಯಲ್ಲಿ, ಅವಕ್ಕಿಂತಲೂ ಕ್ಷುದ್ರವಾದ ನಿಬಂಧನೆಗಳೇ ಬಂದುವು. ಫ್ರಾನ್ಸಿನ ಕೈಗಾರಿಕೆಗೆ ಸಹಾಯ ನೀಡಿ ಅದನ್ನು ರಕ್ಷಿಸುವುದು ಈ ನಿಬಂಧನೆಗಳ ಉದ್ದೇಶ. ಕೆಲವು ರೀತಿಯಲ್ಲಿ ಹೀಗಾದುದು ನಿಜ. ಆದರೆ ಇವು ಉಚಿತವೆನಿಸಿದಾಗಲೂ ಕೂಡ ಉತ್ಪಾದಕರಿಗೆ ಇವು ಕಿರುಕುಳ ಕೊಡುವಂಥವೇ ಆಗಿದ್ದುವು. ವಸ್ತ್ರ ತಯಾರಕನ ವಿಚಾರ ತೆಗೆದುಕೊಳ್ಳಿ. ಅವನು ತನಗೆ ಇಷ್ಟ ಬಂದ ಮಾದರಿಯ ವಸ್ತ್ರ ತಯಾರಿಸಬಹುದಿತ್ತೆ ? ಇದು ಸಾಧ್ಯವಿರ ಲಿಲ್ಲ. ಇಂತಿಂಥ ವಸ್ತ್ರವನ್ನೇ ತಯಾರಿಸಬೇಕು, ಇದು ಇಷ್ಟಿಷ್ಟೇ ಉದ್ದ ಇರಬೇಕು—ಎಂಬ ನಿಬಂಧನೆಗಳಿದ್ದುವು. ಬೀವರ್ ಪ್ರಾಣಿಯ ಚರ್ಮ, ಕೂದಲು, ಉಣ್ಣೆ—ಇವು ಮಿಶ್ರವಾಗಿ ಇರುವ ಟೊಪ್ಪಿಗೆಗೆ ಗಿರಾಕಿಯಿದೆಯೆಂದು ಭಾವಿಸೋಣ. ಒಬ್ಬ ಟೋಪಿ ಉತ್ಪಾದಕ ಇಂಥ ಟೊಪ್ಪಿಗೆ ತಯಾರಿಸಬಹುದಿತ್ತೆ? ಇಲ್ಲ. ಅವನು ಬೀವರ್ ಪ್ರಾಣಿಯ ಬರೀ ಚರ್ಮದಿಂದಲೇ, ಅಥವಾ ಬರೀ ಕೂದಲಿನಿಂದಲೇ, ಟೋಪಿ ಮಾಡಬಹುದಿತ್ತೇ ಹೊರತು, ಇವನ್ನು ಮಿಶ್ರ ಮಾಡುವಂತಿರಲಿಲ್ಲ. ಹೊಸ, ಉತ್ತಮ ಉಣ್ಣೆ ಉಪಯೋಗಿಸಿ ಪದಾರ್ಥ ತಯಾರಿಸಲು ಉತ್ಪಾದಕರಿಗೆ ಅಧಿಕಾರವಿತ್ತೆ? ಖಂಡಿತ ಇಲ್ಲ. ಉಪಕರಣದ ವಿಚಾರದಲ್ಲೂ ಹೀಗೆಯೇ. ಖಚಿತ ಗಾತ್ರದ, ಖಚಿತ ಆಕಾರದ ಉಪಕರಣವನ್ನೇ ಬಳಸಬೇಕಿತ್ತು. ಈ ವಿಧಿಗಳನ್ನು ಅನುಸರಿಸುತ್ತಿದ್ದಾರೋ ಇಲ್ಲವೋ ಎಂಬುದನ್ನು ಪರೀಕ್ಷಿಸಲು ಇನಸ್ಪೆಕ್ಟರುಗಳು ಸುಳಿ ದಾಡುತ್ತಲೇ ಇದ್ದರು.[1]

ಒಂದೇ ನಿಟ್ಟಿನಲ್ಲಿ ಹೀಗೆ ಅತಿಯಾಗಿ ಅನುಸರಿಸಿದ ಕ್ರಮದಿಂದ ಸಹಜವಾಗಿ ಆದ ಪರಿಣಾಮವಿಷ್ಟೆ : ಇದಕ್ಕೆ ಎದುರು ನಿಟ್ಟಿನಲ್ಲಿ ಇಷ್ಟೇ ದೂರಗಾಮಿಯಾದ—ವೈಪರೀತ್ಯದ—ಚಳವಳಿ ಬೆಳೆದುಕೊಂಡಿತು. ಕೈಗಾರಿಕೆಯ ಮೇಲೆ ಅತಿಯಾದ ಹತೋಟಿ ಇದ್ದರೆ, ಇದರ ಮೇಲೆ ಯಾವ ಹತೋಟಿಯೂ ಇರಲೇ ಕೂಡದೆಂಬ ಕೇಳಿಕೆ ಹುಟ್ಟಿಕೊಳ್ಳುವುದು ಸಹಜ. ಡೀ ಗೋರ್ನೆ ಎಂಬ ಫ್ರೆಂಚ್ ವ್ಯಾಪಾರಿ ಇಂಥ ಚಳವಳಿ ಹೂಡಿದ ಮೊದಲಿಗರಲ್ಲಿ ಒಬ್ಬ. ಫ್ರಾನ್ಸಿನ ಸುಪ್ರಸಿದ್ಧ ವಿತ್ತಮಂತ್ರಿ ಟರ್ಗಾಟ್ ಎಂಬವನು ಇವನ ಬಗ್ಗೆ ಹೀಗೆ ಬರೆದ: "ಹೆಚ್ಚು ವೆಚ್ಚ ಮಾಡಿ ಸಂಸ್ಥೆಯೊಂದಕ್ಕೆ ಪ್ರವೇಶ ದೊರಕಿಸಿಕೊಳ್ಳದೆ, ಹಕ್ಕು ಕೊಂಡು ಕೊಳ್ಳದೆ ಯಾವ ಪ್ರಜೆಯೂ ಯಾವುದನ್ನೂ ತಯಾರಿಸುವಂತಿಲ್ಲ, ಮಾರುವಂತಿಲ್ಲ—ಎಂಬ ಅಂಶ ಆತನಿಗೆ ಸೋಜಿಗವೆನಿಸಿತ್ತು.....ಉತ್ತರಾಧಿಕಾರ ನಿರ್ಣಯಿಸಲ್ಪಡುತ್ತಿದ್ದದ್ದು

[1] cf. Renard and Weubersse, *op. cit.*, pp. 180-182.

ಸಂಪ್ರದಾಯಾನುಸಾರವಾಗಿ. ಇಂಥ ದೇಶದಲ್ಲಿ.....ಪ್ರತಿ ಥಾನು ಬಟ್ಟೆಯೂ ಇಷ್ಟೇ ಉದ್ದವಿರಬೇಕು, ಅನಲ್ಲಿ ಇಂತಿಷ್ಟೇ ದಾರ ಇರಬೇಕು, ಎಂದು ನಿರ್ಬಂಧ ಹಾಕಬೇಕೆಂಬ ವಾದಕ್ಕೆ ಮಣಿಯುವುದೆಂಬುದೂ, ನಾಲ್ಕು ಸಂಪುಟಗಳ ತುಂಬಾ ಈ ಮುಖ್ಯ ವಿವರಗಳನ್ನು ತುಂಬಿ ಶಾಸನಸಭೆಯ ಅಧಿಕಾರ ಮುದ್ರೆ ಒತ್ತುವುದೆಂಬುದೂ, ಸರ್ವಸ್ವಾಮ್ಯದ ಭಾವನೆಗೆ ಬಲಿಯಾಗಿ ಅಸಂಖ್ಯಾತ ಶಾಸನಗಳನ್ನು ಜಾರಿಗೆ ತರುವುದೆಂಬುದೂ ಊಹಾತೀತವೆಂದು ಆತ ಬಗೆದಿದ್ದ. ಪ್ರತಿಯೊಂದು ಪದಾರ್ಥದ ಬೆಲೆಯನ್ನೂ ನಿರ್ಧರಿಸುವ ಒಂದು ಕೈಗಾರಿಕೆ ಬೆಳೆಯಬೇಕೆಂಬ ಉದ್ದೇಶದಿಂದ ಇನ್ನೊಂದು ಕೈಗಾರಿಕೆಯನ್ನು ನಿಷೇಧಿಸಿ ನಿರೂಪ ಹೊರಡಿಸುವ....ಇತರ ಪ್ರಜೆಗಳಿಗಿಂತ ರೈತನ ಸ್ಥಿತಿ ಹೆಚ್ಚು ಅನಿಶ್ಚಿತವೂ ಶೋಚನೀಯವೂ ಆಗುವಂತೆ ಮಾಡುವುದರಿಂದ ಧಾನ್ಯದ ಬೆಳೆ ಧಾರಾಳವಾಗುವಂತೆ ದೃಢಪಡಿಸಿಕೊಳ್ಳಬಹುದೆಂದು ಭಾವಿಸುವ ಸರಕಾರವನ್ನು ಕಂಡು ಆತನಿಗೆ ಆಶ್ಚರ್ಯವೆನಿಸಿತ್ತು."[1]

ಈ ಅತಿಯಾದ ನಿಬಂಧನೆ ಗೋರ್ನೆಯನ್ನು ಆಶ್ಚರ್ಯಗೊಳಿಸಿತ್ತು, ಮಾತ್ರವಲ್ಲ. ಫ್ರಾನ್ಸು ಇವನ್ನು ತೊಡೆದು ಹಾಕಬೇಕೆಂದೂ ಆತ ಬಯಸಿದ. ಆತ ಒಂದು ಹೊಸ ನುಡಿಯನ್ನೇ ಸೃಷ್ಟಿಸಿದ. ಅಂದಿನಿಂದ ಎಲ್ಲ ರೀತಿಯ ನಿರ್ಬಂಧಗಳನ್ನೂ ವಿರೋಧಿಸುವವರೆಲ್ಲರನ್ನೂ ಒಗ್ಗೂಡಿಸುವ ಕಹಳೆಯಾಗಿದೆ ಈ ನುಡಿ. "ಲೇಸೇ-ಫೇರ್" ಅಥವಾ "ತಾಟಸ್ಥ್ಯನೀತಿ" ಎಂಬುದು ಈ ನುಡಿ. ಈ ಪ್ರಸಿದ್ಧ ನುಡಿಯನ್ನು ಸ್ಥೂಲವಾಗಿ ಅನುವಾದ ಮಾಡುವುದಾದರೆ, ಅದರ ಅರ್ಥ ಇದು: "ನಮ್ಮ ಪಾಡಿಗೆ ನಮ್ಮನ್ನು ಬಿಡಿ."

"ಲೇಸೇ-ಫೇರ್" ಎಂಬುದು ಗೋರ್ನೇ ಜೀವಿಸಿದ್ದ ಕಾಲದಲ್ಲೇ ಜೀವಿಸಿದ್ದ ಫ್ರೆಂಚ್ ಪ್ರಕೃತಿ ಪ್ರಾಧಾನ್ಯವಾದಿಗಳ ಕೂಗು ನುಡಿಯಾಯಿತು. ಅರ್ಥಶಾಸ್ತ್ರಜ್ಞರ ಮೊಟ್ಟ ಮೊದಲನೆಯ ಪಂಥ ಇವರದು. ಆದ್ದರಿಂದ ಇವರು ಮುಖ್ಯರೆನಿಸಿದ್ದಾರೆ. ೧೭೫೭ರಿಂದ ಮೊದಲ್ಗೊಂಡು, ಫ್ರಾಂಕಾಯ್ ಕ್ವೆಸ್ನೇ ಎಂಬವನ ನಾಯಕತ್ವದಲ್ಲಿ, ಆರ್ಥಿಕ ಸಮಸ್ಯೆಗಳನ್ನು ಚರ್ಚಿಸುವ ಉದ್ದೇಶದಿಂದ ಕ್ರಮವಾಗಿ ಸಭೆ ಸೇರುತ್ತಿದ್ದ ಗುಂಪಿನವರು ಇವರು. ನಿರ್ಬಂಧಗಳಿಂದ ವಿಮೋಚನೆಯಾಗಬೇಕೆಂದು, ವ್ಯಾಪಾರ ಸ್ವತಂತ್ರವಾಗಿ ನಡೆಯಬೇಕೆಂದು, ಆರ್ಥಿಕ ವಿಚಾರದಲ್ಲಿ ಸರಕಾರ ಪ್ರವೇಶಿಸದೆ ತಾಟಸ್ಥ್ಯ ನೀತಿ ಅನುಸರಿಸಬೇಕೆಂದು ಪ್ರಚಾರ ಮಾಡುವ ಉದ್ದೇಶದಿಂದ ಈ ಪಂಥದ ಸದಸ್ಯರು ಪುಸ್ತಕ ಬರೆದರು, ಲೇಖನ ಪ್ರಕಟಿಸಿದರು. ಮೀರಾಬೂ ಎಂಬ ಪ್ರಸಿದ್ಧ ಪ್ರಕೃತಿಪ್ರಾಧಾನ್ಯವಾದಿಯೊಬ್ಬನಿಂದ, ಬೇಡನ್ನಿನ ದೊರೆ ಕಾರ್ಲ್ ಫ್ರೆಡರಿಕ್ ಎಂಬವನು ೧೭೭೦ರಲ್ಲಿ ತನ್ನ ರಾಜ್ಯ ಆಳುವುದು ಹೇಗೆಂಬ ಬಗ್ಗೆ ಸಲಹೆ ಬೇಡಿದ. "ಹಾ! ಮುಸ್ಯೂ, ನಿಮ್ಮ ರಾಜ್ಯಕ್ಕೆ ಸ್ವತಂತ್ರ ಬಂದರಿನ, ಸ್ವತಂತ್ರ ಪರಿಸೆಯ ಅನುಕೂಲ ಕಲ್ಪಿಸಿ. ಈ ಹಾದಿಯಲ್ಲಿ ನೀವು ಮೊದಲಿಗರಾಗಿ. ನಿಮ್ಮ ದೇಶದೊಳಕ್ಕೆ ಕಾಲಿರಿಸಿದಾತ ಮೊಟ್ಟ ಮೊದಲು ಓದುವ ಪ್ರೀತಿಯ, ಗೌರವದ ಹೆಸರು ನಿಮ್ಮದಾಗಲಿ. ನಿಮ್ಮ ಹೆಸರಿನ ಕೆಳಗೆ ಈ ಮೂರು ಮಾತುಗಳನ್ನು ಬರಸಿ: ಸ್ವಾತಂತ್ರ್ಯ,

---

[1] E. Cannan, *A Review of Economic Theory*, pp. 26-27. P. S. King & Co., London, 1929.

ಬಿಡುಗಡೆ, ಮುಕ್ತಿ! . . . . ಆಗ ಬಹು ಬೇಗ ನಿಮ್ಮ ರಾಜ್ಯ ಜನರ ಮೆಚ್ಚಿನ ವಾಸಸ್ಥಾನವಾಗುತ್ತದೆ, ವ್ಯಾಪಾರದ ಸಹಜ ಮಾರ್ಗವಾಗುತ್ತದೆ, ಜಗತ್ತಿನ ವ್ಯವಹಾರ ಕೇಂದ್ರವಾಗುತ್ತದೆ."[1]

ಪ್ರಕೃತಿ ಪ್ರಾಧಾನ್ಯವಾದಿಗಳು ನಿರುಪಾಧಿಕ ವ್ಯಾಪಾರದಲ್ಲಿ ನಂಬಿಕೆ ಪಡೆದದ್ದು ನೇರವಾಗಲ್ಲ, ಪರೋಕ್ಷವಾಗಿ. ಆಸ್ತಿಯ ಖಾಸಗಿ ಒಡೆತನ—ಮುಖ್ಯವಾಗಿ ಜಮೀನಿನ ಖಾಸಗಿ ಒಡೆತನ—ಬಹು ಪವಿತ್ರವೆಂದು ಅವರು ನಂಬಿದ್ದರು. ಆಸ್ತಿ ಹೊಂದುವ ಹಕ್ಕು ಇರಬೇಕೆಂದು ಅವರು ನಂಬಿದ್ದುದರಿಂದ ಸ್ವಾತಂತ್ರ್ಯದಲ್ಲೂ ಅವರು ನಂಬಿಕೆ ಹೊಂದಿದ್ದರು. ಇನ್ನೊಬ್ಬರಿಗೆ ತೊಂದರೆಯಾಗದ ರೀತಿಯಲ್ಲಿ ಒಬ್ಬ ವ್ಯಕ್ತಿ ತನ್ನ ಆಸ್ತಿಯನ್ನು ಏನು ಬೇಕಾದರೂ ಮಾಡಬಹುದು—ಎಂದು ಅವರು ನಂಬಿದ್ದರು. ನಿರುಪಾಧಿಕ ವ್ಯಾಪಾರವಿರಬೇಕೆಂಬ ಅವರ ವಾದದ ಹಿಂದೆ ಇದ್ದ ನಂಬಿಕೆ ಇದು—ಬೇಸಾಯಗಾರ ತನ್ನಿಚ್ಛೆ ಬಂದದ್ದು ಬೆಳೆಯಲಿ, ಇಚ್ಛೆಯಿದ್ದೆಡೆ ಮಾರಲಿ, ಎಂಬುದು. ಸುಂಕ ಕೊಡದೆ ಧಾನ್ಯವನ್ನು ದೇಶದಿಂದ ಹೊರಕ್ಕೆ ಸಾಗಿಸುವುದು ಆಗ ಫ್ರಾನ್ಸಿನಲ್ಲಿ ಸಾಧ್ಯವಿರಲಿಲ್ಲ. ಅಷ್ಟೇ ಅಲ್ಲ. ಅದನ್ನು ದೇಶದ ಒಂದೆಡೆಯಿಂದ ಇನ್ನೊಂದೆಡೆಗೆ ಸಾಗಿಸಲು ತೆರಿಗೆ ಕೊಡಬೇಕಾಗಿತ್ತು. ಅಮೆರಿಕದ ನ್ಯೂ ಜೆರ್ಸಿಯ ಬೇಸಾಯಗಾರ, ಅದೇ ದೇಶದ ನ್ಯೂಯಾರ್ಕಿಗೆ, ತನ್ನ ತರಕಾರಿಯನ್ನು ಸುಂಕ ಕೊಡದೆ ಸಾಗಿಸುವಂತಿಲ್ಲ—ಎಂದಿದ್ದರೆ ಹೇಗಿದ್ದೀತು? ಅದೇ ಪರಿಸ್ಥಿತಿ ಇದು. ಪ್ರಕೃತಿ ಪ್ರಾಧಾನ್ಯವಾದಿಗಳು ಈ ನಿರ್ಬಂಧವನ್ನು ವಿರೋಧಿಸಿದರು. ಮರ್ಸಿಯೇ ಡೀ ಲಾ ರಿವೇರ್ ಎಂಬವನು ಪ್ರಕೃತಿ ಪ್ರಾಧಾನ್ಯವಾದಿಗಳ ಬಗ್ಗೆ ಬಹು ಚೆನ್ನಾಗಿ ಬರೆದಿದ್ದಾನೆ. ಆಸ್ತಿಯ ಹಕ್ಕು ಭೋಗಿಸಬೇಕಾದರೆ ಸಂಪೂರ್ಣ ಸ್ವಾತಂತ್ರ್ಯ ಅಗತ್ಯ—ಎಂದು ಆತ ಹೇಳಿದ್ದಾನೆ: "ಹೆಚ್ಚು ಸ್ವಾತಂತ್ರ್ಯವಿಲ್ಲದಿದ್ದರೆ ಉತ್ಪಾದನೆ ಹೆಚ್ಚುವುದು ಸಾಧ್ಯವಿಲ್ಲ. ಚಲಾಯಿಸಲು ಸ್ವಾತಂತ್ರ್ಯವಿಲ್ಲದ ಹಕ್ಕು ಹಕ್ಕೇ ಅಲ್ಲವೆಂಬುದು ನಿಜವಲ್ಲವೇ? ಆದ್ದರಿಂದ ಸ್ವಾತಂತ್ರ್ಯವಿಲ್ಲದ ಆಸ್ತಿಯ ಹಕ್ಕನ್ನು ಊಹಿಸುವುದು ಸಾಧ್ಯವೇ ಇಲ್ಲ . . . . ಭೋಗೇಚ್ಛೆಯ ಪ್ರಚೋದನೆಯಿಲ್ಲದಿದ್ದರೆ ಮನುಷ್ಯ ಏನನ್ನೂ ಮಾಡುವುದಿಲ್ಲ. ಭೋಗೇಚ್ಛೆಯನ್ನು ಭೋಗ ಸ್ವಾತಂತ್ರ್ಯದಿಂದ ಪ್ರತ್ಯೇಕಿಸಿದರೆ ಅದರಿಂದ ನಮಗೆ ಏನೂ ಪ್ರಯೋಜನವಿಲ್ಲ."[2]

ಪ್ರಕೃತಿ ಪ್ರಾಧಾನ್ಯವಾದಿಗಳು ಪ್ರತಿಯೊಂದು ಸಮಸ್ಯೆಯನ್ನೂ ಅದರಿಂದ ವ್ಯವಸಾಯದ ಮೇಲಾಗುವ ಪರಿಣಾಮದ ದೃಷ್ಟಿಯಿಂದಲೇ ಅಳೆಯುತ್ತಿದ್ದರು. ಭೂಮಿಯೊಂದೇ ಸಂಪತ್ತಿನ ಸಾಧನ, ಭೂಮಿಯ ಮೇಲಣ ದುಡಿಮೆಯೊಂದೇ ಉತ್ಪಾದಕ ದುಡಿಮೆ, ಸಾರ್ಥಕ ದುಡಿಮೆ. ಕಾರ್ಲ್ ಫ್ರೆಡರಿಕ್‌ನೊಡನೆ ನಡಸಿದ ಪತ್ರವ್ಯವಹಾರದಲ್ಲಿ ಮೀರಾಬೂ ಹೀಗೆ ಬರೆಯುತ್ತಾನೆ: "ನಮ್ಮ ರೈತ ಬೇಸಾಯಗಾರನಾಗಿ ಉತ್ಪಾದಕ ದುಡಿಮೆ ಮಾಡುತ್ತಾನೆ. ಈ

---

[1] *Carl Friedrichs von Baden brieflicker Verkehr mit Mirabeau und Du Pont*, vol. I, p. 27. Bearbeitet von C. Knies, Heidelberg, 1892.

[2] Le Mercier de la Revière, *L'Order Naturel et Essentiel des Sociétés, Politiques* 1767, p. 24. Publié par E. Depetre. Geuthner, Paris, 1910.

ದುಡಿಮೆಯಿಂದಲೇ ನಮಗೆ ಖರ್ಚು ಕಳೆದು ಲಾಭ ಬರತಕ್ಕದ್ದು. ಆತ ಬಟ್ಟೆಯನ್ನು ನೇಯಬಹುದು. ಆದರೆ ಆಗ ಆತ ಮಾಡುವುದು ವ್ಯರ್ಥ ದುಡಿಮೆ. ಆಗ, ಬಟ್ಟೆನಲ್ಲಿ, ಆತ ದುಡಿಯುವನೆಂಬುದನ್ನು ನಾವು ಒಪ್ಪಬಹುದಾಗಲಿ, ಏನನ್ನೂ ಹೊಸದಾಗಿ ಉತ್ಪಾದಿಸುವುದಿಲ್ಲ."[1]

ಕೈಗಾರಿಕೆ ವಾಣಿಜ್ಯಗಳಿಗೆ ಅಗತ್ಯವಾದ ಕಚ್ಚಾ ಸಾಮಗ್ರಿ ಒದಗಿಸುವುದು ಬೇಸಾಯವೊಂದೇ—ಎಂದು ಪ್ರಕೃತಿ ಪ್ರಾಧಾನ್ಯವಾದಿಗಳು ವಾದಿಸಿದರು. ಕುಶಲ ಕೆಲಸಗಾರರ ಕಚ್ಚಾ ಸಾಮಗ್ರಿಯನ್ನು ಸಿದ್ಧ ವಸ್ತುವಾಗಿ ಪರಿವರ್ತಿಸಿದಾಗ, ಆತನ ದುಡಿಮೆ ಉಪಯುಕ್ತವೇ ಇರಬಹುದು. ಆದರೆ ಮೊದಲೇ ಇರುವ ಸಂಪತ್ತಿಗೆ ಅವನು ಹೊಸದಾಗಿ ಏನನ್ನೂ ಸೇರಿಸಲಾರ. ಕಚ್ಚಾ ಸಾಮಗ್ರಿಯ ಮೇಲೆ ಕಾರ್ಮಿಕ ತನ್ನ ದುಡಿಮೆಯನ್ನು ವಿನಿಯೋಗಿಸಿದಾಗ ಆ ವಸ್ತುವಿನ ಬೆಲೆ ಹೆಚ್ಚಬಹುದು. ಆದರೆ ಹೀಗೆ ಹೆಚ್ಚುವ ಅದರ ಬೆಲೆ, ಆ ದುಡಿಮೆಗಾರ ಮಾಡಿದ ದುಡಿಮೆಯ ವೆಚ್ಚಕ್ಕೆ ಸಮನಾಗಿರುತ್ತದೆ; ಸಂಪತ್ತೇನೂ ಹೆಚ್ಚುವುದಿಲ್ಲ. ಆದರೆ ವ್ಯವಸಾಯದಲ್ಲಿ ಹೀಗಲ್ಲ. ಹೀಗೆಂದು ವಾದಿಸಿದರು ಇವರು. ಕೈಗಾರಿಕೆ ನಿಷ್ಫಲದಾಯಕ, ವ್ಯವಸಾಯ ಫಲದಾಯಕ. ಬೇಸಾಯಗಾರನ ದುಡಿಮೆಯ ಬೆಲೆಗೂ ನೆಲದೊಡೆಯನ ಲಾಭಕ್ಕೂ ಮೀರಿ—ಇವೆರಡನ್ನೂ ತೆಗೆದಿಟ್ಟ ಮೇಲೆ—ನಿವ್ವಳ ಉತ್ಪನ್ನ ಲಭಿಸುತ್ತದೆ. ಇದು ಪ್ರಕೃತಿಯ ಕೊಡುಗೆ. ಇವರಿಂದ ವಾಸ್ತವವಾದ ಸಂಪತ್ತು ಹೆಚ್ಚುತ್ತದೆ. ವೆಚ್ಚ ಕಳೆದು ಉಳಿವ ಈ ಬೇಸಾಯದ ಹೆಚ್ಚುವರಿ, ಈ ನಿವ್ವಳ ಉತ್ಪನ್ನ ವರ್ಷದಿಂದ ವರ್ಷಕ್ಕೆ ಬದಲಾಗುತ್ತಿರುತ್ತದೆ. ಹೀಗೆಂದು ಅವರು ವಾದಿಸಿದರು. ಋತುಗಳಿಗನುಸಾರವಾಗಿ ಇದೂ ಹೆಚ್ಚು ಕಡಮೆ ಆಗುತ್ತಿರುತ್ತದೆ.

ಪ್ರಕೃತಿ ಪ್ರಾಧಾನ್ಯ ವಾದಿಗಳ ಸಿದ್ಧಾಂತಗಳಲ್ಲಿ ಹಲವನ್ನು ಇಂದಿನ ಅರ್ಥ ಶಾಸ್ತ್ರಜ್ಞರು ಒಪ್ಪುವುದಿಲ್ಲ. ಆದರೆ ಅವರು ಒಂದು ಮುಖ್ಯಾಂಶವನ್ನು ತೋರಿಸಿಕೊಟ್ಟರು. ಒಂದು ರಾಷ್ಟ್ರದ ವರಮಾನವೇ ಅದರ ಸಂಪತ್ತು; ಕೂಡಿಟ್ಟ ವಸ್ತುಗಳ ಸ್ಥಿರ ಮೊತ್ತವಲ್ಲ—ಎಂದು ಅವರು ಹೇಳಿದರು. ದಾಸ್ತಾನಾಗಿ ನಿಂತದ್ದು ಸಂಪತ್ತಲ್ಲ; ಪ್ರವಾಹವಾಗಿ ಹರಿಯುವುದೇ ಸಂಪತ್ತು—ಎಂಬುದನ್ನು ಅವರು ತೋರಿಸಿಕೊಟ್ಟರು. ಈ ಸತ್ಯ ದರ್ಶನಕ್ಕಾಗಿ ಅರ್ಥ ಶಾಸ್ತ್ರಜ್ಞರು ಪ್ರಕೃತಿ ಪ್ರಾಧಾನ್ಯವಾದಿಗಳಿಗೆ ಮನ್ನಣೆ ನೀಡಿದ್ದಾರೆ.

ಪ್ರಕೃತಿ ಪ್ರಾಧಾನ್ಯವಾದಿಗಳ ವಿಚಾರವಾಗಿ ಆಡಂ ಸ್ಮಿತ್ ಹೀಗೆ ಹೇಳುತ್ತಾನೆ: "ಈ ಸಿದ್ಧಾಂತದಲ್ಲಿ ಹಲವು ನ್ಯೂನತೆಗಳಿವೆ. ಆದರೂ ಅರ್ಥನೀತಿಯನ್ನು ಕುರಿತು ಇದುವರೆಗೆ ಪ್ರಕಟವಾಗಿರುವ ವಿಚಾರಗಳಲ್ಲೆಲ್ಲಾ ಇದು ಮಾತ್ರ ಸತ್ಯಕ್ಕೆ ಬಹು ಹತ್ತಿರವಾಗಿದೆ....ನೆಲದ ಮೇಲಣ ದುಡಿಮೆಯೊಂದೇ ಉತ್ಪಾದಕ ದುಡಿಮೆಯೆಂದು ಅವರು ವಾದಿಸುತ್ತಾರೆ. ತತ್ಫಲವಾಗಿ ಉದ್ಭವಿಸುವ ಭಾವನೆಗಳು ಬಹು ಸಂಕುಚಿತ, ಬಹು ಪರಿಮಿತ. ಆದರೆ ರಾಷ್ಟ್ರ ಸಂಪತ್ತೆಂದರೆ ಅನುಭೋಗ ಯೋಗ್ಯವಲ್ಲದ ಹಣವಲ್ಲ; ಸಮಾಜದ ದುಡಿಮೆಯಿಂದ

[1] C. Knies, *op. cit.*, p. 32.

ವರ್ಷೇ ವರ್ಷೇ ಉತ್ಪನ್ನವಾದ ಅನುಭೋಗ ವಸ್ತು—ಎಂಬುದನ್ನು ಇದು ಸ್ಪಷ್ಟಪಡಿಸಿತು. ವಾರ್ಷಿಕ ಉತ್ಪನ್ನವನ್ನು ಪರಮಾವಧಿಗೆ ಏರಿಸಬೇಕಾದರೆ ಸಂಪೂರ್ಣ ಸ್ವಾತಂತ್ರ್ಯ ಅತ್ಯಗತ್ಯ ಎಂಬ ವಿಚಾರವನ್ನೂ ಇದು ವ್ಯಕ್ತಪಡಿಸಿತು. ಆದ್ದರಿಂದ ಈ ಸಿದ್ಧಾಂತ ಎಷ್ಟು ಉದಾತ್ತವೋ, ಎಷ್ಟು ಉದಾರವೋ ಅಷ್ಟೇ ಸಮಂಜಸವಾಗಿದೆ."[1]

ಪ್ರಕೃತಿ ಪ್ರಾಧಾನ್ಯವಾದಿಗಳು ಆಡಂ ಸ್ಮಿತ್ತನಿಗಿಂತ ಹಿಂದೆಯೇ "ಸಂಪೂರ್ಣ ಸ್ವಾತಂತ್ರ್ಯ"ದ ವಾದ ಮಂಡಿಸಿದರು. ಆದರೆ ಇವರಿಗಿಂತ ಆಡಂ ಸ್ಮಿತ್ತನೇ ಹೆಚ್ಚು ಪ್ರಭಾವ ಬೀರಿದ. ಅವನು ಬರೆದ "ರಾಷ್ಟ್ರಗಳ ಸಂಪತ್ತು" ಎಂಬ ಪುಸ್ತಕ ಹಲವು ಮುದ್ರಣಗಳನ್ನು ಕಂಡಿತು. ಅವನು ಜೀವಂತನಾಗಿದ್ದಾಗಲೂ, ಕಾಲಾಧೀನನಾದ ಮೇಲೂ ಅವನ ಬರಹಗಳನ್ನು ಜನ ವಿಪುಲವಾಗಿ ಓದಿದರು. ಧನಪ್ರಭುತ್ವ ವಾದವನ್ನು ಸ್ವಲ್ಪಮಟ್ಟಿಗೆ ಹೊಡೆದುರುಳಿಸುವುದು ಸಾಧ್ಯವಾಗಿದ್ದರೆ, ಹೀಗೆ ಉರುಳಿಸಲು ಪೆಟ್ಟು ಕೊಟ್ಟವನು ಆಡಂ ಸ್ಮಿತ್. ಸ್ವರ್ಣ ರಜತವಾದಿಗಳನ್ನು ಅವನು ತಳ್ಳಿ ಹಾಕಿದ ವೈಖರಿ ಇಂತಿದೆ: "ಚಿನ್ನ-ಬೆಳ್ಳಿಯ ಗಣಿ ಇಲ್ಲದ ದೇಶ ಈ ಲೋಹಗಳನ್ನು ಇತರ ದೇಶಗಳಿಂದ ತರಿಸಿಕೊಳ್ಳಬೇಕೆಂಬುದು ನಿಸ್ಸಂಶಯ. ದ್ರಾಕ್ಷಿ ಬಳ್ಳಿಯ ತೋಟ ಇಲ್ಲದ ದೇಶ ಅನ್ಯದೇಶಗಳಿಂದ ಮದ್ಯ ತರಿಸಿಕೊಳ್ಳುವುದಿಲ್ಲವೆ? ಹಾಗೆ ಮದ್ಯದ ವಿಚಾರವಾಗಿ ಪರಿತಪಿಸದ ರಾಷ್ಟ್ರ ಲೋಹದ ವಿಚಾರದಲ್ಲಿ ಏಕೆ ಪರಿತಾಪ ಪಡಬೇಕು? ಮದ್ಯ ಕೊಳ್ಳಲು ಬೇಕಾದ ಸಾಧನ ಇರುವ ದೇಶ ಅಗತ್ಯವಿದ್ದಾಗಲೆಲ್ಲ ಅದನ್ನು ಪಡೆಯುತ್ತದೆ. ಅಂತೆಯೇ ಚಿನ್ನ ಬೆಳ್ಳಿ ಕೊಳ್ಳಲು ಅಗತ್ಯವಾದ ಸಾಧನ ಇರುವ ದೇಶ ಈ ಲೋಹಾಭಾವದಿಂದ ಎಂದೂ ಪರಿತಪಿಸುವುದಿಲ್ಲ. ಇತರ ಎಲ್ಲ ವಸ್ತುಗಳಂತೆ ಇವನ್ನೂ ಗೊತ್ತಾದ ಬೆಲೆಗೆ ಕೊಳ್ಳಬಹುದು."[2]

ಧನ ಪ್ರಭುತ್ವವಾದಿಗಳ ವಸಾಹತು ನೀತಿಯ ಬಗ್ಗೆ ಅವನು ಸಂಗ್ರಹವಾಗಿ ಹೀಗೆ ಹೇಳಿದ್ದಾನೆ: "ಧನಪ್ರಭುತ್ವ ವಾದದ ಇತರ ಎಲ್ಲ ಕ್ಷುದ್ರ ಹಾಗೂ ದುಷ್ಟ ಉಪಾಯಗಳಂತೆ ವಸಾಹತು ವ್ಯಾಪಾರದ ಸರ್ವಸ್ವಾಮ್ಯವೂ ಕೂಡ ಉಳಿದೆಲ್ಲ ದೇಶಗಳ ಕೈಗಾರಿಕೆಯನ್ನೂ ಕ್ಷೀಣಗೊಳಿಸುತ್ತದೆ. ಅದರಲ್ಲೂ ವಸಾಹತುಗಳ ಕೈಗಾರಿಕೆಗೆ ಬಲುದೊಡ್ಡ ಪೆಟ್ಟು. ಯಾವ ರಾಷ್ಟ್ರದ ಹಿತಕ್ಕಾಗಿ ಇವನ್ನು ಏರ್ಪಡಿಸಿದೆಯೋ, ಆ ಆಳುವ ರಾಷ್ಟ್ರದ ಉದ್ಯಮವೂ ಕೂಡ ಸ್ವಲ್ಪವೂ ವರ್ಧಿಸದು. ಪ್ರತಿಯಾಗಿ ಅದೂ ಕ್ಷೀಣಿಸೀತು."[3]

ಆಡಂ ಸ್ಮಿತ್ತನ ಪುಸ್ತಕದ ಮೊಟ್ಟಮೊದಲನೆಯ ವಾಕ್ಯವೇ ನಿರುಪಾಧಿಕ ವ್ಯಾಪಾರ ಸಮರ್ಥನೆ. "ಶ್ರಮ ವಿಭಾಗದ ಫಲವಾಗಿ....ಶ್ರಮದ ಉತ್ಪಾದನ ಸಾಮರ್ಥ್ಯದಲ್ಲಿ ಪ್ರಚಂಡ ಪ್ರಗತಿ ಉಂಟಾಗಿದೆ." ಹೀಗೆಂದು ಆತ ಮೊದಲು ಹೇಳುತ್ತಾನೆ. ಶ್ರಮವಿಭಾಗವೆಂದರೇನು? ಇಂದು ನಾವು ಇದಕ್ಕೆ ಯಾವ ವ್ಯಾಖ್ಯಾನ ಕೊಡುತ್ತೇವೋ ಅದನ್ನೇ ಆಡಂ ಸ್ಮಿತ್ ೧೭೭೬ ರಲ್ಲಿ ನೀಡಿದ. ವಿಶೇಷೀಕರಣವೇ ಶ್ರಮವಿಭಾಗವೆಂದು ಆತ ಹೇಳಿದ. ಒಬ್ಬ ಕೆಲಸಗಾರನಿಗೆ

[1] *Wealth of Nations, op. cit.*, vol. 2, p. 176.
[2] *Ibid.*, vol. I, p. 407.
[3] *Ibid.*, vol. 2, p. 111.

ಒಂದೇ ಕೆಲಸ; ಇದರಿಂದ ಆತ ಅದರಲ್ಲಿ ಪ್ರವೀಣನಾಗುವನು. ಇದು ವಿಶೇಷೀಕರಣಕ್ಕೆ ಆತ ಕೊಟ್ಟ ವ್ಯಾಖ್ಯೆ. "ಗುಂಡುಸೂಜಿ ತಯಾರಿಕೆಯ ಉದಾಹರಣೆ ತೆಗೆದುಕೊಳ್ಳೋಣ. ಇದು ಪುಟ್ಟ ತಯಾರಿಕೆಯಾದರೂ ಇದರಲ್ಲಿ ಶ್ರಮವಿಭಾಗ ಸ್ಪಷ್ಟವಾಗಿ ಒಡೆದು ಮೂಡಿದೆ. ಈ ತಯಾರಿಕೆಯ ವಿಧಾನ ಗೊತ್ತಿಲ್ಲದ, ಇದರಲ್ಲಿ ಬಳಸುವ ಯಂತ್ರವನ್ನು ನಡಸುವುದು ಹೇಗೆಂಬುವನ್ನು ಅರಿಯದ, ಕಾರ್ಮಿಕನೊಬ್ಬ ಎಷ್ಟೇ ಕಷ್ಟ ಪಟ್ಟು ಕೆಲಸ ಮಾಡಿದರೂ ದಿನಕ್ಕೆ ಒಂದು ಸೂಜಿ ತಯಾರಿಸಬಲ್ಲನೇನೋ; ದಿನಕ್ಕೆ ಇಪ್ಪತ್ತನ್ನಂತೂ ಆತ ಮಾಡಲೇ ಆರ. ಆದರೆ ಇಂದು ಇದರ ಉತ್ಪಾದನೆ ಆಗುತ್ತಿರುವುದೆಂತು? ಇಡೀ ಉತ್ಪಾದನೆಯ ಕಾರ್ಯವೇ ವಿಶಿಷ್ಟವಾದದ್ದಾಗಿದೆ. ಇದು ಹಲವು ಶಾಖೆಗಳಾಗಿ ಒಡೆದಿದೆ. ಈ ಅನೇಕ ಶಾಖೆಗಳಲ್ಲಿ ಒಂದೊಂದೂ ವೈಶಿಷ್ಟ್ಯಪೂರ್ಣ. ಒಬ್ಬ ತಂತಿಯ ಎಳೆ ತೆಗೆಯುತ್ತಾನೆ, ಇನ್ನೊಬ್ಬ ಅದನ್ನು ನೇರ ಮಾಡುತ್ತಾನೆ, ಮೂರನೆಯವನು ಅದನ್ನು ಕತ್ತರಿಸುತ್ತಾನೆ; ನಾಲ್ಕನೆಯವನು ಅದನ್ನು ಮೊನೆಗೊಳಿಸುತ್ತಾನೆ, ಐದನೆಯವನು ಅದರ ತಲೆಯ ಕಡೆ ಉಜ್ಜುತ್ತಾನೆ: ಅದಕ್ಕೆ ತಲೆ ಸಿಕ್ಕಿಸಲು ಎರಡುಮೂರು ಪ್ರತ್ಯೇಕ ಕ್ರಿಯೆಗಳೇ ಆಗಬೇಕು; ಅದನ್ನು ಸಿಕ್ಕಿಸುವುದೂ ಒಂದು ವಿಶಿಷ್ಟ ಕ್ರಿಯೆ; ಸೂಜಿಗೆ ಹೊಳಪು ಕೊಡುವುದೂ ಅಷ್ಟೇ ವಿಶಿಷ್ಟವಾದದ್ದು; ಕಾಗದದೊಳಗೆ ಸೂಜಿ ಇಟ್ಟು ಕಟ್ಟುವುದೂ ಒಂದು ಪ್ರತ್ಯೇಕ ವಿಭಾಗ; ಹೀಗೆ ಸೂಜಿ ತಯಾರಿಕೆಯಂಥ ಮುಖ್ಯ ಉದ್ಯಮವನ್ನು ಹದಿನೆಂಟು ಪ್ರತ್ಯೇಕ ಕ್ರಿಯೆಗಳಾಗಿ ವಿಂಗಡಿಸಬಹುದು. ಕಾರ್ಖಾನೆಗಳಲ್ಲಿ ಈ ಒಂದೊಂದು ಕ್ರಿಯೆಯೂ ಒಬ್ಬೊಬ್ಬನಿಂದ ನಡೆಯುತ್ತದೆ. ಇನ್ನು ಕೆಲವು ಕಾರ್ಖಾನೆಗಳಲ್ಲಿ ಒಬ್ಬೊಬ್ಬನೂ ಎರಡು ಮೂರು ಕ್ರಿಯೆ ಕೈಕೊಳ್ಳಬಹುದು. ಇಂಥ ಒಂದು ಸಣ್ಣ ಕಾರ್ಖಾನೆಯಲ್ಲಿ ಹತ್ತು ಮಂದಿ ಕೆಲಸಗಾರ ರಿದ್ದುದನ್ನು ನೋಡಿದೆ. ಇಲ್ಲಿ ಕೆಲವರು—ಒಬ್ಬೊಬ್ಬರೂ—ಎರಡುಮೂರು ಪ್ರತ್ಯೇಕ ಕ್ರಿಯೆ ನಡಸುತ್ತಿದ್ದರು....ಇಂಥವರು ಶ್ರಮಪಟ್ಟು ದುಡಿದರೆ ದಿನಕ್ಕೆ ಒಟ್ಟು ಹನ್ನೆರಡು ಪೌಂಡು ಗುಂಡುಸೂಜಿ ತಯಾರಿಸಬಹುದಿತ್ತು. ಒಂದು ಪೌಂಡಿನಲ್ಲಿ ಮಧ್ಯಮ ಪರಿಮಾಣದ ನಾಲ್ಕು ಸಾವಿರಕ್ಕೂ ಹೆಚ್ಚು ಗುಂಡುಸೂಜಿ ಇರುತ್ತವೆ. ಎಂದರೆ ಆ ಹತ್ತು ಜನ ಒಂದಾಗಿ ದಿನಕ್ಕೆ ನಲವತ್ತೆಂಟು ಸಾವಿರಕ್ಕೂ ಹೆಚ್ಚು ಸೂಜಿ ಮಾಡುತ್ತಿದ್ದರು. ಒಬ್ಬೊಬ್ಬನೂ ದಿನಕ್ಕೆ ಒಟ್ಟು ಉತ್ಪಾದನೆಯ ಹತ್ತರಲ್ಲೊಂದು ಪಾಲನ್ನು—ನಾಲ್ಕು ಸಾವಿರದ ಎಂಟುನೂರು ಸೂಜಿಯನ್ನು—ತಯಾರಿಸುತ್ತಿದ್ದ. ಇವರಲ್ಲಿ ಒಬ್ಬೊಬ್ಬನೂ, ಈ ಬಗ್ಗೆ ಅನುಭವ ಪರಿಶ್ರಮ ಪಡೆಯದೆ, ಪ್ರತ್ಯೇಕವಾಗಿ, ಸ್ವತಂತ್ರವಾಗಿ ಸೂಜಿ ತಯಾರಿಸ ಹೊರಟಿದ್ದಿದ್ದರೆ, ಅವರು ಖಂಡಿತ ದಿನಕ್ಕೆ ಇಪ್ಪತ್ತು ಗುಂಡುಸೂಜಿಯನ್ನೂ ತಯಾರಿಸುತ್ತಿರಲಿಲ್ಲ. ದಿನಕ್ಕೆ ಒಂದಾದರೂ ಅವರಿಂದ ಆಗುತ್ತಿತ್ತೋ ಇಲ್ಲವೋ. ಎಂದರೆ ಇಂದು ಅವರು ತಮ್ಮ ವಿವಿಧ ಕ್ರಿಯೆಗಳನ್ನು ಯೋಗ್ಯ ರೀತಿಯಲ್ಲಿ ವಿಭಾಗಿಸಿ, ಒಗ್ಗೂಡಿಸಿದ ಫಲವಾಗಿ ತಯಾರಿಸಬಹುದಾದ್ದರ ಇನ್ನೂರ ನಲವತ್ತರಲ್ಲೊಂದು ಪಾಲನ್ನು ಖಂಡಿತ ತಯಾರಿಸಲಾರರು; ನಾಲ್ಕು ಸಾವಿರದ ಎಂಟು ನೂರರಲ್ಲೊಂದು ಪಾಲನ್ನೂ ಕೂಡ ಬಹುಶಃ ತಯಾರಿಸಲಾರರು."[1]

---

[1] *Ibid.*, vol. I, pp. 6, 7.

ಎಂದರೆ ಏನು ಹೇಳಿದ ಹಾಗಾಯಿತು? ಶ್ರಮ ವಿಭಾಗದಿಂದ ಹೆಚ್ಚು ಪ್ರಾವೀಣ್ಯ, ಸಮಯದ ಉಳಿತಾಯ, ಸಾಮಾನ್ಯ ದಕ್ಷತೆ—ಇವು ಸಾಧ್ಯವಾಗುವುದರಿಂದ ದುಡಿಮೆಯ ಫಲ ಹೆಚ್ಚುತ್ತದೆಯೆಂಬ ಆಡಂ ಸ್ಮಿತ್ತನ ವಾದವನ್ನು ಒಪ್ಪುತ್ತೇವೆಂದೇ ಭಾವಿಸೋಣ. ಇದರಿಂದೇನು? ಇದಕ್ಕೂ ನಿರುಪಾಧಿಕ ವ್ಯಾಪಾರಕ್ಕೂ ಏನು ಸಂಬಂಧ? ಬೇಕಾದಷ್ಟು ಸಂಬಂಧವಿದೆ. ಏಕೆಂದರೆ, ಪೇಟೆ ಎಷ್ಟು ವಿಸ್ತಾರವೋ ಅದಕ್ಕೆ ತಕ್ಕಂತೆ ಶ್ರಮ ವಿಭಾಗ ಸಾಧ್ಯವಾಗುತ್ತದೆ, ಅಗತ್ಯವಾಗುತ್ತದೆ—ಎಂದು ಆಡಂ ಸ್ಮಿತ್ ಹೇಳಿದ: "ಪದಾರ್ಥ ವಿನಿಮಯ ಸಾಧ್ಯವಿದ್ದಾಗ ಶ್ರಮವಿಭಾಗ ಅಗತ್ಯವಾಗುತ್ತದೆ. ಈ ವಿನಿಮಯ ಎಷ್ಟೆಷ್ಟು ವಿಸ್ತೃತವಾಗಿ ನಡೆಯುವುದು ಸಾಧ್ಯವೋ ಅಷ್ಟೂ ಅಷ್ಟು ಶ್ರಮವಿಭಾಗ ಅವಶ್ಯ. ಎಂದರೆ ಮಾರಾಟದ ಪೇಟೆ ಎಷ್ಟು ವಿಸ್ತಾರವೋ ಅಷ್ಟರ ಮಟ್ಟಿಗೆ ಶ್ರಮ ವಿಭಾಗ ಸಾಧ್ಯ. ಪೇಟೆ ಬಹು ಸಣ್ಣದಾಗಿದ್ದರೆ, ಯಾರೊಬ್ಬನೂ ಒಂದೇ ಒಂದು ಕೆಲಸ ಮಾಡಲು, ಅದಕ್ಕೇ ತನ್ನ ಕಾಲ ಮೀಸಲಿಡಲು ಅಗತ್ಯವಾದ ಪ್ರೋತ್ಸಾಹವಿರುವುದಿಲ್ಲ. ಕಾರಣ ಇಷ್ಟೆ: ತಾನು ಅನುಭೋಗಿಸಲು ಎಷ್ಟು ಬೇಕೋ ಅದಕ್ಕಿಂತ ಹೆಚ್ಚಾಗಿ ಉತ್ಪಾದಿಸಿದರೆ, ಇವನಂತೆಯೇ ಇತರರೂ ದುಡಿದು ಪಡೆದ ಉತ್ಪನ್ನ ಭಾಗದೊಡನೆ ಇದನ್ನು ವಿನಿಮಯ ಮಾಡುವುದು ಇವನಿಗೆ ಸಾಧ್ಯವಿಲ್ಲ."[1]

ಶ್ರಮವಿಭಾಗದಿಂದ ಹೆಚ್ಚು ಉತ್ಪಾದನೆ ಸಾಧ್ಯ. ಪೇಟೆ ಎಷ್ಟು ವಿಸ್ತಾರವೋ ಅಷ್ಟರ ಮಟ್ಟಿಗೆ ಶ್ರಮವಿಭಾಗ ಸಾಧ್ಯ. ಎಂದರೆ ಪೇಟೆ ಎಷ್ಟೊ ಎಷ್ಟು ವಿಸ್ತರಿಸುತ್ತದೋ ಅಷ್ಟೂ ಅಷ್ಟು ಶ್ರಮವಿಭಾಗ ಹೆಚ್ಚುತ್ತದೆ, ಉತ್ಪಾದನ ಸಾಮರ್ಥ್ಯ ಹೆಚ್ಚುತ್ತದೆ. ನಿರುಪಾಧಿಕ ವ್ಯಾಪಾರದಿಂದ ಪೇಟೆ ವಿಸ್ತರಿಸುವುದರಿಂದ, ಉತ್ಪಾದನವೂ ಹೆಚ್ಚುತ್ತದೆ. ಆದ್ದರಿಂದ ನಿರುಪಾಧಿಕ ವ್ಯಾಪಾರ ಸ್ವಾಗತಾರ್ಹ.

ಈ ವಾದ ತುಂಬಾ ತೊಡಕಿನದೆನಿಸಬಹುದು. ಇದನ್ನು ಸರಳವಾಗಿ ಹೀಗೆ ಹೇಳಬಹುದು:—

೧. ಶ್ರಮ ವಿಭಾಗದಿಂದ ಉತ್ಪಾದನ ಸಾಮರ್ಥ್ಯ ಹೆಚ್ಚುತ್ತದೆ.

೨. ಪೇಟೆ ಎಷ್ಟು ವಿಸ್ತೃತವೋ ಅಥವಾ ಸಂಕುಚಿತವೋ ಅದಕ್ಕನುಗುಣವಾಗಿ ಶ್ರಮ ವಿಭಾಗವೂ ವಿಸ್ತೃತ ಅಥವಾ ಸಂಕುಚಿತವಾಗುತ್ತದೆ.

೩. ನಿರುಪಾಧಿಕ ವ್ಯಾಪಾರದಿಂದ ಪೇಟೆ ಪರಮಾವಧಿ ವಿಸ್ತೀರ್ಣ ಹೊಂದುತ್ತದೆ.

**ಆದ್ದರಿಂದ**—ನಿರುಪಾಧಿಕ ವ್ಯಾಪಾರದಿಂದ ಉತ್ಪಾದನ ಸಾಮರ್ಥ್ಯವೂ ಹೆಚ್ಚುತ್ತದೆ.

ಇನ್ನೊಂದು ವಿಚಾರ. ಹಲವು ದೇಶಗಳ ನಡುವೆ ನಿರುಪಾಧಿಕ ವ್ಯಾಪಾರ ನಡಸುವುದೆಂದರೆ ಶ್ರಮ ವಿಭಾಗವನ್ನು ಪರಮಾವಧಿಗೆ ಮುಟ್ಟಿಸಿದಂತೆ. ಇದರ ಅನುಕೂಲಗಳೂ ಕೂಡ, ಆಡಂ ಸ್ಮಿತ್ ವರ್ಣಿಸಿದ ಗುಂಡುಸೂಜಿ ತಯಾರಿಸುವ ಕಾರ್ಖಾನೆಯೊಳಗೆ ಇರುವ ಶ್ರಮ ವಿಭಾಗದಂತೆಯೇ. ಪ್ರತಿಯೊಂದು ದೇಶವೂ ಯಾವ ಪದಾರ್ಥಗಳನ್ನು ಬಹು ಅಗ್ಗ

---

[1] *Ibid.*, vol. I, p. 19.

ವಾಗಿ ತಯಾರಿಸಬಹುದೋ ಆ ಪದಾರ್ಥಗಳನ್ನೇ ಅದು ತಯಾರಿಸಲು ಸಾಧ್ಯವಾಗುತ್ತದೆ. ಇಡೀ ಪ್ರಪಂಚದ ಒಟ್ಟು ಸಂಪತ್ತು ಇದರಿಂದ ಹೆಚ್ಚುತ್ತದೆ.

ಈ ಅಧ್ಯಾಯದ ಪ್ರಾರಂಭದಲ್ಲಿ ಆಡಂ ಸ್ಮಿತ್ತನ ಪರಿಚಯ ಮಾಡಿಸಿಕೊಟ್ಟಾಗ ಇವನು ಧನಪ್ರಭುತ್ವ ವಾದದ ವಿರುದ್ಧ ಬಂಡಾಯಗಾರನೆಂದು ಹೇಳಿದೆವು. ಕೈಗಾರಿಕೆಯ ನಡುವೆ ಪ್ರವೇಶಿಸುವ ವಿಚಾರವಾಗಿ ಇವನು ಹೇಳಿದ್ದಾದರೂ ಏನು ? ಕೈಗಾರಿಕೆಯಲ್ಲಿ ಸರಕಾರ ತಲೆ ಹಾಕುವುದು ಅಪರಾಧ—ಎನ್ನುತ್ತಾನೆ ಇವನು. ಕೈಗಾರಿಕೆಗೆ ಸ್ವಾತಂತ್ರ್ಯ ಇರ ಬೇಕಾದದ್ದು ಅಗತ್ಯ ಎಂದು ಇವನು ಹೇಳುತ್ತಾನೆ. ಇವನ ಮಾತನ್ನೇ ಓದಿ : "ಯಾವುದಾದರೊಂದು ಬಗೆಯ ಕೈಗಾರಿಕೆಯಲ್ಲಿ ಸಮಾಜದಿಂದ ಸಹಜವಾಗಿ ಎಷ್ಟು ಬಂಡವಾಳ ವಿನಿಯೋಗವಾಗುವುದೋ, ಅದಕ್ಕಿಂತ ಹೆಚ್ಚು ಬಂಡವಾಳ ಆ ಕೈಗಾರಿಕೆಗೆ ಹೋಗುವಂತೆ ಮಾಡಲು ಸರಕಾರ ಅಸಾಧಾರಣ ಪ್ರೋತ್ಸಾಹ ನೀಡಬಾರದು. ಇನ್ನೊಂದು ಬಗೆಯ ಕೈಗಾರಿಕೆಯಲ್ಲಿ ಸಹಜವಾಗಿ ಎಷ್ಟು ಬಂಡವಾಳ ವಿನಿಯೋಗವಾಗುವುದೋ ಅಷ್ಟು ಅದಕ್ಕೆ ಹೋಗದಂತೆ ಅಸಾಧಾರಣ ನಿರ್ಬಂಧ ಹಾಕಲೂಬಾರದು. ಇಂಥ ಯಾವ ವ್ಯವಸ್ಥೆಯೂ ಸರಿಯಲ್ಲ. ಇಂಥ ವ್ಯವಸ್ಥೆ ವಾಸ್ತವವಾಗಿ ಯಾವ ಉದ್ದೇಶ ಸಫಲಗೊಳಿಸ ಬಯಸುವುದೋ ಆ ಉದ್ದೇಶಕ್ಕೆ ಇದರಿಂದ ಭಂಗವೇ ಉಂಟಾಗುತ್ತದೆ. ನಿಖರವಾದ ಸಂಪತ್ತು ಮಹತ್ವಗಳ ಕಡೆಗೆ ಸಮಾಜ ಮುಂದುವರಿಯದಂತೆ ಇದು ಆತಂಕವನ್ನೊಡ್ಡುತ್ತದೆ. ಆ ದೇಶದ ನೆಲದಿಂದಲೂ ಶ್ರಮದಿಂದಲೂ ಬರುವ ವಾರ್ಷಿಕ ಉತ್ಪಾದನೆಯ ನಿಜವಾದ ಮೌಲ್ಯವನ್ನು ಹೆಚ್ಚಿಸುವ ಬದಲು ಅದನ್ನು ತಗ್ಗಿಸುತ್ತದೆ....

"ರಿಯಾಯಿತಿ ತೋರಿಸುವ ಅಥವಾ ನಿರ್ಬಂಧ ಹಾಕುವ ಎಲ್ಲ ಕ್ರಮಗಳನ್ನೂ ಸಂಪೂರ್ಣವಾಗಿ ನಿವಾರಿಸಿದರೆ ಆಗ ಸಹಜ ಸ್ವಾತಂತ್ರ್ಯದ ಸ್ಪಷ್ಟ ಸರಳ ವ್ಯವಸ್ಥೆಯೊಂದು ತಾನಾಗಿಯೇ ಏರ್ಪಡುತ್ತದೆ. ಪ್ರತಿಯೊಬ್ಬನೂ ನ್ಯಾಯನಿಬಂಧನೆಗಳನ್ನು ಉಲ್ಲಂಘಿಸದೆ ಇರುವವರೆಗೂ, ತನ್ನ ಹಿತಸಾಧನೆಗೆ ತನಗೆ ಸರಿಕಂಡ ಮಾರ್ಗ ಅನುಸರಿಸುವುದಕ್ಕೂ ಸಂಪೂರ್ಣ ಸ್ವಾತಂತ್ರ್ಯ ಅವನಿಗಿದೆ. ತನ್ನ ಕೈಗಾರಿಕೆ, ಬಂಡವಾಳ ಇವು ಇತರರೊಡನೆಯೋ, ಇತರರ ವ್ಯವಸ್ಥೆಯೊಡನೆಯೋ ಸ್ಪರ್ಧಿಸುವಂತೆ ಮಾಡುವುದಕ್ಕೂ ಪರಿಪೂರ್ಣ ಸ್ವಾತಂತ್ರ್ಯ ಹೊಂದಿದ್ದಾನೆ."[1]

ಮೇಲೆ ಕೊಟ್ಟಿರುವ ಕೊನೆಯ ವಾಕ್ಯವನ್ನು ಮತ್ತೊಮ್ಮೆ ಓದಿ. ವ್ಯಾಪಾರ ಮುಂದು ವರಿಯಬೇಕೆಂಬ ಆಕಾಂಕ್ಷೆ ಹೊಂದಿದ್ದ ಕಾಲದಲ್ಲಿ, ಹೆಜ್ಜೆಹೆಜ್ಜೆಗೂ ಎದುರಿಸಬೇಕಾಗಿದ್ದ ನಿರ್ಬಂಧಗಳ ಕೋಟಲೆಯಿಂದ ಅದು ಸಹನೆ ಕಳೆದುಕೊಂಡಿದ್ದ ಕಾಲದಲ್ಲಿ, ಆಡಂ ಸ್ಮಿತ್ತನ "ರಾಷ್ಟ್ರಗಳ ಸ್ವಾತಂತ್ರ್ಯ" ಎಂಬ ಗ್ರಂಥ ಆ ಕಾಲದ ವ್ಯಾಪಾರಿಗಳ ವೇದವೆನಿಸಿದ್ದು ಏಕೆಂಬ ವಿಚಾರ ಆಗ ನಿಮಗೆ ಸುಲಭ ವೇದ್ಯವಾಗುತ್ತದೆ.

---

[1] *Ibid.*, vol. 2, p. 184.

## ೧೩. “ಹಳೆಯ ವ್ಯವಸ್ಥೆ ಬದಲಾಗಲೇ ಬೇಕು”

ಬಡವರಿಗೆ ತೆರಿಗೆ ಹಾಕಿ ಧನಿಕರನ್ನು ಬಿಡುವ ಸರಕಾರವೊಂದಿದೆಯೆಂದು ಭಾವಿಸೋಣ. ಅದರ ಬಗ್ಗೆ ನಿಮ್ಮ ಅಭಿಪ್ರಾಯವೇನು? ಬರೀ ಹುಚ್ಚು—ಎಂದು ತಕ್ಷಣ ನೀವು ಹೇಳುತ್ತೀರಿ. ಆದರೆ ಕ್ಷಣಕಾಲ ಯೋಚಿಸಿದರೆ, ಸಂಯುಕ್ತ ಸಂಸ್ಥಾನ ಇಂದು ಸ್ವಲ್ಪಮಟ್ಟಿಗೆ ಹೀಗೆ ಮಾಡುತ್ತಿದೆಯೆಂಬ ವಿಚಾರ ನಿಮಗೆ ಭಾಸವಾಗಬಹುದು. ಈ ವಿಚಾರವಾಗಿ ನಿಮ್ಮೊಡನೆ ತೀವ್ರವಾಗಿ ವಾದಿಸುವ ಜನರೂ ಹಲವರುಂಟು. ಧನಿಕರು ತಾವು ನ್ಯಾಯವಾಗಿ ಕೊಡಬೇಕಾದ್ದಕ್ಕಿಂತ ಹೆಚ್ಚು ತೆರಿಗೆ ಕೊಡುತ್ತಿರುವರೆಂದು ಸಾಧಿಸಲು ಇವರು ಯತ್ನಿಸಬಹುದು. ಆದರೆ ಹದಿನೆಂಟನೆಯ ಶತಮಾನದಲ್ಲಿ ಫ್ರೆಂಚ್ ಸರಕಾರ ಧನಿಕರಿಗೆ ತೆರಿಗೆ ಹಾಕದೆ, ಬಡವರಿಗೆ ತೆರಿಗೆ ವಿಧಿಸಿತೆಂಬುದು ನಿರ್ವಿವಾದ.

ಈ ಬಗ್ಗೆ ವಾದವಿಲ್ಲದ್ದಕ್ಕೆ ಕಾರಣವಿಷ್ಟೆ: ಆ ಕಾಲದಲ್ಲಿ ಜಾರಿಯಲ್ಲಿದ್ದ ಬಹುತೇಕ ಎಲ್ಲ ತೆರಿಗೆಗಳಿಂದಲೂ ತಮಗೆ ವಿನಾಯಿತಿಯಿದೆಯೆಂದು ಅನುಕೂಲಸ್ಥರೇ ಒಪ್ಪಿಕೊಂಡಿದ್ದರು. ಸಾಮಾನ್ಯರಂತೆ ತಾವೂ ತೆರಿಗೆ ಕೊಡಬೇಕಾಗಿ ಬಂದರೆ ಫ್ರಾನ್ಸಿಗೆ ಅಳಿಗಾಲ ಬಂದಂತೆಯೇ ಸರಿ—ಎಂದು ಪಾದ್ರಿಗಳೂ ಶ್ರೀಮಂತರೂ ಭಾವಿಸಿದ್ದರು. ಫ್ರೆಂಚ್ ಸರಕಾರದ ವೆಚ್ಚ ವೇಗವಾಗಿ ಹೆಚ್ಚುತ್ತಾ ನಡೆದು, ಅದರ ವೆಚ್ಚ ಏರುತ್ತಿದ್ದ ವೇಗದಲ್ಲೇ ಅದರ ಆಯವೂ ಏರದೆ ಹೋದಾಗ, ಅದರ ಆಯ ವ್ಯಯಕ್ಕಿಂತ ಬಹು ಹಿಂದೆ ಬಿದ್ದಾಗ, ಅದರ ಹಣಕಾಸಿನ ಸ್ಥಿತಿ ಬಹು ಹೀನಗೊಂಡಾಗ, ಧನಿಕರು ಬಡವರು ಮುಂತಾಗಿ ಎಲ್ಲರ ಮೇಲೂ ತೆರಿಗೆ ಹಾಕುವುದೊಂದೇ ಉಪಾಯ—ಎಂದು ಕೆಲವರು ಫ್ರೆಂಚರು ಭಾವಿಸಿದ್ದರು. ೧೭೭೬ರಲ್ಲಿ ಫ್ರಾನ್ಸಿನ ವಿತ್ತಮಂತ್ರಿಯಾಗಿದ್ದ ಟರ್ಗಾಟ್ ಎಂಬವನು ತೆರಿಗೆ ವ್ಯವಸ್ಥೆಯಲ್ಲಿ ಹಲವು ಆವಶ್ಯಕ ಸುಧಾರಣೆಗಳನ್ನು ತಂದ. ಆದರೆ ಅನುಕೂಲಸ್ಥರಿಗೆ ಇದು ಯಾವುದೂ ಬೇಕಾಗಿರಲಿಲ್ಲ. ತಮ್ಮ ವಾದವನ್ನು ಸಮರ್ಥಿಸಲು ಇವರು ಪ್ಯಾರಿಸಿನ ಶಾಸನ ಸಭೆಯನ್ನು ಎತ್ತಿ ಕಟ್ಟಿದರು. “ಪ್ರತಿಯೊಬ್ಬನ ಸ್ವತ್ತೂ ಅವನವನಿಗೆ ಉಳಿಯುವಂತೆ ಮಾಡುವುದು ಮೊದಲನೆಯ ನ್ಯಾಯ ನಿಬಂಧನೆ. ಆಸ್ತಿಯ ಹಕ್ಕನ್ನು ಉಳಿಸುವುದಷ್ಟೇ ಅಲ್ಲ. ಹುಟ್ಟು ಅಂತಸ್ತುಗಳ ಫಲವಾಗಿ ಯಾವುದು ಅವನಿಗೆ ಸೇರಿದ್ದೋ ಅವನ್ನೂ ಉಳಿಸುವುದು ಇನ್ನೂ ಮುಖ್ಯವಾದದ್ದು....ನೀತಿ ಕಟ್ಟಳೆಗಳ ಈ ನಿಬಂಧನೆಯಿಂದ ಒಂದು ವಿಚಾರ ಸ್ಪಷ್ಟಪಡುತ್ತದೆ: ಮಾನವಾನುಕಂಪ ಉಪಕೃತಿಗಳ ಸೋಗಿನಲ್ಲಿ ಕರ್ತವ್ಯ ಸಮಾನತೆ ಸ್ಥಾಪಿಸಿ, ಮೇಲುಕೀಳೆಂಬ ಭಾವವನ್ನೇ ನಾಶಪಡಿಸುವ ಇಂಥ ವ್ಯವಸ್ಥೆಯಿಂದ ಅನಾಯಕತ್ವಕ್ಕೆ ಎಡೆಯುಂಟಾಗುತ್ತದೆ. (ಸಮಾನತೆಯ ಅಂತಿಮ ಪರಿಣಾಮ ಇದೇ.) ನಾಗರಿಕ ಸಮಾಜವೇ ಇದರಿಂದ ಉರುಳೀತು. ಹಲವು ಪ್ರತ್ಯೇಕ ವರ್ಗಗಳಿಂದ ಕೂಡಿದೆ, ಫ್ರೆಂಚ್ ರಾಜಪ್ರಭುತ್ವ. ಅದರ ಸಂವಿಧಾನ ಹೀಗಿದೆ. ಮತಬೋಧೆ ಹಾಗೂ ದೈವಾರಾಧನೆಗೆ ಸಂಬಂಧಿಸಿದ ಕರ್ತವ್ಯಗಳ ನಿರ್ವಹಣೆಯೇ ಪುರೋಹಿತವರ್ಗ ಸಲ್ಲಿಸಬೇಕಾದ ಸೇವೆ. ರಾಷ್ಟ್ರ

ರಕ್ಷಣೆಗಾಗಿ ರಕ್ತ ಚೆಲ್ಲುವ, ರಾಜನಿಗೆ ಸೂಕ್ತ ಸಲಹೆ ನೀಡುವ ಕರ್ತವ್ಯ ಶ್ರೀಮಂತರದು. ದೊರೆಗೆ ಇಂಥ ವಿಶಿಷ್ಟ ಸೇವೆ ಸಲ್ಲಿಸಲಾರದ ಕೆಳವರ್ಗದ ಜನ ದೊರೆಗೆ ಕಾಣಿಕೆ, ಕೈಗಾರಿಕೆ, ದೈಹಿಕ ದುಡಿಮೆ ಇವುಗಳನ್ನು ಸಲ್ಲಿಸಿ ಕೃತಾರ್ಥರಾಗುತ್ತಾರೆ. ಈ ವ್ಯತ್ಯಾಸಗಳನ್ನು ರದ್ದು ಮಾಡುವುದೆಂದರೆ ಇಡೀ ಫ್ರೆಂಚ್ ಸಂವಿಧಾನವನ್ನೇ ಕಿತ್ತೊಗೆದಂತೆ."[1]

ಪುರೋಹಿತರೂ ಶ್ರೀಮಂತರೂ ಅನುಕೂಲ ವರ್ಗಗಳಿಗೆ ಸೇರಿದವರಾಗಿದ್ದರು. ಇವರು ಕ್ರಮವಾಗಿ ಪ್ರಥಮ ಹಾಗೂ ದ್ವಿತೀಯ ವರ್ಗಗಳವರೆಂದು ಕರೆಯಲ್ಪಡುತ್ತಿದ್ದರು. ಪುರೋಹಿತ ವರ್ಗದ ಜನರ ಒಟ್ಟು ಸಂಖ್ಯೆ ೧,೩೦,೦೦೦ ; ಶ್ರೀಮಂತರದು ೧,೪೦,೦೦೦. ಇವರನ್ನು ಅನುಕೂಲಸ್ಥರ ವರ್ಗವೆಂದು ಕರೆದರೂ ಇವರೆಲ್ಲ ಧನಿಕರೆಂದೂ, ಇವರಲ್ಲಿ ಯಾರೂ ದುಡಿಯುತ್ತಿರಲಿಲ್ಲವೆಂದೂ ಹೇಳುವುದು ತಪ್ಪು. ಬಡ ಪುರೋಹಿತ ಜನರೂ ಬಡ ಕುಲೀನರೂ ಇದ್ದುದುಂಟು. ಬಹು ಧನಿಕರಾದ ಧರ್ಮಗುರುಗಳೂ ಶ್ರೀಮಂತರೂ ಇದ್ದರು. ಕಷ್ಟಪಟ್ಟು ದುಡಿಯುತ್ತಿದ್ದ ಚರ್ಚಿಗರೂ ಕುಲೀನರೂ ಇದ್ದರು. ಚರ್ಚಿನಲ್ಲೂ ಕುಲೀನರಲ್ಲೂ ವೈಗಳ್ಳರೂ ನಿರುಪಯೋಗಿಗಳೂ ಇದ್ದರು. ನಡುವೆ ಇನ್ನೂ ನಾನಾ ಬಗೆಯ ಜನ ಇದ್ದರು.

ಸಾಮಾನ್ಯ ಪ್ರಜೆಗಳಿಗೆ ಯಾವ ರಿಯಾಯಿತಿಯೂ ಇರಲಿಲ್ಲ. ಇವರದು ತೃತೀಯ ವರ್ಗ. ಫ್ರಾನ್ಸಿನ ಆಗಿನ ೨,೫೦,೦೦,೦೦೦ ಪ್ರಜಾಸಂಖ್ಯೆಯಲ್ಲಿ ಶೇಕಡ ೯೫ರಷ್ಟು ಜನ ಈ ವರ್ಗಕ್ಕೆ ಸೇರಿದ್ದವರು. ಉನ್ನತ ವರ್ಗದ ಜನರ ಸಂಪತ್ತಿನಲ್ಲೂ ಆಚಾರಗಳಲ್ಲೂ ವ್ಯತ್ಯಾಸಗಳಿದ್ದಂತೆ ಸಾಮಾನ್ಯ ಜನರಲ್ಲೂ ಇದ್ದುವು. ಇವರ ಪೈಕಿ ಸುಮಾರು ೨,೫೦,೦೦೦ ಜನ ಮೇಲಣ ಮಧ್ಯಮ ವರ್ಗಕ್ಕೆ ಸೇರಿದ್ದವರು. ಇವರನ್ನು ಬೂರ್ಷ್ವಾಸೀ ಎನ್ನುವರು. ತೃತೀಯ ವರ್ಗದ ಇತರರೊಡನೆ ಹೋಲಿಸಿದರೆ ಇವರು ಅನುಕೂಲಸ್ಥರಾಗಿಯೇ ಇದ್ದರು. ನಗರಗಳಲ್ಲಿ ವಾಸಿಸುತ್ತಿದ್ದ ಕುಶಲ ಕರ್ಮಿಗಳದು ಇನ್ನೊಂದು ವರ್ಗ. ಇವರ ಸಂಖ್ಯೆ ೨೫,೦೦,೦೦೦. ಉಳಿದವರು—ಸುಮಾರು ೨,೨೦,೦೦,೦೦೦ ಮಂದಿ—ರೈತರು, ನೆಲದ ಮೇಲೆ ದುಡಿಯುತ್ತಿದ್ದವರು. ಇವರು ಸರಕಾರಕ್ಕೆ ತೆರಿಗೆ ಕೊಡುತ್ತಿದ್ದರು ; ಪುರೋಹಿತರಿಗೆ ದಶಾಂಶ ಕೊಡುತ್ತಿದ್ದರು. ಶ್ರೀಮಂತರಿಗೆ ಊಳಿಗಮಾನ್ಯ ವಂತಿಗೆ ತೆರುತ್ತಿದ್ದರು.

ವರಮಾನಕ್ಕೆ ತಕ್ಕಂತೆ ವೆಚ್ಚ ಸರಿಪಡಿಸಿಕೊಳ್ಳುವುದು ನಿಮ್ಮ ನಮ್ಮ ವಾಡಿಕೆಯಲ್ಲವೆ ? ಸರಕಾರಗಳೂ ಸಾಮಾನ್ಯವಾಗಿ ಹೀಗೆಯೇ ನಡೆಯುತ್ತವೆ. ಆದರೆ ಹದಿನೆಂಟನೆಯ ಶತಮಾನದಲ್ಲಿ ಫ್ರೆಂಚ್ ಸರಕಾರ ಈ ರೀತಿ ಮಾಡಲಿಲ್ಲ. ಅದರದು ಇದಕ್ಕೆ ವ್ಯತಿರಿಕ್ತ ಮಾರ್ಗ. ಅದರ ವೆಚ್ಚದಲ್ಲಿ ವಿವೇಕವಿರಲಿಲ್ಲ, ಹಿಡಿತವಿರಲಿಲ್ಲ, ಕ್ರಮವಿರಲಿಲ್ಲ, ನೀತಿಯಿರಲಿಲ್ಲ. ಇದನ್ನು ಸಮರ್ಥಿಸಲು ಒಂದೇ ಒಂದು ದೃಷ್ಟಾಂತ ಸಾಕು. ಸರಕಾರದಿಂದ ವರ್ಷಾಶನ ಕೊಡುತ್ತಿದ್ದವರೆಲ್ಲರ ಪಟ್ಟಿಯಿದ್ದ ಕೆಂಪು ಪುಸ್ತಕವೊಂದಿತ್ತು. ಅದರಲ್ಲಿ ಡ್ಯೂಕ್ರೆಸ್ಟ್ ಎಂಬ ಹಜಾಮನೊಬ್ಬನ ಹೆಸರೂ ಇತ್ತು. ಇವನಿಗೆ ೧೭೦೦ ಲಿವ್ರೆ ವರ್ಷಾಶನ ಕೊಡಲು ಕಾರಣವೇನು ಗೊತ್ತೆ ? ಕಾಮ್ಟೆ ಡೀ ಆರ್ಟಾಯ್‌ಯ ಮಗಳ ತಲೆಗೂದಲ ಶೃಂಗಾರ ಮಾಡು

[1] C. D. Hazen, *The French Revolution*, vol. I, pp. 128, 129. Henry Holt and Company, Inc., N.Y., 1932.

ತ್ತಿದ್ದವನು ಅವನು. ಆ ಹುಡುಗಿಗೆ ತಲೆಗೂದಲು ಬೆಳೆಯುವ ಮುನ್ನವೇ, ಬಹು ಚಿಕ್ಕ ವಯಸ್ಸಿನಲ್ಲೇ, ಅವಳು ಸತ್ತಿದ್ದಳು. ಆದರೇನಂತೆ, ಈ ಕ್ಷೌರಿಕನಿಗೆ ಕೊಡುತ್ತಿದ್ದ ಸಂಭಾವನೆ ಯೇನೂ ತಪ್ಪಲಿಲ್ಲ. ಅವನಿಗೆ ವರ್ಷಾಶನ ಮಾತ್ರ ಬರುತ್ತಲೇ ಇತ್ತು.[1]

ಫ್ರಾನ್ಸಿನ ಹಣಕಾಸಿನ ನಿರ್ವಹಣೆಯ ಅವಿವೇಕತನದ ಒಂದೇ ಒಂದು ಉದಾಹರಣೆ ಇದು. ಇಂಥ ಸಾವಿರಾರು ದೃಷ್ಟಾಂತಗಳಿದ್ದುವು. ವರಮಾನಕ್ಕೆ ತಕ್ಕಂತೆ ವೆಚ್ಚ ನಿರ್ಧರಿಸುವ ಬದಲು ವೆಚ್ಚಕ್ಕೆ ತಕ್ಕಂತೆ ವರಮಾನ ನಿರ್ಣಯಿಸಬೇಕಾಗಿತ್ತು. ಹೀಗೆ ಧಾರಾಳವಾಗಿ, ಹುಚ್ಚು ಹುಚ್ಚಾಗಿ ಹಣ ವೆಚ್ಚ ಮಾಡುತ್ತಿದ್ದುದರಿಂದ ತೆರಿಗೆಯಿಂದ ಹೆಚ್ಚು ಹಣ ವಸೂಲು ಮಾಡಬೇಕಾಗುತ್ತಿತ್ತು. ಶ್ರೀಮಂತ ವರ್ಗದ ಜನ ತಮ್ಮ ಮೇಲೆ ಯಾವ ತೆರಿಗೆಯನ್ನೂ ಹಾಕಗೊಡುತ್ತಿರಲಿಲ್ಲ. (ಪ್ರತಿಯಾಗಿ ತಮ್ಮದೇ ಆದ ತೆರಿಗೆಗಳನ್ನು ಬಡ ಜನರ ಮೇಲೆ ಹೊರಿಸುತ್ತಿದ್ದರು.) ತೃತೀಯ ವರ್ಗದ ಧನಿಕರೂ ಕುಟಿಲ ಮಾರ್ಗದಿಂದ ನೇರ ತೆರಿಗೆ ತಪ್ಪಿಸಿ ಕೊಳ್ಳುತ್ತಿದ್ದರು. ಆದ್ದರಿಂದ ಇಡೀ ತೆರಿಗೆಯ ಭಾರ ಬಡಜನರ ಮೇಲೆ ಬಿದ್ದಿತ್ತು. ಇದು ಬಹು ದೊಡ್ಡ ಭಾರ. ನಡು ಬಗ್ಗಿಸಿ, ಬೆನ್ನ ಮೇಲೆ ದೊರೆ ಪುರೋಹಿತ ಶ್ರೀಮಂತರನ್ನು ಹೊತ್ತ ರೈತನ ದೈನ್ಯ ಚಿತ್ರ ಆ ಕಾಲಕ್ಕೆ ಒಪ್ಪುತ್ತಿತ್ತು.

ಡೀ ಟಾಕ್ವಿಲ್ ಎಂಬ ಪ್ರಸಿದ್ಧ ಫ್ರೆಂಚನೊಬ್ಬ ಕಷ್ಟಪಟ್ಟು ದುಡಿಯುವ ರೈತನ ನಿತ್ಯ ಜೀವನದಲ್ಲಿ ಈ ತೆರಿಗೆಯ ಹೊರೆ ಎಷ್ಟಿತ್ತೆಂಬುದನ್ನು ವರ್ಣಿಸಿದ್ದಾನೆ. "ಹದಿನೆಂಟನೆಯ ಶತಮಾನದ ರೈತನೊಬ್ಬ, ನೆಲ ಹೊಂದಬೇಕೆಂಬ ಪ್ರಬಲೇಚ್ಛೆಯಿಂದ, ತಾನು ಕೂಡಿಟ್ಟ ಹಣವನ್ನೆಲ್ಲ ತೆತ್ತು ಜಮೀನು ಕೊಳ್ಳುವನು....ಈ ಜಮೀನು ಕೊಂಡದ್ದು ಊರ್ಜಿತವಾಗ ಬೇಕಾದರೆ ಇವನು ತೆರಿಗೆ ಬೇರೆ ಕೊಡಬೇಕು....ಕೊನೆಗೂ ಇವನು ನೆಲದೊಡೆಯನಾಗು ವನು. ಇವನು, ಬಿತ್ತಿದ ಬೀಜದಲ್ಲೇ ತನ್ನ ಹೃದಯವನ್ನು ನೆಡುತ್ತಾನೆ....ಆದರೆ ಉಳುತ್ತಿರುವ ನೇಗಿಲ ಸಾಲಿನಿಂದ ಇವನನ್ನು ಮತ್ತೆ ಸೆಳೆಯುತ್ತಾರೆ ಈ ನೆರೆಯವರು. ಇವರಿಗಾಗಿ ಅವನು ಉಚಿತ ಸೇವೆ ಸಲ್ಲಿಸಲೇ ಬೇಕು. ಇವರ ಆಕಳು ಅವನ ನೆಲ ಮೇಯದಂತೆ ಅವನು ಹೆಣಗ ಬೇಕು. ಆದರೆ ಮತ್ತೆ ಇವರು ಅಡ್ಡ ಬರುವರು; ಹೊಳೆ ದಾಟ ಇವನು ಬರುವಾಗ ಕಾಯ್ದಿದ್ದು, ಸುಂಕ ಕೇಳುವರು; ಅವನು ಬೆಳೆದದ್ದನ್ನು ಸಂತೆಯಲ್ಲಿ ಮಾರುವ ಹಕ್ಕು ಪಡೆಯಲೂ ಸುಂಕ ತೆರಬೇಕು. ಅಂತೂ ಅವನು ಮನೆಗೆ ಮರಳುವನು. ಆದರೆ ತನಗಾಗಿ ಉಳಿದ ಗೋಧಿ ಯನ್ನೂ ಅವನು ಬಳಸುವಂತಿಲ್ಲ. ಅದನ್ನು ಅವನು ಇವರ ಗಿರಣಿಯಲ್ಲಿ ಹಿಟ್ಟು ಮಾಡಿಸ ಬೇಕು, ಇವರ ಅಡುಮನೆಯಲ್ಲಿ ರೊಟ್ಟಿ ಸುಡಿಸಬೇಕು. ಅವನ ಪುಟ್ಟ ಆಸ್ತಿಯ ವರಮಾನ ದಲ್ಲೊಂದು ಭಾಗ ಮತ್ತೆ ಇವರಿಗೇ ಸೇರಬೇಕು—ಬಿಡುಗಡೆಯ ಕಂದಾಯ' ಕೊಡಬೇಕು. ....ಅವನು ಏನೇ ಮಾಡಲಿ, ಈ ನಕ್ಷತ್ರಿಕರು ಅವನ ಬಳಿ ಸದಾ ಸಿದ್ಧ....ಇವರಿಗೆಲ್ಲ ತೆತ್ತು, ಬಿಡುಗಡೆಯ ನಿಟ್ಟುಸಿರು ಬಿಟ್ಟನೋ ಇಲ್ಲವೋ, ನಮ್ಮ ಗೆಳೆಯರು, ಕಪ್ಪು ಪೋಷಾಕಿನ ಪಾದ್ರಿಗಳು, ಚರ್ಚಿನ ಕವಚ ತೊಟ್ಟು ಹಾಜರಾದರೆಂದೇ ಇಟ್ಟುಕೊಳ್ಳಿ—ಅವನ ಬೆಳಸಿನ

---

[1] Cf. *Cambridge Modern History*, vol. VIII, p. 72.

ಲಾಭ ಗಿಟ್ಟಿಸಿಕೊಳ್ಳಲು. ಮಧ್ಯಯುಗ ವ್ಯವಸ್ಥೆಯ ಒಂದು ಭಾಗವೇನೋ ನಾಶ ಹೊಂದಿತು. ಆದರೆ ಸಾಯದೆ ಉಳಿದುಕೊಂಡ ಸಂಸ್ಥೆಗಳು ನೂರು ಮಡಿ ಕಠೋರವಾಗಿ ಪರಿಣಮಿಸಿದುವು."[1]

ಆದರೆ ಇದು ಹನ್ನೊಂದನೆಯ ಶತಮಾನದ ಊಳಿಗ ಮಾನ್ಯ ವ್ಯವಸ್ಥೆಯ ವರ್ಣನೆಯಂತೆ ಕಾಣುವುದಲ್ಲವೆ? ಇದಾದ ಅನಂತರ ಉರುಳಿಹೋದ ಏಳು ಶತಮಾನಗಳಲ್ಲಿ ಏನೂ ವ್ಯತ್ಯಾಸವೇ ಆಗಲಿಲ್ಲವೆ? ವ್ಯತ್ಯಾಸವೇನೋ ಆಗಿತ್ತು. ಫ್ರಾನ್ಸಿನಲ್ಲಿ ಹದಿನೆಂಟನೆಯ ಶತಮಾನದಲ್ಲಿದ್ದ ೨,೩೦,೦೦,೦೦೦ ರೈತರ ಪೈಕಿ ಕೇವಲ ೧೦,೦೦,೦೦೦ ಜನ ಮಾತ್ರ ಹಳೆಯ ರೀತಿಯ ಜೀತಗಾರರಾಗಿದ್ದರು. ಉಳಿದವರು ಜೀತದ ಸ್ಥಿತಿಯಿಂದ ಏರಿ ಸ್ವಾತಂತ್ರ್ಯ ಗಳಿಸಿದ್ದರು. ಆದರೆ ಹಳೆಯ ಊಳಿಗ ಪದ್ಧತಿಯ ಎಲ್ಲ ಶುಲ್ಕಗಳೂ ರದ್ದಾಗಿರಲಿಲ್ಲ; ಕೆಲವು ರದ್ದಾಗಿದ್ದುವು. ಹಲವು ಉಳಿದುಕೊಂಡೇ ಬಂದುವು. ಅವು ಜಾರಿಗೆ ಬರಲು ಮೂಲತಃ ಇದ್ದ ಕಾರಣಗಳೆಲ್ಲ ರದ್ದಾಗಿದ್ದರೂ, ಈ ಶುಲ್ಕಗಳು ಮಾತ್ರ ಮುಂದುವರಿದುವು. ಊಳಿಗ ಮಾನ್ಯ ಯುಗದಲ್ಲಿ ಶುಲ್ಕ, ಸೇವೆ, ಇವನ್ನು ಪಡೆಯುತ್ತಿದ್ದ ಶ್ರೀಮಂತರು ಈಗ ಸೇನೆಯ ರಕ್ಷಣೆ ನೀಡುತ್ತಿರಲಿಲ್ಲ. ರಾಜನ ಸೇನೆಯಲ್ಲಿ ಇವರದೇನೂ ಪಾತ್ರವಿರಲಿಲ್ಲ. ಇವರ ಕ್ಷಾತ್ರ ಧರ್ಮ ಎಂದೋ ಹೊರಟುಹೋಗಿತ್ತು. ಆದರೆ ಇದಕ್ಕಾಗಿ ರೈತರಿಂದ ಪಡೆಯುತ್ತಿದ್ದ ಶುಲ್ಕ ಮಾತ್ರ ಉಳಿದುಕೊಂಡು ಬಂತು. ಇವರು ನೆಲ ಉಳುತ್ತಿರಲಿಲ್ಲ. ಇವರೆಲ್ಲರೂ ವ್ಯಾಪಾರದಲ್ಲಿ ನಿರತರಾಗಿರಲಿಲ್ಲ. ಆರ್ಥಿಕ ವ್ಯವಸ್ಥೆಯಲ್ಲಿ ಇವರದು ಯಾವ ಪಾತ್ರವೂ ಇರಲಿಲ್ಲ. ಇವರೇನೂ ಕೊಡುತ್ತಿರಲಿಲ್ಲ; ಶುಲ್ಕ ಮಾತ್ರ ವಸೂಲು ಮಾಡುತ್ತಿದ್ದರು. ಸಾಮಾನ್ಯವಾಗಿ ಇವರು ವೈಗಳ್ಳರೂ, ಪರೋಪಜೀವಿಗಳೂ, ತಮ್ಮ ನೆಲದಿಂದ ದೂರದ ರಾಜಾಸ್ಥಾನದಲ್ಲಿ ಆಡಂಬರದ ಜೀವನ ನಡಸುತ್ತಿದ್ದ ದುಂದುಗಾರರೂ ಆಗಿದ್ದರು. ಆದರೂ ರೈತರಿಂದ ಶುಲ್ಕ, ಸೇವೆ ನಿರೀಕ್ಷಿಸುತ್ತಿದ್ದರು, ಪಡೆಯುತ್ತಿದ್ದರು. ಹೀಗೆ ಉಳಿದುಕೊಂಡು ಬಂದ ಈ ದುಷ್ಟ ಪದ್ಧತಿಯನ್ನು ರೈತರು ಸಹಜವಾಗಿ ವಿರೋಧಿಸಿದರು. ಹಿಂದೆ ಡೀ ಟಾಕ್ವಿಲ್ಲನ ಬರಹದಿಂದ ಉದ್ಧರಿಸಿ ಕೊಟ್ಟ ಮಾತುಗಳ ಕೊನೆಯ ವಾಕ್ಯದಲ್ಲಿ ಹೇಳಿರುವಂತೆ, ರೂಢಿಯಲ್ಲಿದ್ದ ಕೆಲವು ಶುಲ್ಕಗಳು ರದ್ದಾಗಿದ್ದುದೇ, ಉಳಿದವು ಇನ್ನೂ ಹೆಚ್ಚು ದ್ವೇಷಿಸಲ್ಪಡುತ್ತಿದ್ದುವೆಂಬುದಕ್ಕೆ ಸಾಕ್ಷಿ.

ಒಬ್ಬ ರೈತ ತನ್ನ ವರಮಾನದಲ್ಲಿ ಎಷ್ಟನ್ನು ತೆರಿಗೆಯ ರೂಪದಲ್ಲಿ ಕೊಡುತ್ತಿದ್ದ? ಇದಕ್ಕೆ ಉತ್ತರ ನಿಮ್ಮನ್ನು ಆಶ್ಚರ್ಯಗೊಳಿಸೀತು. ಅವನ ವರಮಾನದಲ್ಲಿ ಶೇಕಡ ಎಂಬತ್ತರಷ್ಟು ಭಾಗ ನಾನಾ ತೆರಿಗೆ ವಸೂಲಿಗಾರರ ಪಾಲಾಗುತ್ತಿತ್ತು. ಉಳಿದ ಶೇಕಡ ಇಪ್ಪತ್ತರಲ್ಲಿ ಅವನು ತನ್ನ ಸಂಸಾರಕ್ಕೆ ಅನ್ನ ಬಟ್ಟೆ ವಸತಿ ಒದಗಿಸಬೇಕಾಗಿತ್ತು. ರೈತ ಗೊಣಗುತ್ತಿದ್ದುದರಲ್ಲಿ ಏನು ಆಶ್ಚರ್ಯ? ಒಂದು ಸಾರಿ ಫಸಲು ಸರಿಯಾಗಿ ಬರದಿದ್ದರೂ ಆತ ಉಪವಾಸದ ಸೀಮೆಯನ್ನೇ ತಲುಪಬೇಕಾಗುತ್ತಿತ್ತು—ಎಂಬುದರಲ್ಲಿ ಏನು ಆಶ್ಚರ್ಯ? ಅನ್ನವಿಲ್ಲದೆ

---

[1] A. de Tocqueville, *The State of Society in France before the Revolution of 1789*, pp. 54, 55. Translated by H. Reeve. Murray, London, 1856.

ಹಸಿದ ಈ ಜನ ಭಿಕ್ಷುಕರಾಗಿ ಅಂಡಲೆಯುತ್ತಿದ್ದುದರಲ್ಲಿ ಏನಾಶ್ಚರ್ಯ?

೧೭೮೯ರಲ್ಲಿ ಫ್ರಾನ್ಸಿನ ಮಹಾಕ್ರಾಂತಿ ಏರ್ಪಟ್ಟಿತು—ಎಂದರೆ ರೈತ ಹದಿನೇಳನೆಯ ಶತಮಾನದಲ್ಲಿದ್ದುದಕ್ಕಿಂತ ಹದಿನೆಂಟನೆಯ ಶತಮಾನದಲ್ಲಿ ಹೆಚ್ಚು ದರಿದ್ರನಾಗಿದ್ದನೆಂದು ಭಾವಿಸಬೇಡಿ. ಹಾಗಾಗಿರಲಿಲ್ಲ. ಬಹುಶಃ ಅವನ ಸ್ಥಿತಿ ಉತ್ತಮವಾಗೇ ಇತ್ತು. ವಾಸ್ತವವಾಗಿ ರೈತರು ತೆರಬೇಕಾದ್ದೆಲ್ಲ ತೆತ್ತಮೇಲೆ ಉಳಿದದ್ದರಲ್ಲಿ ಚೂರುಪಾರು ಕೂಡಿಹಾಕಿದ್ದರು; ನೆಲ ಕೊಳ್ಳಲು ಸಾಕಷ್ಟು ಉಳಿಸಿದ್ದರು. ಮಹಾಕ್ರಾಂತಿಗೆ ಮುಂಚೆ ಸುಮಾರು ನೂರು ವರ್ಷಗಳಿಂದ ರೈತರು ಕ್ರಮೇಣ ನೆಲ ಕೊಳ್ಳುತ್ತಲೇ ಇದ್ದರು. ೧೭೮೯ ಬಂತು. ಆ ವೇಳೆಗೆ ಫ್ರಾನ್ಸಿನ ನೆಲದ ಮೂರರಲ್ಲೊಂದು ಭಾಗ ರೈತರ ಕೈಯಲ್ಲೇ ಇತ್ತು. ಇದರಿಂದ ಅವರ ಅತೃಪ್ತಿ ಉಲ್ಬಣಿಸಿತು. ಏಕೆ?

ಅವರಿಗೆ ನೆಲದ ಹಸಿವು ಹತ್ತಿತ್ತು. ಅವರ ಹಸಿವು ಸ್ವಲ್ಪ ಶಮನವಾಗಿತ್ತು. ಆದರೆ ಇದನ್ನು ಪೂರ್ತಿ ಅಡಗಿಸಲು ಅಡ್ಡಿಯಾಗಿದ್ದುದಾದರೂ ಯಾವುದು? ಅವರ ಮೇಲೆ ಸರಕಾರವೂ ಅನುಕೂಲಸ್ಥರೂ ಹೊರಿಸಿದ್ದ ಹೆಣಭಾರ. ಹಿಂದಿಗಿಂತ ಈಗ ಅವರಿಗೆ ಒಂದು ವಿಚಾರ ಸ್ಪಷ್ಟವಾಯಿತು. ತಮ್ಮ ಬೆನ್ನ ಮೇಲೆ ಹೇರಿದ್ದ ಈ ಭಾರ ಇಳಿಸಿದರೆ ಆಗ ತಾವು ಮೃಗಸ್ಥಿತಿಯಿಂದ ಮನುಷ್ಯತ್ವವನ್ನಡರಿ ಸೆಟೆದು ನಿಲ್ಲಬಹುದು. ಅವರ ಸ್ಥಿತಿ ಸ್ವಲ್ಪಮಟ್ಟಿಗೆ ಉತ್ತಮಗೊಂಡಿದ್ದರಿಂದ ಅವರು ಈಗ ಕಣ್ಣು ತೆರೆದಿದ್ದರು. ಏನಾಗಿರುವವರು ಏನಾಗಬಲ್ಲೆವು ನಾವು! ಅದಕ್ಕೆ ಅನುಸರಿಸಬೇಕಾದ ಮಾರ್ಗ ಒಂದೇ....[1]

ಊಳಿಗ ಮಾನ್ಯ ಪದ್ಧತಿಯ ನಿಬಂಧನೆಗಳನ್ನು ಕಿತ್ತೊಗೆಯಬೇಕೆಂಬುದು ಫ್ರಾನ್ಸಿನ (ಹಾಗೂ ಪಶ್ಚಿಮ ಯೂರೋಪಿನ ಇತರ ರಾಷ್ಟ್ರಗಳ) ರೈತರಿಗೆ ಇದಕ್ಕೂ ಹಿಂದೆಯೇ ಗೊತ್ತಿರಲಿಲ್ಲವೆಂದಲ್ಲ. ಹಿಂದೆಯೂ ರೈತರ ದಂಗೆಗಳು ಸಂಭವಿಸುತ್ತಲೇ ಇದ್ದುವು. ಊಳಿಗ ಮಾನ್ಯ ಕಟ್ಟಳೆಗಳನ್ನು ಇಡಿಯಾಗಿ ಮೂಲೋತ್ಪಾಟನ ಮಾಡಲು ಈ ದಂಗೆಗಳಿಂದ ಸಾಧ್ಯವಾಗಿರಲಿಲ್ಲವಾಗಲಿ, ಇವು ರೈತನ ಸ್ಥಿತಿಯನ್ನು ಸ್ವಲ್ಪ ಉತ್ತಮಗೊಳಿಸಿದ್ದುವು. ಆದರೆ ಇವನ್ನು ಸಂಪೂರ್ಣವಾಗಿ ತೊಡೆದುಹಾಕಲು ರೈತರಿಗೆ ಯೋಗ್ಯ ಸಹಾಯವೂ ನಾಯಕತ್ವವೂ ಅಗತ್ಯವಾಗಿದ್ದುವು.

ವರ್ಧಿಷ್ಣು ಮಧ್ಯಮವರ್ಗದಲ್ಲಿ ಅವರು ಈ ಸಹಾಯವನ್ನೂ ನಾಯಕತ್ವವನ್ನೂ ಪಡೆದರು.

ಫ್ರೆಂಚ್ ಮಹಾಕ್ರಾಂತಿಯನ್ನು ನಡಸಿದ್ದು ಈ ವರ್ಧಿಷ್ಣು ಮಧ್ಯಮವರ್ಗ—ಈ ಬೂರ್ಷ್ವಾಸೀ. ಇದರಿಂದ ಪ್ರಯೋಜನ ಪಡೆದದ್ದೂ ಈ ವರ್ಗವೇ. ಈ ಕ್ರಾಂತಿಯನ್ನು ಅದು ನಡಸಲೇ ಬೇಕಾಗಿದ್ದುದರಿಂದ ನಡಸಿತು. ದಬ್ಬಾಳಿಕೆಗಾರರನ್ನು ಉರುಳಿಸುವುದರಲ್ಲಿ ಅದು ಜಯ ಗಳಿಸದಿದ್ದರೆ ಆಗ ಈ ವರ್ಗವೇ ನಾಶವಾಗಿ ಹೋಗುತ್ತಿತ್ತು. ಮೊಟ್ಟೆಯೊಳಗಿನ ಕೋಳಿ ಮರಿ ಬೆಳೆದಾಗ ಚಿಪ್ಪನ್ನೊಡೆದು ಹೊರಬರಬೇಕು, ಇಲ್ಲವೇ ಅದರೊಳಗೇ ನಾಶ

[1] Cf. L. Madelin, *The French Revolution*, 3rd edition, 1922, p. 11. William Heinemann, London.

ಹೊಂದಬೇಕು. ಅಂತೆಯೇ ಇತ್ತು ಈ ವರ್ಗದ ಸ್ಥಿತಿ. ಬೂರ್ಷ್ವಾಸೀ ಬೆಳೆಯುತ್ತಿತ್ತು. ಈ ಬೆಳೆವಣಿಗೆ ಹೀಗೆಯೇ ಮುಂದುವರಿಯಲು ನಾನಾ ಅಡ್ಡಿಗಳಿದ್ದುವು. ಕಟ್ಟು ಕಟ್ಟಳೆಗಳೂ, ವಾಣಿಜ್ಯ ಕೈಗಾರಿಕೆಗಳ ಮೇಲೆ ನಿರ್ಬಂಧವೂ ಮುಂದುವರಿದುವು. ಸಣ್ಣಪುಟ್ಟ ಗುಂಪುಗಳಿಗೆ ಸರಕಾರ ಏಕಸ್ವಾಮ್ಯ ನೀಡುತ್ತಿತ್ತು. ವೃತ್ತಿ ಸಂಘಗಳು ಸಾಯಲೊಲ್ಲದೆ ಪ್ರಗತಿಗೆ ಅಡ್ಡಿಯಾಗಿ ಮುಂದುವರಿದಿದ್ದುವು. ಸದಾ ಏರುತ್ತಿದ್ದ ತೆರಿಗೆಯ ಭಾರ ಅಸಮವೂ ಅಸಹನೀಯವೂ ಆಗಿತ್ತು. ಹಳೆಯ ಶಾಸನಗಳ ಜತೆಗೆ ಹೊಸ ಶಾಸನಗಳನ್ನು ಈ ಮಧ್ಯಮವರ್ಗದ ಜನರನ್ನು ಕೇಳದೆಯೇ ಸರಕಾರ ಜಾರಿಗೆ ತರುತ್ತಿತ್ತು. ದಿನೇ ದಿನೇ ಬೆಳೆಯುತ್ತಿದ್ದ ಸರಕಾರಿ ನೌಕರರ ಕಿರುಕುಳ ಸಹಿಸಲಸಾಧ್ಯವಾಗಿತ್ತು. ಸರಕಾರದ ಸಾಲದ ಮೊತ್ತ ಏರುತ್ತಲೇ ಇತ್ತು. ಅನೀತಿಯುತವಾದ, ಕ್ಷೀಣಿಸುತ್ತಿದ್ದ ಈ ಇಡೀ ಊಳಿಗ ಮಾನ್ಯ ವ್ಯವಸ್ಥೆಯ ಚಿಪ್ಪನ್ನೊಡೆಯಲೇ ಬೇಕಾಗಿತ್ತು. ಇದರ ನಡುವೆ ಸಿಲುಕಿ ಉಸಿರಾಡಲಾರದೆ, ಸಂಕಟಪಟ್ಟು ಸಾಯಲೊಲ್ಲದೆ ಹೋಯಿತು ಈ ಬೂರ್ಷ್ವಾಸೀ—ಮಧ್ಯಮ ವರ್ಗ. ಈ ಚಿಪ್ಪನ್ನೊಡೆಯಲು ಅದು ಜಾಗೃತವಾಯಿತು.

ಬೂರ್ಷ್ವಾಸೀ ವರ್ಗದ ಜನ—ಮಧ್ಯಮ ವರ್ಗದ ಜನ—ಯಾರು? ಲೇಖಕರು, ವೈದ್ಯರು, ಅಧ್ಯಾಪಕರು, ವಕೀಲರು, ನ್ಯಾಯಾಧೀಶರು, ಸರ್ಕಾರಿ ನೌಕರರು ಇವರು—ವಿದ್ಯಾವಂತ ವರ್ಗ. ವರ್ತಕರೂ ತಯಾರಕರೂ ಹಣದ ವ್ಯವಹಾರ ಮಾಡುವವರೂ ಇವರೇ—ಹಣವಂತ ವರ್ಗ. ಸಾಕಷ್ಟು ಹಣ ಗಳಿಸಿ, ಇನ್ನೂ ಗಳಿಸಲು ಹಾತೊರೆಯುತ್ತಿದ್ದವರು ಇವರು. ಎಲ್ಲಕ್ಕಿಂತ ಮಿಗಿಲಾಗಿ, ಊಳಿಗ ಮಾನ್ಯ ಯುಗವನ್ನು ದಾಟಿದ್ದ ವ್ಯವಸ್ಥೆಯಲ್ಲಿ ಇನ್ನೂ ಉಳಿದುಕೊಂಡು ಬಂದಿದ್ದ ಊಳಿಗ ಮಾನ್ಯ ಕಟ್ಟಳೆಗಳನ್ನು ಕಿತ್ತೊಗೆಯಲು ಇವರು ಬಯಸಿದರು—ಕಿತ್ತೊಗೆಯಲೇ ಬೇಕಾಗಿತ್ತು. ಇವರು ತಮ್ಮ ಬಿಗಿಯಾದ ಊಳಿಗ ಮಾನ್ಯ ಕವಚ ಕಳಚಿ ಚಿಸಾಡಿ, ಅದರ ಬದಲು ಸಡಿಲವಾದ ಬಂಡವಾಳ ಪದ್ಧತಿಯ ಮೇಲಂಗಿ ಧರಿಸಬೇಕಾಗಿತ್ತು. ಆರ್ಥಿಕ ಕ್ಷೇತ್ರದಲ್ಲಿ ಇವರಿಗೆ ಆಗಬೇಕಾಗಿದ್ದದ್ದೇನೆಂಬುದು ಪ್ರಕೃತಿ ಪ್ರಾಧಾನ್ಯವಾದಿಗಳ ಮತ್ತು ಆಡಂ ಸ್ಮಿತ್ತನ ಲೇಖನಗಳಲ್ಲಿ ವ್ಯಕ್ತಪಟ್ಟಿತು. ಸಾಮಾಜಿಕ ಕ್ಷೇತ್ರದಲ್ಲಿ ಇವರಿಗೆ ಏನು ಬೇಕೆಂಬುದು ವಾಲ್ಟೇರನ, ಡಿಡೆರಾನ, ವಿಶ್ವಕೋಶ ರಚನಕಾರರ ಲೇಖನಗಳಲ್ಲಿ ವ್ಯಕ್ತಪಟ್ಟಿತು. ವಾಣಿಜ್ಯ ಕೈಗಾರಿಕೆಗಳಲ್ಲಿ 'ಲೆಸೇ-ಫೇರ್' ಅಥವಾ "ಸರಕಾರದ ತಾಟಸ್ಥ್ಯ ನೀತಿ"—ಎಂದು ಕೂಗಿದಂತೆಯೇ, ಇದಕ್ಕೆ ಪಡಿರೂಪವಾಗಿ, ಮತವಿಜ್ಞಾನಗಳಲ್ಲಿ "ವಿಚಾರ ಪ್ರಾಧಾನ್ಯ" ಎಂಬ ಕೂಗು ಎದ್ದಿತು.

ಕಷ್ಟಪಟ್ಟು ದುಡಿಯಲು ನಿಮ್ಮಷ್ಟು ಯೋಗ್ಯತೆ ಅಥವಾ ಸಾಮರ್ಥ್ಯ ಇಲ್ಲದವನೊಬ್ಬ ಯಾವುದಾದರೊಂದು ಪ್ರಭಾವದ ಬಲದಿಂದ ನಿಮ್ಮ ದುಡಿಮೆಯ ಪೂರ್ಣ ಫಲ ಪಡೆದುಕೊಂಡರೆ, ನಿಮ್ಮನ್ನು ಇದಕ್ಕಿಂತ ಕೆರಳಿಸುವ ಸಂಗತಿ ಬೇರೊಂದುಂಟೆ? ಮಧ್ಯಮ ವರ್ಗದ ಜನ ಹೆಚ್ಚು ಕಡಮೆ ಈ ಸ್ಥಿತಿಯಲ್ಲಿದ್ದರು. ಅವರಿಗೆ ಮೇಧಾ ಶಕ್ತಿಯಿತ್ತು, ಸಂಸ್ಕೃತಿಯಿತ್ತು, ಹಣವಿತ್ತು. ಆದರೆ ಇವುಗಳ ನೆರವಿನಿಂದ ದೊರಕಬಹುದಾಗಿದ್ದ ಫಲ ಪಡೆಯಲು ಅಗತ್ಯವಾದ ಶಾಸನ ಬಲ ಇವರಿಗೆ ಇರಲಿಲ್ಲ. "ಬೆರ್ನಾವ್ ಎಂಬವನ ತಾಯಿ ಗ್ರೇನೋಟ್ ಎಂಬಲ್ಲಿ

ನಾಟಕ ಶಾಲೆಯಲ್ಲಿ ಕುಳಿತಿದ್ದಾಗ ಪೀಠದಿಂದ ಆಕೆಯನ್ನು ಶ್ರೀಮಂತನೊಬ್ಬ ಹೊರ ನೂಕಿಸಿದನಂತೆ. ಆಗಲೇ ಆತ ಕ್ರಾಂತಿಕಾರನಾದ. ಚಾಟ್ಯೊ ಫಾಂಟ್‌ನೇಯಲ್ಲಿ ತನ್ನ ತಾಯಿಯೊಡನೆ ಊಟಕ್ಕೆ ಇರಬೇಕೆಂದು ಶ್ರೀಮತಿ ರೋಲಾಗೆ ಆಹ್ವಾನ ಬಂತು. ಆದರೆ ಅವರಿಗೆ ಭೋಜನ ದೊರಕಿದ್ದು ಮನೆಯವರೊಂದಿಗಲ್ಲ, ಜವಾನರ ಗೃಹದಲ್ಲಿ. ಆತ್ಮಗೌರವ ಕಳೆದುಕೊಂಡಿದ್ದರಿಂದ ಎಷ್ಟು ಜನ ಈ ಹಳೆಯ ಆಡಳಿತದ ಶತ್ರುಗಳಾದರೋ!"[1]

ಮಧ್ಯಮ ವರ್ಗದ ಜನಕ್ಕೆ ಭೂಮಿ ಇರಲಿಲ್ಲ. ಆದರೆ ಅವರಲ್ಲಿ ಬಂಡವಾಳವಿತ್ತು. ಸರಕಾರಕ್ಕೇ ಅವರು ಹಣ ಸಾಲ ಕೊಟ್ಟಿದ್ದರು. ಇದನ್ನು ಅವರು ಹಿಂದಕ್ಕೆ ಬಯಸಿದರು. ಸಾರ್ವಜನಿಕ ಹಣದ ನಿರ್ವಹಣೆಯಲ್ಲಿ ಸರಕಾರ ವಿವೇಕದಿಂದ ವರ್ತಿಸುತ್ತಿರಲಿಲ್ಲ. ವ್ಯರ್ಥ ನೀತಿಯಿಂದ ಅದು ದಿವಾಳಿತನಕ್ಕೆ ಹಾದಿ ಮಾಡಿಕೊಳ್ಳುತ್ತಿತ್ತು. ಇದು ಈ ಮಧ್ಯಮ ವರ್ಗದ ಜನಕ್ಕೆ ಗೊತ್ತಿತ್ತು. ತಮ್ಮ ಹಣದ ಬಗ್ಗೆ ಅವರಿಗೆ ಆತಂಕ ಹುಟ್ಟಿತು.

ತಮ್ಮ ಆರ್ಥಿಕ ಅಧಿಕಾರದ ಜತೆಗೆ ರಾಜಕೀಯ ಅಧಿಕಾರವನ್ನೂ ಅವರು ಪಡೆಯ ಬಯಸಿದರು. ಅವರಿಗೆ ಆಸ್ತಿಯಿತ್ತು. ಅವರು ಹಕ್ಕು ಬಯಸಿದರು. ಕ್ಷೀಣಿಸುತ್ತಿದ್ದ ಊಳಿಗ ಮಾನ್ಯ ಸಮಾಜದಲ್ಲಿ ತಮ್ಮ ಆಸ್ತಿಯ ಮೇಲಿದ್ದ ಈ ಅಸಹನೀಯ ನಿರ್ಬಂಧಗಳನ್ನು ಕಿತ್ತೊಗೆಯ ಬಯಸಿದರು ಅವರು. ಸರಕಾರಕ್ಕೆ ನೀಡಿದ ಸಾಲ ಹಿಂದಕ್ಕೆ ಬರುವುದೆಂಬ ಭರವಸೆ ಅವರಿಗೆ ಬೇಕಿತ್ತು. ಇದಕ್ಕಾಗಿ ಅವರು ತಮ್ಮ ಹಕ್ಕು ಪಡೆಯಬೇಕಾಗಿತ್ತು. ಸರಕಾರದಲ್ಲಿ ತಮ್ಮದೇ ಹಕ್ಕು ಸ್ಥಾಪಿಸಬೇಕಾಗಿತ್ತು. ಅವರಿಗೆ ಈ ಅವಕಾಶ ಬಂತು, ಬಂದಾಗ ಅದನ್ನು ಹಿಡಿದರು.

ಇನ್ನು ಮುಂದೆ ಹಳೆಯ ಮಾರ್ಗದಲ್ಲೇ ಹೋಗುವುದು ಸಾಧ್ಯವಿಲ್ಲವೆಂಬ ತೊಡಕಿನಲ್ಲಿ ಫ್ರಾನ್ಸು ಸಿಕ್ಕಿಬಿದ್ದಾಗ ಅವರಿಗೆ ಈ ಅವಕಾಶ ಲಭಿಸಿತು. ಸ್ವತಃ ಶ್ರೀಮಂತ ಮನೆತನಕ್ಕೆ ಸೇರಿದ್ದ ಕಾಮ್ಟೆ ಡಿ ಕೆಲೋನೇ ಎಂಬವನೇ ಇದನ್ನು ಒಪ್ಪಿಕೊಂಡಿದ್ದಾನೆ. ಅವನು ವಿತ್ತ ಮಂತ್ರಿಯಾಗಿದ್ದದ್ದರಿಂದ ವಿಧಿಯ ಬರಹವನ್ನು ಅವನು ಸ್ಪಷ್ಟವಾಗಿ ಗುರುತಿಸಿದ: "ಹಲವು ಆಡಳಿತಗಳುಳ್ಳ ಪ್ರತ್ಯೇಕ ರಾಜ್ಯಗಳನ್ನೂ ನಾಡುಗಳನ್ನೂ ಹೊಂದಿರುವ ದೇಶ ಫ್ರಾನ್ಸು. ಇದರ ಪ್ರಾಂತಗಳು ಪರಸ್ಪರವಾಗಿ ಅಪರಿಚಿತ. ಕೆಲವು ಜಿಲ್ಲೆಗಳಲ್ಲಿ ಯಾವ ತೆರಿಗೆಯ ಹೊರೆಯೂ ಇಲ್ಲ. ಇನ್ನು ಕೆಲವು ಜಿಲ್ಲೆಗಳು ಈ ಭಾರವನ್ನೆಲ್ಲಾ ಹೊತ್ತಿವೆ. ಧನಿಕವರ್ಗದ ಮೇಲೆ ಬಹು ಅಲ್ಪ ತೆರಿಗೆ. ಹಕ್ಕುಳ್ಳವರು ಇಲ್ಲದವರೆಂಬ ಭೇದ ಭಾವದಿಂದ ಸಮತೆಗೆಟ್ಟಿದೆ. ಇಲ್ಲಿ ಸ್ಥಿರ ಆಡಳಿತವಾಗಲಿ, ಸಾರ್ವಜನಿಕಾಭಿಪ್ರಾಯ ಮನ್ನಣೆಯಾಗಲಿ ಸಾಧ್ಯವಿಲ್ಲ. ಅನ್ಯಾಯಪೂರಿತ ಅಸಮರ್ಪಕ ರಾಜ್ಯಭಾರ. ಈಗಿನ ಸ್ಥಿತಿಯಲ್ಲಿ ಇದರ ಆಡಳಿತ ನಡಸುವುದೇ ಅಸಾಧ್ಯ."[2]

ಮೇಲೆ ಕೊಟ್ಟಿರುವ ಕೊನೆಯ ಮೂರು ಪದಗಳನ್ನು ಮುಖ್ಯವಾಗಿ ಗಮನಿಸಿ. ಇನ್ನು ಮುಂದೆ ಆಡಳಿತ ನಡಸುವುದೇ ಸಾಧ್ಯವಿಲ್ಲವೆಂಬ ಅಂಶವನ್ನು ಆಡಳಿತವರ್ಗದವನೇ ಆದವ ನೊಬ್ಬ ಒಪ್ಪಿಕೊಂಡಿದ್ದಾನೆ. ಕ್ರಾಂತಿಗೆ ಎಲ್ಲ ಸಿದ್ಧವಾಗಿದೆ. ಈಗ ಮಾಡಬೇಕಾದ್ದಿಷ್ಟೆ.

---

[1] A. Mathiez, *The French Revolution*, p. 13, Alfred A Knopf, N.Y., 1928.
[2] L. Madelin, *op. cit.*, pp. 11, 12.

ಅಧಿಕಾರ ಕಸಿದುಕೊಳ್ಳ ಬಯಸುವ ಬುದ್ಧಿಶಾಲಿ ವರ್ಧಿಷ್ಣು ಮಧ್ಯಮ ವರ್ಗದ ಆಗಮನ. ಈ ಮದ್ದಿನ ನಾನಾ ಪುಡಿಗಳನ್ನು ಸೇರಿಸಿ ಕಲಸಿಬಿಟ್ಟರೆ ಸಾಕು. ಆಸ್ಫೋಟನೆ, ಕ್ರಾಂತಿ. ೧೭೮೯ರಲ್ಲಿ ಹೀಗಾಯಿತು. ಅದೇ ಫ್ರಾನ್ಸಿನ ಮಹಾಕ್ರಾಂತಿ.

ಕ್ರಾಂತಿಕಾರರ ಉದ್ದೇಶಗಳೇನೆಂಬುದನ್ನು ಇವರ ನಾಯಕರಲ್ಲೊಬ್ಬನಾದ ಅಬ್ಬೇ ಸಿಯೇ ಎಂಬವನು ಸರಳವಾಗಿ ಹೇಳಿದ. "ತೃತೀಯ ವರ್ಗ ಯಾವುದು ?" ಎಂಬ ಜನಪ್ರಿಯ ಹಸ್ತಪತ್ರವೊಂದರಲ್ಲಿ ಅವನು ಹೀಗೆ ಬರೆದ : "ನಾವು ಮೂರು ಪ್ರಶ್ನೆ ಹಾಕಿಕೊಳ್ಳಬೇಕು.

"ಮೊದಲನೆಯ ಪ್ರಶ್ನೆ : ತೃತೀಯ ವರ್ಗ ಯಾವುದು ? ಎಲ್ಲವೂ.

"ಎರಡನೆಯ ಪ್ರಶ್ನೆ : ನಮ್ಮ ರಾಜ್ಯ ವ್ಯವಸ್ಥೆಯಲ್ಲಿ ಇದುವರೆಗೆ ಇದರ ಸ್ಥಾನವೇನು ? ಏನೂ ಇಲ್ಲ.

"ಮೂರನೆಯ ಪ್ರಶ್ನೆ : ಇದು ಬಯಸುವುದಾದರೂ ಏನನ್ನು ? ಗಣ್ಯತೆ ಪಡೆಯ ಬೇಕೆಂದು."[1]

ತೃತೀಯ ವರ್ಗದ ಎಲ್ಲ ಜನರೂ—ಕುಶಲಕರ್ಮಿಗಳು, ರೈತರು, ಮೇಧಾವಿಗಳು, ವ್ಯಾಪಾರಿಗಳು, ಎಲ್ಲರೂ—ಗಣ್ಯಸ್ಥಾನ ಪಡೆಯಲು ಯತ್ನಿಸುತ್ತಿದ್ದರು. ಆದರೆ ಬಯಸಿದ್ದನ್ನು ಪಡೆದವರು ಇವರ ಪೈಕಿ ಕೊನೆಯ ಜನ—ವ್ಯಾಪಾರಿಗಳು, ಬೂರ್ಷ್ವಾಸೀ. ಉಳಿದ ಜನ ಹೋರಾಟ ನಡಸಿದರು. ಇವರು ನಾಯಕತ್ವ ದೊರಕಿಸಿಕೊಟ್ಟರು. ಈ ವ್ಯಾಪಾರಿವರ್ಗ, ಈ ಮೇಧಾವಿಗಳ ಗುಂಪು, ಈ ಬೂರ್ಷ್ವಾಸೀ, ಹೆಚ್ಚು ಫಲ ಪಡೆಯಿತು. ಕ್ರಾಂತಿಯ ಕಾಲದಲ್ಲಿ ಈ ಬೂರ್ಷ್ವಾಗಳು ಧನಿಕರೂ ಪ್ರಬಲರೂ ಆಗಲು ಒಂದಾದ ಮೇಲೊಂದು ಅವಕಾಶ ದೊರಕಿತು. ಚರ್ಚಿನಿಂದಲೂ ಶ್ರೀಮಂತರಿಂದಲೂ ಪಡೆದ ನೆಲದ ಸಟ್ಟಾ ವ್ಯಾಪಾರ ನಡಸಿದರು ಇವರು. ಯುದ್ಧಕ್ಕೆ ಸಂಬಂಧಿಸಿದ ಪದಾರ್ಥ ಸರಬರಾಯಿಯಲ್ಲಿ ವಂಚನೆಯ ಕರಾರು ಮಾಡಿಕೊಂಡು ವ್ಯಾಪಾರ ನಡಸಿ ಅಗಾಧ ಐಶ್ವರ್ಯ ಗಳಿಸಿದರು.

ಬಡ ಕಾರ್ಮಿಕ ವರ್ಗದ ಪ್ರತಿನಿಧಿ ಮಾರಾ ಎಂಬವನು ಕ್ರಾಂತಿಕಾಲದಲ್ಲಿ ಏನಾಯಿ ತೆಂಬುವನ್ನು ಹೀಗೆ ವರ್ಣಿಸಿದ್ದಾನೆ : "ಬಂಡಾಯ ಆರಂಭವಾದಾಗ ಜನ ಬಾಹುಳ್ಯ ಎಲ್ಲ ಅಡಚಣೆಯನ್ನೂ ಮುರಿದಿಕ್ಕಿ ನುಗ್ಗಿತು. ಅವರ ಈ ಆರಂಭದ ಜಯ ವ್ಯರ್ಥವಾಯಿತು. ಮೇಲಣ ವರ್ಗದ ಸಂಚುಗಾರರು ತಮ್ಮ ಜಾಣ್ಮೆ ತಂತ್ರ ಕಪಟಗಳಿಂದ ಈ ಜನರನ್ನು ಹತ್ತಿಕ್ಕಿದರು. ಮೇಲಣ ವರ್ಗದ ಈ ವಿದ್ಯಾವಂತ ಕಪಟಿಗಳು ಮೊದಮೊದಲು ನಿರಂಕುಶ ಪ್ರಭುಗಳನ್ನು ವಿರೋಧಿಸಿದರು. ಆದರೆ ಜನಕೋಟಿಯ ನಂಬಿಕೆ ಗಳಿಸಿ ಅದರ ಬಲದ ಉಪಯೋಗ ಪಡೆದ ಮೇಲೆ ಈ ಪ್ರಜಾಕೋಟಿಯ ವಿರುದ್ಧವಾಗಿಯೇ ತಿರುಗಿದರು. ನಿರಂಕುಶ ಪ್ರಭುಗಳನ್ನು ಉರುಳಿಸಿ ತೆರವಾದ ಸ್ಥಾನದಲ್ಲಿ ಇವರೇ ಕುಳಿತರು. ಕ್ರಾಂತಿ ಸಂಭವಿಸುವುದೂ ಮುಂದುವರಿಯುವುದೂ ಸಮಾಜದ ದಲಿತ ವರ್ಗದಿಂದ—ಕಾರ್ಮಿಕ, ಕೈಕೆಲಸಗಾರ, ಸಣ್ಣ ಅಂಗಡಿಕಾರ, ರೈತ, ಪಾಮರ ಜನ ಇವರಿಂದ. ನಾಚಿಕೆಗೆಟ್ಟ ಧನಿಕರಿಂದ 'ಕಾನಾಯ್'

---

[1] **E. J. Sieyès,** ***Qu'Est-ce Que Le Tiers Etat ?*** **(1789). published by Société de L'Histoire De La Révolution Française. Paris, 1888.**

ಎಂದು—ಕೀಳು ಮಂದಿ ಎಂದು—ಕರೆಯಲ್ಪಟ್ಟವರಿಂದಲೇ, ಲಜ್ಜೆಗೆಟ್ಟ ರೋಮನ್ನರಿಂದ 'ಪ್ರಾಲಿಟೇರಿಯಟ್' ಎಂದು—ಕೀಳು ದರ್ಜೆಯ ಜನ ಎಂದು—ಸಂಬೋಧಿಸಲ್ಪಟ್ಟವ ರಿಂದಲೇ ಕ್ರಾಂತಿಯ ಹುಟ್ಟು ಬೆಳವಣಿಗೆ ಸಾಧ್ಯ. ಆದರೆ ಉಚ್ಚವರ್ಗದ ಜನ ಸತತವಾಗಿ ಮುಚ್ಚಿಟ್ಟ ಅಂಶವೊಂದುಂಟು. ಜಮೀನುದಾರರ, ವಕೀಲರ, ಕೃತ್ರಿಮಿಗಳ ಲಾಭಕ್ಕೆ ಈ ಕ್ರಾಂತಿ ಪರಿವರ್ತಿತವಾಯಿತು."[1]

ಏನು ಸಂಭವಿಸಿತೆಂಬುದರ ಸ್ಪಷ್ಟ ನಿರೂಪಣೆ ಇದು: ಕ್ರಾಂತಿ ಮುಗಿದ ಮೇಲೆ ಬೂರ್ಷ್ವಾ ವರ್ಗವೇ ಫ್ರಾನ್ಸಿನಲ್ಲಿ ರಾಜಕೀಯ ಅಧಿಕಾರ ಪಡೆಯಿತು. ಆಜನ್ಮಸಿದ್ಧ ಹಕ್ಕುಗಳು ತೊಡೆದುಹಾಕಲ್ಪಟ್ಟುವು. ವ್ಯಾಪಾರಿಗಳು ಈ ಹಕ್ಕು ಕಸಿದುಕೊಂಡರು. "ಸ್ವಾತಂತ್ರ್ಯ, ಸಮತೆ, ಸಹೋದರ ಭಾವ" ಎಂಬುದು ಎಲ್ಲ ಕ್ರಾಂತಿಕಾರರ ಪ್ರಿಯವಾದ ರಣಗರ್ಜನೆಯಾಗಿತ್ತು. ಆದರೆ ಇದು ಲಭಿಸಿದ್ದು ಮುಖ್ಯವಾಗಿ ಬೂರ್ಷ್ವಾಗಳಿಗೆ.

ನೆಪೋಲಿಯನ್ನನ ಶಾಸನ ಕಡತದಿಂದ ಈ ವಿಚಾರ ವ್ಯಕ್ತವಾಗುತ್ತದೆ. ಆಸ್ತಿಯ ರಕ್ಷಣೆಗಾಗಿಯೇ—ಊಳಿಗಮಾನ್ಯ ಪದ್ಧತಿಯ ಆಸ್ತಿಯಲ್ಲ, ಮಧ್ಯಮವರ್ಗದ ಜನರ ಆಸ್ತಿಯ ರಕ್ಷಣೆಗಾಗಿಯೇ-ಇದು ರಚಿತವಾಯಿತೆಂಬುದು ಸ್ವಯಂವೇದ್ಯ. ಇದರಲ್ಲಿ ಸುಮಾರು ೨೦೦೦ ನಿಬಂಧನೆಗಳಿವೆ. ಇವುಗಳ ಪೈಕಿ ಏಳು ಮಾತ್ರ ಕಾರ್ಮಿಕರಿಗೆ ಸಂಬಂಧಿಸಿದವುಗಳು; ಸುಮಾರು ಎಂಟುನೂರು ನಿಬಂಧನೆಗಳು ಆಸ್ತಿಗೆ ಸಂಬಂಧಿಸಿದವು. ಇವುಗಳಲ್ಲಿ ಕಾರ್ಮಿಕ ಸಂಘಗಳೂ ಮುಷ್ಕರಗಳೂ ಬಹಿಷ್ಕರಿಸಲ್ಪಟ್ಟವೆ. ಆದರೆ ಮಾಲಿಕ ಸಂಘಕ್ಕೆ ಅಭ್ಯಂತರವಿಲ್ಲ. ಕೂಲಿಗೆ ಸಂಬಂಧಿಸಿದ ವ್ಯಾಜ್ಯವೊಂದು ನ್ಯಾಯಾಲಯಕ್ಕೆ ಬಂದರೆ ಆಗ ಕಾರ್ಮಿಕನ ಮಾತಿಗೆ ಬೆಲೆ ಕೊಡಬಾರದೆಂದೂ, ಮಾಲಿಕರ ಹೇಳಿಕೆ ಸ್ವೀಕಾರ ಯೋಗ್ಯವೆಂದೂ ಈ ನಿಬಂಧನೆಗಳು ಹೇಳುತ್ತವೆ. ಬೂರ್ಷ್ವಾಗಳಿಂದ, ಬೂರ್ಷ್ವಾಗಳಿಗಾಗಿ ಇವು ರಚಿತವಾಗಿವೆ. ಆಸ್ತಿಯ ಒಡೆಯರು ಆಸ್ತಿಯ ರಕ್ಷಣೆಗಾಗಿ ರಚಿಸಿಕೊಂಡ ಶಾಸನ ಸಂಗ್ರಹವಿದು.

ಯುದ್ಧದ ಹೊಗೆಯೆಲ್ಲ ಮಾಯವಾಯಿತು. ಬೂರ್ಷ್ವಾಗಳು ತಮ್ಮಿಚ್ಛೆಯಂತೆ ಏನನ್ನಾದರೂ ಹೇಗಾದರೂ ಎಲ್ಲಾದರೂ ಯಾವಾಗ ಬೇಕಾದರೂ ಕೊಳ್ಳುವ, ಮಾರುವ ಹಕ್ಕು ಪಡೆದರು. ಊಳಿಗಮಾನ್ಯ ವ್ಯವಸ್ಥೆ ಸತ್ತಿತ್ತು.

ಫ್ರಾನ್ಸಿನಲ್ಲಿ ಮಾತ್ರವೇ ಅಲ್ಲ, ನೆಪೋಲಿಯನ್ನನ ಸೈನ್ಯ ಜಯಿಸಿದ ಪ್ರತಿಯೊಂದು ದೇಶದಲ್ಲೂ ಇದು ಸತ್ತಿತ್ತು. ನೆಪೋಲಿಯನ್ ವಿಜಯಯಾತ್ರೆ ಮಾಡಿದಲ್ಲೆಲ್ಲಾ ನಿರುಪಾಧಿಕ ಪೇಟೆ ಸ್ಥಾಪಿಸಿದ. (ಅದರೊಡನೆ ಕಾನೂನು ಸಂಗ್ರಹದ ತತ್ವಗಳನ್ನೂ ಅವನು ಸ್ಥಾಪಿಸಿದ.) ಜಯಿಸಲ್ಪಟ್ಟ ದೇಶಗಳ ಬೂರ್ಷ್ವಾಗಳು ಇವನನ್ನು ಸಂತೋಷದಿಂದ ಸ್ವಾಗತಿಸಿದುದರಲ್ಲಿ ಆಶ್ಚರ್ಯವೇನಿದೆ? ಈ ದೇಶಗಳಲ್ಲಿ ಜೀತಪದ್ಧತಿ ರದ್ದಾಯಿತು. ಊಳಿಗಮಾನ್ಯ ಶುಲ್ಕ ಗಳೂ ವಸೂಲಿಗಳೂ ಕೊಚ್ಚಿಹೋದುವು. ರೈತ ಧಣಿಗಳೂ, ವರ್ತಕರೂ, ಉತ್ಪಾದಕರೂ

[1] *History of the Working Class*, Lesson I, Course 2 (pamphlet), pp. 40, 41. International Publishers, N.Y.

ನಿಬಂಧನೆಗಳ, ನಿರ್ಬಂಧಗಳ, ನಿಯಂತ್ರಣಗಳ ಅಡಚಣೆಯಿಲ್ಲದೆ ಕೊಳ್ಳುವ, ಮಾರುವ ಹಕ್ಕಂತೂ ಭದ್ರವಾಗಿ ಸ್ಥಾಪಿತವಾಯಿತು.

ಫ್ರಾನ್ಸಿನ ಮಹಾಕ್ರಾಂತಿಯ ಈ ಘಟ್ಟವನ್ನು ಕಾರ್ಲ್ ಮಾರ್ಕ್ಸ್ ೧೮೫೨ರಲ್ಲಿ ಬರೆದ ಲೇಖನವೊಂದರಲ್ಲಿ ಬಹು ಚೆನ್ನಾಗಿ, ಸಂಗ್ರಹವಾಗಿ, ವರ್ಣಿಸಿದ್ದಾನೆ: "ಡೆಸ್ಮೋಲಿನ್, ಡ್ಯಾಂಟನ್, ರೋಬೆಸ್ಪಿಯರ್, ಸೆಂಟ್ ಜಸ್ಟ್, ನೆಪೋಲಿಯನ್, ಫ್ರಾನ್ಸಿನ ಮಹಾ ಕ್ರಾಂತಿಯ ವೀರರು, ಪಾತ್ರಧಾರಿಗಳು, ಜನಜಂಗುಳಿ, ಎಲ್ಲರೂ....ಆ ಕಾಲದಲ್ಲಿ ಸಾಧಿಸ ಬೇಕಾದ್ದನ್ನು ಸಾಧಿಸಿದರು. ಬೂರ್ಷ್ವಾಗಳನ್ನು ವಿಮೋಚನೆಗೊಳಿಸಿ, ಆಧುನಿಕ ಬೂರ್ಷ್ವಾ ಸಮಾಜವನ್ನು ಸ್ಥಾಪಿಸಿದ್ದೇ ಆ ಸಾಧನೆ. ಊಳಿಗಮಾನ್ಯ ವ್ಯವಸ್ಥೆ ಬೇರು ಬಿಟ್ಟಿದ್ದ ನೆಲವನ್ನು ಜಾಕೋಬಿನ್ನರು ಕತ್ತರಿಸಿದರು; ಅಲ್ಲಿ ಬೆಳೆದಿದ್ದ ಊಳಿಗಮಾನ್ಯ ಪ್ರಭುಗಳ ತಲೆ ಕೊಚ್ಚಿದರು. ನಿರುಪಾಧಿಕ ಸ್ಪರ್ಧೆ ಬೆಳೆಯಲು, ದೊಡ್ಡ ದೊಡ್ಡ ಜಮೀನು ಹಂಚಿ ಆದ ಮೇಲೆ ನೆಲದ ಆಸ್ತಿಯನ್ನು ಭೋಗಿಸಲು, ರಾಷ್ಟ್ರದ ಕೈಗಾರಿಕೆ ಉತ್ಪಾದನೆಯ ಶಕ್ತಿಯನ್ನು ಪರಮಾವಧಿ ಪ್ರಮಾಣದಲ್ಲಿ ಬಳಸಿಕೊಳ್ಳಲು ಸೂಕ್ತ ಪರಿಸ್ಥಿತಿಯನ್ನು ನೆಪೋಲಿಯನ್ ದೇಶಾದ್ಯಂತ ಸ್ಥಾಪಿಸಿದ. ತನ್ನ ದೇಶದ ಗಡಿಯಿಂದಾಚೆ ಎಲ್ಲೆಲ್ಲೂ ಊಳಿಗಮಾನ್ಯ ಸಂಸ್ಥೆಗಳನ್ನು ತೊಡೆದು ಹಾಕಿದ...."[1]

ಕ್ರಾಂತಿ ಯಾವಾಗಲೂ ರಕ್ತಮಯ. ಫ್ರೆಂಚ್ ಮಾದರಿಯ ಹಿಂಸೆ, ಬೀಭತ್ಸ ಎಲ್ಲರನ್ನೂ ದಿಗ್ಭ್ರಾಂತಿಗೊಳಿಸಿತು. ಇಂಗ್ಲಿಷರು ಫ್ರಾನ್ಸಿನ ಮಹಾಕ್ರಾಂತಿಯ ಪ್ರಬಲ ವಿರೋಧಿಗಳಾಗಿದ್ದರೆಂಬುದು ಸ್ವಾರಸ್ಯದ ಸಂಗತಿ. ತಮ್ಮ ಆರ್ಥಿಕ ಬಲಕ್ಕೆ ಸಮನಾದ ರಾಜಕೀಯ ಬಲ ಗಳಿಸಲು ಇಂಗ್ಲಿಷ್ ಬೂರ್ಷ್ವಾಸೀ ನಡಸಿದ ಹೋರಾಟ ಫ್ರಾನ್ಸಿನ ಮಹಾಕ್ರಾಂತಿಗೆ ಒಂದು ನೂರು ವರ್ಷಕ್ಕೂ ಹಿಂದೆಯೇ ನಡೆದಿತ್ತು. ಅದರ ಜತೆಗೆ ಸಂಭವಿಸಿದ ಹಿಂಸೆ ಸುಲಭವಾಗಿ ಮರೆತುಹೋಗಿತ್ತು.

ಆದರೆ ಒಂದು ವ್ಯತ್ಯಾಸ. ವಂಶದ ಹಕ್ಕು ಮುರಿದು ಬೀಳುವಂಥ ಪೆಟ್ಟು ಬಿತ್ತು, ಫ್ರಾನ್ಸಿನಲ್ಲಿ, ವ್ಯಾಪಾರಿಗಳಿಂದ. ಇದರಿಂದ ಅದು ಸಂಪೂರ್ಣವಾಗಿ ಚೇತರಿಸಿಕೊಳ್ಳಲೇ ಇಲ್ಲ. ಇಂಗ್ಲೆಂಡಿನಲ್ಲಿ ವರ್ತಕರು ಜಯ ಗಳಿಸಿದರು. ಆದರೆ ಈ ಜಯ ಅವರಿಗೆ ಲಭಿಸಿದ್ದು ಬಲಪ್ರಯೋಗದಿಂದಲ್ಲ, ಒಡಂಬಡಿಕೆಯಿಂದ. ಇಂಗ್ಲೆಂಡಿನಲ್ಲಿ ವ್ಯಾಪಾರವೂ ವಂಶವೂ ಒಂದನ್ನೊಂದು ಚೆನ್ನಾಗಿ ಅರಿತಿದ್ದುವು. ಆದ್ದರಿಂದ ಇತರ ದೇಶಗಳಿಗಿಂತ ಇಲ್ಲಿ ಇವೆರಡೂ ಹೆಚ್ಚು ಹೊಂದಿಕೊಂಡು ಹೋದುವು. ಇಂಗ್ಲಿಷ್ ಬೂರ್ಷ್ವಾ ವರ್ಗದವರು ಜಮೀನ್ದಾರರೂ ಆದರು. ಜಮೀನ್ದಾರರೂ ವ್ಯಾಪಾರ ನಡಸಿದರು. ವ್ಯಾಪಾರ ತಮ್ಮ ಅಂತಸ್ತಿಗೆ ಕೀಳು— ಎಂಬ ಚಿಂತೆ ಅವರನ್ನು ಬಾಧಿಸಲಿಲ್ಲ. ಆದರೂ ಇಂಗ್ಲಿಷ್ ಇತಿಹಾಸದಲ್ಲಿ ೧೬೪೦ ರಿಂದ ೧೬೪೮ರ ವರೆಗಿನ ಕಾಲ ನಿಜವಾದ ಯುದ್ಧದ ಕಾಲ. ಸರಕಾರದ ಆಡಳಿತದಲ್ಲಿ

---

[1] Karl Marx, *The Eighteenth Brumaire of Louis Bonaparte*, (1852), p. 24. Translated by Eden and Cedar Paul. Allen and Unwin, London, 1926.

ಬೂರ್ಷ್ವಾಸೀಗೂ ಮಾತಾಡುವ ಅಧಿಕಾರ ಉಂಟೆಂಬುದಕ್ಕೆ ಒಪ್ಪಿಗೆ ದೊರಕಿದಾಗಲೇ ಈ ಯುದ್ಧ ನಿಂತದ್ದು.

ಎಡ್ಮಂಡ್ ಬರ್ಕ್ ಎಂಬ ಹೆಸರು ನಿಮ್ಮ ನೆನಪಿನಲ್ಲಿರಬಹುದು. ಇವನು "ಪ್ರಾತಿನಿಧ್ಯ ವಿಲ್ಲ, ತೆರಿಗೆಯುಂಟು," ಎಂಬ ಪ್ರಶ್ನೆಯನ್ನು ಕುರಿತು ಅಮೆರಿಕದ ವಲಸೆಗಾರರ ಪರವಾಗಿ ಬಹು ಅದ್ಭುತವಾಗಿ ವಾದಿಸಿದ ಮಹಾ ರಾಜನೀತಿಜ್ಞ. ಫ್ರಾನ್ಸಿನ ಕ್ರಾಂತಿಕಾರರನ್ನು ಕಟುವಾಗಿ ಟೀಕಿಸಿ ಇವನು ಹಲವು ಲೇಖನ ಬರೆದ. ಇವನು ಇಂಗ್ಲೆಂಡಿನ "ಅದ್ಭುತ ಕ್ರಾಂತಿ"ಯನ್ನು ಕುರಿತು ನೂರು ವರ್ಷಗಳ ಹಿಂದೆ ಬರೆದ ಇನ್ನೊಬ್ಬ ಲೇಖಕನನ್ನು ಜ್ಞಾಪಿಸಿಕೊಂಡ...."ಯಾವ ಪರಿಹರಿಸಲಾಗದ ತಪ್ಪನ್ನು, ಕ್ಷಮಿಸಲಾಗದ ಅಪರಾಧವನ್ನು ಫ್ರಾನ್ಸಿನ ಜನ ಈ ದೇಶದ ವಿರುದ್ಧ ಎಸಗಿದ್ದಾರೆ? ಮನುಷ್ಯತ್ವದ ಒಳ್ಳೆಯದಕ್ಕಾಗಿ, ಮಾನವ್ಯದ ಮೇಲ್ಮೆಗಾಗಿ, ಅನುಭವ ಜ್ಞಾನಕ್ಕಾಗಿ, ಈ ಪ್ರಶ್ನೆಗೆ ಉತ್ತರ ಪಡೆಯ ಬೇಕಾಗಿದೆ. ೧೬೮೮ರ ಕ್ರಾಂತಿಯಿಂದ ತಮ್ಮ ಸರಕಾರ ಬದಲಿಸಿದರೆಂದು ಇವರ ಮೇಲೆ ದ್ವೇಷವೆ? ಈ ವಿಚಾರದಲ್ಲಿ ಇವರು ನಮಗಿಂತ ಒಂದು ಶತಮಾನ ಹಿಂದಿದ್ದಾರೆ, ಅಷ್ಟೇ. ಇವರು ತಮ್ಮ ರಾಜನ ತಲೆ ಕಡಿದರೆಂದೆ? ಆದರೆ ಬ್ರಿಟಿಷರು ಇದಕ್ಕೆ ಮೇಲ್ಪಂಕ್ತಿ ಹಾಕಿ ಕೊಟ್ಟಿದ್ದಾರೆ."[1]

ಇಂಗ್ಲೆಂಡಿನಲ್ಲಿ ೧೬೮೮ರ ವೇಳೆಗೂ—ಆಮೇಲೆ, ಫ್ರಾನ್ಸಿನಲ್ಲಿ, ೧೭೮೯ರ ಅನಂತರವೂ —ನಿರುಪಾಧಿಕ ಪೇಟೆಗಾಗಿ ನಡಸಿದ ಹೋರಾಟದಲ್ಲಿ ಮಧ್ಯಮವರ್ಗಕ್ಕೆ ಜಯ ಲಭಿಸಿತು. ೧೭೮೯ನೆಯ ಇಸವಿಯಲ್ಲಿ ಮಧ್ಯಯುಗದ ಅಂತ್ಯವಾಯಿತು. ಫ್ರೆಂಚ್ ಮಹಾಕ್ರಾಂತಿ ಊಳಿಗಮಾನ್ಯ ಪದ್ಧತಿಯನ್ನು ಸಾಯಬಡಿಯಿತು. ಪೂಜಕರ, ಯೋಧರ, ಕಾರ್ಮಿಕರ ಊಳಿಗಮಾನ್ಯ ಸಮಾಜದ ಚೌಕಟ್ಟಿನಲ್ಲಿ ಮಧ್ಯಮವರ್ಗದ ಗುಂಪೊಂದು ಜನಿಸಿತ್ತು. ಈ ವರ್ಷಗಳಲ್ಲಿ ಅದು ಹೆಚ್ಚು ಹೆಚ್ಚು ಶಕ್ತಿ ಗಳಿಸಿತ್ತು. ಇದು ಊಳಿಗಮಾನ್ಯ ಪದ್ಧತಿಯ ವಿರುದ್ಧ ದೀರ್ಘ, ಶ್ರಮದಾಯಕ ಹೋರಾಟ ನಡಸಿತ್ತು. ಇದರಲ್ಲಿ ಮುಖ್ಯವಾಗಿ ಮೂರು ನಿರ್ಣಾಯಕ ಯುದ್ಧಗಳು ನಡೆದುವು. ಪ್ರಾಟೆಸ್ಟೆಂಟ್ ಸುಧಾರಣೆಯದು ಮೊದಲನೆಯದು. ಇಂಗ್ಲೆಂಡಿನ ಮಹತ್ವ ಪೂರ್ಣ ಕ್ರಾಂತಿ ಇನ್ನೊಂದು. ಫ್ರೆಂಚ್ ಮಹಾ ಕ್ರಾಂತಿ ಮೂರನೆಯದು. ಹದಿನೆಂಟನೆಯ ಶತಮಾನದ ಅಂತ್ಯದ ವೇಳೆಗೆ, ಕೊನೆಗೂ, ಇದು ಹಳೆಯ ಊಳಿಗಮಾನ್ಯ ವ್ಯವಸ್ಥೆಯನ್ನು ನಾಶಪಡಿಸುವಷ್ಟು ಪ್ರಾಬಲ್ಯ ಪಡೆಯಿತು. ಊಳಿಗಮಾನ್ಯ ವ್ಯವಸ್ಥೆಯ ಬದಲು, ಲಾಭಗಳಿಸುವ ಮುಖ್ಯೋದ್ದೇಶ ವುಳ್ಳ, ಪದಾರ್ಥದ ನಿರುಪಾಧಿಕ ವಿನಿಮಯದ ಮೇಲೆ ಸ್ಥಾಪಿತವಾದ, ಬೇರೊಂದು ಸಮಾಜ ವ್ಯವಸ್ಥೆ ಬಂತು. ಇದನ್ನು ಆವಾಹನೆ ಮಾಡಿದವರು ಬೂರ್ಷ್ವಾಸೀ. ಈ ವ್ಯವಸ್ಥೆ ಯನ್ನು ನಾವು ಬಂಡವಾಳ ವ್ಯವಸ್ಥೆಯೆಂದು ಕರೆಯುತ್ತೇವೆ.

---

[1] Ralph Broome, *Strictures on Mr. Burke's Two Letters*, p. 4. Printed by John Thompson Philadelphia, 1797.

## ೧೪. ಹಣ ಬಂದದ್ದು ಎಲ್ಲಿಂದ?

ಪ್ರದರ್ಶನಕ್ಕೆ ಟಿಕೆಟ್ಟು ಕೊಳ್ಳಲು ಸಾಲಿನಲ್ಲಿ ಇಬ್ಬರು ನಿಂತಿದ್ದಾರೆ. ಒಬ್ಬೊಬ್ಬನೂ ಮೇಳಗಾನದ ೩ ಡಾಲರ್ ೩೦ ಸೆಂಟಿನ ಮೂರು ಸ್ಥಳಗಳಿಗಾಗಿ ೯ ಡಾಲರ್ ೯೦ ಸೆಂಟು ಕೊಡುತ್ತಾನೆ. ಅವರಲ್ಲೊಬ್ಬ ಟಿಕೆಟ್ ಕಿಟಕಿ ಬಿಟ್ಟು ಮುಂದೆ ಹೋದಾಗ, ಅವನ ಗೆಳೆಯರಿಬ್ಬರೂ ಅವನನ್ನು ಕೂಡಿಕೊಳ್ಳುತ್ತಾರೆ. ಅವರು ನಾಟಕಶಾಲೆ ಪ್ರವೇಶಿಸಿ, ತೆರೆ ಮೇಲೇಳಲು ಕಾಯ್ದು, ತಮ್ಮ ಸ್ಥಳಗಳಲ್ಲಿ ಕುಳಿತುಕೊಳ್ಳುತ್ತಾರೆ. ಟಿಕೆಟ್ ಪಡೆಯಲು ನಿಂತಿದ್ದ ಇನ್ನೊಬ್ಬ ಟಿಕೆಟ್ ಕಿಟಕಿ ಬಿಟ್ಟು, ನಾಟಕಶಾಲೆಯ ಮುಂದಣ ನೆಲಗಟ್ಟಿನ ಮೇಲೆ ನಡೆಯುತ್ತಾನೆ; ಕೈಯಲ್ಲಿ ಟಿಕೆಟ್ ಹಿಡಿದು, ಅಲ್ಲಿ ನಡೆದಾಡುವವರ ಬಳಿ ಸಾರುತ್ತಾನೆ. "ಇವತ್ತಿನ ಆಟಕ್ಕೆ ಮುಂದಣ ಮೂರು ಸೀಟಿಗೆ ಟಿಕೆಟ್ ಬೇಕೇ?" ಎಂದು ಕೇಳುತ್ತಾನೆ. ಬಹುಶಃ ಅವನು ಈ ಟಿಕೆಟ್‌ಗಳನ್ನು (ತಲಾ ೪ ಡಾಲರ್ ೪೦ ಸೆಂಟಿಗೆ) ಮಾರಲು ಸಮರ್ಥನಾಗಬಹುದು; ಅಥವಾ ಆಗದೆ ಇರಬಹುದು, ಅದು ಮುಖ್ಯವಲ್ಲ.

ಇವನು ಕೊಟ್ಟ ೯ ಡಾಲರ್ ೯೦ ಸೆಂಟು ಹಣಕ್ಕೂ ಮೊದಲನೆಯವನು ಕೊಟ್ಟ ಹಣಕ್ಕೂ ಏನಾದರೂ ವ್ಯತ್ಯಾಸವಿದೆಯೆ? ಇದೆ. ಇವನು—ಈ ಸಟ್ಟಾ ವ್ಯಾಪಾರಿ—ಕೊಟ್ಟ ಹಣ ಬಂಡವಾಳ. ನಾಟಕಶಾಲೆ ಹೊಕ್ಕವನ ಹಣ ಬಂಡವಾಳವಲ್ಲ. ಇವೆರಡಕ್ಕೂ ಇರುವ ವ್ಯತ್ಯಾಸವೆಲ್ಲಿ?

ಲಾಭಕ್ಕೆ ಮತ್ತೆ ಮಾರಾಟಮಾಡುವ ಉದ್ದೇಶದಿಂದ ವಸ್ತುವನ್ನೋ ದುಡಿಮೆಯನ್ನೋ ಕೊಳ್ಳಲು ಹಣವನ್ನು ಬಳಸಿದಾಗ ಮಾತ್ರ ಅದು ಬಂಡವಾಳವೆನಿಸುತ್ತದೆ. ಈ ಶ್ರೀಮಾನ್ ಸಟ್ಟಾ ವ್ಯಾಪಾರಿ ಪ್ರದರ್ಶನ ನೋಡಲಿಚ್ಛಿಸಲಿಲ್ಲ. ಅವನು ೯ ಡಾಲರ್ ೯೦ ಸೆಂಟು ಕೊಟ್ಟದ್ದು, ಅದರ ಜತೆಗೆ ಇನ್ನಷ್ಟು ಹಣದೊಡನೆ ಅದನ್ನು ಮತ್ತೆ ಪಡೆಯುವ ನಿರೀಕ್ಷೆಯಿಂದ. ಆದ್ದರಿಂದ ಅವನ ಹಣ ಬಂಡವಾಳದ ಪಾತ್ರ ನಿರ್ವಹಿಸಿತು. ಶ್ರೀಮಾನ್ ಪ್ರೇಕ್ಷಕ ಹೀಗೆ ಮಾಡಲಿಲ್ಲ. ೯ ಡಾಲರ್ ೯೦ ಸೆಂಟು ಕೊಟ್ಟಾಗ ತನ್ನ ಹಣವನ್ನು ಹಿಂದಕ್ಕೆ ಪಡೆಯುವ ಉದ್ದೇಶವೇ ಆತನಿಗೆ ಇರಲಿಲ್ಲ. ಪ್ರದರ್ಶನ ನೋಡುವುದಷ್ಟೇ ಅವನ ಉದ್ದೇಶ. ಅವನ ಹಣ ಬಂಡವಾಳದ ಪಾತ್ರ ವಹಿಸಲಿಲ್ಲ.

ಇದೇ ವಿಚಾರವನ್ನು ಇತರ ವ್ಯವಹಾರಗಳಿಗೂ ಅನ್ವಯಿಸಬಹುದು. ಕುರಿ ಕಾಯುವವನು ತಿನ್ನಲು ರೊಟ್ಟಿ ಕೊಳ್ಳಲಿಕ್ಕಾಗಿ ಹಣಕ್ಕೆ ಉಣ್ಣೆ ಮಾರಿದಾಗ ಆ ಹಣ ಅವನಿಗೆ ಬಂಡವಾಳವಲ್ಲ. ಆದರೆ ವರ್ತಕ ಈ ಉಣ್ಣೆಯನ್ನು ಮತ್ತೆ ಹೆಚ್ಚಿನ ಬೆಲೆಗೆ ಮಾರುವ ಉದ್ದೇಶದಿಂದ ಕೊಂಡರೆ ಆಗ ಅವನು ಕೊಟ್ಟ ಹಣ ಬಂಡವಾಳವೆನಿಸುತ್ತದೆ. ಲಾಭ ತರುವ (ಅಥವಾ ಲಾಭ ತರುವ ನಿರೀಕ್ಷೆ ಇರುವ) ಉದ್ಯಮ ಅಥವಾ ವ್ಯವಹಾರದಲ್ಲಿ ಹಣವನ್ನು ನಿಯೋಜಿಸಿದರೆ ಆ ಹಣ ಬಂಡವಾಳವೆನಿಸುತ್ತದೆ. ಬೇರೆ ಪದಾರ್ಥ ಕೊಂಡು

ಬಳಸುವ ಇಚ್ಛೆಯಿಂದ ಮಾರಾಟ ಮಾಡುವುದಕ್ಕೂ, ಲಾಭಕ್ಕಾಗಿ ಮತ್ತೆ ಮಾರಾಟ ಮಾಡುವ ಇಚ್ಛೆಯಿಂದ ಕೊಳ್ಳುವುದಕ್ಕೂ ವ್ಯತ್ಯಾಸವಿದೆ. ಮೊದಲನೆಯ ವ್ಯವಹಾರ ಬಂಡವಾಳ ಪೂರ್ವ ವ್ಯವಹಾರ; ಎರಡನೆಯದು ಬಂಡವಾಳ ಸಂಬಂಧ ವ್ಯವಹಾರ.

ಆದರೆ ನಮ್ಮ ಪಕ್ಕಾ ಬಂಡವಾಳಗಾರ ಮತ್ತೆ ಮಾರಾಟ ಮಾಡುವ ಉದ್ದೇಶದಿಂದ ಏನು ಕೊಳ್ಳುತ್ತಾನೆ? ನಾಟಕಶಾಲೆಯ ಟಿಕೆಟ್ಟುಗಳನ್ನೆ? ಉಣ್ಣೆಯನ್ನೆ? ಮೋಟಾರನ್ನೆ? ಟೋಪಿಯನ್ನೆ? ಮನೆಯನ್ನೆ? ಇದು ಯಾವುದೂ ಅಲ್ಲ. ಆದರೂ ಇವೆಲ್ಲದರ ಅಂಶ ವನ್ನೂ ಅವನು ಕೊಳ್ಳುವನು. ಕೈಗಾರಿಕೆಯ ಕಾರ್ಮಿಕನೊಬ್ಬನೊಡನೆ ಸಂಭಾಷಣೆ ನಡಸಿ. ಅವನ ಯಜಮಾನ ಅವನಿಗೆ ಕೂಲಿ ಕೊಡುವುದು ಅವನ ದುಡಿಮೆಯ ಶಕ್ತಿಗಾಗಿ —ಎಂದು ಅವನು ಹೇಳುತ್ತಾನೆ. ಲಾಭಕ್ಕಾಗಿ ಮತ್ತೆ ಮಾರುವ ಉದ್ದೇಶದಿಂದ ಅವನ ದುಡಿಮೆಯ ಶಕ್ತಿಯನ್ನು ಬಂಡವಾಳಗಾರ ಕೊಳ್ಳುತ್ತಾನೆ. ಆದರೆ ಬಂಡವಾಳಗಾರ ತನ್ನ ಕಾರ್ಮಿಕನ ದುಡಿಮೆಯ ಶಕ್ತಿಯನ್ನೇ ಮಾರುವುದಿಲ್ಲವೆಂಬುದು ಸ್ಪಷ್ಟ. ಕಾರ್ಮಿಕನ ದುಡಿಮೆಯಿಂದ ಕಚ್ಚಾ ಸಾಮಗ್ರಿ ಸಿದ್ಧವಸ್ತುವಾಗಿ ಪರಿವರ್ತನೆ ಹೊಂದುತ್ತದೆ. ಇದನ್ನು ಅವನು ಮಾರುತ್ತಾನೆ. ದುಡಿಮೆಗಾರ ಪಡೆಯುವ ಕೂಲಿ ಅವನು ಉತ್ಪಾದಿಸಿದ ವಸ್ತುವಿನ ಬೆಲೆಗಿಂತ ಕಡಮೆಯಾಗಿರುತ್ತದೆ. ಇವೆರಡಕ್ಕೂ ಇರುವ ವ್ಯತ್ಯಾಸವೇ ಲಾಭ. ಇದನ್ನು ಬಂಡವಾಳಗಾರ ಪಡೆಯುತ್ತಾನೆ.

ಕಟ್ಟಡ, ಯಂತ್ರ, ಕಚ್ಚಾ ಸಾಮಗ್ರಿ ಮುಂತಾದ ಉತ್ಪಾದನ ಸಾಧನಗಳ ಒಡೆಯ ಬಂಡವಾಳಗಾರ. ಇವನು ದುಡಿಮೆಯ ಶಕ್ತಿಯನ್ನೂ ಕೊಳ್ಳುತ್ತಾನೆ. ಇವೆಲ್ಲವುಗಳ ಸಮ್ಮಿಲನದಿಂದ ಬಂಡವಾಳವಾದಿ ಉತ್ಪಾದನೆ ಆಗುತ್ತದೆ.

ಬಂಡವಾಳ ಹಣದ ರೂಪದಲ್ಲೇ ಇರುವುದಿಲ್ಲವೆಂಬುದನ್ನು ಗಮನಿಸಿ. ಇಂದಿನ ಕೈಗಾರಿಕೋದ್ಯಮಿಯ ಬಳಿ ನಗದು ಹಣ ಇಲ್ಲದೆಯೇ ಇರಬಹುದು. ಆದರೂ ಅವನು ಅಗಾಧ ಬಂಡವಾಳದ ಒಡೆಯನಾಗಿರಬಹುದು. ಉತ್ಪಾದನ ಸಾಧನದ ಸ್ವಾಮ್ಯ ಅವನ ದಾಗಿರಬಹುದು. ದುಡಿಮೆಯ ಶಕ್ತಿಯನ್ನು ಕೊಂಡಂತೆಲ್ಲ ಅವನ ಈ ಬಂಡವಾಳ ವೃದ್ಧಿ ಹೊಂದುತ್ತದೆ.

ಆಧುನಿಕ ರೀತಿಯ ಕೈಗಾರಿಕೆ ಒಮ್ಮೆ ಆರಂಭವಾದೊಡನೆಯೇ ಅದು ಲಾಭ ಸಂಪಾ ದಿಸತೊಡಗುತ್ತದೆ. ಬಹು ಬೇಗ ಅದರ ಬಂಡವಾಳ ಕೂಡಿಬರುತ್ತದೆ. ಆದರೆ ಆರಂಭದಲ್ಲಿ —ಆಧುನಿಕ ಕೈಗಾರಿಕೆ ಆರಂಭವಾಗುವ ಮುನ್ನ—ಬಂಡವಾಳ ಬಂದದ್ದು ಎಲ್ಲಿಂದ? ಇದು ಬಹು ಮುಖ್ಯ ಪ್ರಶ್ನೆ. ಏಕೆಂದರೆ, ಕೂಡಿಬಂದ ಬಂಡವಾಳ, ಸಂಚಿತ ಬಂಡವಾಳ, ಇಲ್ಲದಿದ್ದರೆ ನಾವು ಇಂದು ಅರಿತಿರುವ ಮಾದರಿಯ ಕೈಗಾರಿಕಾ ಬಂಡವಾಳ ವ್ಯವಸ್ಥೆಯೇ ಸಾಧ್ಯವಾಗುತ್ತಿರಲಿಲ್ಲ. ಸ್ವತಂತ್ರವಾದ, ಆಸ್ತಿ ಇಲ್ಲದ, ಶ್ರಮಜೀವಿ ವರ್ಗ—ಬದುಕಿಗಾಗಿ ಇನ್ನೊಬ್ಬರಿಗೆ ದುಡಿಯುವ ಜನ—ಇಲ್ಲದಿದ್ದರೂ ಈ ಬಂಡವಾಳ ವ್ಯವಸ್ಥೆ ಸಾಧ್ಯವಿರು ತ್ತಿರಲಿಲ್ಲ. ಈ ಎರಡು ಪರಿಸ್ಥಿತಿ ಏರ್ಪಟ್ಟುದೆಂತು?

ಕಷ್ಟಪಟ್ಟು ದುಡಿದು, ಅಗತ್ಯವಿದ್ದಷ್ಟೇ ವೆಚ್ಚ ಮಾಡಿ, ಸ್ವಲ್ಪ ಸ್ವಲ್ಪವಾಗಿ ಹಣ

ಕೂಡಿಟ್ಟು ಬೆಳಸಿದ ಜಾಗರೂಕ ಜನರಿಂದ ಬಂಡವಾಳವಾದಿ ಉತ್ಪಾದನಕ್ಕೆ ಅಗತ್ಯವಾದ ಬಂಡವಾಳ ಬಂತೆಂದು ನೀವು ಈ ಪ್ರಶ್ನೆಗೆ ಉತ್ತರ ಹೇಳಬಹುದು. ಜನ ಕೂಡಿಟ್ಟರು, ನಿಜ. ಆದರೆ ಮೊದಲು ಬಂಡವಾಳ ಬಾಹುಳ್ಯ ಕೂಡಿ ಬಂದದ್ದು ಆ ರೀತಿ ಅಲ್ಲ. ಹಾಗೆ ಹೇಳುವುದು ಬಲು ಸೊಗಸಾದ ಕತೆ. ಆದರೆ ಅದು ನಿಜವಲ್ಲವೆಂಬುದು ದುಃಖದ ಸಂಗತಿ. ನಿಜವಾದ ಕತೆ ಅಷ್ಟೇನೂ ಸೊಗಸಾದುದಲ್ಲ.

ಬಂಡವಾಳ ಯುಗ ಆರಂಭವಾಗುವುದಕ್ಕೆ ಮುನ್ನ, ಮುಖ್ಯವಾಗಿ ವಾಣಿಜ್ಯದ ಮೂಲಕ ಬಂಡವಾಳ ಕೂಡಿ ಬರುತ್ತಿತ್ತು. ಆಗ ವಾಣಿಜ್ಯವೆಂದರೆ ನಾವು ಇಂದು ಹೇಳುವ ಅರ್ಥವಷ್ಟೇ ಅಲ್ಲ. ಅದಕ್ಕೆ ಅಂದು ವಿಶಾಲಾರ್ಥವಿತ್ತು. ಪದಾರ್ಥ ವಿನಿಮಯವಷ್ಟೆ—ಅಲ್ಲ, ವಿಜಯ ಯಾತ್ರೆ, ಕಡಲುಗಳ್ಳತನ, ಕೊಳ್ಳೆ, ಶೋಷಣೆ—ಇವೆಲ್ಲಾ ಇದರಲ್ಲಿ ಸೇರಿತ್ತು.

ಇಟಲಿಯ ನಗರ ರಾಜ್ಯಗಳು ಕ್ರುಸೇಡ್ಸ್ ಅಥವಾ ಧರ್ಮಯುದ್ಧಗಳಲ್ಲಿ ಪಶ್ಚಿಮ ಯೂರೋಪಿನ ಸಹಾಯ ಪಡೆದದ್ದರಲ್ಲಿ ಅರ್ಥವಿಲ್ಲದೆ ಇಲ್ಲ, ಈ "ಧರ್ಮ" ಯುದ್ಧಗಳ ಫಲ ವಾಗಿ ವೆನಿಸ್, ಜಿನೋವಾ, ಪಿಸಾ ಮುಂತಾದವು ಸಂಪದ್ಯುಕ್ತ ಸಾಮ್ರಾಜ್ಯವೊಂದರ ಅಧೀನಕ್ಕೆ ಬಂದುವು. ಇವನ್ನು ಗೆದ್ದ ಇಟಲಿ ಈ ಅವಕಾಶದ ಸಂಪೂರ್ಣ ಉಪಯೋಗ ಪಡೆದುಕೊಂಡಿತು. ಕಾದು ಕುಳಿತ ಇಲ್ಲಿನ ವರ್ತಕರ, ಬ್ಯಾಂಕರುಗಳ ಕೈಗೆ ಪೂರ್ವದಿಂದ ಸಂಪತ್ತಿನ ಹೊಳೆ ಹರಿಯಿತು. ಈ ವಿಷಯವನ್ನು ಚೆನ್ನಾಗಿ ಅರಿತಿರುವವರಲ್ಲೊಬ್ಬರಾದ ಜಾನ್ ಎ. ಹಾಬ್ಸನ್ ಎಂಬವರು ಪೂರ್ವದೇಶಗಳೊಡನೆ ಇಟಾಲಿಯನ್ನರು ನಡಸಿದ ವಾಣಿಜ್ಯವನ್ನು ಕುರಿತು ಹೀಗೆ ಹೇಳುತ್ತಾರೆ: "ಹೀಗೆ ಬಹು ಹಿಂದೆಯೇ ಲಾಭಕರ ವ್ಯಾಪಾರದ ಅಸ್ತಿಭಾರ ನಿರ್ಮಾಣವಾಯಿತು. ಪಶ್ಚಿಮ ಯೂರೋಪಿನಲ್ಲಿ ಬಂಡವಾಳ ರೀತಿಯ ಉತ್ಪಾದನೆಗೆ ಅಗತ್ಯವಾದ ಸಂಪತ್ತನ್ನು ಒದಗಿಸಿದ್ದು ಈ ವ್ಯಾಪಾರ."[1]

ಹಾಬ್ಸನ್ನರ ಈ ಮಾತು ನಿಜವಿದ್ದರೆ, ಆಗ ಇಟಲಿ ಪರ್ಯಾಯದ್ವೀಪದಲ್ಲಿ ಬಂಡವಾಳ ವ್ಯವಸ್ಥೆಯ ಮೊದಲ ಮೊಳಕೆಗಳನ್ನು ಕಾಣಬೇಕು. ಇಲ್ಲಿಯೇ, ಹದಿಮೂರು ಹದಿ ನಾಲ್ಕನೆಯ ಶತಮಾನಗಳಲ್ಲಿ, ಇನ್ನೂ ಮುಂಚೆಯೇ, ನಾವು ಈ ಮೊಳಕೆಗಳನ್ನು ಕಾಣ ಬಹುದಾಗಿದೆ.

ಪೂರ್ವದಿಂದ ಬಂದ ಈ ಐಶ್ವರ್ಯ ಅಗಾಧವಾಗಿತ್ತು. ಆದರೆ ಅಷ್ಟೇ ಸಾಲದಾಗಿತ್ತು. ಬಂಡವಾಳ ರೀತಿಯ ಉತ್ಪಾದನೆಯ ಕಾರ್ಯ ನಿಜವಾಗಿಯೂ ಮುಂದುವರಿಯಲು ಹೊಸ ಮತ್ತು ಅಧಿಕ ಬಂಡವಾಳದ ಪ್ರವಾಹವೇ ಅಗತ್ಯವಾಗಿತ್ತು. ಈ ಅಗತ್ಯ ಪೂರೈಸಲು ಸಾಕಷ್ಟು ಅಧಿಕ ಪ್ರಮಾಣದಲ್ಲಿ ಬಂಡವಾಳ ಸಂಗ್ರಹಣೆ ಆರಂಭವಾದದ್ದು ಹದಿನಾರನೆಯ ಶತಮಾನದಿಂದ ಈಚೆಗೆ. ಆಧುನಿಕ ಬಂಡವಾಳ ವ್ಯವಸ್ಥೆಯ ವಿಕಾಸ ಕುರಿತ ಘನ ವಿದ್ವಾಂಸರ ಪೈಕಿ ಇನ್ನೊಬ್ಬನಾದ ಕಾರ್ಲ್ ಮಾರ್ಕ್ಸ್ ಇದನ್ನು ಈ ರೀತಿ ಸಂಗ್ರಹವಾಗಿ ಹೇಳಿದ್ದಾನೆ: "ಅಮೆರಿಕದಲ್ಲಿ ಚಿನ್ನ–ಬೆಳ್ಳಿಯ ಪತ್ತೆ, ಮೂಲವಾಸಿಗಳ ನಿರ್ಮೂಲ, ದಾಸ್ಯ, ಗಣಿಗಳಲ್ಲಿ

---

[1] J. A. Hobson, *The Evolution of Modern Capitalism* (1894). Revised edition, 1926, p. 11. Walter Scott Publishing Co., Ltd., London.

ಸಮಾಧಿ; ಈಸ್ಟ್ ಇಂಡೀಸ್ ದ್ವೀಪಗಳ ಆಕ್ರಮಣ, ಲೂಟಿ; ಕಪ್ಪು ತೊಗಲಿನ ಜನರ ವಾಣಿಜ್ಯ ಬೇಟೆಯು ಬೀಡಾಗಿ ಆಫ್ರಿಕದ ಪರಿವರ್ತನೆ—ಇವೆಲ್ಲಾ ಬಂಡವಾಳ ರೀತಿಯ ಉತ್ಪಾದನೆಯ ಉಷಃಕಾಲದ ಸಂಕೇತಗಳಾದುವು. ಈ ಚಟುವಟಿಕೆಗಳೇ ಪುರಾತನ ಸಂಪತ್ಸಂಗ್ರಹಣೆಯ ಮುಖ್ಯ ವೇಗವಾಹಕಗಳಾದುವು."[1]

ಕ್ರೌರ್ಯ ಕೊಲೆ ಚಿತ್ರಹಿಂಸೆಗಳ ಕತೆಯೊಂದನ್ನು ನೀವು ಕೇಳಬಯಸುವಿರಾ? ಇಪ್ಪತ್ತನೆಯ ಶತಮಾನದ ದರೋಡೆಕೋರರ, ವಂಚಕರ ಚಟುವಟಿಕೆಗಳು ಇದರ ಮುಂದೆ ತೀರ ಸಪ್ಪೆ. ಮೆಕ್ಸಿಕೋವಿನ ಅಥವಾ ಪೆರೂವಿಯದ ಆದಿವಾಸಿ ಇಂಡಿಯನರನ್ನು ಕೇಳಿ. ಹದಿನಾರನೆಯ ಶತಮಾನದಲ್ಲಿ ಅವನ ಪೂರ್ವಿಕರು ಬಿಳಿಯರೊಡನೆ ಮೊದಲನೆಯ ಸಂಪರ್ಕ ಪಡೆದ ಕತೆಯನ್ನು ಹೇಳಬೇಕೆಂದು ಕೇಳಿ. ಈ ದೇಶೀಯರು ಕ್ರೈಸ್ತ ಮತಾನುಯಾಯಿಗಳಾಗ ಬೇಕಾಯಿತು. ಇದರ ಜತೆಗೆ ಇವರಿಗೆ ಇತರ ಬಳುವಳಿಗಳನ್ನು ಬಿಳಿಯರು ಕೊಟ್ಟರು—ಗಣಿಗಳಲ್ಲಿ ಬಲವಂತ ದುಡಿಮೆ, ಹೊಡೆತ, ಕೊಲೆ. ಹಳೆಯ ಜಗತ್ತಿಗೆ ಸಾಗಿಸಲಿಕ್ಕಾಗಿ ಅವರು ಎಷ್ಟೊಂದು ಚಿನ್ನ ಬೆಳ್ಳಿಯನ್ನು ಭೂಗರ್ಭದಿಂದ ಅಗೆದು ತೆಗೆದರು! ಕೊನೆಗೆ ಈ ಲೋಹಗಳು ವರ್ತಕರ, ಬ್ಯಾಂಕರುಗಳ ಕೈ ಸೇರಿದುವು. (ಅವರ ಕೈಯಲ್ಲಿ ಚಿನ್ನ-ಬೆಳ್ಳಿ ತೆಪ್ಪಗೆ ಕುಳಿತಿರಲಿಲ್ಲ; ಸಾಲ ಕೊಡಲು ಇವು ಬಳಸಲ್ಪಟ್ಟುವು; ತಯಾರಿಕೆಗಾರರಿಗೆ, ಅಥವಾ ವ್ಯಾಪಾರಕ್ಕಾಗಿ, ಈ ಲೋಹಗಳು ಬಳಸಲ್ಪಟ್ಟುವು; ಪ್ರತಿಯಾಗಿ ಹೆಚ್ಚು ಹಣ ಬಂತು. ಒಟ್ಟನಲ್ಲಿ ಇದು ಬಂಡವಾಳವಾಯಿತು.)

ಮೆಕ್ಸಿಕೋ ಪೆರೂ ದೇಶಗಳನ್ನು ಜಯಿಸಿದ ಕಾರ್ಟೆಸ್ ಮತ್ತು ಪಿಜಾರೋ ಇವರು ಸ್ಪೈಯ್ನ್ ದೇಶದವರು. ಸ್ಪೈಯ್ನಿನ ಜನ ತಮ್ಮ ವಸಾಹತುಗಳನ್ನು ಬಹು ಕಠೋರವಾಗಿ ಆಳುವರೆಂಬ ಅಪಕೀರ್ತಿಭಾಜನರು. ಆದರೆ ಡಚ್ಚರು ಇನ್ನೇನು? ಅವರ ವಿಧಾನ ಬೇರೆ ಬಗೆಯದಾಗಿತ್ತೆ?

"ಇಲ್ಲ," ಎನ್ನುತ್ತಾರೆ, ಜಾವಾ ದ್ವೀಪದ ಲೆಫ್ಟಿನೆಂಟ್ ಗೌರ್ನರ್ ಆಗಿದ್ದ ಸರ್ ಟಿ. ಎಸ್. ರ್‍ಯಾಫಲ್ಸ್. ಹಾಲೆಂಡಿನ ವಸಾಹತುಗಳ ಆಡಳಿತದ ಚರಿತ್ರೆಯೆಂದರೆ, "ದ್ರೋಹ ಲಂಚ ಕಗ್ಗೊಲೆ ಸಣ್ಣತನಗಳ ಅತ್ಯಸಾಧಾರಣ ಸಂಬಂಧ"[2] ಎಂದು ಇವರು ಹೇಳುತ್ತಾರೆ. ೧೬೧೩ ರಿಂದ ೧೯೫೩ರ ವರೆಗೆ ಡಚ್ ಈಸ್ಟ್ ಇಂಡಿಯನ್ ಕಂಪೆನಿಯ ಲಾಭ ವರ್ಷಕ್ಕೆ ೬,೪೦,೦೦೦ ಗಿಲ್ಡರುಗಳೆಂದು ಇವರ ಅಂದಾಜು.

ಈ ಬಂಡವಾಳವನ್ನು ಡಚ್ಚರು ಕೂಡಿಸಿದ್ದಾದರೂ ಹೇಗೆ? ಅವರ ಮಾದರಿ ಇದು: "ಮಲಕ್ಕಾವನ್ನು ಪಡೆಯಲು ಪೋರ್ಚುಗೀಸ್ ಗೌರ್ನರಿಗೆ ಲಂಚ ಕೊಟ್ಟರು. ೧೬೪೧ರಲ್ಲಿ ಆತ ಡಚ್ಚರನ್ನು ನಗರದೊಳಗೆ ಪ್ರವೇಶಿಸಲು ಬಿಟ್ಟ. ತಕ್ಷಣ ಇವರು ಅವನ ಮನೆಗೇ ನುಗ್ಗಿ

---

[1] Karl Marx, *Capital* (1867), translated from the third German edition by Samuel Moore and Edward Aveling, and edited by Frederick Engels, vol. I, p. 775. Wm. Glaisher, Ltd., London, 1918.

[2] Quoted in Karl Marx, *op. cit.*, p. 776.

ಅವನನ್ನು ಕೊಂದುಹಾಕಿದರು. ಏಕೆಂದರೆ ಆತ ತನ್ನ ದೇಶಕ್ಕೆ ದ್ರೋಹ ಎಸಗಿ ಇವರನ್ನು ನಗರಕ್ಕೆ ಬಿಟ್ಟದ್ದಕ್ಕಾಗಿ. ಇವರು ಅವನಿಗೆ ೨೧,೮೭೫ ಪೌಂಡು ಹಣ ಕೊಡಬೇಕಾಗಿತ್ತು. ಇದನ್ನು ತಪ್ಪಿಸಿಕೊಳ್ಳಲು ಈ ಕೊಲೆ. ಇವರು ಕಾಲಿಟ್ಟಲ್ಲೆಲ್ಲ ಧ್ವಂಸ, ಜನನಾಶ. ಜಾವಾದ ಒಂದು ಪ್ರಾಂತವಾದ ಬಂಜುವಾಂಗಿಯ ಜನಸಂಖ್ಯೆ ೧೭೫೦ರಲ್ಲಿ ೮೦,೦೦೦ ಇತ್ತು; ೧೮೧೧ರಲ್ಲಿ ಇದು ಕೇವಲ ೧೮೦೦೦ ಆಯಿತು. ಇದು ಡಚ್ಚರ ವಾಣಿಜ್ಯ ವೈಖರಿ!"[1]

ಹದಿನೇಳನೆಯ ಶತಮಾನದ ಮುಖ್ಯ ಬಂಡವಾಳಷಾಹಿ ರಾಷ್ಟ್ರವಾಗಲು ಹಾಲೆಂಡ್ ಹಣ ರಾಶಿ ಹಾಕಿದ ಬಗೆ ಇದು.

ಅತ್ಯಂತ ಮುಖ್ಯ ಬಂಡವಾಳಷಾಹಿ ರಾಷ್ಟ್ರವೆಂಬ ಪದವಿ ಬಂದದ್ದು ಇಂಗ್ಲೆಂಡಿಗೆ. ಅಗತ್ಯ ವಾದ ಬಂಡವಾಳವನ್ನು ಇಂಗ್ಲಿಷರು ಎಂದು, ಹೇಗೆ ಗಳಿಸಿದರು? ಶ್ರಮದ ದುಡಿಮೆ, ಜೋಕೆಯ ಜೀವನ, ಸಂಚಿತ ಉಳಿತಾಯ—ಇವುಗಳಿಂದಲೆ? ಖಂಡಿತ ಸಂಬಬೇಡಿ.

ಡಬ್ಲ್ಯೂ. ಹೌವಿಟ್ ಎಂಬೊಬ್ಬ, "ವಸಾಹತು ನಿರ್ಮಾಣ ಹಾಗೂ ಕ್ರಿಸ್ತ ಧರ್ಮ" ಎಂಬ ಪುಸ್ತಕವನ್ನು ೧೮೩೮ರಲ್ಲಿ ಪ್ರಕಟಿಸಿದ. ಬ್ರಿಟಿಷರು ಇಂಡಿಯಾದಲ್ಲಿ ಏನು ಮಾಡಿದ ರೆಂಬುದನ್ನು ಕುರಿತು "ಓರಿಯೆಂಟಲ್ ಹೆರಾಲ್ಡ್" ಎಂಬ ಪತ್ರಿಕೆಯಲ್ಲಿ ಪ್ರಕಟವಾದ ಲೇಖನದಿಂದ ಈ ಮಾತು ಉದ್ಧರಿಸಿದ್ದಾರೆ: "ನಮ್ಮ ಚಕ್ರಾಧಿಪತ್ಯ ಜನಾಭಿಪ್ರಾಯದ ತಳ ಹದಿಯ ಮೇಲೆ ನಿರ್ಮಿತವಾದದ್ದಲ್ಲ. ಇದು ಶಾಸನಾನುಗಣ ಚಕ್ರಾಧಿಪತ್ಯವೂ ಅಲ್ಲ. ಇದು ಆಕ್ರಮಿತ. ಇನ್ನೂ ಇದು ಬಲಪ್ರಯೋಗದಿಂದಲೇ ಆಳಲ್ಪಡುತ್ತಿದೆ. ಈ ದೇಶದ ಯಾವ ಭಾಗವೂ ತಾನಾಗಿ ಈ ಚಕ್ರಾಧಿಪತ್ಯದಲ್ಲಿ ಸೇರಿದ್ದಲ್ಲ....ಸರಕು ಮಾರಾಟ ಮಾಡುವುದ ಕ್ಕಾಗಿ ಸಮುದ್ರ ತೀರದಲ್ಲಿ ಕಾಲೂರಲು ನಮಗೆ ಮೊದಲು ಅಪ್ಪಣೆ ದೊರಕಿತು....ಕ್ರಮ ಕ್ರಮವಾಗಿ, ಕೆಲವು ಸಲ ಬಲಪ್ರಯೋಗದಿಂದ, ಕೆಲವು ಸಲ ಮೋಸದಿಂದ....ನಾವು ಈ ದೇಶದ ಪ್ರಾಚೀನ ರಾಜರುಗಳನ್ನು ಅಣಗಿಸಿದ್ದೇವೆ, ಅವರ ಅಧಿಕಾರವನ್ನೆಲ್ಲ ಕಸಿದುಕೊಂಡಿ ದ್ದೇವೆ, ಜನರ ಕೈಗಾರಿಕೆ ಮತ್ತು ಸಾಧನಗಳನ್ನು ಒಂದೇ ಸಮನಾಗಿ ಹಿಂಡುತ್ತಿದ್ದೇವೆ, ಅವರಲ್ಲಿರುವ ಹೆಚ್ಚಳದ ಸಂಪತ್ತನ್ನೆಲ್ಲ ಹೀರಿಕೊಳ್ಳುತ್ತಿದ್ದೇವೆ."[2]

ಕೋಪದ ಮಾತಲ್ಲವೆ ಇದು? ಬಹುಶಃ ನೀವು ೧೭೬೯–೧೭೭೦ರಲ್ಲಿ ಭಾರತದಲ್ಲಿ ಬದುಕಿದ್ದಿದ್ದರೆ ಇದೇ ರೀತಿ ಕ್ರುದ್ಧರಾಗುತ್ತಿದ್ದಿರಿ. ಆ ಸಮಯದಲ್ಲಿ ಸಹಸ್ರಾರು ಜನ ದೇಶೀ ಯರು ಉಪವಾಸದಿಂದ ಸಾಯುತ್ತಿದ್ದುದನ್ನು ಕಾಣಬಹುದಿತ್ತು. ಏಕೆ? ಸಾಕಷ್ಟು ಅಕ್ಕಿ ಇರಲಿಲ್ಲವೆ? ಉತ್ತರ ಸ್ಪಷ್ಟ. ಇಂಗ್ಲಿಷರು ಎಲ್ಲ ಅಕ್ಕಿಯನ್ನೂ ಕೊಂಡಿದ್ದರು. ದೀನರಾದ ದೇಶೀಯರು ಕೊಡಲಾರದಷ್ಟು ದುಬಾರಿ ಬೆಲೆಗಲ್ಲದೆ ಅವರು ಮಾರಲು ಇಚ್ಛಿಸುತ್ತಿರಲಿಲ್ಲ.

ವಸಾಹತುಗಳೊಡನೆ ವ್ಯಾಪಾರದಿಂದ ಐರೋಪ್ಯ ದೇಶಗಳಿಗೆ ಸಂಪತ್ತು ಲಭಿಸಿತು. ಆರಂಭ ದೆಶೆಯಲ್ಲಿ ಯೂರೋಪಿನ ವರ್ತಕರು ಐಶ್ವರ್ಯವಂತರಾದದ್ದು ಈ ವ್ಯಾಪಾರದಿಂದ.

---

[1] Karl Marx, *op. cit.* p. 777.

[2] W. Howitt, *Colonization and Christianity*, pp. 296, 297. Longman, Orme, Brown, Green and Longmans, London, 1838.

ಮನುಷ್ಯರನ್ನು—ಕರಿದೊಗಲಿನ ಆಫ್ರಿಕನರನ್ನು—ಮಾರಿಯೂ ಈ ಜನ ಬಂಡವಾಳ ಕೂಡಿಸಿಕೊಂಡರೆಂಬುದು ಗಮನಾರ್ಹ. ೧೮೪೦ರಲ್ಲಿ ಪ್ರೊ|| ಎಚ್. ಮೆರಿವೇಲ್ ಎಂಬವರು ಆಕ್ಸ್‌ಫರ್ಡಿನಲ್ಲಿ "ವಸಾಹತು ಮತ್ತು ವಸಾಹತು ನಿರ್ಮಾಣ" ಎಂಬ ವಿಚಾರವಾಗಿ ಹಲವು ಭಾಷಣ ಮಾಡಿದರು. ಒಂದು ಭಾಷಣದಲ್ಲಿ ಇವರು ಎರಡು ಮುಖ್ಯ ಪ್ರಶ್ನೆಗಳನ್ನು ಹಾಕಿ, ಇವಕ್ಕೆ ಅಷ್ಟೇ ಮುಖ್ಯ ಉತ್ತರ ನೀಡಿದರು : "ಪ್ರಾಂತೀಯ ನಗರಗಳಾಗಿದ್ದ ಲಿವರ್‌ಪೂಲ್ ಮ್ಯಾಂಚೆಸ್ಟರುಗಳು ಮಹಾ ನಗರಗಳಾದದ್ದು ಏತರಿಂದ ? ಇವುಗಳ ಕೈಗಾರಿಕೆಯನ್ನು ಸದಾ ತಿರುಗಿಸುತ್ತಿರುವುದು, ಇವು ಶೀಘ್ರವಾಗಿ ಸಂಪತ್ತು ಶೇಖರಿಸುವಂತೆ ಮಾಡಿರುವುದು ಯಾವುದು ?....ಅವುಗಳ ಇಂದಿನ ಸಂಪತ್ ಸಮೃದ್ಧಿಗೆ ನೀಗ್ರೋಗಳ ದುಡಿಮೆ ದುಃಖಗಳೇ ಕಾರಣವೆನ್ನಬಹುದು. ಅವುಗಳ ಹಡಗುಕಟ್ಟೆಯ ನಿರ್ಮಾಣವಾದದ್ದು, ಅವುಗಳ ಉಗಿ ಯಂತ್ರ ರಚಿಸಿದ್ದು ಇವರ ಕೈ, ಎನ್ನಬಹುದೇನೋ."[1]

ಪ್ರೊಫೆಸರುಗಳ ಅಭಿಪ್ರಾಯವೆಂದರೆ ಅದನ್ನು ಗೇಲಿ ಎಬ್ಬಿಸುವುದು ಈಗಿನ ಕಾಲದ ಷೋಕಿ. ಹಾಗಾದರೆ ಪ್ರೊಫೆಸರ್ ಮೆರಿವೇಲ್ ಉತ್ಪ್ರೇಕ್ಷೆ ಮಾಡಿದ್ದಾರೆಯೆ ? ಇಲ್ಲ. ಇದು ಉತ್ಪ್ರೇಕ್ಷೆಯ ಮಾತಲ್ಲ. ೧೭೮೮ರಲ್ಲಿ ಲಿವರ್ ಪೂಲಿನ ವರ್ತಕರು ಕಾಮನ್ಸ್ ಸಭೆಗೆ ಒಪ್ಪಿಸಿದ ಮನವಿಯನ್ನು ಬಹುಶಃ ಇವರು ಓದಿರಬೇಕು. ಜೀವಂತ ಮನುಷ್ಯರ ಭೀಕರ ವ್ಯಾಪಾರ ನಾಗರಿಕ ದೇಶದ ಯೋಗ್ಯತೆಗೆ ತಕ್ಕದ್ದಲ್ಲವೆಂಮ ಹೇಳಿದ "ಕೆಟ್ಟ ಅಭಿರುಚಿ"ಯ ಜನಕ್ಕೆ ಈ ವರ್ತಕರು ಉತ್ತರ ರೂಪವಾಗಿ ಈ ಮನವಿ ಸಲ್ಲಿಸಿದರು : "ಹಲವು ವರ್ಷಗಳಿಂದ ಲಿವರ್‌ಪೂಲ್ ವಾಣಿಜ್ಯದ ಒಂದು ಮುಖ್ಯಾಂಗವಾಗಿದ್ದು, ಇಂದೂ ಅಷ್ಟೇ ಪ್ರಾಮುಖ್ಯ ಹೊಂದಿರುವ ಈ ಆಫ್ರಿಕನ್ ಗುಲಾಮರ ವ್ಯಾಪಾರವನ್ನು ಸಂಪೂರ್ಣವಾಗಿ ನಿಷೇಧಿಸಬೇಕೆಂಬ ಯತ್ನವನ್ನು ಕಂಡು ಈ ಅರ್ಜಿದಾರರು ಬಹು ವ್ಯಾಕುಲರಾಗಿದ್ದಾರೆ...ಸಂಪತ್ತು ಗಳಿಸುವ ಈ ಮಾರ್ಗದ ಬಹಿಷ್ಕಾರದ ವಿರುದ್ಧ ನಮ್ಮ ವಾದವನ್ನು ಲಾಲಿಸಬೇಕು—ಎಂದು ಅರ್ಜಿದಾರರಾದ ನಮ್ಮ ನಮ್ರ ವಿನಂತಿ...."[2]

ಪೋರ್ಚುಗೀಸರು ಹದಿನಾರನೆಯ ಶತಮಾನದ ಆರಂಭದಲ್ಲಿ ಗುಲಾಮರ ವ್ಯಾಪಾರ ಆರಂಭಿಸಿದರು. ಕ್ರೈಸ್ತ ಯೂರೋಪಿನ ಇತರ ನಾಗರಿಕ ರಾಜ್ಯಗಳು ತಕ್ಷಣ ಪೋರ್ಚುಗಲ್ಲನ್ನನುಸರಿಸಿದುವು. (ಅಮೆರಿಕಕ್ಕೆ ತರಲಾದ ಮೊಟ್ಟ ಮೊದಲನೆಯ ನೀಗ್ರೋ ಗುಲಾಮರು ಬಂದದ್ದು ಡಚ್ ಹಡಗಿನಲ್ಲಿ—೧೬೧೯ರಲ್ಲಿ.) ಏನೂ ಅರಿಯದ ನೀಗ್ರೋಗಳನ್ನು ಆಫ್ರಿಕದಲ್ಲಿ ಹಿಡಿದು, ಕಚ್ಚಾ ಸಾಮಗ್ರಿಗಳಂತೆ, ಹೊಸ ಜಗತ್ತಿನ (ಅಮೆರಿಕದ) ತೋಟಗಳಲ್ಲಿ ಕೆಲಸಕ್ಕೆ ಹಚ್ಚಿ, ಶೀಘ್ರ ಮರಣಕ್ಕೆ ಗುರಿಮಾಡಿ ಮಾರಿ, ಅಗಾಧ ಹಣ ಸಂಪಾದನೆ ಮಾಡಬಹುದೆಂಬ ವಿಚಾರವನ್ನು ಮೊಟ್ಟಮೊದಲು ಅರಿತ ಇಂಗ್ಲಿಷನವನು ಜಾನ್ ಹಾಕಿನ್ಸ್. ಈ ಕೊಲೆಗಡುಕ

---

[1] H. Merivale, *Lectures on Colonization and Colonies*, (delivered in 1839, 1840 and 1841) p. 302. Oxford University Press, 1928.

[2] *Documents Illustrative of the History of the Slave Trade to America*, Edited by Elizabeth Donnan. 3 vols. 1930, 1931, 1932. Vol. 2, pp. 574, 575. Published by the Carnegie Institute of Washington.

ಅಪಹಾರಕನ ಮಹಾ ಕಾರ್ಯವನ್ನು ಮೆಚ್ಚಿ "ಘನ ರಾಣಿ ಬೆಸ್ಸಳು" ಈತನಿಗೆ "ಸರ್" ಎಂಬ ಬಿರುದು ನೀಡಿದಳು—ಇವನ ದ್ವಿತೀಯ ಗುಲಾಮ ವ್ಯಾಪಾರ ಪ್ರವಾಸವಾದ ಮೇಲೆ. ಈತ ತನ್ನ ಟೊಪ್ಪಿಗೆಯ ಮೇಲೆ ಸರಪಣಿಯಲ್ಲಿ ಬಂಧಿತ ನೀಗ್ರೋವಿನ ಚಿತ್ರ ಧರಿಸಿದ್ದ. ಈತ ಸರ್ ಬಿರುದಾಂಕಿತನಾದ ಮೇಲೆ, ಒಮ್ಮೆ, ತನ್ನ ಈ ಅಮಾನುಷ ವ್ಯಾಪಾರ ಸಾಹಸವನ್ನು ಕುರಿತು ರಿಚರ್ಡ್ ಹ್ಯಾಕ್ಲಿಟ್ ಎಂಬವನೊಡನೆ ಜಂಭ ಕೊಚ್ಚಿಕೊಂಡ. ೧೫೬೨–೬೩ರಲ್ಲಿ ಹಾಕಿನ್ಸ್ ಮಾಡಿದ ಮೊಟ್ಟ ಮೊದಲ ಸಮುದ್ರಯಾನವನ್ನು ಕುರಿತು ಆತ ಹೇಳಿಕೊಂಡ ವೈಖರಿಯನ್ನು ಹ್ಯಾಕ್ಲಿಟ್ ಹೀಗೆ ಬಣ್ಣಿಸುತ್ತಾನೆ: "ಹಿಸ್ಪೇನಿಯೋಲಾದಲ್ಲಿ ನೀಗ್ರೋಗಳನ್ನು ಸುಲಭವಾಗಿ ಮಾರಬಹುದೆಂದೂ, ಗಿನಿ ತೀರದಲ್ಲಿ ನೀಗ್ರೋಗಳನ್ನು ಧಾರಾಳವಾಗಿ ಸಂಗ್ರಹಿಸ ಬಹುದೆಂದೂ ದೃಢವಾದ ಮೇಲೆ ಈ ಬಗ್ಗೆ ಯತ್ನ ಮಾಡಲು ಇವನು ತೀರ್ಮಾನಿಸಿದ ; ತನ್ನನ್ನು ಆರಾಧ್ಯ ದೈವವೆಂದು ನಂಬಿದ್ದ ಲಂಡನ್ನಿನ ಗೆಳೆಯರಿಗೆ ಈ ವಿಚಾರ ತಿಳಿಸಿದ.... ಇವನ ಉದ್ದೇಶವನ್ನು ಅವರೆಲ್ಲಾ ತುಂಬಾ ಮೆಚ್ಚಿಕೊಂಡರು. ಅವರು ಧಾರಾಳವಾಗಿ ಚಂದಾ ಕೊಟ್ಟರು ; ಈ ಸಾಹಸ ಕಾರ್ಯದಲ್ಲಿ ಈತನ ಸಹಚರರಾದರು ; ಈ ಉದ್ದೇಶಕ್ಕಾಗಿ ತಕ್ಷಣ ಮೂರು ಹಡಗುಗಳು ಸಿದ್ಧವಾದುವು....ಅಲ್ಲಿಂದ ಇವನು ಗಿನಿ ತೀರದ ಸಿಯೆರಾ ಲಿಯೋನಕ್ಕೆ ತೆರಳಿದ....ಇಲ್ಲಿ ಆತ ಸುಮಾರು ಕಾಲ ತಂಗಿದ ; ಕತ್ತಿಯ ಬಲದಿಂದಲೂ ಇತರ ಮಾರ್ಗ ಗಳಿಂದಲೂ ಈತ ಕನಿಷ್ಠ ಪಕ್ಷ ಮುನ್ನೂರು ನೀಗ್ರೋಗಳನ್ನಾದರೂ ಜಮಾಯಿಸಿದ. ಇವರುಗಳು ಮಾತ್ರವೇ ಅಲ್ಲ. ಆ ದೇಶದಲ್ಲಿ ದೊರಕುತ್ತಿದ್ದ ಇತರ ಸರಕುಗಳನ್ನೂ ಸಂಗ್ರಹಿಸಿದ್ದ ....ಈ ಬಲಿಯ ಜಂತುಗಳನ್ನು ಹೊತ್ತ ಹಡಗಿನಲ್ಲಿ ಈತ ಸಾಗಿ, ಈ ನೀಗ್ರೋಗಳನ್ನೆಲ್ಲ ಮಾರಿದ. ಇವರಿಗಾಗಿ ಇವನು ಪಡೆದ ಬೆಲೆ ಎಷ್ಟೆಂದರೆ, ಪ್ರತಿಯಾಗಿ ಇವನಿಗೆ ದೊರೆತ ಪದಾರ್ಥಗಳಾದ ಚರ್ಮ, ಶುಂಠಿ, ಸಕ್ಕರೆ, ಮುತ್ತು ಮುಂತಾದುವನ್ನು ತನ್ನ ಮೂರು ಹಡಗುಗಳ ತುಂಬಾ ಭರ್ತಿ ಮಾಡಿದುದಲ್ಲದೆ ಇನ್ನೆರಡು ಹಡಗುಗಳನ್ನು ಇದಕ್ಕಾಗಿ ಬಾಡಿಗೆಗೆ ಪಡೆದ....ಹೀಗೆ ಹಣ ಗಳಿಸಿ, ಜಯಶಾಲಿಯಾಗಿ, ತನಗೂ ತನ್ನ ಅನುಯಾಯಿಗಳಿಗೂ ಲಾಭ ದೊರಕಿಸಿಕೊಂಡು, ಸ್ವದೇಶಕ್ಕೆ ಹಿಂದಿರುಗಿದ."[1]

ಈತನ "ಹಣಗಳಿಕೆ, ವಿಜಯ, ಲಾಭ ಸಂಪಾದನೆ" ಇವು ರಾಣಿ ಎಲಿಜಬೆತ್ತಳ ಮೆಚ್ಚುಗೆ ಗಳಿಸಿದುವು. ಮುಂದೆ ಬರಬಹುದಾದ ಲಾಭದಲ್ಲಿ ತಾನೂ ಪಾಲುದಾರಳಾಗಬಯಸಿದಳು. ಆದ್ದರಿಂದ ಗುಲಾಮವ್ಯಾಪಾರಿ ಹಾಕಿನ್ಸನಿಗೆ ಈತನ ದ್ವಿತೀಯ ವಿಜಯ ಯಾತ್ರೆಗಾಗಿ ರಾಣಿ ಒಂದು ಹಡಗನ್ನು ಸಾಲ ಕೊಟ್ಟಳು. ಈ ಹಡಗಿನ ಹೆಸರು ಏನು ಗೊತ್ತೆ?—ಜೀಸಸ್, ಯೇಸು !

ವಾಣಿಜ್ಯದಿಂದ—ಎಂದರೆ ವಿಜಯ, ಕಡಲುಗಳ್ಳತನ, ಕೊಳ್ಳೆ, ಶೋಷಣೆ ಇವುಗಳಿಂದ —ಬಂಡವಾಳ ರೀತಿಯ ಉತ್ಪಾದನೆಗೆ ಬೇಕಾದ ಬಂಡವಾಳದ ಶೇಖರಣೆಯಾಯಿತು, ಎನ್ನಬಹುದು. "ಹಣವೆಂಬುದು ಹುಟ್ಟಿನಿಂದಲೇ ಒಂದು ಕೆನ್ನೆಯ ಮೇಲೆ ರಕ್ತದ ಕಲೆ ಹೊಂದಿ ಈ ಜಗತ್ತಿಗೆ ಬಂತು. ಆದರೆ ಬಂಡವಾಳವಾದರೋ, ಅಡಿಯಿಂದ ಮುಡಿಯವರೆಗೆ,

---

[1] *Documents of the Slave Trade*, *op. cit.*, vol. I, pp. 45-47, footnote.

ಕಣ ಕಣದಲ್ಲಿಯೂ, ರಕ್ತ ಕೆಸರು ತೊಟ್ಟಿಕ್ಕಿಸುತ್ತಾ ಹುಟ್ಟಿತು."[1] ಹೀಗೆಂದು ಕಾರ್ಲ್ ಮಾರ್ಕ್ಸ್ ಬರೆದ. ಹೀಗೆ ಅವನು ಬರೆಯಲು ಕಾರಣವಿಲ್ಲದೆ ಇರಲಿಲ್ಲ. ವಾಣಿಜ್ಯ—ಎಂದರೆ ವಿಜಯ, ಕಡಲುಗಳ್ಳತನ, ಕೊಳ್ಳೆ, ಶೋಷಣೆ ಇವು—ಬಹು ಪರಿಣಾಮಕಾರಿ ವಿಧಾನ. ಇವುಗಳಿಂದ ಅಗಾಧ ಲಾಭ ಬಂತು; ಬಂಡವಾಳ ಬೆಳಸಲು ಬೇಕಾದಷ್ಟು ಬಂತು. ದೊಡ್ಡ ಪ್ರಮಾಣದ ಬಂಡವಾಳರೀತಿಯ ಉತ್ಪಾದನೆ ಆರಂಭವಾಗಲು ಹೀಗೆ ಶೇಖರವಾದ ಬಂಡವಾಳ ಮಾತ್ರವೇ ಸಾಕಾಗಿರಲಿಲ್ಲ. ಬರೀ ಬಂಡವಾಳವಾಗಿ—ಎಂದರೆ ಲಾಭ ದೊರಕಿಸಿ ಕೊಡುವಂತೆ—ಉಪಯೋಗಿಸುವುದು ಸಾಧ್ಯವಿಲ್ಲ. ಇದು ಸಾಧ್ಯವಾಗಬೇಕಾದರೆ, ಲಾಭ ಬರಬೇಕಾದರೆ, ದುಡಿಮೆಯೂ ಇರಬೇಕು. ಆದ್ದರಿಂದ, ದುಡಿಮೆಗಾರರು ಸಾಕಷ್ಟು ಸಂಖ್ಯೆಯಲ್ಲಿ ದೊರಕಬೇಕಿತ್ತು.

ಇಪ್ಪತ್ತನೆಯ ಶತಮಾನದಲ್ಲಿ ನಮ್ಮ ಸುತ್ತ, ಎಲ್ಲೆಲ್ಲೂ, ನಿರುದ್ಯೋಗವಿದೆ. ಯಾವ ಹೊಸ ಕೆಲಸವಾದರೂ ಸರಿ, ಮಾಡಲು ಇಚ್ಛೆಯುಳ್ಳ, ಆಸಕ್ತರಾದ, ಕಾರ್ಮಿಕರಿದ್ದಾರೆ. ಕೈಗಾರಿಕೆ ಯಲ್ಲಿ ಕೆಲಸ ಮಾಡಲು ಕಾರ್ಮಿಕರು ಸಿಕ್ಕುವುದೇ ದುರ್ಲಭವೆನ್ನುವ ಕಾಲವೊಂದಿತ್ತೆಂದರೆ ನಾವು ನಂಬುವುದು ಕಷ್ಟ. ಕೂಲಿಗಾಗಿ ಕೆಲಸ ಮಾಡಲು ಕಾರ್ಖಾನೆ ಹೊಗಲು ಕಾತರ ರಾದ ಜನರಿದ್ದಾರೆಂಬುದು ನಮ್ಮ ದೃಷ್ಟಿಯಲ್ಲಿ ಸಹಜ. ಆದರೆ ಇದು ಸಹಜ ಪರಿಸ್ಥಿತಿ ಅಲ್ಲವೇ ಅಲ್ಲ. ಒಬ್ಬ ಇನ್ನೊಬ್ಬನಿಗೆ ಕೆಲಸ ಮಾಡುವುದು, ಅವನು ಹಾಗೆ ಮಾಡಲೇ ಬೇಕಾದಾಗ. ಮನುಷ್ಯನಿಗೆ ನೆಲ ದೊರಕುವ ವರೆಗೂ, ಅಲ್ಲಿ ಅವನು ಸ್ವತಃ ಉತ್ಪಾದನೆ ಮಾಡುವುದು ಸಾಧ್ಯವಿರುವ ವರೆಗೂ, ಆತ ಇನ್ನೊಬ್ಬನಿಗಾಗಿ ಕೆಲಸ ಮಾಡುವುದಿಲ್ಲ. ಅಮೆರಿಕಾ ಸಂಯುಕ್ತ ಸಂಸ್ಥಾನದ ಇತಿಹಾಸ ಈ ಮಾತನ್ನು ಸಿದ್ಧಪಡಿಸುತ್ತದೆ. ಪಶ್ಚಿಮದಲ್ಲಿ ನೆಲ ಸುಲಭ ಬೆಲೆಗೋ ಪುಕ್ಕಟೆಯಾಗಿಯೋ ಸಿಕ್ಕುತ್ತಿದ್ದ ವರೆಗೂ, ನೆಲದ ಹಸಿವಿನ ಜನರ ಪಶ್ಚಿಮಾಭಿಮುಖ ಯಾತ್ರೆ ಸತತವಾಗಿ ಸಾಗಿತ್ತು. ಆದ್ದರಿಂದ ಪೂರ್ವದಲ್ಲಿ ಕಾರ್ಮಿಕರು ದುರ್ಲಭರಾಗಿದ್ದರು. ಆಸ್ಟ್ರೇಲಿಯದಲ್ಲೂ ಹೀಗೇ ಆಯಿತು. "ಸ್ವಾನ್ ನದಿಯ ಬಳಿಯ ಪ್ರದೇಶ ಸ್ಥಾಪಿತವಾದಾಗ....ಮಿ|| ಪೀಲ್....ತನ್ನೊಡನೆ ಅಲ್ಲಿಗೆ ೫೦೦೦೦ ಪೌಂಡು ಹಣವನ್ನೂ ೩೦೦ ಜನ ಕಾರ್ಮಿಕರನ್ನೂ ಕೊಂಡೊಯ್ದ; ಆದರೆ ಅವರೆಲ್ಲ ಭೂಮಿ ಪಡೆಯುವ ಆಸೆಗೆ ಬೆರಗಾಗಿದ್ದರು....ಸ್ವಲ್ಪ ಕಾಲದಲ್ಲೇ ಅವನಲ್ಲಿ ಹಾಸಿಗೆ ಹಾಸಿಕೊಡಲೂ, ನದಿಯಿಂದ ನೀರು ತರಲೂ ಕೂಡ ಒಬ್ಬ ಜವಾನನೂ ಉಳಿಯಲಿಲ್ಲ."[2] ಪಾಪ! ಶ್ರೀಮಾನ್ ಪೀಲನ ಬವಣೆಗಾಗಿ ಕಣ್ಣೀರಿಡಬೇಕಲ್ಲವೆ? ಏಕೆಂದರೆ ತಮ್ಮದೇ ಆದ ಉತ್ಪಾದನೆಯ ಸಾಧನ ದೊರಕುವ ಸಾಧ್ಯತೆ ಇರುವವರೆಗೂ—ಎಂದರೆ, ಈ ಸಂದರ್ಭದಲ್ಲಿ, ನೆಲ ದೊರಕುವ ಸಾಧ್ಯತೆ ಇರುವವರೆಗೂ—ಕಾರ್ಮಿಕರು ಇನ್ನೊಬ್ಬರಿಗಾಗಿ ದುಡಿಯು ವುದಿಲ್ಲವೆಂಬ ಸತ್ಯದ ಮನವರಿಕೆ ಈತನಿಗೆ ಆಗದಿದ್ದುದಕ್ಕಾಗಿ ನಾವು ಮರುಗಬೇಕು.

ನೆಲವೇ ಉತ್ಪಾದನ ಸಾಧನವಾಗಿರುವ ಕಾರ್ಮಿಕರ ವಿಚಾರದಲ್ಲಿ ನಿಜವಾದದ್ದೇ ತಮ್ಮ

---

[1] Karl Marx, *Capital*, *op. cit.*, vol. I. p. 786.

[2] Merivale, *op. cit.*, p. 256.

ಕಾರ್ಯಾಗಾರ ಮತ್ತು ಉಪಕರಣಗಳೇ ಉತ್ಪಾದನ ಸಾಧನವಾಗಿರುವ ಕಾರ್ಮಿಕರ ವಿಚಾರವಲ್ಲೂ ನಿಜ. ತಮ್ಮ ಜೀವನೋಪಾಯಕ್ಕೆ ಸಾಲುವಷ್ಟು ಹಣಕ್ಕೆ ಮಾರಾಟ ಮಾಡಬಹುದಾದ ಪದಾರ್ಥವನ್ನು ತಮ್ಮ ಉಪಕರಣಗಳ ಸಹಾಯದಿಂದ ತಯಾರಿಸುವುದು ಸಾಧ್ಯವಿರುವ ವರೆಗೂ ಇವರು ಇನ್ನೊಬ್ಬರಿಗಾಗಿ ದುಡಿಯರು, ಅವರೇಕೆ ದುಡಿಯಬೇಕು?

ಕಾರ್ಮಿಕರು ನೆಲವನ್ನೂ ಉಪಕರಣವನ್ನೂ ಹೊಂದಿಲ್ಲದಿದ್ದಾಗ ಮಾತ್ರ, ಈ ಉತ್ಪಾದನ ಸಾಧನಗಳಿಂದ ಇವರು ಪ್ರತ್ಯೇಕಿಸಲ್ಪಟ್ಟಾಗ ಮಾತ್ರ, ಇವರು ಇನ್ನೊಬ್ಬನಿಗಾಗಿ ಕೆಲಸ ಮಾಡಲು ಹೋಗುವರು. ಹೀಗೆ ಮಾಡಬೇಕೆಂದು ಬಯಸಿ ಇವರು ಹೋಗುವುದಿಲ್ಲ. ಹೀಗೆ ಮಾಡಲೇಬೇಕಾಗಿ ಬಂದಾಗ ಹೋಗುವರು. ಬದುಕಲು ಅಗತ್ಯವಾದ ಆಹಾರ, ವಸ್ತ್ರ, ವಸತಿ ಪಡೆಯಲು ಇವರು ಹೀಗೆ ಮಾಡಬೇಕಾಗುತ್ತದೆ. ಉತ್ಪಾದನ ಸಾಧನ ಇವರಿಂದ ಕಳಚಲ್ಪಟ್ಟಾಗ ಈ ಕಾರ್ಮಿಕರಿಗೆ ಬೇರೆ ಮಾರ್ಗವೇ ಇರುವುದಿಲ್ಲ. ಆಗ ಅವರು ತಮ್ಮಲ್ಲಿ ಉಳಿದಿರುವ ಒಂದೇ ವಸ್ತುವನ್ನು—ಎಂದರೆ ತಮ್ಮ ದುಡಿಯುವ ಸಾಮರ್ಥ್ಯವನ್ನು—ತಮ್ಮ ದುಡಿಮೆಯ ಶಕ್ತಿಯನ್ನು—ಮಾರಲೇ ಬೇಕಾಗುವುದು.

ಬಂಡವಾಳರೀತಿಯ ಉತ್ಪಾದನೆಗೆ ಬೇಕಾದ ಕಾರ್ಮಿಕರು ಹೇಗೆ ಒದಗಿದರೆಂಬ ಕತೆಯನ್ನರಿಯಬೇಕಾದರೆ, ಉತ್ಪಾದನ ಸಾಧನ ಹೇಗೆ ಇವರಿಂದ ಅಪಹಾರವಾಯಿತೆಂಬುದನ್ನು ತಿಳಿಯಬೇಕು. "ಆದ್ದರಿಂದ, ಕಾರ್ಮಿಕನಿಂದ ಅವನ ಉತ್ಪಾದನ ಸಾಧನಗಳನ್ನು ಬೇರ್ಪಡಿಸುವ ಕ್ರಮವೇ ಬಂಡವಾಳ ಪದ್ಧತಿಗೆ ದಾರಿ ಮಾಡಿಕೊಡುವ ಕ್ರಮವಾಯಿತು. ಕಾರ್ಮಿಕನ ಜೀವನೋಪಾಯ ಸಾಧನಗಳನ್ನೂ ಉತ್ಪಾದನ ಸಾಧನಗಳನ್ನೂ ಬಂಡವಾಳವಾಗಿ ಇದು ಪರಿವರ್ತಿಸಿತು. ಅದೇ ಸಮಯಕ್ಕೆ ಕಾರ್ಮಿಕರನ್ನು, ನೇರವಾಗಿ ಉತ್ಪಾದನ ಕಾರ್ಯದಲ್ಲಿ ನಿರತರಾಗಿದ್ದವರನ್ನು, ಕೂಲಿಗಾರರನ್ನಾಗಿ ಪರಿವರ್ತಿಸಿತು. ಈ ನೇರ ಉತ್ಪಾದಕ—ಕಾರ್ಮಿಕ—ನೆಲದಿಂದ ಬೇರ್ಪಟ್ಟಾಗ, ಗುಲಾಮತನ—ಜೀತಗಾರತನ—ಕೊನೆಗೊಂಡಾಗ, ಇವನು ಮಾರಬಹುದಾದ ವಸ್ತು ಒಂದೇ; ಅದು ಅವನೇ. ಈತ ದುಡಿಮೆಯ ಶಕ್ತಿಯ ಸ್ವತಂತ್ರ ಮಾರಾಟಗಾರನಾಗಿ ಪರಿವರ್ತನೆ ಹೊಂದಬೇಕಾದರೆ, ಇವನ್ನು ಎಲ್ಲಿ ಮಾರಬಹುದೋ ಅಲ್ಲಿಗೆ—ಪೇಟೆಯಿದ್ದಲ್ಲಿಗೆ—ಇವನ್ನು ಸಾಗಿಸಬೇಕಾದರೆ, ವೃತ್ತಿ ಸಂಘಗಳ ಆಳಿಕೆಯಿಂದಲೂ, ಅಭ್ಯಾಸಿಗಳೂ ಕಾರೇಗಾರರೂ ಅನುಸರಿಸಬೇಕಾಗಿದ್ದ ನಿಬಂಧನೆಗಳಿಂದಲೂ, ಕಾರ್ಮಿಕರಿಗಾಗಿ ವಿಧಿಸಿದ್ದ ನಿರ್ಬಂಧಗಳಿಂದಲೂ ಇವನು ಬಿಡುಗಡೆ ಹೊಂದಬೇಕಾಗಿತ್ತು.....ಹೀಗೆ ಹೊಸದಾಗಿ ಸ್ವತಂತ್ರರಾದ ಜನರ ಬಳಿಯಿದ್ದ ಉತ್ಪಾದನ ಸಾಧನವೂ ಹಳೆಯ ಊಳಿಗಮಾನ್ಯ ವ್ಯವಸ್ಥೆಯಿಂದ ಲಭಿಸಿದ್ದ ಶಾಶ್ವತಾನುಕೂಲಗಳೂ ಇವರಿಂದ ಕಸಿದುಕೊಳ್ಳಲ್ಪಟ್ಟುವು. ಆಗ ಇವರು ತಮ್ಮನ್ನು ತಾವೇ ಮಾರಿಕೊಳ್ಳುವ ಸ್ಥಿತಿಗೆ ಬಂದರು. ಈ ಚರಿತ್ರೆ—ಈ ಜನ ಆಸ್ತಿವಿಹೀನರಾದ ಕತೆ—ಮನುಜ ಕುಲದ ಇತಿಹಾಸದಲ್ಲಿ ರಕ್ತಾಕ್ಷರಗಳಲ್ಲಿ, ಬೆಂಕಿಯ ಅಕ್ಷರಗಳಲ್ಲಿ ಬರೆಯಲ್ಪಟ್ಟಿದೆ."[1]

---

[1] **Marx, *Capital, op. cit.*, vol, I, p. 738.**

ಬೃಹತ್ ಬಂಡವಾಳ ವ್ಯವಸ್ಥೆ ಮೊಟ್ಟಮೊದಲು ಬೆಳೆದದ್ದು ಇಂಗ್ಲೆಂಡಿನಲ್ಲಿ. ಆದ್ದರಿಂದ ಇದರ ಮೂಲ ಪ್ರವೃತ್ತಿಗಳನ್ನು ಅಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ಹದಿನಾರನೆಯ ಶತಮಾನದ ಜಮೀನು ಆವರಣದಲ್ಲಿ ಹಾಗೂ ದುಬಾರಿ ಗೇಣಿಪದ್ಧತಿಗಳಿಂದ ಹಲವು ಜನ ರೈತರು ನೆಲದಿಂದ ತಳ್ಳಲ್ಪಟ್ಟು ಬೀದಿಗೆ ಬಿದ್ದ ಸಂಗತಿಯನ್ನು, ಅಲ್ಲಿ ಅವರು ಭಿಕ್ಷುಕರೂ ಭಿಕಾರಿಗಳೂ ಕಳ್ಳರೂ ಆದ ಪರಿಯನ್ನು ಅರಿತಿದ್ದೇವೆ. ಹೀಗೆ ಬಂಡವಾಳ ಪದ್ಧತಿ ಬೆಳೆಯುವುದಕ್ಕೂ ಬಹು ಹಿಂದೆಯೇ ಈ ಸ್ವತಂತ್ರ ಆಸ್ತಿವಿಹೀನ ಕಾರ್ಮಿಕ ವರ್ಗದ ನಿರ್ಮಾಣವಾಗಿತ್ತು.

ಹದಿನೆಂಟನೆಯ ಶತಮಾನದಲ್ಲೂ ಹತ್ತೊಂಬತ್ತನೆಯ ಶತಮಾನದ ಆದಿಯಲ್ಲೂ ನೆಲದ ಆವರಣ ಚಳವಳಿ ಮತ್ತೆ ಬಂತು. ಈಗ ಇದು ಹೆಚ್ಚು ವ್ಯಾಪಕವಾಗಿತ್ತು. ತತ್ಫಲವಾಗಿ ಕೂಲಿಗಾಗಿ ತಮ್ಮ ದುಡಿಮೆಯ ಶಕ್ತಿ ಮಾರಾಟ ಮಾಡುವ ಭೂಹೀನ ದುರದೃಷ್ಟಶಾಲಿಗಳ ದಂಡು ಅತಿಯಾಗಿ ಬೆಳೆಯಿತು. ಹದಿನಾರನೆಯ ಶತಮಾನದ ಆವರಣ ಚಳವಳಿಗೆ ಭೂವಿಸರ್ಜಿತರಾದವರಿಂದಲೇ ಅಲ್ಲದೆ ಸರ್ಕಾರದಿಂದಲೂ ಅಗಾಧ ಪ್ರತಿಭಟನೆಯಿತ್ತು. ಹೊಟ್ಟೆಗಿಲ್ಲದ ಜನಸಮೂಹ ಹಿಂಸಾಕೃತ್ಯ ಎಸಗಬಹುದೆಂದು ಸರಕಾರ ಆಗ ಅಂಜಿತ್ತು. ಆದರೆ ಹದಿನೆಂಟನೆಯ ಶತಮಾನದ ಆವರಣ ಚಳವಳಿಗೆ ಶಾಸನದ ಮನ್ನಣೆ ದೊರಕಿತು. ಜಮೀನುದಾರರ ಸರಕಾರ ಜಮೀನುದಾರರಿಗಾಗಿ ರಚಿಸಿದ 'ಆವರಣ ಶಾಸನ' ಆ ಕಾಲದಲ್ಲಿ ಸಾಮಾನ್ಯವಾಗಿ ಹೋಯಿತು. ನೆಲ ಹೊಂದಿದ್ದ ಕಾರ್ಮಿಕ, ಭೂರಹಿತ ಕಾರ್ಮಿಕನಾದ. ಕೂಲಿಗಾರನಾಗಿ ಕೈಗಾರಿಕೆಯತ್ತ ಸಾಗಲು ಕಾದು ನಿಂತ.

ಆವರಣ ಚಳವಳಿ ಇಂಗ್ಲೆಂಡಿನ ವೈಶಿಷ್ಟ್ಯ. ಆದರೆ ಸ್ವಲ್ಪ ಕಡಿಮೆಯ ಪ್ರಮಾಣದಲ್ಲಿ ಇದು ಯೂರೋಪಿನ ಇತರ ದೇಶಗಳಲ್ಲೂ ಸಾಗಿತು. ಇದಕ್ಕೆ ರುಜುವಾತು ಇದೆ. ೧೭೬೦ರಲ್ಲಿ ಫ್ರಾನ್ಸಿನ ಚೆಫ್ಸ್ ಎಂಬಲ್ಲಿಯ ರೈತರು ಮಾಡಿದ ಫಿರ್ಯಾದು ನೋಡಿ: "ಆಂಜೌವಿನ ಚೆಫ್ಸ್ ಗ್ರಾಮವಾಸಿಗಳಾದ ನಾವು ತಮ್ಮಲ್ಲಿ ಅರಿಕೆ ಮಾಡಿಕೊಳ್ಳುವ ಸಾಹಸ ಮಾಡುತ್ತಿದ್ದೇವೆ. ಧನಿಕರೋ, ಬಲಿಷ್ಠರೋ, ಆಸೆಬಡಕರೋ ಆದ ಕೆಲವು ಜನ ಅನ್ಯಾಯವಾಗಿ ಈ ನೆಲ ವಶಪಡಿಸಿಕೊಂಡಿದ್ದಾರೆ. ಈ ಗ್ರಾಮದ ಧಣಿಯರಿಗೆ ಅನುಕೂಲವಾಗಿ ನ್ಯಾಯಮಂಡಲಿ ನೀಡಿರುವ ತೀರ್ಮಾನದಿಂದ ಸಾಮಾನ್ಯ ಜನಕ್ಕೆ ಅನ್ಯಾಯವಾಗಿದೆ. ಇವರಿಗೆ ತಮ್ಮ ಆಕಳು ಮೇಯಿಸಲು ಇರುವ ನೆಲ ಇದೊಂದೇ. ಇದು ಕಳೆದುಹೋದದ್ದರಿಂದ ಯಾವ ಪರಿಹಾರವೂ ಇಲ್ಲದೆ ಇವರು ಅತ್ಯಂತ ದಾರಿದ್ರ್ಯಾವಸ್ಥೆಗೆ ಇಳಿದಿದ್ದಾರೆ. ಆಡಳಿತಗಾರರಿಂದ ನಿರ್ಮಿತವಾದ ಹೊಸ ವ್ಯವಸ್ಥೆಯಲ್ಲಿ ಈ ಊರೊಟ್ಟಿನ ನೆಲ ವ್ಯವಸಾಯಯೋಗ್ಯವಾಗಿರಲಿಲ್ಲವೆಂಬ ಭಾವನೆಯನ್ನು ಜನರಲ್ಲಿ ಬೆಳೆಯಿಸಲು ಯತ್ನಿಸಲಾಗಿದೆ.

ಗ್ರಾಮಗಳಲ್ಲಿರುವ ಊರೊಟ್ಟಿನ ನೆಲವನ್ನು ಆಕ್ರಮಿಸಿ, ಸೂರೆ ಮಾಡಿ, ಈ ಬಲಾಢ್ಯ ಪ್ರಭುಗಳೂ ಧನಿಕರೂ ಇನ್ನೂ ಹೆಚ್ಚು ಧನಿಕರಾಗುತ್ತಿದ್ದಾರೆ....ಕೆಲವು ಗ್ರಾಮಗಳಿಗೆ ಗೋಮಾಳಗಳಿಗಿಂತ ಅಮೂಲ್ಯವಾದದ್ದು ಬೇರೊಂದಿಲ್ಲ. ಇವಿಲ್ಲದಿದ್ದರೆ ರೈತರು ದನ ಕರು

ಗಳನ್ನು ಹೊಂದಿರುವಂತಿಲ್ಲ. ದನ ಕರು ಇಲ್ಲದೆ ಗೊಬ್ಬರವಿಲ್ಲ. ಗೊಬ್ಬರವಿಲ್ಲದೆ ಹೆಚ್ಚು ಬೆಳೆ ತೆಗೆಯುವುದು ಹೇಗೆ?"[1]

ಊರೊಟ್ಟಿನ ನೆಲದ ನಷ್ಟದಿಂದ ಫ್ರೆಂಚ್ ರೈತರಂತೆ ಇಂಗ್ಲೆಂಡಿನ ರೈತರೂ ಬಹು ತೊಂದರೆಗೀಡಾದರು. ದನ ಕರು ಸಾಕಲು ಯೋಗ್ಯವ್ಯವಸ್ಥೆ ಇದ್ದಾಗಲೇ ಯಶಸ್ವಿ ಬೇಸಾಯ ಸಾಧ್ಯ. ಈ ಗೋಮಾಳಗಳ ಸಾಮಾನ್ಯ ಒಡೆತನ ರೈತರಿಗೆ ಕಳೆದುಹೋದಾಗ ಇವರು ದುರ್ದೆಶೆಗೀಡಾದರು. ಈ ಊರೊಟ್ಟಿನ ನೆಲವನ್ನು ಕಿತ್ತುಕೊಂಡ ಪ್ರಭುಗಳ ಬಗ್ಗೆಯೂ, ನೆಲದಿಂದ ಇವರನ್ನು ಬೇರ್ಪಡಿಸುವ ಕ್ರಮಗಳನ್ನು ಜಾರಿಗೆ ತಂದ ಸರಕಾರದ ಬಗ್ಗೆಯೂ ಈ ಜನ ಕ್ರೋಧಗೊಂಡದ್ದು ಸಹಜವೇ ಆಗಿದೆ. ಆ ಕಾಲದಲ್ಲಿ ಪ್ರಿಯವಾಗಿದ್ದ ಈ ಯಮಕ, ಈ ಜನಪದ ಗೀತೆ, ಆಗಿನ ಕಾಲದಲ್ಲಿ ಹಬ್ಬಿದ್ದ ತೀವ್ರ ಅಸಮಾಧಾನದ ಪ್ರತೀಕವಾಗಿದೆ :—

ಊರ ಗೋಮಾಳದಲಿ ಬಾತು ಕದ್ದರೆ ಅವನ
ಜೈಲಿನಲಿ ಹಾಕುತದೆ ನಮ್ಮ ಸರಕಾರ.
ಬಾತಿನಿಂ ಗೋಮಾಳ ಕದ್ದ ಖೂಳನಿಗೆ
ತಡೆಯಿಲ್ಲ, ಇದಕಿಲ್ಲ ಯಾವ ಪರಿಹಾರ.

ಕೈಗಾರಿಕೆಗೆ ಕಾರ್ಮಿಕರ ಪಡೆ ಒದಗಿಸುವುದಕ್ಕಾಗಿ ಜಮೀನುದಾರರು ರೈತರನ್ನು ನೆಲದಿಂದ ಓಡಿಸುತ್ತಿದ್ದರೆಂದು ಮಾತ್ರ ಭಾವಿಸಬೇಡಿ. ಇಂಥ ವಿಚಾರ ಅವರಿಗೆ ಎಂದೂ ಸ್ಫುರಿಸಿರಲಿಲ್ಲ. ನೆಲದಿಂದ ಪರಮಾವಧಿ ಲಾಭ ಗಳಿಸಬೇಕೆಂಬುದಷ್ಟೇ ಅವರ ಚಿಂತೆ. ನೆಲದ ಆವರಣ ಮಾಡದೆಯೇ ಹೆಚ್ಚು ಹಣ ಬರುವದಾಗಿದ್ದರೆ ಅವರು ಈ ಆವರಣ ಕಾರ್ಯ ಕೈಕೊಳ್ಳುತ್ತಲೇ ಇರಲಿಲ್ಲ. ನೆಲಕ್ಕೆ ಬೇಲಿ ಹಾಕದೆ ಇರುವುದರಿಂದ ಬರುವುದಕ್ಕಿಂತ ಹೆಚ್ಚು ಹಣ ಈ ಆವರಣ ಕಲ್ಪನೆಯಿಂದ ಅವರಿಗೆ ಲಭಿಸುತ್ತಿತ್ತು. ೧೭೭೬ರಲ್ಲಿ ಷ್ರಾಫ್‌ಷೈರಿನಲ್ಲಿ ಯಾತ್ರೆ ಮಾಡಿದಾಗ ಕಂಡ ಪರಿಸ್ಥಿತಿ ಹೀಗಿದೆ: "ನೆಲವನ್ನು ಆವರಣ ಮಾಡಿಕೊಂಡ ಮೇಲೆ—ಬೇಲಿ ಹಾಕಿದ ಮೇಲೆ—ಅದರ ಗೇಣಿ ಸಾಮಾನ್ಯವಾಗಿ ಇಮ್ಮಡಿಗೊಂಡಿದೆ. ಡೇವೆಂಟ್ರಿಯಿಂದ ನೂರು ಮೈಲಿಯಾಚೆ, ಬ್ರಾನ್ಸ್‌ಟನ್‌ವರೆಗೆ, ಕೇವಲ ಒಂದು ವರ್ಷದಿಂದೀಚೆಗೆ ಆವೃತವಾದ ನೆಲವಿದೆ. ಆವೃತವಾಗುವುದಕ್ಕೆ ಮುಂಚೆ ಇಲ್ಲಿ ಎಕರೆಗೆ ೬ರಿಂದ ೧೧ಷಿ. ವರೆಗೆ ಗೇಣಿಯಿತ್ತು. ಈಗ ೨೦ರಿಂದ ೩೦ ಷಿಲಿಂಗ್ ವರೆಗೆ ಗೇಣಿ."[2]

ಹಿಂದಿನಿಂದಲೂ ನೆಲದ ಸಾಗುವಳಿ ಮಾಡುತ್ತಿದ್ದ ನಿರ್ಭಾಗ್ಯ ಕಾರ್ಮಿಕರನ್ನು ನೆಲದಿಂದ ಗುಡಿಸಿ ಹಾಕಿದ ಹೀನಕೃತ್ಯದ ಪರಮಾವಧಿಯ ದೃಷ್ಟಾಂತವನ್ನು ನಾವು ಸ್ಕಾಟ್ಲೆಂಡಿನಲ್ಲಿ ಸದರ್ಲ್ಯಾಂಡಿನ ಡಚೆಸಳ ವರ್ತನೆಯಲ್ಲಿ ಕಾಣಬಹುದು. ಮಾರ್ಕ್ಸ್ ಈ ಕತೆ ಹೇಳಿದ್ದಾನೆ:

---

[1] *Collections de Documents Inédits Sur l'Histoire Economique de la Révolution Française. Les Comités des Droits Feodaux et le Législation et l' Abolition du Régence Seigneurial, 1789-1793*, pp. 142 143. Documents Publiés par P. Sagnac et P. Caren. Imprimerie Nationale, *Paris*, 1907.

[2] Arthur Young, *Tours in England and Wales* (1768-1808), pp. 134, 137. Reprint No. 14, London School of Economics. London, 1932.

"ಎಲ್ಲ ಸ್ವತಂತ್ರ ರೈತರನ್ನೂ ನೆಲದ ಒಡೆತನದಿಂದ ನಿವಾರಿಸಿಕೊಂಡ ಮೇಲೆ, ಗುಡಿಸಲು ನೆಲಸಮ ಮಾಡುವ ಕಾರ್ಯ ಆರಂಭವಾಗುತ್ತದೆ. ಈ ವ್ಯವಸಾಯ ಕಾರ್ಮಿಕರು ಕೃಷಿ ಮಾಡುವ ನೆಲದ ಮೇಲೆ ತಮ್ಮ ಸ್ವಂತ ನಿವಾಸಕ್ಕೂ ಎಡೆಯಿಲ್ಲದಂತೆ ಮಾಡುವುದು ಇದರ ಉದ್ದೇಶ....ಹತ್ತೊಂಬತ್ತನೆಯ ಶತಮಾನದಲ್ಲಿ ಜಾರಿಯಲ್ಲಿದ್ದ ಕ್ರಮದ ಉದಾಹರಣೆಯಾಗಿ ಸದರ್‌ಲ್ಯಾಂಡಿನ ಡಚೆಸಳ "ಸ್ವಚ್ಛ" ಕಾರ್ಯವನ್ನು ವಿವರಿಸಬಹುದು. ಆಡಳಿತ ದಕ್ಷಳಾದ ಈಕೆ....ಹಿಂದೆ ಕೈಕೊಂಡ ಇಂಥ ಕ್ರಮಗಳಿಂದ ೧೫೦೦೦ಕ್ಕೆ ಜನ ಸಂಖ್ಯೆ ಕಡಮೆಯಾಯಿತು. ಈ ಇಡೀ ಪ್ರದೇಶವನ್ನು ಕುರಿ ಕಾವಲಾಗಿ ಪರಿವರ್ತಿಸಬೇಕೆಂದು ತೀರ್ಮಾನಿಸಿದಳು. ೧೮೧೪ರಿಂದ ೧೮೨೦ರ ವರೆಗೆ ಈ ಹದಿನೈದು ಸಾವಿರ ನಿವಾಸಿಗಳು—ಸುಮಾರು ೩೦೦೦ ಸಂಸಾರಗಳು—ಕ್ರಮವಾದ ಬೇಟೆಗೆ ಬಲಿಯಾದರು, ನಿರ್ಮೂಲವಾದರು. ಇವರ ಹಳ್ಳಿಗಳು ನಾಶಗೊಳಿಸಲ್ಪಟ್ಟುವು, ಬೆಂಕಿಗೆ ಈಡಾದುವು. ಇವರ ಹೊಲವೆಲ್ಲ ಕುರಿ ಕಾವಲಾಗಿ ಪರಿವರ್ತಿತವಾಯಿತು. ರೈತರನ್ನು ಹೊರತಳ್ಳುವ ಕಾರ್ಯವನ್ನು ಬ್ರಿಟಿಷ್ ಸಿಪಾಯಿಗಳು ಚಲಾಯಿಸಿದರು ; ಈ ನಿವಾಸಿಗಳೊಂದಿಗೆ ಗುದ್ದಾಡಿದರು. ತನ್ನ ಗುಡಿಸಲು ಬಿಡಲು ನಿರಾಕರಿಸಿದ ಒಬ್ಬ ಮುದುಕಿ ಅದರ ಬೆಂಕಿಯ ಜ್ವಾಲೆಗೆ ತುತ್ತಾಗಿ ಗುಡಿಸಲಿನಲ್ಲೇ ಸುಟ್ಟು ಬೂದಿಯಾದಳು. ಹೀಗೆ ಈ ಮಹಾರಾಯಿತಿ—ಸ್ವಾಮಿನಿ—ತಲೆತಲಾಂತರದಿಂದ ಜನ ಸಮೂಹಕ್ಕೆ ಸೇರಿದ್ದ ೭,೯೪,೦೦೦ ಎಕರೆ ನೆಲವನ್ನು ತನ್ನದಾಗಿ ಮಾಡಿಕೊಂಡಳು."[1]

ಹದಿನಾರನೆಯ ಶತಮಾನದಿಂದ ಹತ್ತೊಂಬತ್ತನೆಯ ಶತಮಾನದ ಆದಿಭಾಗದ ವರೆಗೆ ಇಂಗ್ಲೆಂಡಿನಲ್ಲಿ ರೈತನ ಭೂ ಉಚ್ಚಾಟನೆಯ ಕಾರ್ಯ ಸತತವಾಗಿ ಸಾಗಿತು. ಫ್ರಾನ್ಸಿನಲ್ಲಿ ಸಣ್ಣ ರೈತವರ್ಗ ಬೆಳೆಯಿತು. ಆದರೆ ಇತರ ಎಡೆಗಳಿಗಿಂತ ಬಹು ಬೇಗ ಕೈಗಾರಿಕಾ ಬಂಡವಾಳ ವ್ಯವಸ್ಥೆ ಬೆಳೆದ ಇಂಗ್ಲೆಂಡಿನಲ್ಲಿ ಸಣ್ಣ ನೆಲದೊಡೆಯರ ವರ್ಗ ಹೆಚ್ಚು ಕಡಿಮೆ ಸಂಪೂರ್ಣವಾಗಿ ನಿರ್ಮೂಲವಾಯಿತು. ಹದಿನೆಂಟನೆಯ ಶತಮಾನದ ಆಂಗ್ಲ ಲೇಖಕನಾದ ಡಾ॥ ಆರ್. ಪ್ರೈಸ್ ಎಂಬವನು ರೈತರಿಗೆ ಆದ ಗತಿಯನ್ನು ಹೀಗೆ ಬಣ್ಣಿಸಿದ್ದಾನೆ : "ಈ ಜಮೀನು ಕೆಲವು ದೊಡ್ಡ ರೈತರ ಕೈಗೆ ಹೋದಾಗ ಸಣ್ಣ ಪುಟ್ಟ ರೈತರು ಇತರರಿಗಾಗಿ ಕೆಲಸ ಮಾಡಿ ತಮ್ಮ ಜೀವನೋಪಾಯ ಸಂಪಾದಿಸಿಕೊಳ್ಳುವ ಜನರ ತಂಡವಾಗಿ ಪರಿಣಮಿಸುತ್ತಾರೆ....ಪಟ್ಟಣಗಳೂ ಕೈಗಾರಿಕೆಗಳೂ ಹೆಚ್ಚುತ್ತವೆ. ಏಕೆಂದರೆ ಹೆಚ್ಚು ಜನ ಬೇರೆ ಗತ್ಯಂತರವಿಲ್ಲದೆ ಉದ್ಯೋಗಾಪೇಕ್ಷಿಗಳಾಗಿ ಇಲ್ಲಿಗೆ ಬರುತ್ತಾರೆ....ಒಟ್ಟಿನಲ್ಲಿ ಕೆಳವರ್ಜೆಯ ಜನರ ಪರಿಸ್ಥಿತಿ ಎಲ್ಲ ಬಗೆಯಲ್ಲೂ ಕ್ಷೀಣಿಸುತ್ತದೆ. ನೆಲದ ಸಣ್ಣ ನಿವಾಸಿಗಳಾಗಿರುವ ಬದಲು ಇವರು ದಿನಗೂಲಿಗಳಾಗುವರು, ದುಡ್ಡಿಗೆ ದುಡಿಯುವವರಾಗಿ ಪರಿವರ್ತನೆ ಹೊಂದುವರು."[2]

ಇದು ಪರಿಸ್ಥಿತಿಯ ನಿಜಸ್ವರೂಪ. ನೆಲದಿಂದ ದೂಡಲ್ಪಟ್ಟ ಈ ಜನ "ಕೆಳದರ್ಜೆಯ" ಜನರಾದರು ; ದಿನಗೂಲಿಗಳಾದರು. ಅಗತ್ಯವಾದ ಕಾರ್ಮಿಕರು ಒದಗಲು ಈ ಆವರಣ ಕಾರ್ಯ ಒಂದು ಮುಖ್ಯ ಮಾರ್ಗವಾಯಿತು.

---

[1] Marx, *Capital, op. cit.*, vol. I, pp. 752-754.

[2] *Ibid.* vol. I, p. 750.

ಇತರ ಮಾರ್ಗಗಳೂ ಇದ್ದುವು. ಇವುಗಳಲ್ಲೊಂದು ಅಷ್ಟೇನೂ ಮಹತ್ವದ್ದಾಗಿ ಕಾಣಲಿಲ್ಲ; ಅಷ್ಟು ಸ್ಪಷ್ಟವಾಗಿಯೂ ಇರಲಿಲ್ಲ. ಆದರೆ ಇದು ಇತರ ಹಲವರ ಮೇಲೆ ಪರಿಣಾಮ ಉಂಟು ಮಾಡಿತು. ಇದು ಗಿರಣಿಗಾರಿಕೆ. ಕಾರ್ಮಿಕನನ್ನು ನೆಲದಿಂದ ಬೇರ್ಪಡಿಸಿದಂತೆ ಅವನನ್ನು ಕೈಗಾರಿಕೆಯ ಉತ್ಪಾದನ ಸಾಧನಗಳಿಂದಲೂ ಇದು ಬೇರ್ಪಡಿಸಿತು.

ಕಾಮನ್ಸ್ ಸಭೆಯ ೧೮೦೬ನೆಯ ಇಸವಿಯ ಪತ್ರಗಳಲ್ಲಿ ಒಂದು ಸಮಿತಿಯ ವರದಿಯಿದೆ. "ಇಂಗ್ಲೆಂಡಿನಲ್ಲಿ ಉಣ್ಣೆ ಕೈಗಾರಿಕೆಯ ಸ್ಥಿತಿ ಪರಿಶೀಲಿಸಲು" ಏರ್ಪಟ್ಟ ಸಮಿತಿ ಅದು. "ಈ ಪ್ರದೇಶವಲ್ಲಿ ಬಹು ಕಾಲದಿಂದ ಕೆಲವು ಕಾರಖಾನೆಗಳಿವೆ....ಮನೆಯಲ್ಲಿ ವಸ್ತ್ರ ತಯಾರಿಸು ವವರು ಇವುಗಳ ಬಗ್ಗೆ ಬಹು ಅಸೂಯೆ ಹೊಂದಿದ್ದಾರೆ. ಮನೆಯಲ್ಲಿ ಕೆಲಸ ಮಾಡುವವರ ಉದ್ಯಮವನ್ನು ಕ್ರಮೇಣ ಈ ಕಾರಖಾನೆಗಳು ನಿರ್ಮೂಲ ಮಾಡುವವೆಂದೂ, ಸಣ್ಣ ಸ್ವತಂತ್ರ ತಯಾರಕ ತನ್ನ ವಿಶಿಷ್ಟ ಧಂದೆಯನ್ನು ಮುಂದುವರಿಸಲಾರದೆ ಕೂಲಿಗೆ ಕೆಲಸ ಮಾಡುವ ಕಾರೇಗಾರನಾಗುವನೆಂದೂ ಇವರ ಹಿರಿಯಂಜಿಕೆ."[1] ಹೀಗೆಂದು ಈ ಸಮಿತಿಯ ವರದಿ ತಿಳಿಸುತ್ತದೆ.

ಹೀಗೆ ೧೮೦೬ರಲ್ಲಿ ಅಂಜಿಕೆಯಾಗಿದ್ದದ್ದು ಆಮೇಲೆ ವಾಸ್ತವವಾಯಿತು. ಹೀಗೆ ಏಕೆ ಆಯಿತೆಂಬುದನ್ನು ನೀವು ಸುಲಭವಾಗಿ ಅರಿಯಬಲ್ಲಿರಿ. ಶಕ್ತಿ ಚಾಲಿತ ಯಂತ್ರ, ಶ್ರಮ ವಿಭಾಗ ಇವುಗಳಿಂದ ಕೂಡಿದ ಕಾರಖಾನೆ ಪದ್ಧತಿಯಲ್ಲಿ ಪದಾರ್ಥಗಳನ್ನು ಕೈ ಕೆಲಸಗಾರರಿಗಿಂತ ಹೆಚ್ಚು ಶೀಘ್ರವಾಗಿ, ಹೆಚ್ಚು ಅಗ್ಗವಾಗಿ ತಯಾರಿಸುವುದು ಸಾಧ್ಯವಾಯಿತು. ಯಂತ್ರದ ಕೆಲಸಕ್ಕೂ ಕೈಕೆಲಸಕ್ಕೂ ನಡುವಣ ಸ್ಪರ್ಧೆಯಲ್ಲಿ ಯಂತ್ರಕ್ಕೆ ಜಯ ಸಿದ್ಧವಾಗಿತ್ತು. ಇದು ಜಯ ಸಾಧಿಸಿತು. ಸಹಸ್ರಾರು ಮಂದಿ ಸಣ್ಣ ಸ್ವತಂತ್ರ ತಯಾರಕರು (ತಮ್ಮ ಉತ್ಪಾದನ ಸಾಧನವನ್ನು, ಉಪಕರಣಗಳನ್ನು, ಹೊಂದಿದ್ದರಿಂದ ಇವರು ಸ್ವತಂತ್ರರೆನಿಸಿದ್ದರು.) "ಕೂಲಿಗಾಗಿ ಕೆಲಸ ಮಾಡುವ ಕಾರೇಗಾರರ" ಮಟ್ಟಕ್ಕೆ ಇಳಿದರು. ಇವರಲ್ಲಿ ಹಲವರು ಬೇಗ ಸೋಲೊಪ್ಪಿ ಶರಣಾಗತರಾಗಲೊಪ್ಪದೆ ಉಪವಾಸ ನರಳಿದರು. ಕೊನೆಗೆ ಅವರು ತಲೆ ಬಾಗಲೇ ಬೇಕಾಯಿತು.

೧೮೩೪ರಲ್ಲಿ ಕಾಮನ್ಸ್ ಸಭೆಯ ಇನ್ನೊಂದು ಸಮಿತಿ ವರದಿ ನೀಡಿತು. ಕೈ ಮಗ್ಗದ ನೇಕಾರರ ಸಮಿತಿಯ ವರದಿಯಲ್ಲಿ ಕೈ ಮಗ್ಗದ ನೇಕಾರ ತನ್ನ ಪುರಾತನ ಉತ್ಪಾದನೆ ವಿಧಾನಗಳಿಗೇ ಜೋತುಬೀಳುವುದು ನಿಷ್ಫಲವೆಂದು ತಿಳಿಸಿದೆ. "ಕೂಲಿ ಇಳಿಸುವುದಕ್ಕೆ ಮುಖ್ಯ ಕಾರಣವಾದ ಪೈಪೋಟಿ ಆರಂಭವಾಗಿ....ಒಬ್ಬರಿಗಿಂತ ಕಡಮೆ ಬೆಲೆಗೆ ಇನ್ನೊಬ್ಬರು ಮಾರಾಟ ಮಾಡಿ ಗಿರಾಕಿ ಗಿಟ್ಟಿಸುವ ಯತ್ನದಲ್ಲಿ, ಹಲವು ಮಹಾ ಪರಿವರ್ತನೆಗಳಾಗಿವೆ. ತನ್ನ ಸಂಸಾರದ ಜನರಿಂದಲೂ ಇತರರಿಂದಲೂ ಸಹಾಯ ಪಡೆದು ಉತ್ಪಾದಿಸುತ್ತಿದ್ದ

---

[1] Report from the Committee Appointed to Consider the State of the Woolen Manufacture of England. Journals of the House of Commons, 1806 vol. 61, p. 698.

ನೇಕಾರನ ವ್ಯಾಪಾರವನ್ನು ಬೃಹತ್ ಉತ್ಪಾದಕರು ಕಾರೇಗಾರರ ಮಟ್ಟಕ್ಕೆ ಇಳಿಸಿದ್ದಾರೆ. ಬಡತನ ಅವರನ್ನು ಅಸ್ತಿಹೀನರನ್ನಾಗಿ ಮಾಡಿದೆ."[1]

ಯಂತ್ರದ ಪೈಪೋಟಿಯ ಫಲವಾಗಿ ಅವನಿಗೆ ದೊರಕುತ್ತಿದ್ದ ಬೆಲೆಯ ಇಳಿತಾಯ ದಿಂದ ಕೈ ಕೆಲಸಗಾರ ನಿರ್ಗತಿಕನಾದನೆಂಬುದಕ್ಕೆ ಸ್ಪಷ್ಟ ಸಾಕ್ಷಿಯನ್ನು ಫಿಲಿಪ್ ಗ್ಯಾಸ್ಕೆಲ್ ಎಂಬವನ ಪುಸ್ತಕದಿಂದ ಉದ್ಧರಿಸಬಹುದು. ೧೮೩೬ರಲ್ಲಿ ಪ್ರಕಟವಾದ ಈ ಪ್ರಸಿದ್ಧ ಪುಸ್ತಕದಲ್ಲಿ ಈ ರೀತಿ ಹೇಳಿದೆ: "ಹಬೆ ಶಕ್ತಿಯ ಪ್ರಯೋಗ ಆರಂಭವಾದಾಗಿನಿಂದ ಕೈಮಗ್ಗದ ನೇಕಾರರಲ್ಲಿ ಬಹು ಅಸಾಧಾರಣವಾದ ಹಾಗೂ ದುಃಖಮಯವಾದ ಪರಿವರ್ತನೆ ಆಗಿದೆ. ಹಬೆ ಯಂತ್ರದ ಅಡಿಯಲ್ಲಿ ಇವರ ದುಡಿಮೆ ನಜ್ಜುಗುಜ್ಜಾಗಿದೆಯೆನ್ನ ಬಹುದು. ಒಂದು ಗೊತ್ತಾದ ಬಗೆಯ ಬಟ್ಟೆ ನೇಯಲು ಕೊಡಬೇಕಾಗಿದ್ದ ಬೆಲೆ ಹೇಗೆ ವ್ಯತ್ಯಾಸಗೊಂಡಿತೆಂಬುದನ್ನು ಮುಂದೆ ಕೊಟ್ಟಿದೆ. ಈ ಬಗೆಯ ದುಡಿಮೆಯ ಬೆಲೆಯಲ್ಲಿ ಆಗಿರುವ ಅಸಾಧಾರಣ ಇಳಿತಾಯವನ್ನು ಈ ಅಂಕಿಗಳಿಂದ ಅರಿಯಬಹುದು :

| | |
|---|---|
| ೧೭೯೫ | ೩೯ ಷಿ. ೯ ಪೆ. |
| ೧೮೧೦ | ೧೫ ಷಿ. ೦ ಪೆ. |
| ೧೮೩೦ | ೮ ಷಿ. ೦ ಪೆ. |

"ಇಂಥ ದೃಷ್ಟಾಂತಗಳು ಹಲವಾರು. ಕೈಮಗ್ಗದ ಕೈಗಾರಿಕೆಗೆ ಸಂಬಂಧಿಸಿದ ಇಡೀ ಕಾರ್ಮಿಕರ ಪರಿಸ್ಥಿತಿಯ ಒಂದು ಉದಾಹರಣೆ ಇದು."[2]

ಕೈ ಕೆಲಸಕ್ಕೆ ಕೊಡುವ ಬೆಲೆಯ ಇಳಿತಾಯ ಒಂದು ದುಃಖದ ಕತೆ ತಿಳಿಸುತ್ತದೆ. ಜೀವನೋಪಾಯ ಸಂಪಾದಿಸಲಾರದ ನೇಕಾರ ತನ್ನ ಉತ್ಪಾದನ ಸಾಧನವಾದ ಕೈಮಗ್ಗ ವನ್ನು ಮಾರಿದ (ಹೀಗೆ ಮಾಡುವುದು ಸಾಧ್ಯವಾದಾಗ). ಕಾರಖಾನೆಗೆ ನೌಕರರ ನೇಮಕ ಮಾಡುವ ಕಚೇರಿಯ ಮುಂದುಗಡೆಯ ಸಾಲಿನಲ್ಲಿ ನಿಲ್ಲುವುದು ಮುಂದಣ ಕೆಲಸ. ಅಲ್ಲಿ ಅವನಂಥ ಇತರ ಉದ್ಯಮಗಳ ಇತರ ಕಾರ್ಮಿಕರು ಸಂಧಿಸುತ್ತಿದ್ದರು. ಅವರದೂ ಇದೇ ಅನುಭವ, ಇದೇ ಬವಣೆ. ಅಧಿಕ ಸಂಖ್ಯೆಯಲ್ಲಿ ಕಾರ್ಮಿಕರ ಅಗತ್ಯವಿರುವ ಯಂತ್ರಗಾರಿಕೆ ತನಗೆ ಅಗತ್ಯವಾದ ಕಾರ್ಮಿಕರನ್ನು ಪಡೆದ ವೈಖರಿ ಇದು. ಕೈಕೆಲಸಗಾರರನ್ನು ದುರ್ದೆಶೆ ಗೀಡುಮಾಡಿ ತನ್ನತ್ತ ಇದು ಇವರನ್ನು ಸೆಳೆದುಕೊಂಡಿತು.

ಆಸ್ತಿಯಿಲ್ಲದ ಕಾರ್ಮಿಕವರ್ಗ ಹೀಗೆ ಜನ್ಮ ತಾಳಿತು. ಬಂಡವಾಳ ಕೂಡಿ ಬಂದಂತೆಲ್ಲಾ ಕೈಗಾರಿಕಾ ಬಂಡವಾಳ ವ್ಯವಸ್ಥೆ ಬೇರೂರಿದಂತೆ ಈ ಕಾರ್ಮಿಕ ವರ್ಗವೂ ಕೈಗಾರಿಕೆಗೆ ಹೆಚ್ಚು ಹೆಚ್ಚಾಗಿ ಬೇಕಾಯಿತು.

ಊಳಿಗಮಾನ್ಯ ಪದ್ಧತಿಯಿಂದ ಬಂಡವಾಳ ಪದ್ಧತಿಗೆ ಬದಲಾವಣೆ ಆದಾಗ,

---

[1] Reports from Assistant Hand-Loom Weavers' Commissioners, Part II, 1840, p. 217, Journals of the House of Commons, vol. 75, 1819-1820.

[2] Gaskell, *Artisans and Machinery*, pp. 35-38. Parker, London, 1836.

ಉತ್ಪಾದನ ವಿಧಾನದಲ್ಲೂ ವಿನಿಮಯ ವಿಧಾನದಲ್ಲೂ ಕ್ರಾಂತಿ ಏರ್ಪಟ್ಟಾಗ, ಹಳೆಯ ವಿಜ್ಞಾನಕ್ಕೆ, ಹಳೆಯ ನ್ಯಾಯ ವ್ಯವಸ್ಥೆಗೆ, ಹಳೆಯ ಶಿಕ್ಷಣ ಪದ್ಧತಿಗೆ, ಹಳೆಯ ಸರ್ಕಾರಕ್ಕೆ, ಹಳೆಯ ಧರ್ಮಕ್ಕೆ ಏನಾಯಿತು? ಅವು ಬದಲಾದವು, ಬದಲಾಗಲೇ ಬೇಕಾಯಿತು. ೧೮೦೦ನೆಯ ಇಸವಿಯ ಮಾದರಿಯ ನ್ಯಾಯಪದ್ಧತಿ ೧೨೦೦ನೆಯ ಇಸವಿಯ ಮಾದರಿಯ ನ್ಯಾಯಪದ್ಧತಿಗಿಂತ ತುಂಬಾ ಭಿನ್ನವಾಗಿತ್ತು. ಧಾರ್ಮಿಕ ಬೋಧನೆಯೂ ಇಂತೆಯೇ. ವ್ಯಾಪಾರಿಗಳು, ತಯಾರಕರು, ಬ್ಯಾಂಕರುಗಳು ಇವರ ಅಧಿಕಾರಕ್ಕೊಳಗಾದ ಜಗತ್ತಿಗೆ ಅಗತ್ಯವೆನಿಸಿದ ಧಾರ್ಮಿಕ ಸೂತ್ರಗಳು ಪ್ರಾರ್ಥನಕಾರರ ಯೋಧರ ಅಧಿಕಾರಕ್ಕೊಳಪಟ್ಟಿದ್ದ ಜಗತ್ತಿನ ಸೂತ್ರಗಳಿಗಿಂತ ಭಿನ್ನವಾಗಿದ್ದುವು. ವ್ಯಕ್ತಿಗೂ ಅವನ ಸಂಸಾರಕ್ಕೂ ಸಾಕಾಗುವಷ್ಟು ಸಂಪಾದನೆ ಮಾಡುವುದು ಮಾತ್ರವೇ ದುಡಿಮೆಯ ಉದ್ದೇಶವಾಗಿದ್ದ ಕಾಲದಲ್ಲಿ ಲಾಭಬಡಕರನ್ನು ಚರ್ಚು ನಿರಾಕರಿಸಬಹುದಿತ್ತು. ಆದರೆ ಲಾಭ ಪಡೆಯುವುದೇ ಶ್ರಮದ ಮುಖ್ಯೋದ್ದೇಶವಾದಾಗ ಚರ್ಚು ಬೇರೆ ಹಾಡನ್ನೇ ಹಾಡಬೇಕಿತ್ತು. ಊಳಿಗಮಾನ್ಯ ಯುಗದ ಕೈಕೆಲಸದ ವ್ಯವಸ್ಥೆಗೆ ಹೊಂದಿಕೊಂಡ ಕ್ಯಾಥೊಲಿಕ್ ಚರ್ಚು ಬಂಡವಾಳ ವ್ಯವಸ್ಥೆಗೆ ತಕ್ಕಂತೆ ಶೀಘ್ರವಾಗಿ ತನ್ನ ಬೋಧನೆಯನ್ನು ಬದಲಾಯಿಸುವುದು ಸಾಧ್ಯವಾಗಲಿಲ್ಲ. ಬಂಡವಾಳಗಾರ ಲಾಭಕ್ಕಾಗಿ ದುಡಿಯುವ ಈ ವ್ಯವಸ್ಥೆಗೆ ತಕ್ಕಂತೆ ತನ್ನ ಬೋಧನೆಯ ಮಾರ್ಗವನ್ನು ಅಳವಡಿಸಿಕೊಳ್ಳುವುದು ಪ್ರಾಟೆಸ್ಟೆಂಟ್ ಚರ್ಚಿಗೆ ಸಾಧ್ಯವಾಯಿತು. ಅದು ಹಾಗೇ ಮಾಡಿತು. ಪ್ರಾಟೆಸ್ಟೆಂಟ್ ಚರ್ಚು ಹಲವು ಶಾಖೆಗಳಾಗಿ ಒಡೆಯಿತು. ಆದರೆ ಅರ್ಥಸಂಗ್ರಹಣೆಯಲ್ಲಿ ಆಸಕ್ತಿ ಹೊಂದಿದ್ದ ಬಂಡವಾಳಿಗನಿಗೆ ಇವುಗಳಲ್ಲೆಲ್ಲಾ ಹೆಚ್ಚು ಕಡಿಮೆ ಸಮಾಧಾನ ದೊರಕುತ್ತಿತ್ತು.

ಉದಾಹರಣೆಗೆ ಪ್ಯೂರಿಟನ್ನರನ್ನು—ಧರ್ಮಶುದ್ಧಿವಾದಿಗಳನ್ನು—ತೆಗೆದುಕೊಳ್ಳಿ. ಐಶ್ವರ್ಯ ಸಂಪಾದನೆಯ ಹಾದಿ ನರಕದ ಹಾದಿ, ಎಂದು ಕ್ಯಾಥೋಲಿಕ್ ನ್ಯಾಯ ನಿರೂಪಕರು ಹೇಳಿದ್ದರು. ಆದರೆ ಧರ್ಮಶುದ್ಧಿವಾದಿಯಾದ ಬ್ಯಾಕ್ಸ್‌ಟರ್ ತನ್ನ ಅನುಯಾಯಿಗಳಿಗೆ ಬೇರೆ ರೀತಿ ಹೇಳಿದ. ಐಶ್ವರ್ಯ ಸಂಪಾದನೆಗೆ ದೊರಕಿದ ಅವಕಾಶಗಳನ್ನು ಸದುಪಯೋಗ ಪಡಿಸಿಕೊಳ್ಳದಿದ್ದರೆ ಅವರು ದೇವರ ನಿಯಮಕ್ಕೆ ತಕ್ಕಂತೆ ನಡೆಯುವುದಿಲ್ಲವೆಂದು ಈತ ಹೇಳಿದ. "ಒಂದು ಮಾರ್ಗಕ್ಕಿಂತ ಇನ್ನೊಂದು ಮಾರ್ಗ ಅನುಸರಿಸಿದರೆ ಅದರಿಂದ ನ್ಯಾಯವಾಗಿ ಹೆಚ್ಚು ಸಂಪಾದನೆ ಸಾಧ್ಯವಾಗುವುದಾದರೆ, ಆ ಮಾರ್ಗವನ್ನು ದೇವರು ತೋರಿಸಿದ್ದೇ ಆದರೆ (ಆ ಮಾರ್ಗ ಅನುಸರಿಸುವುದರಿಂದ ನಿಮಗೇ ಆಗಲಿ, ಬೇರಾರಿಗೇ ಆಗಲಿ ಅನ್ಯಾಯವಾಗದಿದ್ದರೆ), ನೀವು ಆ ಮಾರ್ಗ ಅನುಸರಿಸಲೊಲ್ಲದೆ ಹೋದರೆ, ಕಡಮೆ ಲಾಭ ತರುವ ಮಾರ್ಗವನ್ನೇ ಅನುಸರಿಸಿದರೆ, ನಿಮ್ಮ ಅಂತಃಪ್ರೇರಣೆಯ ಉದ್ದೇಶಗಳಲ್ಲೊಂದನ್ನುಲ್ಲಂಘಿಸಿದಂತೆ; ನೀವು ದೇವರ ದೂತನಾಗಲು ನಿರಾಕರಿಸಿದಂತೆ. ಅವನ ವರಗಳನ್ನು ಸ್ವೀಕರಿಸಿ, ಅವನ್ನು ಅವನಿಗಾಗಿ ಅವನ ಆಣತಿಯಂತೆ ಉಪಯೋಗಿಸಬೇಕು. ದೈಹಿಕ ವ್ಯಾಪಾರಗಳಿಗಾಗಿ, ಪಾಪಕೃತ್ಯಕ್ಕಾಗಿ, ಅಲ್ಲದಿದ್ದರೂ, ದೇವರಿಗಾಗಿ ಐಶ್ವರ್ಯ ಸಂಪಾದಿಸುವುದು ತಪ್ಪಲ್ಲ."[1]

[1] Max Weber, *The Protestant Ethic and the Spirit of Capitalism*, p. 162. Allen and Unwin, London, 1930.

ಅಥವಾ, ಮೆಥೊಡಿಸ್ಟರ—ಕರ್ಮನಿಷ್ಠರ—ಉದಾಹರಣೆಯನ್ನೆ ತೆಗೆದುಕೊಳ್ಳಿ. ಇವರ ಪ್ರಮುಖ ನಾಯಕನಾದ ವೆಸ್ಲಿ ಹೀಗೆ ಬರೆಯುತ್ತಾನೆ: "ಜನ ಉದ್ಯೋಗಶೀಲರಾಗದಂತೆ ಮಿತವ್ಯಯಿಗಳಾಗದಂತೆ, ತಡೆಯಬಾರದು. ಶಕ್ತಿಯಿದ್ದಷ್ಟು ಗಳಿಸಿ, ಸಾಧ್ಯವಾದಷ್ಟು ಉಳಿಸಿ —ಎಂದು ಎಲ್ಲ ಕ್ರೈಸ್ತರಿಗೂ ನಾವು ಒತ್ತಾಯ ಪೂರ್ವಕವಾಗಿ ಹೇಳಬೇಕು. ವಾಸ್ತವ ವಾಗಿ ಹೀಗೆಂದರೇನು? ಐಶ್ವರ್ಯವಂತರಾಗಿರಿ, ಎಂದು ಹೇಳಿದ ಹಾಗೆ ತಾನೆ?"[1]

ಅಥವಾ, ಕ್ಯಾಲ್ವಿನ್ ದೈವಜ್ಞಾನ ಮತದ ಅನುಯಾಯಿಗಳನ್ನೇ ತೆಗೆದುಕೊಳ್ಳಿ. ಪ್ರಾಟೆಸ್ಟೆಂಟ್ ಸುಧಾರಣೆ ಬಂದದ್ದು ಹದಿನಾರನೆಯ ಶತಮಾನದಲ್ಲಿ. ಅನಂತರ ಬರಲಿದ್ದ ಬಂಡವಾಳ ರೀತಿಯ ಉತ್ಪಾದನೆಗೆ ತುಂಬಾ ಅಗತ್ಯವಾದ ಬಂಡವಾಳ ಶೇಖರಣೆಗೆ ಧಾರಾಳವಾಗಿ, ಇತೋಪ್ಯತಿಶಯವಾಗಿ, ಅವಕಾಶಗಳಿದ್ದ ಕಾಲವದು. ಬಂಡವಾಳ ಪದ್ಧತಿಯ ಉದ್ಯಮದ ತಿರುಳನ್ನೇ ಅವಲಂಬಿಸಿತ್ತು, ಕ್ಯಾಲ್ವಿನನ ಬೋಧನೆ. ಹಿಂದಣ ಕ್ಯಾಥೊಲಿಕ್ ಚರ್ಚು "ಲಾಭಕಾಮನೆ"ಯ ಪಾಪಕೃತ್ಯದಲ್ಲಿ ನಿರತನಾಗಿದ್ದ ವರ್ತಕನ ಬಗ್ಗೆ ಸಂಶಯ ಭಾವ ತಳೆದಿತ್ತು. ಆದರೆ ಪ್ರಾಟೆಸ್ಟೆಂಟ್ ಚರ್ಚು ಹೀಗಲ್ಲ—ಎಂದು ಕ್ಯಾಲ್ವಿನ್ ಬರೆದ: "ನೆಲದ ಒಡೆತನದಿಂದ ಲಭಿಸುವ ವರಮಾನಕ್ಕಿಂತ ವ್ಯಾಪಾರದ ವರಮಾನ ಹೆಚ್ಚಾಗಿ ಇರಬಾರದೇಕೆ? ವರ್ತಕನ ಲಾಭ ಬರುವುದಾದರೂ ಎಲ್ಲಿಂದ? ಅವನ ಉದ್ಯೋಗಶೀಲತೆಯಿಂದಲೇ, ದುಡಿಮೆಯಿಂದಲೇ, ಅಲ್ಲವೆ?"[2] ಹೀಗೆ ಹೇಳಿದ ಕ್ಯಾಲ್ವಿನನ ತತ್ವ ಉದಿತೋದಿತ ಬೂರ್ಷ್ವಾ ವರ್ಗದ ನಂಬಿಕೆ ಆದದ್ದರಲ್ಲಿ ಆಶ್ಚರ್ಯವಿಲ್ಲ.

ಅಮೆರಿಕದ ನ್ಯೂ ಇಂಗ್ಲೆಂಡಿನಲ್ಲಿ ನೆಲಸಿದ ಕ್ಯಾಲ್ವಿನ್ ಹಿಂಬಾಲಕರನ್ನು ಅಮೆರಿಕನರು ಚೆನ್ನಾಗಿ ಬಲ್ಲರು. ದೇವರ ಮಹಾತ್ಮೆಯನ್ನು ಸಾರುವುದೇ ಜೀವನದ ಪರಮ ಧರ್ಮ ವೆಂಬುದಾಗಿ ತಿಳಿದಿದ್ದ ಈ ಧಾರ್ಢ್ಯವಂತರ ತಂಡವನ್ನು ಹೊಗಳುವ ಮಾತು ಅಮೆರಿಕದ ಚರಿತ್ರೆಯ ಪುಸ್ತಕಗಳಲ್ಲಿದೆ. ಈ ಗುರಿಯನ್ನು ಸಾಧಿಸಲು ಈ ಜನ ಸಂಯಮದ ಬಾಳು ನಡಸಿದರು. ಮಿತವ್ಯಯ, ದುಡಿಮೆ—ಇವು ಅಪೇಕ್ಷಣೀಯ; ಸುಖಭೋಗ, ದುಂದು—ಇವು ತ್ಯಾಜ್ಯ. ಹೀಗೆಂದು ಇವರು ನಂಬಿದ್ದರು. ಇನ್ನೊಂದು ದೃಷ್ಟಿಯಿಂದ ಇದನ್ನು ಅವಲೋಕಿಸಿ. ಉದಯವಾಗುತ್ತಿದ್ದ ಹೊಸ ಆರ್ಥಿಕ ವ್ಯವಸ್ಥೆಗೆ ಆಧಾರವಾಗಿದ್ದದ್ದು ಕೈತುಂಬ ಎಡೆಬಿಡದ ದುಡಿತ, ಸಂಪತ್ತಿನ ಶೇಖರಣೆ. ಕ್ಯಾಲ್ವಿನ್ನನ ಅನುಯಾಯಿಗಳಾದರೂ ಇವನ್ನೇ ತಮ್ಮ ಮತದ ಆದರ್ಶವಾಗಿ ಇಟ್ಟುಕೊಂಡಿದ್ದರು. ಇವನ್ನು ದಿನಚರಿಯಲ್ಲಿ ಆಚರಣೆಗೆ ತಂದರು. ಇದಕ್ಕಿಂತ ಸ್ವಾಗತಾರ್ಹವಾದದ್ದು ಆಗ ಬೇರೊಂದಿರಲಿಲ್ಲ. ಸಂಪತ್ತಿನ ಸಂಗ್ರಹಕ್ಕೆ, ಬಂಡವಾಳ ಪದ್ಧತಿಯ ತತ್ವಕ್ಕೆ, ಅನುಗುಣವಾಗಿಯೇ ತನ್ನ ಎಲ್ಲ ಕೃತಿಯನ್ನೂ ಅಳವಡಿಸಿಕೊಂಡಿದ್ದವನೇ ಉತ್ತಮ ಕ್ರೈಸ್ತ—ಎಂಬ ಭಾವನೆಗೆ ಸ್ವಾಗತ ದೊರೆತದ್ದರಲ್ಲಿ ಆಶ್ಚರ್ಯವೇನು? ಬಂಡವಾಳದ ಹಿತಕ್ಕೂ ಕ್ಯಾಲ್ವಿನ್ನನ ಈ ಭಾವನೆಗಳಿಗೂ ಗಂಟಾಯಿತು, ನಂಟಾಯಿತು.

---

[1] *Ibid.*, p. 175.

[2] R. H. Tawney, *Religion and the Rise of Capitalism, op. cit.*, p. 105.

ಈ ಭಾವನೆ ತುಂಬಾ ಜಾಗೃತವಾಗಿದ್ದವರ ಉತ್ತಮ ಉದಾಹರಣೆಯಾಗಿ ಬೆಂಜಮಿನ್ ಫ್ರಾಂಕ್‌ಲಿನ್ನನನ್ನು ಕೊಡಬಹುದು. "ಬಡ ರಿಚರ್ಡನ ಪಂಚಾಂಗ" ಎಂಬ ಪುಸ್ತಕದಲ್ಲಿ ಈತ ಧರ್ಮಶುದ್ಧಿವಾದಿಗಳ ದೃಷ್ಟಿಯಲ್ಲಿ ಧರ್ಮಶೀಲರು ಅನುಸರಿಸಬೇಕಾದ ಉತ್ತಮ ಜೀವನದ ಸಾರವನ್ನು ಸರಳವಾದ ಮನೆ ಮಾತಿನಲ್ಲಿ ಸಾರಿದ್ದಾನೆ:

"ಕಷ್ಟಪಟ್ಟು ದುಡಿಯದವನು ಎಂದೂ ಖ್ಯಾತಿವಂತನಾಗಿಲ್ಲ."

"ಲಾಭದ ಆಸೆಯೇ ದುಃಖ ನಿವಾರಕ."

"ನಿನ್ನ ಕೆಲಸ ನೀನು ಮಾಡು; ಕೆಲಸ ನಿನ್ನನ್ನು ಉಳಿಸುತ್ತದೆ."[1]

"ಯುವಕ ವ್ಯಾಪಾರೋದ್ಯಮಿಗಳಿಗೆ ಸಲಹೆ" ಎಂಬುದರಲ್ಲಿ ಇವನು ಹೀಗೆ ಹೇಳಿದ್ದಾನೆ: "ಒಟ್ಟಿನಲ್ಲಿ, ಐಶ್ವರ್ಯದ ಮಾರ್ಗ ತಿಳಿಯ ಬಯಸುವಿರಾ? ಪೇಟೆಯ ದಾರಿಯಷ್ಟೇ ಸರಳ ಇದು. **ದುಡಿಮೆ, ಮಿತವ್ಯಯ**—ಈ ಎರಡು ಪದಗಳೇ ಇವಕ್ಕೆ ಮುಖ್ಯಾಧಾರ. ಎಂದರೆ ಇಷ್ಟು: **ಕಾಲ, ಹಣ** ವ್ಯರ್ಥ ಮಾಡಬೇಡಿ....ಪ್ರಾಮಾಣಿಕವಾಗಿ ಗಳಿಸಬಹುದಾದ್ದನ್ನೆಲ್ಲ ಗಳಿಸುವವನು, ಗಳಿಸಿದ್ದನ್ನೆಲ್ಲ ಕೂಡಿಡುವನು, ಖಂಡಿತವಾಗಿ **ಐಶ್ವರ್ಯ**ವಂತನಾಗುವನು."[2]

ಇದು ಬಂಡವಾಳ ಪದ್ಧತಿಯ ಸತ್ವ. ಕ್ಯಾಲ್ವಿನ್ ಅನುಯಾಯಿಗಳ ದೃಷ್ಟಿಯಲ್ಲಿ ಈ ಬೋಧನೆ ಸಾಮಾನ್ಯ ವಿವೇಕವಷ್ಟೇ ಅಲ್ಲ, ಕ್ರೈಸ್ತಾಚಾರದ ಆದರ್ಶ. ಈ ಬೋಧನೆಯ ಅನುಷ್ಠಾನವೇ ದೇವರ ಮಹಾತ್ಮೆ ಸಾರಲು ಕೈಕೊಂಡ ಶ್ರೇಷ್ಠ ಯತ್ನ.

ಲಾಭ ಬಯಸುವುದು "ಮಾನವ ಸ್ವಭಾವ" ಎಂದು ಯಾರಾದರೂ ಇನ್ನು ಮುಂದೆ ನಿಮಗೆ ಹೇಳಿದರೆ, ಇದು ಹೇಗೆ ಮಾನವ ಸ್ವಭಾವವಾಯಿತೆಂಬುದನ್ನು ನೀವು ತೋರಿಸಬಹುದು. ಹಣದ ಉಳಿತಾಯ, ಬಂಡವಾಳದ ಹೂಟ—ಇವು ಊಳಿಗ ಮಾನ್ಯ ಸಮಾಜದಲ್ಲಿ ಗೊತ್ತಿರಲೇ ಇಲ್ಲವೆಂಬುದನ್ನು, ಬಂಡವಾಳವಾದಿ ಸಮಾಜದಲ್ಲಿ–ದೇವರ ಮಹಿಮೆ ಸಾರುವ ಉದ್ದೇಶದಿಂದ–ಅನುಷ್ಠಾನಯೋಗ್ಯವಾದ ಸಂಪ್ರದಾಯವಾಗಿ ಹೇಗೆ ಬೇರೂರಿದುವೆಂಬುದನ್ನು ನೀವು ಅವರಿಗೆ ವಿಶದಪಡಿಸಬಹುದು. ಅಂತೂ, ಹತ್ತೊಂಬತ್ತನೆಯ ಶತಮಾನ ಬರುವ ವೇಳೆಗೆ, "ಹಣದ ಉಳಿತಾಯ, ಬಂಡವಾಳದ ಹೂಡಿಕೆ ಇವು ಒಮ್ಮೆಲೇ ಒಂದು ದೊಡ್ಡ ವರ್ಗದ ಜನರ ಕರ್ತವ್ಯವಾದುವು, ಆಮೋದದ ಸಂಗತಿಯಾದುವು. ಹೀಗೆ ಕೂಡಿಟ್ಟದ್ದನ್ನು ಸಾಮಾನ್ಯವಾಗಿ ಕರಗಿಸುತ್ತಿರಲಿಲ್ಲ; ಬಳಸುತ್ತಿರಲಿಲ್ಲ. ಚಕ್ರಬಡ್ಡಿಯೊಂದಿಗೆ ಕೂಡಿ ಇದು ಅಗಾಧವಾಗಿ ಬೆಳೆಯಿತು. ನಾವು ಈಗ ಸಹಜವೆಂದುಕೊಂಡಿರುವ ಐಹಿಕ ವಿಜಯಗಳು ಸಾಧ್ಯವಾದದ್ದು ಇದರಿಂದ. ಉಳಿತಾಯ ಬೆಳಸುವ, ಪ್ರೋತ್ಸಾಹಿಸುವ ಮಹಾ ಪಿತೂರಿಯಲ್ಲಿ ನೀತಿ, ರಾಜಕೀಯ, ಸಾಹಿತ್ಯ, ಮತ—ಎಲ್ಲವೂ ಒಂದಾಗಿ

---

[1] B. Franklin, *Poor Richard's Almanack* (1732-1757), pp. 70, 76. Edited by B E. Smith, Century Co., N.Y., 1898.

[2] B. Franklin, *The Way to Wealth, To which are Added his Advice to Young Tradesmen* (1757), p. 30. Windsor. Vt. 1826.

ಸೇರಿದುವು. ದೇವರು–ಧನಪಿಶಾಚಿಗಳ ಸಮ್ಮಿಲನವಾಯಿತು. ಜಗತ್ತಿನಲ್ಲಿ ಧನಿಕ ಜನಕ್ಕೆ ಶಾಂತಿ. ಅಂತೂ ಹಣವಂತನಿಗೂ ಸ್ವರ್ಗಲೋಕಕ್ಕೆ ಪ್ರವೇಶ ದೊರಕುವಂತಾಯಿತು. ಆತ ಮಾಡಬೇಕಾಗಿದ್ದುದೊಂದೇ—ಉಳಿತಾಯ."[1]

ಆರಂಭಕಾಲದ ವಾಣಿಜ್ಯದಿಂದ ಬಂದ ಬಂಡವಾಳ ಶೇಖರಣೆ, ಆಸ್ತಿರಹಿತ ಕಾರ್ಮಿಕ ವರ್ಗದ ಅವತಾರ—ಇವೆರಡೂ ಸೇರಿ ಕೈಗಾರಿಕಾ ಬಂಡವಾಳ ಪದ್ಧತಿಯ ಯುಗದ ಅರುಣೋದಯವಾಯಿತು. ಕಾರ್ಖಾನೆ ವ್ಯವಸ್ಥೆಯೇ ಹೆಚ್ಚು ಹೆಚ್ಚು ಹಣ ಶೇಖರಣೆಗೆ ಹಾದಿ ಮಾಡಿಕೊಟ್ಟಿತು. ಹಣ ಕೂಡಿಟ್ಟರೆ, ಕೂಡಿಟ್ಟದ್ದನ್ನು ಮತ್ತೆ ಸಂಪಾದನೆಯಲ್ಲಿ ತೊಡಗಿಸಿದರೆ, ಸ್ವರ್ಗಲೋಕ ತಮ್ಮದಾಗುವುದೆಂಬ ನಂಬಿಕೆಯಲ್ಲೇ ಬೆಳೆದ ಈ ಹೊಸ ಸಂಪತ್ತಿನ ಒಡೆಯರು ತಮ್ಮ ಬಂಡವಾಳವನ್ನು ಮತ್ತೆ ಕಾರಖಾನೆಗಳಲ್ಲೇ ಹಾಕಿದರು. ಇಂತು, ಇಂದು ನೀವೂ ನಾವೂ ಬಲ್ಲ ಮಾದರಿಯ ಆಧುನಿಕ ವ್ಯವಸ್ಥೆಯ ಉದಯವಾಯಿತು.

---

[1] J. M. Keynes, *A Tract on Monetary Reform*, p. 7. Macmillan & Co., Ltd., London, 1923.

## ೧೫. ಕೈಗಾರಿಕೆ ವ್ಯವಸಾಯ ಸಾರಿಗೆ ಕ್ಷೇತ್ರಗಳಲ್ಲಿ ಕ್ರಾಂತಿ

೧೫೦ ವರ್ಷಗಳ ಹಿಂದೆ ಇದ್ದ ವರ್ತಮಾನ ಪತ್ರಿಕೆಗಳಲ್ಲಿ "ನಂಬಿದರೆ ನಂಬಿ, ಬಿಟ್ಟರೆ ಬಿಡಿ" ಎಂಬ ಶಿರೋನಾಮೆಯ ಸುದ್ದಿಗಳು ಪ್ರಕಟವಾಗುತ್ತಿರಲಿಲ್ಲ; ನಂಬಲಾಗದ ಕತೆಗಳನ್ನು ಕೊಡುತ್ತಿರಲಿಲ್ಲ. ಈ ವಾಡಿಕೆ ಆಗ ಏನಾದರೂ ಇದ್ದಿದ್ದರೆ, ೧೭೭೬ರ ಮಾರ್ಚ್ ೧೧ನೆಯ ದಿನಾಂಕದ ಬರ್ಮಿಂಗ್‌ಹ್ಯಾಂ ಗೆಜೆಟ್ಟನಲ್ಲಿ ಮುಂದೆ ಕೊಟ್ಟಿರುವ ಸೋಜಿಗದ ಸುದ್ದಿಯನ್ನು ಈ ಶಿರೋನಾಮೆಯ ಅಡಿಯಲ್ಲೇ ಹಾಕುತ್ತಿತ್ತು: "ಶ್ರೀಮಾನ್ ವಾಟ್ಟನ ಹೊಸ ತತ್ವಗಳನ್ನು ಅನುಸರಿಸಿ ನಿರ್ಮಿತವಾದ ಒಂದು ಹಬೆ ಇಂಜನ್ನು ಕಳೆದ ಶುಕ್ರವಾರ ದಂದು ಬ್ಲೂಮ್‌ಫೀಲ್ಡ್ ಕಲ್ಲಿದ್ದಲು ಗಣಿಯಲ್ಲಿ ಕಾರ್ಯಾರಂಭ ಮಾಡಿತು....ಇಂಥ ವೈಶಿಷ್ಟ್ಯಪೂರ್ಣ ಹಾಗೂ ಶಕ್ತಿಯುತ ಯಂತ್ರದ ಪ್ರಥಮ ಚಲನೆಯನ್ನು ಕಂಡು ಅಲ್ಲಿ ಹಾಜರಿದ್ದ ವಿಜ್ಞಾನಿ ಮಹನೀಯರ ಕುತೂಹಲ ತುಂಬಾ ಕೆರಳಿತು....ಈ ಪ್ರಯೋಗದಿಂದ ಅನನುಭವಿಗಳ ಸಂಶಯ ದೂರವಾಗಿದೆ. ಈ ಹೊಸ ನಿರ್ಮಾಣದ ಪ್ರಾಮುಖ್ಯ, ಉಪಯುಕ್ತತೆ ಇವು ಅಂತಿಮವಾಗಿ ಖಚಿತಗೊಂಡಿವೆ....ಹಲವು ವರ್ಷಗಳ ಅಧ್ಯಯನ ಹಾಗೂ ದುಬಾರಿ ವೆಚ್ಚಮಾಡಿ, ಶ್ರಮದಾಯಕವಾದ ಹಲವು ಬಗೆಯ ಪ್ರಯೋಗಗಳಿಂದ ಶ್ರೀಮಾನ್ ವಾಟ್ ಅವರು ಇದನ್ನು ಕಂಡು ಹಿಡಿದರು."[1]

೧೮೦೦ರ ವೇಳೆಗೆ ವಾಟನ ಈ ಹೊಸ ನಿರ್ಮಾಣದ ಪ್ರಾಮುಖ್ಯ ಉಪಯುಕ್ತತೆಗಳು ಆಂಗ್ಲರಿಗೆ ಎಷ್ಟು ಸ್ಪಷ್ಟವಾದುವೆಂದರೆ, "ಇದು ೩೦ ಕಲ್ಲಿದ್ದಲು ಗಣಿಗಳಲ್ಲೂ ೨೨ ತಾಮ್ರದ ಗಣಿಗಳಲ್ಲೂ ೨೮ ಎರಕದಾಲಯಗಳಲ್ಲೂ ೧೭ ಸಾರಾಯಿ ಮನೆಗಳಲ್ಲೂ ೮೪ ಹತ್ತಿಗಿರಣಿಗಳಲ್ಲೂ ಬಳಕೆಗೆ ಬಂದಿತ್ತು."[2]

ಮನುಷ್ಯ ಮಾಡಬೇಕಾದ ಕೆಲಸ ನಿರ್ವಹಿಸಬಲ್ಲ ಯಂತ್ರದ ನಿರ್ಮಾಣದ ಕತೆ ಹೊಸದಲ್ಲ; ಬಹು ಹಳೆಯದು. ಆದರೆ ಹಬೆ ಶಕ್ತಿಗೆ ಯಂತ್ರವನ್ನು ಹೂಡಿದಾಗ ಉತ್ಪಾದನ ವಿಧಾನದಲ್ಲಿ ಒಂದು ಮುಖ್ಯ ವ್ಯತ್ಯಾಸವಾಯಿತು. ಶಕ್ತಿ ಚಾಲಿತ ಯಂತ್ರದ ಆಗಮನದಿಂದ ವಿಶಾಲ ಪ್ರಮಾಣದಲ್ಲಿ ಕಾರ್ಖಾನೆ ವ್ಯವಸ್ಥೆಯ ಉತ್ಕರ್ಷೆಯುಂಟಾಯಿತು. ಯಂತ್ರವಿಲ್ಲದ ಕಾರ್ಖಾನೆ ಇರಬಹುದು; ಆದರೆ ಕಾರ್ಖಾನೆ ಇಲ್ಲದೆ ಶಕ್ತಿಚಾಲಿತ ಯಂತ್ರ ಇರುವುದು ಸಾಧ್ಯವಿಲ್ಲ—ಎಂಬ ಸ್ಥಿತಿ ಬಂತು.

ದೊಡ್ಡ ಪ್ರಮಾಣದ ದಕ್ಷ ಸಂಘಟನೆ, ಶ್ರಮವಿಭಾಗ—ಇವುಗಳನ್ನೊಳಗೊಂಡ ಕಾರಖಾನೆ ವ್ಯವಸ್ಥೆಯಿಂದ ಉತ್ಪಾದನೆ ಅದ್ಭುತವಾಗಿ ಹೆಚ್ಚಿತು. ಪದಾರ್ಥಗಳು ಪ್ರಚಂಡ ವೇಗದಲ್ಲಿ ಕಾರಖಾನೆಯಿಂದ ಹೊರಬಂದುವು. ಲಾಭದ ಹಾದಿಯಲ್ಲಿ ಬಂಡವಾಳ ಪ್ರವಹಿಸಿ

---

[1] *A Century of Birmingham Life from 1741-1841*, Compiled and edited by J. A. Langford. 2 vols. Vol I, p. 221. Osborne, Birmingham, 1868.

[2] Cf. J. Lord, *Capital and Steam Power, 1750-1800*, p. 175. P. S. King and Son, London, 1923.

ದುದೂ ಉತ್ಪಾದನೆ ಹೀಗೆ ಹೆಚ್ಚಲು ಕಾರಣ. ಪದಾರ್ಥದ ಬೇಡಿಕೆ ಹೆಚ್ಚಿದುದಕ್ಕೆ ಇದು ಉತ್ತರವಾಗಿಯೂ ಇತ್ತು. ಹೊಸದಾಗಿ ಕಂಡುಹಿಡಿಯಲ್ಪಟ್ಟ ಪ್ರದೇಶಗಳಲ್ಲಿ ಪೇಟೆ ತೆರೆದದ್ದೂ, ಗಿರಾಕಿ ಹುಟ್ಟಿಕೊಂಡದ್ದೂ ಈ ಹೆಚ್ಚಿನ ಬೇಡಿಕೆಗೆ ಒಂದು ಮುಖ್ಯ ಕಾರಣ. ಇದಕ್ಕೆ ಇನ್ನೂ ಒಂದು ಕಾರಣವಿತ್ತು. ವಿದೇಶಿ ಪೇಟೆಯಷ್ಟೇ ಅಲ್ಲ, ದೇಶೀಯ ಪೇಟೆಯಲ್ಲೂ ಕಾರಖಾನೆ ವಸ್ತುಗಳಿಗೆ ಗಿರಾಕಿ ಇತ್ತು; ಬೇಡಿಕೆ ಇತ್ತು. ಸ್ವದೇಶದಲ್ಲೇ ಇಂಗ್ಲೆಂಡಿನಲ್ಲೇ, ಜನಸಂಖ್ಯೆ ಬೆಳೆಯಿತು. ಇದರಿಂದ ದೇಶೀಯ ಪೇಟೆಯ ಬೇಡಿಕೆಯೂ ಹೆಚ್ಚಿತು.

ಹದಿನೆಂಟನೆಯ ಶತಮಾನದಲ್ಲಿ ಇಂಗ್ಲೆಂಡಿನ ಜನಸಂಖ್ಯೆಯ ಬೆಳೆವಣಿಗೆಯ ಗತಿ ಹೆಚ್ಚಲು ಜನನ ಸಂಖ್ಯೆಯ ಪ್ರಮಾಣ ಹೆಚ್ಚಿದ್ದು ಕಾರಣವೇ, ಅಥವಾ ಮರಣದ ಪ್ರಮಾಣ ಇಳಿದದ್ದು ಕಾರಣವೇ—ಎಂಬ ವಿಚಾರವಾಗಿ ಚರಿತ್ರಕಾರರು ವಾದ ನಡಸಿದ್ದಾರೆ. ಇವೆರಡು ಕಾರಣಗಳೂ ನಿಜ. ಆದರೆ ಜನನಸಂಖ್ಯೆಯ ಪ್ರಮಾಣದ ಏರಿಕೆಗಿಂತ ಮರಣದ ಪ್ರಮಾಣದ ಇಳಿತಾಯವೇ ಮುಖ್ಯ ಕಾರಣವೆಂಬುದಾಗಿ ಇಂದಿನ ಭಾವನೆ. ಆದರೆ ಮರಣದ ಪ್ರಮಾಣ ಇಳಿಯಲು ಕಾರಣವೇನು? ವೈದ್ಯರು ತಮ್ಮ ಕಸಬಿನ ಬಗ್ಗೆ ಹೆಚ್ಚು ಜ್ಞಾನ ಸಂಪಾದಿಸಿದ್ದರಿಂದ ಇದು ಸಾಧ್ಯವಾಗಿದ್ದಿರಬಹುದು. ಅನ್ಯ ಕಾರಣಗಳ ಜತೆಗೆ ಇದೂ ಸೇರಿತು; ಜನ ಹಿಂದೆ ಬದುಕುತ್ತಿದ್ದುದಕ್ಕಿಂತ ಹೆಚ್ಚು ಕಾಲ ಬದುಕುವುದು ಇದರಿಂದಲೂ ಸಾಧ್ಯವಾಗಿದ್ದಿರಬಹುದು. ಲಂಡನ್ನಿನ ಹೆರಿಗೆ ಆಸ್ಪತ್ರೆಯಲ್ಲಿ ತಾಯಿ ಮಕ್ಕಳ ಮರಣಸಂಖ್ಯೆ ನಂಬಲಾರದಷ್ಟು ಕಡಮೆಯಾಯಿತೆಂಬುದು ಅಲ್ಲಿನ ದಾಖಲೆಗಳಿಂದ ತಿಳಿಯ ಬರುತ್ತದೆ:

| ಸಾವಿನ ಪ್ರಮಾಣ | ೧೭೪೯ – ೧೭೫೮ | ೧೭೯೯ – ೧೮೦೦ |
|---|---|---|
| ಹೆಂಗಸರು | ೪೨ಕ್ಕೆ ಒಬ್ಬರಂತೆ | ೯೧೪ಕ್ಕೆ ಒಬ್ಬರಂತೆ |
| ಮಕ್ಕಳು | ೧೫ಕ್ಕೆ ಒಂದರಂತೆ | ೧೧೫ಕ್ಕೆ ಒಂದರಂತೆ[1] |

ಈ ಅಂಕಿಗಳಿಂದ ಪರಿಸ್ಥಿತಿ ಸುಸ್ಪಷ್ಟ. ೧೭೦೦ಕ್ಕೆ ಹಿಂದೆ ಇಂಗ್ಲೆಂಡಿನ ಜನಸಂಖ್ಯೆ ಪ್ರತಿ ನೂರು ವರ್ಷಕ್ಕೆ ಹತ್ತು ಲಕ್ಷದಂತೆ ಏರುತ್ತಿತ್ತು. ೧೭೦೦ ರಿಂದ ೧೮೦೦ರ ವರೆಗಿನ ನೂರು ವರ್ಷದಲ್ಲಿ ಇದು ಮೂವತ್ತು ಲಕ್ಷದಷ್ಟು ಹೆಚ್ಚಿತು!

ವ್ಯವಸಾಯದಲ್ಲಾದ ಅದ್ಭುತ ಅಭಿವೃದ್ಧಿಯಿಂದ ಜನರ ಆಹಾರ ಉತ್ತಮಗೊಂಡದ್ದೂ ಜನಸಂಖ್ಯೆ ಬೆಳೆಯಲು ಇನ್ನೊಂದು ಕಾರಣವಿರಬಹುದು. (ಜನಸಂಖ್ಯೆಯ ಬೆಳವಣಿಗೆಯ ಫಲವಾಗಿಯೂ ವ್ಯವಸಾಯದ ಈ ಅಭಿವೃದ್ಧಿ ಸಾಧ್ಯವಾಗಿರಬಹುದು.) ಕೈಗಾರಿಕಾ ಕ್ರಾಂತಿ ಆದಂತೆ ವ್ಯವಸಾಯ ಕ್ರಾಂತಿಯೂ ಸಂಭವಿಸಿತು.

ಇಂಗ್ಲೆಂಡಿನ ಶಾಲಾಬಾಲಕನ ಬಳಿಗೆ ಹೋಗಿ: "೧೬೪೯" ಎಂದು ಹೇಳಿ. ತಕ್ಷಣ ಅವನು, "ಮೊದಲನೆಯ ಛಾರ್ಲ್ಸ್ ದೊರೆ ಸತ್ತ ವರ್ಷ," ಎಂದು ಮರುನುಡಿಯುವನು.

---

[1] Cf. A. Toynbee, *Lectures on the Industrial Revolution of the 18th Century in England* (1884), p. 19. Longmans, Green and Co., 1913.

"ಹಾಲೆಂಡಿನಿಂದ ತಂದ ಟರ್ನಿಪ್ ಹಾಗೂ ಇತರ ಗಡ್ಡೆ ಬೆಳೆಯುವ ಗಿಡಗಳ ಬೆಳೆಯ ಆರಂಭ" ಆದ ವರ್ಷ—ಎಂಬುದು ಅವನಿಗೆ ಹೊಳೆಯುವುದಿಲ್ಲ. ಅವನಿಗೇಕೆ ಹಾಗೆ ಹೊಳೆಯಬೇಕು? ಈ ಟರ್ನಿಪ್ ಗಡ್ಡೆ ಅಷ್ಟು ಮುಖ್ಯವಾಗಿದ್ದುದೇಕೆ?

ನಾಲ್ಕನೆಯ ಪುಟದಲ್ಲಿ ತ್ರಿಪ್ರದೇಶ ವ್ಯವಸ್ಥೆಯ ವಿಚಾರವಾಗಿ ಕೊಟ್ಟಿರುವ ತಃಖ್ತೆಯನ್ನು ನೀವು ನೋಡಿದರೆ ಈ ಪ್ರಶ್ನೆಗೆ ಉತ್ತರ ದೊರಕುತ್ತದೆ. ಮೂರನೆಯ ಒಂದು ಭಾಗ ನೆಲ ಬೀಳು ಬಿಡುವುದರಿಂದ ಅಗಾಧ ನಷ್ಟ, ವ್ಯರ್ಥ. ಟರ್ನಿಪ್ ಗಡ್ಡೆ ಹಾಗೂ ಕ್ಲೋವರ್ ಎಂಬ ಮೂರೆಲೆಯ ಜಾತಿಯ ಗಿಡ ತಂದದ್ದರಿಂದ ನೆಲದ ಸಾರ ಮತ್ತೆ ಗಳಿಸುವ ಸಮಸ್ಯೆಯು ಇತ್ಯರ್ಥವಾದಂತಾಯಿತು.

ಮೊದಲನೆಯ ವರ್ಷ—ಗೋಧಿ
ಎರಡನೆಯ ವರ್ಷ—ಟರ್ನಿಪ್
ಮೂರನೆಯ ವರ್ಷ—ಬಾರ್ಲಿ
ನಾಲ್ಕನೆಯ ವರ್ಷ—ಕ್ಲೋವರ್

ಈ ರೀತಿ ಚತುರ್ವಾರ್ಷಿಕ ವ್ಯವಸ್ಥೆ ತುಂಬಾ ಸ್ವಾಗತಾರ್ಹ ಪ್ರಗತಿಯಾಯಿತು. ಕ್ರಮವಾಗಿ ಎರಡು ಬೆಳೆ ತೆಗೆದ ಮೇಲೆ ಮೂರನೆಯ ವರ್ಷ ನೆಲಕ್ಕೆ ವಿಶ್ರಾಂತಿ ದೊರಕಿಸುವುದು ಅಗತ್ಯವೆನಿಸಲಿಲ್ಲ. ಇದರಿಂದ ನೆಲವನ್ನು ಪಾಳುಗೆಡವಿದ್ದರಿಂದ ಆಗುತ್ತಿದ್ದ ನಷ್ಟ ತಪ್ಪಿದಂತಾಯಿತು.

ಟರ್ನಿಪ್ ಹಾಗೂ ಕ್ಲೋವರಿನ ಬೆಳೆ ತೆಗೆಯಲಾರಂಭಿಸಿದ್ದರಿಂದ ಕೃಷಿಯ ನೆಲದ ಶುದ್ಧೀಕರಣ ಸಾಧ್ಯವಾಯಿತಷ್ಟೇ ಅಲ್ಲ; ದನಕರುಗಳಿಗೆ ಚಳಿಗಾಲದಲ್ಲಿ ಮೇವು ಒದಗಿಸುವ ಸಮಸ್ಯೆಯು ಇತ್ಯರ್ಥವೂ ಆಯಿತು. ಚಳಿಗಾಲದ ಪೂರ ತಿನ್ನಲಿಕ್ಕಾಗಿ ದನಕರು ಕಡಿದು ಉಪ್ಪು ಹಾಕಿ ಇಡುವ ಪದ್ಧತಿಯ ಬದಲು ಹೆಚ್ಚು ದನಗಳನ್ನು ಜೀವಂತವಾಗಿ ಉಳಿಸಿಕೊಳ್ಳುವುದು ವಾಡಿಕೆಯಾಯಿತು.

ದನಗಳ ತಳಿ ಉತ್ತಮಗೊಳಿಸುವ ಬಗ್ಗೆ ಸಂಶೋಧನೆಯೂ ಈ ಕಾಲಕ್ಕೆ ಆರಂಭವಾಯಿತು. ಇದು ಯಶಸ್ವಿಯೂ ಆಯಿತು. ವೈಜ್ಞಾನಿಕ ಪೋಷಣೆ ಆರಂಭವಾಗುವ ಮೊದಲೂ ಅನಂತರವೂ ಸ್ಮಿತ್‌ಫೀಲ್ಡ್ ಮಾರುಕಟ್ಟೆಯಲ್ಲಿ ಮಾರಾಟವಾದ ಜಾನುವಾರುಗಳ ಸರಾಸರಿ ತೂಕ ಕುರಿತ ಕೆಳಗಿನ ಪಟ್ಟಿಯಿಂದ ಈ ಮಾತು ಸಿದ್ಧವಾಗುತ್ತದೆ:

| | ೧೮ನೆಯ ಶತಮಾನದ ಆದಿಕಾಲ | ೧೮ನೆಯ ಶತಮಾನದ ಅಂತ್ಯಕಾಲ |
|---|---|---|
| ಮಾಂಸಕ್ಕಾಗಿ ಬಲಿಸಿದ ದನ | ೩೭೦ ಪೌಂ. | ೮೦೦ ಪೌಂ. |
| ಕರು | ೫೦ ಪೌಂ. | ೧೪೮ ಪೌಂ. |
| ಕುರಿ | ೨೮ ಪೌಂ. | ೮೦ ಪೌಂ. |

ಕೈಗಾರಿಕೆಯಲ್ಲಿ ಬಳಸುವ ಉಪಕರಣ ಹಾಗೂ ಯಂತ್ರದಲ್ಲಿ ಮೇಲ್ಪಾಡು ಆದಂತೆಯೇ ಹದಿನೆಂಟನೆಯ ಶತಮಾನದಲ್ಲಿ ವ್ಯವಸಾಯದಲ್ಲೂ ಉತ್ತಮುಗೊಂಡ ನೇಗಿಲು, ಕಳೆಗುದ್ದಲಿ ಮುಂತಾದುವು ಬಳಕೆಗೆ ಬಂದುವು.

ಜಮೀನು ಕಳೆದುಕೊಂಡವರ ಮೇಲೆ ಅಷ್ಟೊಂದು ಭೀಕರ ಪರಿಣಾಮ ಉಂಟು ಮಾಡಿದ ಜಮೀನು ಆವರಣ ಚಳವಳಿಯಿಂದಲೇ ವ್ಯವಸಾಯ ವಿಧಾನದಲ್ಲೂ ಶಾಸ್ತ್ರದಲ್ಲೂ ಈ ಎಲ್ಲ ಗಮನಾರ್ಹ ಅಭಿವೃದ್ಧಿ ಸಾಧ್ಯವಾಯಿತು; ಹಿರಿಯ ಪ್ರಮಾಣದಲ್ಲಿ ಮುಟ್ಟು ಗಳನ್ನು ಬಳಸುವುದು ಸಾಧ್ಯವಾಯಿತು. ಹಳೆಯ ಅನಾವೃತ ನೆಲದ ವ್ಯವಸ್ಥೆಯಲ್ಲಿ, ಊರೊಟ್ಟಿನ ವ್ಯವಸ್ಥೆಯಲ್ಲಿ, ಇದು ಸಾಧ್ಯವಾಗುತ್ತಿರಲಿಲ್ಲ.

ಲಾಭದಾಯಕವಾದ ರೀತಿಯಲ್ಲಿ ಬೇಸಾಯ ಸಾಧ್ಯ—ಎಂಬ ಮಾತು ಜನಸಂಖ್ಯೆಯ ಬೆಳೆವಣಿಗೆಯಿಂದ ಸಿದ್ಧವಾಯಿತು. ಲಾಭಾಸಕ್ತರಾದ ದೊಡ್ಡ ಜಮೀನುದಾರರು ಈ ಕಾಲ ದಲ್ಲಿ ಹೆಚ್ಚು ಬಂಡವಾಳವನ್ನು ತಮ್ಮ ಜಮೀನಿನ ಮೇಲೆ ಹೂಡಿದರು. ಇದರ ಒಂದು ಫಲವೆಂದರೆ ಹೆಚ್ಚು ಆಹಾರ, ಒಳ್ಳೆಯ ಆಹಾರ. ಇದರಿಂದ ಮತ್ತೆ ಜನಸಂಖ್ಯೆ ಹೆಚ್ಚಿತು.

ಕೈಗಾರಿಕೆ ವ್ಯವಸಾಯಗಳಲ್ಲಾದ ಕ್ರಾಂತಿಯಿಂದ ಸಾರಿಗೆಯಲ್ಲೂ ಕ್ರಾಂತಿ ಸಂಭವಿ ಸಿತು. ಹೆಚ್ಚು ಶೀಘ್ರವಾಗಿ ಅಧಿಕ ವಸ್ತು ಉತ್ಪಾದನೆ, ಹೆಚ್ಚು ಬೆಳೆ, ಉತ್ತಮ ಬೆಳೆ, ಇವು ಜನರನ್ನು ತಲುಪದಿದ್ದರೆ, ಅವರಿದ್ದಲ್ಲಿಗೆ ಇವನ್ನು ಕೊಂಡೊಯ್ಯದಿದ್ದರೆ, ಇವುಗಳಿಂದ ಏನೂ ಪ್ರಯೋಜನವಿಲ್ಲ. ರಸ್ತೆಗಳು ಚೆನ್ನಾಗಿರಲಿಲ್ಲ. ಇವು ಎಷ್ಟು ಕೆಟ್ಟದ್ದುವೆಂಬುದಕ್ಕೆ ಡೌನ್‌ಷೈರಿನ ಮಾರ್ಕ್ವಿಸನ ಈ ಅನುಭವ ಓದಿ. ಈ ಶ್ರೀಮಂತ ಪ್ರಯಾಣ ಹೊರಟಾಗಲೆಲ್ಲ, ತನ್ನ ಪ್ರಯಾಣ ಪೂರೈಸುವ ಸಲುವಾಗಿ, ಕೆಸರಿನಲ್ಲಿ ಹೂತು ಹೋಗದೆ ಇವನ ಬಂಡಿ ಮುಂದೆ ಸಾಗಲು ಅಗತ್ಯವಾದ ರಸ್ತೆ ದುರಸ್ತು ಕೆಲಸ ಸಾಗಿಸಲು, ತನ್ನೊಡನೆ ಕೆಲಸ ಗಾರರ ಒಂದು ತಂಡವನ್ನೇ ಕರೆದೊಯ್ಯುತ್ತಿದ್ದನಂತೆ. ಈ ಮಾರ್ಕ್ವಿಸನಿಗೆ ಸಾಕಷ್ಟು ಕೀಟಲೆ ಕೊಡುತ್ತಿದ್ದ ಈ ರಸ್ತೆ ವಸ್ತು ತಯಾರಕನಿಗೆ ಅಸಾಧ್ಯವಾಗಿತ್ತು. ಬೆಳೆಯುತ್ತಿದ್ದ ಪೇಟೆಯ ಬೇಡಿಕೆ ಪೂರೈಸಲು ಇಂಥ ರಸ್ತೆ ಮಹಾ ಆತಂಕವಾಗಿತ್ತು. ಅಗ್ಗವಾದ ಶೀಘ್ರ ವಾದ, ಕ್ರಮಬದ್ಧವಾದ ಸಾರಿಗೆ ವ್ಯವಸ್ಥೆ ಅಗತ್ಯವಾಗಿತ್ತು. ಒಂದು ಪದಾರ್ಥದ ಉತ್ಪಾದನೆಗೆ ಅತ್ಯಂತ ಅನುಕೂಲವಾದ ಸನ್ನಿವೇಶ ಇದ್ದ ಎಡೆಯಲ್ಲಿ ಉತ್ಪಾದನೆಯ ಕಾರ್ಯ ನಡಸಬಯಸಿದ ತಯಾರಕರಿಗೂ ಸಾರಿಗೆ ವ್ಯವಸ್ಥೆಯ ಸುಧಾರಣೆ ಅಗತ್ಯ ವಾಗಿತ್ತು.

ಆದ್ದರಿಂದ ಹದಿನೆಂಟನೆಯ ಶತಮಾನದಲ್ಲಿ ರಸ್ತೆ ಹಾಗೂ ಕಾಲುವೆ ನಿರ್ಮಾಣಕಾರ್ಯ ಆರಂಭವಾಯಿತು. ಮ್ಯಕ್ಯಾಡಂ ರಸ್ತೆ—ಪದರ ಪದರವಾಗಿ ಜಲ್ಲಿ ಹಾಕಿ ಗಟ್ಟಿಸಿ ಮಾಡಿದ ರಸ್ತೆ—ಇಂದು ನಮ್ಮೆಲ್ಲರಿಗೂ ಪರಿಚಿತವಾಗಿದೆ. ಜಾನ್ ಮ್ಯಾಕ್ ಆಡಂ ಎಂಬ ಇಂಜಿನಿ ಯರು ಕಂಡುಹಿಡಿದ ಈ ವಿಧಾನ ಜಾರಿಗೆ ಬಂದದ್ದು ಹತ್ತೊಂಬತ್ತನೆಯ ಶತಮಾನದ ಆದಿಭಾಗದಲ್ಲಿ. ಅನಂತರ ರೈಲ್ವೆ ಹಾಗೂ ಹಬೆ ಹಡಗೂ ಬಂದುವು. ಈ ವೇಳೆಗೇ ನದೀ ಪಾತ್ರಗಳನ್ನು ಅಗೆದು ಆಳಮಾಡಿದರು. ಕಾಲುವೆಗಳು ನಿರ್ಮಾಣವಾದುವು.

ಸಾರಿಗೆ ಕ್ರಾಂತಿಯಿಂದ ಸ್ಥಳೀಯ ಮಾರುಕಟ್ಟೆ ವಿಸ್ತಾರವಾಯಿತು; ಎಲ್ಲ ನಿಟ್ಟಿನಲ್ಲೂ ಬೆಳೆಯಿತು. ಅಲ್ಲದೆ ಇಡೀ ಜಗತ್ತಿನ ಪೇಟೆಯೇ ಸ್ಥಳೀಯ ಮಾರುಕಟ್ಟೆಯಾಗಿ ಪರಿಣಮಿಸುವುದು ಸಾಧ್ಯವಾಯಿತು.

ಜನಸಂಖ್ಯೆಯ ಬೆಳೆವಣಿಗೆ, ಸಾರಿಗೆ ವ್ಯವಸಾಯ ಕೈಗಾರಿಕೆಗಳ ಕ್ರಾಂತಿ—ಇವೆಲ್ಲಾ ಒಂದಕ್ಕೊಂದು ಕೂಡಿಕೊಂಡಿದ್ದುವು. ಹೊಸ ಜಗತ್ತಿನ ಸೃಷ್ಟಿಯ ಹೇತು ಶಕ್ತಿಗಳಾದುವು ಇವು.

## ೧೬. "ಬಿತ್ತುವಿರಿ ನೀವು, ಫಸಲು ಬೇರೊಬ್ಬನಿಗೆ"

"ಅಯ್ಯೋ, ದೇವರೇ! ಕಾರ್ಮಿಕರು ಕೆಲಸಕ್ಕೆ ಹೋಗದಂತೆ ತಡೆಯುತ್ತಿದ್ದಾರಲ್ಲ! ಪಿಕೆಟಿಂಗು ನಡೆಯುತ್ತಿದೆಯಲ್ಲ. ಸಂಘಟಿತ ಕಾರ್ಮಿಕ ಸಮುದಾಚಾರಕ್ಕೆ ವಿರುದ್ಧವಾಗಿ ಈ ಮುಷ್ಕರಕಾರರು ಅಂಗಡಿಗಳ ಮುಂದೆಯೂ ಕಾರ್ಖಾನೆಗಳ ಮುಂದೆಯೂ ಠಳಾಯಿಸುತ್ತಾ ಇದಾರಲ್ಲ. ಇವರ ಈ ವರ್ತನೆ ನನಗೆ ಅಸಹ್ಯ ಹುಟ್ಟಿಸಿದೆ. ಇವರನ್ನೆಲ್ಲ ಸರಕಾರ ಜೈಲಿಗೆ ಎಸೆಯಲು ಆಗುವುದಿಲ್ಲವೆ?" ಈ ಮಾತು ಕೇಳಬಂದದ್ದು ನ್ಯೂಯಾರ್ಕಿನ ಐದನೆಯ ಅವೆನ್ಯೂ ಬಸ್ಸೊಂದರಲ್ಲಿ.

ಈ ಮಾತನಾಡಿದ ಕ್ರುದ್ಧ ಮಹಿಳೆಗೆ ತನ್ನ ಕತೆಯೇ ಗೊತ್ತಿರಲಿಲ್ಲ. ಸರಳ ಸಮಸ್ಯೆಗೆ ಸುಲಭೋಪಾಯವೊಂದು ತನಗೆ ಗೊತ್ತಿದೆಯೆಂದು ಅವಳು ಭಾವಿಸಿದ್ದಳು. ಆದರೆ ಅವಳ ಭಾವನೆ ತಪ್ಪು. ಅವಳು ತಿಳಿದಿದ್ದ ಉಪಾಯವನ್ನು ಪದೇ ಪದೇ ಪ್ರಯೋಗಿಸಿತ್ತು. ಆದರೆ ಈ ಉಪಾಯ ನಿಷ್ಫಲವೆಂಬುದು ಸ್ಥಿರಪಟ್ಟಿತ್ತು. ಇಂಗ್ಲೆಂಡಿನಲ್ಲಿ ನೂರು ವರ್ಷ ಹಿಂದೆ ಒಬ್ಬ ನ್ಯಾಯಾಧಿಪತಿ ಮುಷ್ಕರವೊಂದನ್ನು ಅಡಗಿಸಲು ತಾನು ಕೈಕೊಳ್ಳಬಹುದಾದ ಕ್ರಮವನ್ನು ಕುರಿತು ಸರಕಾರದ ಒಳಾಡಳಿತ ಶಾಖೆಗೆ ಹೀಗೆ ಬರೆದು ತಿಳಿಸಿದ್ದ: "ತಮ್ಮ ಕೆಲಸ ತ್ಯಜಿಸಿ ಬಂದ ಜನರನ್ನು ಬಂಧಿಸಿ ಜೈಲಿಗೆ ಹಾಕಿ ಕಠಿಣ ಶಿಕ್ಷೆ ವಿಧಿಸುವುದೇ ನಾನು ಕೈಕೊಳ್ಳಬಯಸುವ ಕ್ರಮ."[1]

ಇಪ್ಪತ್ತನೆಯ ಶತಮಾನದಲ್ಲಿ ಈ ಮಹಿಳೆ ಸೂಚಿಸಿದ್ದೂ ಇದನ್ನೇ. ನ್ಯಾಯಾಧಿಪತಿ ಹೀಗೆ ಬರೆದದ್ದು ೧೮೩೦ರಲ್ಲಿ. ಆದರೆ ಈ ಕ್ರಮದ ಪರಿಣಾಮವೇನು? ಈ ಮಹಿಳೆಯೇ ಈ ಪ್ರಶ್ನೆಗೆ ಉತ್ತರ ಹೇಳಲಿ.

ಹತ್ತೊಂಬತ್ತನೆಯ ಶತಮಾನದಲ್ಲಿ ಈ ನ್ಯಾಯಾಧಿಪತಿಯೂ, ಇಪ್ಪತ್ತನೆಯ ಶತಮಾನದಲ್ಲಿ ಈ ಮಹಿಳೆಯೂ ಬಹುಶಃ ಮನಗಾಣದ ಒಂದು ಅಂಶವಿದೆ. ಘೋಷಣೆಯ ಪ್ರಕಟನ ಪತ್ರ ಹಿಡಿದು ಅಡ್ಡಾಡಲು ಇವರಿಗೆ ಇಷ್ಟವೆಂದು ಇವರು ಹೀಗೆ ಪಿಕೆಟಿಂಗ್ ಮಾಡುವುದಿಲ್ಲ—ಇತರರ ಕೆಲಸ ಅಡ್ಡಿಪಡಿಸಲು ಇದು ಕಾರಣವಲ್ಲ. ಕೆಲಸ ಮಾಡಲು ಇಚ್ಛೆಯಿಲ್ಲದೆಯೂ ಇವರು ಮುಷ್ಕರ ಹೂಡುವುದಿಲ್ಲ. ಇದಕ್ಕೆ ಬಹು ಆಳವಾದ ಕಾರಣಗಳಿವೆ. ಇವನ್ನು ಕಂಡು ಹಿಡಿಯಲು ನಾವು ಇಂಗ್ಲೆಂಡಿನ ಚರಿತ್ರೆಯನ್ನು ತಿರಿವಿ ಹಾಕಬೇಕು. ಏಕೆಂದರೆ ಇಂಗ್ಲೆಂಡಿನಲ್ಲೇ ಕೈಗಾರಿಕಾ ಕ್ರಾಂತಿ ಮೊಟ್ಟಮೊದಲು ಸಂಭವಿಸಿದ್ದು.

ಅಂಕಿ ಅಂಶಗಳ ಮೂಲಕ ಯಾವ ಸಿದ್ಧಾಂತ ಬೇಕಾದರೂ ಮಾಡಬಹುದೆಂಬುದು ಎಲ್ಲರಿಗೂ ಗೊತ್ತು. ಇಂಗ್ಲೆಂಡಿನಲ್ಲಿ ಕೈಗಾರಿಕಾ ಕ್ರಾಂತಿಯ ಆರಂಭ ದೆಶೆಯಲ್ಲಿ ನಿಜವಾಗಿ ಆಗುತ್ತಿದ್ದುದೊಂದು. ಇವನ್ನು ಬಚ್ಚಿಟ್ಟು ಅಂಕಿ ಅಂಶಗಳ ಸಹಾಯದಿಂದ ತಪ್ಪು ಕಲ್ಪನೆ

---

[1] J. L. and B. Hammond, *The Town Labourer*, 1760-1832, p. 65. Longmans, Green & Co., 1932.

ಯನ್ನೇ ಉಂಟು ಮಾಡಿದರು. ಅಂಕಿ ಅಂಶಗಳಿಂದ ಇಲ್ಲಿ ಆದಷ್ಟು ಆಭಾಸಕೃತ್ಯ ಹಿಂದೆಂದೂ ಆಗಿಲ್ಲ. ಅಂಕಿ ಅಂಶಗಳ ಪ್ರತಿಯೊಂದು ಪಟ್ಟಿಯೂ ಅದ್ಭುತ ಪ್ರಗತಿಯ ಚಿತ್ರವನ್ನೇ ಕೊಡುತ್ತಿತ್ತು. ಹತ್ತಿ, ಕಬ್ಬಿಣ, ಕಲ್ಲಿದ್ದಲು ಮುಂತಾದ ಪ್ರತಿಯೊಂದು ಪದಾರ್ಥದ ಉತ್ಪಾದನೆಯೂ ಹತ್ತುಮಡಿ ಹೆಚ್ಚಿತು. ಮಾರಾಟದ ಪ್ರಮಾಣ, ಮೊತ್ತ, ಮಾಲಿಕರ ಲಾಭ—ಎಲ್ಲವೂ ಗಗನದೆತ್ತರಕ್ಕೆ ಚಿಮ್ಮಿದುವು. ಇವಕ್ಕೆ ಸಂಬಂಧಿಸಿದ ಅಂಕಿ ಗಳನ್ನೋದಿದರೆ ನೀವು ಅಪ್ರತಿಭರಾಗುತ್ತೀರಿ. ಗೀತ ಲೇಖಕರು ಹಾಡಿ ಹೊಗಳಿರುವಂತೆ ಇಂಗ್ಲೆಂಡು ಭೂಸ್ವರ್ಗವೇ ಆಗಿತ್ತೆಂದು ನೀವು ಭಾವಿಸಬಹುದು.

ಕೆಲವರಿಗೆ ಹೀಗಿರಬಹುದು. ಆದರೆ ಹಲವರಿಗೆ ಇದು ಖಂಡಿತ ಸ್ವರ್ಗ ಸದೃಶವಾಗಿರ ಲಿಲ್ಲ. ಕಾರ್ಮಿಕರ ಸುಖ ಸ್ವಾಸ್ಥ್ಯಗಳ ವಿಚಾರವಾಗಿಯಂತೂ, ಈ ಗೆಲವಿನ ಅಂಕಿ ಅಂಶ ಭೀಕರ ಸುಳ್ಳನ್ನೇ ಗಳಪುತ್ತಿತ್ತು. ೧೮೩೬ರಲ್ಲಿ ಪ್ರಕಟವಾದ ಪುಸ್ತಕವೊಂದರಲ್ಲಿ ಒಬ್ಬ ಲೇಖಕ ಈ ಅಂಶವನ್ನು ಎತ್ತಿ ತೋರಿಸಿದ್ದಾನೆ: "ಹತ್ತು ಲಕ್ಷಕ್ಕೂ ಹೆಚ್ಚು ಜನ ಅಕ್ಷರಶಃ ಉಪವಾಸ ನರಳುತ್ತಿದ್ದಾರೆ. ಈ ಸಂಖ್ಯೆ ಸದಾ ಹೆಚ್ಚುತ್ತಲೇ ಇದೆ. . . . ಜ್ವಲಂತ ಹಾಗೂ ಅಧಿಕವಾಗುತ್ತಿರುವ ವ್ಯಾಪಾರ, ಕಾರ್ಮಿಕ ವರ್ಗದ ಜನ ಸ್ಥಿತಿಗತಿಗಳ ಅಭಿವೃದ್ಧಿಯ ಸಂಕೇತವಾಗಿರದೆ, ಈ ಜನರ ದಾರಿದ್ರ್ಯದ, ಅಧಃಪತನದ ದ್ಯೋತಕ ವಾಗಿರುವುದು ವಾಣಿಜ್ಯ ಇತಿಹಾಸದಲ್ಲಿ ಹೊಸ ಶಕೆಯೊಂದನ್ನು ಆರಂಭಿಸಿದೆ. ಗ್ರೇಟ್ ಬ್ರಿಟನ್ನು ಈ ಹೊಸ ಶಕೆಯ ಹೊಸ್ತಿಲ ಮೇಲೆ ನಿಂತಿದೆ."[1]

ಕುಜ ಮಾನವನೇನಾದರೂ ಇದ್ದಿದ್ದರೆ, ಆತ ಕಾರ್ಯಮಗ್ನ ಇಂಗ್ಲೆಂಡ್ ದ್ವೀಪದ ಮೇಲೇನಾದರೂ ಇಳಿದಿದ್ದರೆ, ಭೂಮಿಯಲ್ಲಿ ವಾಸಿಸುವ ಜನರೆಲ್ಲಾ ಹುಚ್ಚರು—ಎಂದು ಭಾವಿಸುತ್ತಿದ್ದ. ದಿನವಿಡೀ ಮೈಮುರಿಯ ದುಡಿದು, ರಾತ್ರಿಯಲ್ಲಿ, ಹಂದಿಗೂ ಯೋಗ್ಯ ವಲ್ಲದ, ಕೀಳ್ತರದ, ಅನಾರೋಗ್ಯಕರ ಗುಡಿಸಿಲಿಗೆ ಮರಳುವ ಜನಸ್ತೋಮ ಒಂದು ಕಡೆ. ಕಷ್ಟಪಡದ, ಕೈ ಕೆಸರು ಮಾಡಿಕೊಳ್ಳದೆ ಬಾಯಿ ಮೊಸರು ಮಾಡಿಕೊಳ್ಳುವ, ಜನ—ಜನ ಸ್ತೋಮವನ್ನು ಆಳುವ, ಶಾಸನ ಮಾಡುವ, ಅರಮನೆಗಳಲ್ಲಿ ರಾಜಭೋಗ ಅನುಭವಿಸುವ ಕೇವಲ ಕೆಲವೇ ಜನ—ಇನ್ನೊಂದು ಕಡೆ. ಈ ದೃಶ್ಯವನ್ನು ಈ ಮಾನವ ಕಾಣುತ್ತಿದ್ದ.

ವಾಸ್ತವವಾಗಿ ಆಗ ಎರಡು ಇಂಗ್ಲೆಂಡುಗಳಿದ್ದುವು. ಡಿಸ್ರೇರಿ, "ಸಿಬಿಲ್" ಎಂಬ ತನ್ನ ಪುಸ್ತಕದಲ್ಲಿ ಇದನ್ನು ಸ್ಪಷ್ಟಪಡಿಸಿದ. 'ಪರಸ್ಪರ ಸಂಬಂಧ ಇಲ್ಲದ, ಸಹಾನುಭೂತಿ ಇಲ್ಲದ ರಾಷ್ಟ್ರಗಳಿಗೆ; ಪರಸ್ಪರ ನಡೆ–ನುಡಿ, ಚಿಂತನೆ, ಭಾವನೆಗಳ ಅರಿವೇ ಇಲ್ಲದ, ಬೇರೆ ಬೇರೆ ಪ್ರದೇಶಗಳ ಅಥವಾ ಗ್ರಹಗಳ ನಿವಾಸಿಗಳೋ ಎಂಬಷ್ಟು ಪರಸ್ಪರ ಅಪರಿಚಿತವಾದ ರಾಷ್ಟ್ರ ಗಳಿಗೆ; ಬೇರೆ ಬೇರೆ ಜೀವನ ವಿಧಾನ, ಆಹಾರ ವಿಧಾನ ಇವುಗಳಿಂದ ರೂಪಿಸಲ್ಪಟ್ಟ, ಒಂದೇ ರೀತಿಯ ಶಾಸನಗಳಿಗೆ ಬದ್ಧವಾಗದ ರಾಷ್ಟ್ರಗಳಿಗೆ.'

" 'ಎಂದರೆ, ನೀವು ಹೇಳುವುದು....' ಎಂದು ಎಗ್ರೆಮಾಂಟ್ ಅನಿಶ್ಚಯದ ನುಡಿ ಆಡಿದ."

---

[1] P. Gaskell, *op. cit.*, Preface, Parker, London, 1836.

" 'ಧನಿಕರು, ಬಡವರು ಎಂಬ ಪ್ರತ್ಯೇಕ ರಾಷ್ಟ್ರಗಳು.' "[1]

ಈ ರೀತಿಯ ವಿಂಗಡಣೆ ಹೊಸದೇನೂ ಆಗಿರಲಿಲ್ಲ. ಆದರೆ ಯಂತ್ರದ ಆಗಮನದಿಂದ ಈ ಎರಡರ ನಡುವಣ ರೇಖೆ ಹಿಂದಿಗಿಂತ ಹೆಚ್ಚು ಖಚಿತವಾಯಿತು. ತಕ್ಕಮಟ್ಟಿನ ವರಮಾನ ಗಳಿಸುತ್ತಿದ್ದು, ಈಗ ಯಂತ್ರ ನಿರ್ಮಿತ ವಸ್ತುವಿನ ಪೈಪೋಟಿಯಿಂದ ನಿರ್ಗತಿಕರಾಗಿದ್ದ ಕೈ ಕೆಲಸಗಾರರ ಸ್ಥಿತಿಯಂತೂ ತುಂಬಾ ಶೋಚನೀಯ. ಇವರಲ್ಲೊಬ್ಬನಾದ ಥಾಮಸ್ ಹೀತ್ ಎಂಬ ಕೈಮಗ್ಗದ ನೇಕಾರನ ಸಾಕ್ಷ್ಯದಿಂದ ಈ ಜನರ ಸ್ಥಿತಿ ಎಷ್ಟೊಂದು ಉಗ್ರ ವಾಗಿತ್ತೆಂಬುದು ಸ್ಪಷ್ಟವಾಗುತ್ತದೆ.

"ಪ್ರಶ್ನೆ : ನಿನಗೆ ಮಕ್ಕಳಿವೆಯೇ ?

"ಉತ್ತರ : ಇಲ್ಲ. ಎರಡಿದ್ದುವು. ಎರಡೂ ತೀರಿಕೊಂಡುವು. ದೇವರ ದಯೆ.

"ಪ್ರಶ್ನೆ : ನಿನ್ನ ಮಕ್ಕಳು ಸತ್ತದ್ದರಿಂದ ನಿನಗೆ ತೃಪ್ತಿಯೆ ?

"ಉತ್ತರ : ಖಂಡಿತವಾಗಿ. ಇದು ದೇವರ ದಯೆ ಎನ್ನುತ್ತೇನೆ ನಾನು. ಅವನ್ನು ಸಾಕುವ ಭಾರ ನನಗಿಲ್ಲ. ಪಾಪ, ಅವಕ್ಕೂ ಈ ಮರ್ತ್ಯ ಜೀವನದ ಸಂಕಟದಿಂದ ಬಿಡುಗಡೆ ಆಯಿತು."[2]

ಈ ರೀತಿ ಮಾತಾಡಬೇಕಾದರೆ, ಆ ಮನುಷ್ಯ ನಿಜಕ್ಕೂ ಶೋಚನೀಯ ಸ್ಥಿತಿಗೆ ಇಳಿ ದಿರಬೇಕು. ಇದರಲ್ಲಿ ಸಂದೇಹವೇ ಇಲ್ಲ.

ಸಿಟ್ಟುಪವಾಸ ಅನುಭವಿಸಿ, ಯಂತ್ರದ ಜತೆಗೆ ಇನ್ನು ಸೆಣಸಲಾರದೆ ಸೋತು, ಕೊನೆಗೂ ಕಾರ್ಖಾನೆ ಹೊಕ್ಕ ಜನರ ಪಾಡೇನಾಯಿತು ? ಆ ಆರಂಭದೆಶೆಯ ಕಾರ್ಖಾನೆಗಳಲ್ಲಿದ್ದ ಸ್ಥಿತಿಯಾದರೂ ಎಂಥದು ?

ಶ್ರಮವನ್ನು ಹಗುರಗೊಳಿಸಬಹುದಾಗಿದ್ದ ಈ ಹೊಸ ಯಂತ್ರ ವಾಸ್ತವವಾಗಿ ಅದನ್ನು ಇನ್ನೂ ಹೆಚ್ಚಿಸಿತು. ಇದು ಎಷ್ಟೊಂದು ದಕ್ಷವಾಗಿತ್ತೆಂದರೆ, ಅದಷ್ಟು ದೀರ್ಘಕಾಲ ಇದು ತನ್ನ ಯಕ್ಷಿಣಿ ನಡಸಲು ಶಕ್ತವಾಗಿತ್ತು. ಇದಕ್ಕೆ ಇದು ಸಜ್ಜಾಗಿತ್ತು. ಯಂತ್ರವೆಂದರೆ ಅಷ್ಟೊಂದು ಬಂಡವಾಳ. ಆದ್ದರಿಂದ ಇದನ್ನು ಕೆಲಸವಿಲ್ಲದೆ ನಿಲ್ಲಿಸಬಾರದು. ಇದನ್ನು ನಡ ಸುತ್ತಲೇ ಇರಬೇಕು, ಸದಾ ನಡಸುತ್ತಲೇ ಇರಬೇಕು. ಇದು ಗಿರಣಿ ಮಾಲಿಕರ ಭಾವನೆ. ಅಲ್ಲದೆ ಯಂತ್ರದಿಂದ ಆದಷ್ಟು ಬೇಗ, ಸಾಧ್ಯವಾದಷ್ಟು ಲಾಭ ಹಿಂಡುವುದು ಅಗತ್ಯವೆಂದು ಚಾಣಾಕ್ಷನಾದ ಮಿಲ್ಲು ಮಾಲಿಕ ಅರಿತಿದ್ದ. ಏಕೆಂದರೆ ಹೊಸ ಯಂತ್ರ ನಿರ್ಮಾಣದಿಂದ ತನ್ನಲ್ಲಿರುವ ಯಂತ್ರ ಹಳತಾಗಬಹುದೆಂದು, ಹಿಂದೆ ಬೀಳಬಹುದೆಂದು ಅವನು ಅರಿತಿದ್ದ. ಆದ್ದರಿಂದ ಕೆಲಸದ ಕಾಲ ಬಹು ದೀರ್ಘ. ದಿನಕ್ಕೆ ಹದಿನಾರು ಘಂಟೆ ಕೆಲಸವೆಂಬುದು ಅಚ್ಚರಿಯೇನಲ್ಲ. ದಿನಕ್ಕೆ ತಲಾ ಹನ್ನೆರಡು ಘಂಟೆಯ ಕೆಲಸದ ಎರಡು ಸರದಿ ಏರ್ಪಡ

---

[1] B. Disraeli, *Sybil or the Two Nations* (1845), p.74, Macmillan & Company Ltd., London, 1895.

[2] *Reports from Assistant Hand-Loom Weavers' Commissioners, op. cit.*, Part II, p. 232. 1840.

ಬೇಕೆಂಬ ವಾದವಲ್ಲಿ ಕೊನೆಗೂ ಗೆದ್ದಾಗ ಕಾರ್ಮಿಕರು ಈ ಬದಲಾವಣೆ ತಮಗೆ ದೊರೆತ ವರವೆಂದೇ ತಿಳಿದರು. ಆದರೆ ದೀರ್ಘಕಾಲದ ಕೆಲಸವೊಂದೇ ಆಗಿದ್ದಿದ್ದರೆ ಅಷ್ಟು ಕೆಡುಕಿರಲಿಲ್ಲ. ಕೆಲಸಗಾರರಿಗೆ ಇದು ಅಭ್ಯಾಸವಾಗಿ ಹೋಗಿತ್ತು. ಗೃಹೋದ್ಯಮ ವ್ಯವಸ್ಥೆಯಲ್ಲಿ ಇವರು ತಂತಮ್ಮ ಮನೆಯಲ್ಲೇ ದೀರ್ಘಕಾಲ ಕೆಲಸ ಮಾಡುತ್ತಿದ್ದರು. ಆದರೆ ಕಾರಖಾನೆಯ ಶಿಸ್ತಿಗೆ, ಶಿಷ್ಟಿಗೆ, ಹೊಂದಿಕೊಳ್ಳುವುದನ್ನು ಕಲಿಯುವುದೇ ಅವರಿಗೆ ನಿಜವಾದ ಕಷ್ಟವಾಗಿತ್ತು. ಗೊತ್ತಾದ ಹೊತ್ತಿಗೆ ಕೆಲಸ ಆರಂಭಿಸಬೇಕು ; ಗೊತ್ತಾದ ಹೊತ್ತಿಗೆ ನಿಲ್ಲಿಸಬೇಕು ; ಮತ್ತೆ ಆರಂಭಿಸಬೇಕು ; ಯಂತ್ರದ ಚಲನೆಗೆ ಅನುಗುಣವಾಗಿ ವರ್ತಿಸಬೇಕು ; ಅದರ ಓಟದೊಡನೆ ಸಾಗಬೇಕು ; ಮೇಲ್ವಿಚಾರಕನ ಹದ್ದಿನ ಕಣ್ಣಿನ ಮುಂದೆ, ಅವನ ಆಜ್ಞಾನುಸಾರ, ಇವನ್ನೆಲ್ಲಾ ಮಾಡಬೇಕು—ಸದಾ, ಸರ್ವದಾ. ಇದು ಅವರಿಗೆ ತೀರಾ ಹೊಸದು. ಇದು ಕಷ್ಟಕರವೂ ಆಗಿತ್ತು.

ಮ್ಯಾಂಚೆಸ್ಟರಿನ ಬಳಿಯ ಗಿರಣಿಯೊಂದರಲ್ಲಿದ್ದ ನೂಲುಕಾರರು, ಎಂಬತ್ತು-ಎಂಬತ್ತು ನಾಲ್ಕು ಡಿಗ್ರಿ ಉಷ್ಣದಲ್ಲಿ, ಕುಡಿಯಲು ನೀರು ಕೂಡ ಕೇಳದೆ, ದಿನಕ್ಕೆ ಹದಿನಾಲ್ಕು ಘಂಟೆ ದುಡಿಯಬೇಕಾಗಿತ್ತು. ಅವರಿಗೆ ವಿಧಿಸುತ್ತಿದ್ದ ದಂಡ ಈ ರೀತಿ :

| | | | | |
|---|---|---|---|---|
| ಕೆಲಸಗಾರ ತನ್ನ ಎಡೆಯ ಕಿಟಕಿ ತೆರೆದರೆ ತೆರಬೇಕಾದ ದಂಡ | | | ೧ | ಶಿಲ್ಲಿಂಗು |
| ಕೆಲಸ ಹೊಲಸಾಗಿ ಮಾಡಿದರೆ | ,, | ,, | ೧ | ,, |
| ತನ್ನ ಮೇಲಣ ದೂಳು ಕೊಡವಿಕೊಳ್ಳುತ್ತ ನಿಂತರೆ | ,, | ,, | ೧ | ,, |
| ಅನಿಲ ಹೊತ್ತಿಸಿಕೊಂಡು ಚಕ್ರದ ಪಟ್ಟಿ ದುರಸ್ತು ಮಾಡುತ್ತಿದ್ದರೆ | ,, | ,, | ೨ | ,, |
| ಚೆನ್ನಾಗಿ ಬೆಳಕು ಹರಿದ ಮೇಲೂ ಗ್ಯಾಸ್ ಲೈಟ್ ಉರಿಸಿಕೊಂಡು ಕೆಲಸಮಾಡುತ್ತಿದ್ದರೆ | ,, | ,, | ೨ | ,, |
| ಸಿಳ್ಳೆ ಊದುತ್ತಿದ್ದರೆ | ,, | ,, | ೧ | ,,[1] |

ಇದು ವಿಲಕ್ಷಣವೆನಿಸಬಹುದಲ್ಲವೆ ? ಆದರೆ ಇದು ನಿಜ. ಅಲ್ಲದೆ ಇದು ಎಲ್ಲೋ ಎಂದೋ ಅಪರೂಪಕ್ಕೆ ಕಂಡುಬಂದದ್ದಲ್ಲ. ಚೀಟಿ ಕೊಟ್ಟು ಹಣ ಪಾವತಿ ಮಾಡಿದಂತೆ ತೋರಿಸುವುದು, ಕಂಪೆನಿಯ ಅಂಗಡಿಯಲ್ಲೇ ಸಾಮಾನುಕೊಳ್ಳಬೇಕೆಂದು ಕಾರ್ಮಿಕನಿಗೆ ಒತ್ತಾಯ ಮಾಡುವುದು, ಕಂಪೆನಿ ಕಟ್ಟಿಸಿದ ಮನೆಯಲ್ಲೇ ವಾಸಿಸಬೇಕೆಂದು ಬಲವಂತ ಪಡಿಸುವುದು—ಇವೇ ಮುಂತಾದ ವಾಡಿಕೆಗಳು—ಇಂದು ಬೆವರು ದುಡಿತದ ಮನೆಗಳಲ್ಲಿ ಮಾತ್ರ, ಹಿಂದುಳಿದ ಸಮಾಜಗಳಲ್ಲಿ ಮಾತ್ರ ಕಾಣಬರುವ ವಾಡಿಕೆಗಳು—ಅಂದು, ಕೈಗಾರಿಕೆ ವ್ಯವಸ್ಥೆಯ ಆ ಆದಿಕಾಲದಲ್ಲಿ ಕಾರ್ಮಿಕರಿಗೆ ಚೆನ್ನಾಗಿ ಪರಿಚಿತವಾಗಿತ್ತು.

[1] J. L. and Barbara Hammond, *op. cit.*, pp. 19, 20.

ತಮಗೆ ಸಂಬಂಧಪಟ್ಟ ವಿಚಾರದಲ್ಲಿ ತಾವು ಏನು ಬೇಕಾದರೂ ಮಾಡಬಹುದು–ಎಂದು ಬಂಡವಾಳಿಗರು ನಂಬಿದ್ದರು. ತಮ್ಮ ಕೆಲಸಗಾರರಿಗೂ ಯಂತ್ರಕ್ಕೂ ನಡುವೆ ಅವರಿಗೆ ಯಾವ ಭೇದವೂ ಇರಲಿಲ್ಲ. ಆದರೆ ಇದು ಸಂಪೂರ್ಣ ಸತ್ಯವಲ್ಲ. ಯಂತ್ರವೆಂದರೆ ಹಣ ಕೊಟ್ಟು ಪಡೆದದ್ದು. ಆದರೆ ಮನುಷ್ಯರು ಹಾಗಲ್ಲ. ಆದ್ದರಿಂದ ಮನುಷ್ಯರಿಗಿಂತ ಹೆಚ್ಚಾಗಿ ತಮ್ಮ ಯಂತ್ರದ ಸುಸ್ಥಿತಿಯ ಬಗ್ಗೆ ಅವರು ಹೆಚ್ಚು ಕಾತರರಾಗಿದ್ದರು.

ಅವರು ಆದಷ್ಟು ಕನಿಷ್ಠ ಕೂಲಿ ಕೊಡುತ್ತಿದ್ದರು. ಆದಷ್ಟು ಹೆಚ್ಚು ದುಡಿಮೆ ಪಡೆಯಬೇಕು, ಇದಕ್ಕೆ ಆದಷ್ಟು ಕಡಮೆ ಕೂಲಿ ಕೊಡಬೇಕು–ಎಂದು ಅವರು ಪೇಟೆಯಲ್ಲಿ ಅನ್ವೇಷಣೆ ನಡಸುತ್ತಿದ್ದರು. ಹೆಂಗಸರು ಮಕ್ಕಳೂ ಯಂತ್ರ ನಡಸಬಹುದಾಗಿದ್ದದ್ದರಿಂದ, ಅವರಿಗೆ ಗಂಡಸರಿಗಿಂತ ಕಡಿಮೆ ಕೂಲಿ ಕೊಡಬಹುದಾಗಿದ್ದದ್ದರಿಂದ, ಹಲವು ವೇಳೆ ಮನೆಯ ಯಜಮಾನ ನಿರುದ್ಯೋಗಿಯಾಗಿದ್ದರೂ ಹೆಂಗಸರು ಮಕ್ಕಳಿಗೆ ಕೆಲಸ ಲಭಿಸುತ್ತಿತ್ತು. ಆರಂಭದಲ್ಲಿ ಕಾರ್ಖಾನೆ ಮಾಲಿಕರು ಬಡವರ ಪೋಷಕರಿಂದ ಭಿಕಾರಿ ಶಿಶುಗಳನ್ನು, ದಿವಾಳಿ ಶಿಶುಗಳನ್ನು, ಕೆಲಸಕ್ಕೆ ನೇಮಿಸಿಕೊಳ್ಳುತ್ತಿದ್ದರು. ಅನಂತರ, ಕೆಲಸ ಮಾಡುತ್ತಿದ್ದ ತಾಯಿ ತಂದೆಯರು, ತಮ್ಮ ವರಮಾನ ಸಂಸಾರದ ನಿರ್ವಹಣಕ್ಕೆ ಸಾಲುತ್ತಿರಲಿಲ್ಲವಾದ್ದರಿಂದ, ತಮ್ಮ ಮನೆಯಲ್ಲಿದ್ದ ಮಕ್ಕಳನ್ನೂ ಗಿರಣಿಗೇ ಕಳಿಸಬೇಕಾಯಿತು. ಕೈಗಾರಿಕೆ ಪದ್ಧತಿಯ ಭೀಕರತೆ ಎಷ್ಟೆಂಬುದು ಆ ಆರಂಭದಿನಗಳಲ್ಲಿ ಮಕ್ಕಳ ದುಡಿಮೆಯನ್ನು ಕುರಿತ ದಾಖಲೆಗಳಿಂದ ಬಹು ಚೆನ್ನಾಗಿ ಸ್ಪಷ್ಟಪಡುತ್ತದೆ.

ಹತ್ತಿಗಿರಣಿಯೊಂದರಲ್ಲಿ ಒಮ್ಮೆ ಅಭ್ಯಾಸಿಗಳ ಯಜಮಾನನಾಗಿದ್ದ ಜಾನ್‌ಮಾಸ್ ಎಂಬೊಬ್ಬ, ೧೮೧೬ರಲ್ಲಿ, ಪಾರ್ಲಿಮೆಂಟ್ ಸಮಿತಿಯೊಂದರ ಮುಂದೆ, ಬಲವಂತವಾಗಿ ಕಾರ್ಖಾನೆಯಲ್ಲಿ ದುಡಿಯಬೇಕಾಗಿ ಬಂದ ಮಕ್ಕಳ ಬಗ್ಗೆ ಕೆಳಕಂಡಂತೆ ಸಾಕ್ಷ್ಯ ನುಡಿದಿದ್ದಾನೆ:

"ಅವರೆಲ್ಲಾ ಈ ಪ್ರಾಂತದ ಅಭ್ಯಾಸಿಗಳೋ?

—ಹೌದು, ಎಲ್ಲಾ ಈ ಪ್ರಾಂತದ ಅಭ್ಯಾಸಿಗಳು.

"ಅವರನ್ನು ಕೆಲಸಕ್ಕೆ ತೆಗೆದುಕೊಂಡದ್ದು ಯಾವ ವಯಸ್ಸಿನಲ್ಲಿ?

—ಲಂಡನ್ನಿನಿಂದ ಬಂದವರಿಗೆ ಏಳರಿಂದ ಹನ್ನೊಂದು ವಯಸ್ಸು. ಲಿವರ್‌ಪೂಲಿನಿಂದ ಬಂದವರಿಗೆ ಎಂಟು–ಹತ್ತರಿಂದ ಹದಿನೈದು ವಯಸ್ಸು.

"ಯಾವ ವಯಸ್ಸಿನವರೆಗೆ ಇವರು ಈ ಕಲಿಕೆಯ ದುಡಿಮೆ ಮಾಡಬೇಕಾಗಿತ್ತು?

—ಇಪ್ಪತ್ತೊಂದರ ವರೆಗೆ.

"ಸಾಮಾನ್ಯವಾಗಿ ದಿನಕ್ಕೆ ಹದಿನೈದು ಘಂಟೆ ದುಡಿತವೊ?

"ಗಿರಣಿಯ ದುರಸ್ತಿಗಾಗಲಿ, ಹತ್ತಿ ಇಲ್ಲದ್ದರಿಂದಾಗಲಿ ಗಿರಣಿ ನಿಲ್ಲಿಸಿದರೆ, ಹೀಗೆ ನಷ್ಟವಾದ ಕಾಲವನ್ನು ಈ ಮಕ್ಕಳು ಅನಂತರ ದುಡಿದು ತುಂಬಿ ಕೊಡಬೇಕಾಗಿತ್ತೊ?

—ಹೌದು.

"ಕೆಲಸ ಮಾಡುವಾಗ ಮಕ್ಕಳು ನಿಂತಿರುತ್ತಿದ್ದರೋ, ಕುಳಿತಿರುತ್ತಿದ್ದರೋ?

—ನಿಂತಿರುತ್ತಿದ್ದರು.

"ದಿನವಿಡೀ ದುಡಿಯುವಾಗ ಹೀಗೆಯೋ?

—ಹೌದು.

"ಗಿರಣಿಯಲ್ಲಿ ಕುಳಿತುಕೊಳ್ಳಲು ಆಸನಗಳೇನಾದರೂ ಇದ್ದುವೋ?

—ಇಲ್ಲ....ಇವರು ನ್ಯಾಯವಾಗಿ ಮಲಗಿ ನಿದ್ರಿಸುತ್ತಿರಬೇಕಾಗಿದ್ದ ಕಾಲದಲ್ಲೂ ಬಹು ಹೊತ್ತಾದ ಮೇಲೂ ಇವರು ಗಿರಣಿಯ ಆವರಣದಲ್ಲಿರುತ್ತಿದ್ದುದನ್ನು ಕಂಡಿದ್ದೇನೆ.

"ಯಂತ್ರದಿಂದ ಯಾವ ಮಕ್ಕಳಿಗಾದರೂ ಅಪಾಯವಾದದ್ದುಂಟೋ?

—ಪದೇ ಪದೇ."[1]

ಮತ್ತೆ, ೧೮೩೩ರಲ್ಲಿ, ಕಾರಖಾನೆಗಳಲ್ಲಿ ಮಕ್ಕಳ ನೇಮಕದ ಬಗ್ಗೆ ಇಂಗ್ಲೆಂಡಿನ ಸರಕಾರದ ಕಮಿಷನರುಗಳು ಒಂದು ವರದಿ ಒಪ್ಪಿಸಿದರು. ಹನ್ನೊಂದು ವರ್ಷ ವಯಸ್ಸಿನ ಥಾಮಸ್ ಕ್ಲಾರ್ಕ್ ಎಂಬ ಬಾಲಕನ ಸಾಕ್ಷ್ಯವೂ ಈ ವರದಿಯಲ್ಲಿ ಅಡಕವಾಗಿದೆ. ಈತ ಕಾರ್ಖಾನೆಯೊಂದರಲ್ಲಿ ಪೀಸರ್ ಕೆಲಸವನ್ನು—ಒಂದನ್ನು ಇನ್ನೊಂದಕ್ಕೆ ಹೊಂದಿಸುವ ಕೆಲಸವನ್ನು—(ಅವನ ಸೋದರನ ಸಹಾಯದೊಡನೆ) ಮಾಡುತ್ತಿದ್ದ. ಇದಕ್ಕಾಗಿ ಅವನ ಗಳಿಕೆ ವಾರಕ್ಕೆ ನಾಲ್ಕು ಷಿಲ್ಲಿಂಗು. ಅವನ ಕತೆಯ ಒಂದು ಚೂರು ಇಲ್ಲಿದೆ:

"ನಾವು ತೂಕಡಿಸಿ ಬಿದ್ದಾಗ ನಮ್ಮನ್ನು ಪಟ್ಟೆಯಿಂದ ಬಿಗಿದು ಕಟ್ಟುತ್ತಿದ್ದರು.... ನನ್ನ ಹೆಬ್ಬೆಟ್ಟಿನ ಗಾತ್ರದ ಹಗ್ಗ ತಂದು, ಎರಡಾಗಿ ಮಡಿಸಿ, ಗಂಟು ಹಾಕುತ್ತಿದ್ದರು.... ಬೆಳಗ್ಗೆ ಆರು ಘಂಟೆಗಿಂತ ಮುಂಚಿತವಾಗಿ ನಾನು ಕಾರ್ಖಾನೆಗೆ ಹೋಗುತ್ತಿದ್ದೆ. ಕೆಲವು ದಿನ ಐದು ಘಂಟೆಗೇ ಹೋಗುತ್ತಿದ್ದೆ. ರಾತ್ರಿ ಒಂಬತ್ತು ಘಂಟೆಯವರೆಗೂ ಕೆಲಸ ಮಾಡುತ್ತಿದ್ದೆ. ಒಮ್ಮೆ ಇಡೀ ರಾತ್ರಿ ಕೆಲಸ ಮಾಡಿದೆ....ನಾವೇ ಈ ಕೆಲಸ ಅರಸಿ ಪಡೆದದ್ದು. ಖರ್ಚಿಗೆ ನಮಗೆ ಹಣ ಬೇಕಿತ್ತು. ಮೊನ್ನೆಯ ದಿನ ನಾವು ಬೆಳಗ್ಗೆ ಆರರಿಂದಲೇ ಕೆಲಸ ಮಾಡುತ್ತಿದ್ದೆವು. ಮರುದಿನ ರಾತ್ರಿ ಒಂಬತ್ತರ ವರೆಗೂ ನಾವು ದುಡಿದೆವು....ನಾನು ಈಗ ಮಗ್ಗ ಹೊಸೆಯುವ ವಿಭಾಗದಲ್ಲಿ ಕೆಲಸ ಮಾಡುತ್ತಿದ್ದೇನೆ....ನಾನೀಗ ನಾಲ್ಕು ಷಿಲ್ಲಿಂಗ್ ಸಂಪಾದಿಸಬಲ್ಲೆ....ನನಗಾಗಿ ನನ್ನ ತಮ್ಮ ಚಕ್ರ ತಿರುಗಿಸುತ್ತಾನೆ. ಅವನಿಗೀಗ ಇನ್ನೂ ಏಳು ವರ್ಷ. ನಾನು ಅವನಿಗೆ ಏನೂ ಕೊಡುವುದಿಲ್ಲ. ನನ್ನ ತಮ್ಮನಲ್ಲದೆ ಬೇರೆ ಯಾರಾದರೂ ಆಗಿದ್ದರೆ ಒಂದು ಷಿಲ್ಲಿಂಗ್ ಕೊಡಬೇಕಾಗುತ್ತಿತ್ತು....ನಾನು ಅವನನ್ನು ನನ್ನೊಡನೆ ಬೆಳಗ್ಗೆ ಆರು ಘಂಟೆಗೆ ಕರೆದೊಯ್ಯುತ್ತೇನೆ, ರಾತ್ರಿ ಎಂಟರವರೆಗೂ ಜತೆಯಲ್ಲಿಟ್ಟುಕೊಂಡಿರುತ್ತೇನೆ."[2]

ನೀವು ತಿಳಿಯಬೇಕಾದ ವಿಚಾರವೊಂದಿದೆ. ಮಕ್ಕಳ ದುಡಿಮೆ ಹೊಸದೇನೂ ಅಲ್ಲ.

---

[1] *Report of the Minutes of Evidence Taken Before the Select Committee on the State of the Children Employed in the Manufactories*, 1816, pp. 178-180.

[2] *First Report of the Central Board of His Majesty's Commissioners on Employment of Children in Factories*, 1833, pp. 31, 32.

ಮನೆಗೆಲಸದ—ಗೃಹೋದ್ಯಮದ—ಪದ್ಧತಿಯನ್ನು ಕುರಿತು ಡೀಫೋ ಎಂಬವನು (ಪುಟ ೧೯೫) ವರ್ಣಿಸಿರುವುದು ನಿಮ್ಮ ನೆನಪಿನಲ್ಲಿರಬಹುದು. ಆದರೆ ಆಗ ಮಕ್ಕಳ ದುಡಿಮೆ ತಾಯಿ ತಂದೆಯರ ದುಡಿಮೆಗೆ ಸಹಾಯಕವಾಗಿತ್ತು. ಈಗಲಾದರೋ, ಈ ಹೊಸ ವ್ಯವಸ್ಥೆಯ ಅಡಿಗಲ್ಲಾಗಿತ್ತು ಇದು. ಹಿಂದೆ ಮಕ್ಕಳು ತಂತಮ್ಮ ಮನೆಗಳಲ್ಲೇ—ತಾಯಿ ತಂದೆಯರ ನೇತೃತ್ವದಲ್ಲಿ—ಅವರು ಹೇಳಿದಂತೆ, ಹೇಳಿದಷ್ಟು ಕಾಲ, ಕೆಲಸ ಮಾಡುತ್ತಿದ್ದರು. ಈಗಲಾದರೋ, ಅವರು ಕಾರಖಾನೆಗಳಲ್ಲಿ, ಮೇಲ್ವಿಚಾರಕರ ಕಣ್ಣೆದುರಿಗೆ, ಕೆಲಸ ಮಾಡಬೇಕಿತ್ತು. ಈ ಪುಟ್ಟ ದೇಹಗಳಿಂದ ಎಷ್ಟು ಸಾಧ್ಯವೋ ಅಷ್ಟು ಕೆಲಸ ಹಿಂಡುವುದು ಮೇಲ್ವಿಚಾರಕನ ಕರ್ತವ್ಯ. ಲಾಭಾನ್ವೇಷಿ ಗಿರಣಿ ಮಾಲಿಕ ವಿಧಿಸಿದ ಕಾಲ ನಿಯಮಗಳಿಗನುಸಾರವಾಗಿ ಈ ಮಕ್ಕಳು ದುಡಿಯಬೇಕು. ಪಶ್ಚಿಮ ಇಂಡೀಸಿನ ಗುಲಾಮರೊಡೆಯ ಕೂಡ, ಈ ಮಕ್ಕಳಿಂದ ಇವರು ಎಷ್ಟು ದೀರ್ಘಕಾಲ ಕೆಲಸ ತೆಗೆಯುವರೆಂಬುದನ್ನು ಕಂಡಿದ್ದರೆ, ತನ್ನಂತೆ ಇವರೂ ನಡೆಯುವರೆಂದು ಅವನು ಎಷ್ಟೋ ಸಮಾಧಾನ ಹೊಂದುತ್ತಿದ್ದ. ಬ್ರಾಡ್‌ಫರ್ಡಿನ ಮೂವರು ಗಿರಣಿ ಮಾಲಿಕರೊಡನೆ ಮಾತಾಡುತ್ತಾ, ಗುಲಾಮರ ಅಧಿಪತಿಯೊಬ್ಬ ಹೀಗೆ ಹೇಳಿದನಂತೆ: "ಗುಲಾಮರ ಒಡೆಯನಾಗಿರುವೆನೆಂದು ನನಗೆ ಎಷ್ಟೋ ಸಾರಿ ನಾಚಿಕೆಯಾಗಿದೆ. ಒಂಬತ್ತು ವರ್ಷದ ಮಗುವಿನಿಂದ ದಿನಕ್ಕೆ ಹನ್ನೆರಡೂವರೆ ಘಂಟೆ ದುಡಿಸುವಂಥ ಮನುಷ್ಯ ಇರಲು ಸಾಧ್ಯವಿಲ್ಲವೆಂದು ನಾವು ವೆಸ್ಟ್ ಇಂಡೀಸಿನಲ್ಲಿ ಭಾವಿಸಿದ್ದೆವು. ಆದರೆ ನಮ್ಮ ಭಾವನೆ ಸುಳ್ಳಾಗಿದೆ. ಇಷ್ಟು ದೀರ್ಘ ಕಾಲದ ದುಡಿತ ಅಪರೂಪವಲ್ಲ. ನಿಮ್ಮಲ್ಲಿ ಇದು ಸಾಮಾನ್ಯವೆಂಬುದನ್ನೂ ನೀವು ಒಪ್ಪಿಕೊಂಡಿದೀರಿ."[1]

ಈ ಗುಲಾಮರೊಡೆಯ ಇನ್ನೊಂದು ಹೋಲಿಕೆ ನೀಡಬಹುದಿತ್ತು. ವೆಸ್ಟ್‌ಇಂಡೀಸಿನಲ್ಲೂ ಅಮೆರಿಕದ ದಕ್ಷಿಣ ಸಂಸ್ಥಾನಗಳಲ್ಲೂ ಗುಲಾಮರ ವಸತಿಗಳು ಬಹು ದುಃಸ್ಥಿತಿಯಲ್ಲಿದ್ದುವು ನಿಜ. ಆದರೆ ಹೊಸ ಕಾರಖಾನೆ ನಗರಗಳಲ್ಲಿದ್ದ ಕಾರ್ಮಿಕ ವಸತಿಗಳಿಗಿಂತಲೂ ಇವು ಕೀಳಾಗೇನೂ ಇರಲಿಲ್ಲವೆಂದೂ ಇವನು ವಾದಿಸಬಹುದಿತ್ತು. ಹಬೆ ಶಕ್ತಿ ಬಂದ ಮೇಲೆ, ಹಿಂದಿನಂತೆ ನೀರಿನ ಶಕ್ತಿ ದೊರಕುವ ಎಡೆಯಲ್ಲೇ ಕಾರಖಾನೆಗಳು ಇರಬೇಕಾದ ಆವಶ್ಯಕತೆ ದೂರವಾಯಿತು. ಕಲ್ಲಿದ್ದಲ ಗಣಿಗಳ ಬಳಿಗೆ ಕೈಗಾರಿಕೆಗಳು ಬಂದುವು. ಅಭುಕ್ತ ಮೂಲೆಗಳಲ್ಲೆಲ್ಲಾ, ಬೆಳಗಾಗುವ ವೇಳೆಗೇ ಎಂಬಂತೆ, ನಗರಗಳಾದುವು, ಹಳೆಯ ನಗರಗಳು ಮಹಾನಗರಗಳಾದುವು. ೧೭೭೦ರಲ್ಲಿ ಇಂಗ್ಲೆಂಡಿನ ಗ್ರಾಮಾಂತರ ಪ್ರದೇಶದ ಜನಸಂಖ್ಯೆ ಒಟ್ಟು ಜನ ಸಂಖ್ಯೆಯ ಶೇಕಡ ನಲವತ್ತರಷ್ಟಿತ್ತು. ೧೮೪೧ರ ವೇಳೆಗೆ ಇದು ಶೇಕಡ ಇಪ್ಪತ್ತಾರಕ್ಕೆ ಇಳಿಯಿತು. ನಗರಗಳ ಬೆಳವಣಿಗೆಗೆ ಸಂಬಂಧಿಸಿದ ಅಂಕಿಗಳನ್ನು ಗಮನಿಸಿದರೆ ಈ ಕಾಲದಲ್ಲಿ ಏನಾಗುತ್ತಿತ್ತೆಂಬುದರ ಸ್ಪಷ್ಟ ಚಿತ್ರ ದೊರಕುತ್ತದೆ.

---

[1] J. L. and B. Hammond, *op. cit.*, p. 160.

ನಗರಗಳ ಜನಸಂಖ್ಯೆ

| | ೧೮೦೧ | ೧೮೪೧ |
|---|---|---|
| ಮ್ಯಾಂಚೆಸ್ಟರ್ | ೩೫೦೦೦ | ೩೫೩೦೦೦ |
| ಲೀಡ್ಸ್ | ೫೩೦೦೦ | ೧೫೨೦೦೦ |
| ಬರ್ಮಿಂಗ್‌ಹ್ಯಾಂ | ೨೩೦೦೦ | ೧೮೧೦೦೦ |
| ಷೆಫೀಲ್ಡ್ | ೪೬೦೦೦ | ೧೧೧೦೦೦[1] |

ಪ್ರಸಿದ್ಧ ವಸ್ತುಗಳನ್ನು ತಯಾರಿಸುವ ಪ್ರಸಿದ್ಧ ಸ್ಥಳಗಳು. ಕತ್ತಲೆಯ ಅನಾರೋಗ್ಯಕರ ಜನನಿಬಿಡ ಕುರೂಪಿ ವಸತಿಗಳಲ್ಲಿ ವಾಸಿಸುತ್ತಿದ್ದ ಕೆಲಸಗಾರರು ತಯಾರಿಸುತ್ತಿದ್ದ ವಸ್ತುಗಳು. ಒಬ್ಬ ಪ್ರಸಿದ್ಧ ಅರ್ಥಶಾಸ್ತ್ರಜ್ಞ, ಹಿರಿಯ ನಾಸ್ಸೂ, ೧೮೩೭ರಲ್ಲಿ ಮ್ಯಾಂಚೆಸ್ಟರಿನ ಒಂದು ಭಾಗದ ಉದ್ದಕ್ಕೂ ನಡೆದಾಗ ಆತ ಕಂಡ ದೃಶ್ಯವನ್ನು ಹೀಗೆ ಬಣ್ಣಿಸಿದ್ದಾನೆ: "ವಿಸ್ತಾರವಾದ ಜನಸಂಖ್ಯೆಯ ದೃಷ್ಟಿಯಿಂದ ಇವು ನಗರಗಳು. ಲಾಭಾಕಾಂಕ್ಷೆಯಿಂದ ನಿರ್ಮಾಣ ಕಾರ್ಯ ಕೈಕೊಂಡ ಜನರಿಗೆ ತಕ್ಷಣದ ಲಾಭ ದೊರಕಬೇಕೆಂಬ ಒಂದೇ ಉದ್ದೇಶದಿಂದ ಇವರು ಈ ನಗರ ನಿರ್ಮಿಸಿದರು. ಬೇರೆ ಯಾವ ಉದ್ದೇಶವೂ ಇವಕ್ಕಿಲ್ಲ. ಒಂದೆಡೆಯಲ್ಲಿ ಇಡೀ ಬೀದಿಯೇ ಚರಂಡಿಯ ಉದ್ದಕ್ಕೂ ಇದ್ದುದನ್ನು ಕಂಡೆವು. ನೆಲ ಅಗೆಯುವ ವೆಚ್ಚವಿಲ್ಲದೆ ನೆಲಮಾಳಿಗೆ ಕಟ್ಟುವುದು ಸಾಧ್ಯವೆಂಬ ಕಾರಣದಿಂದ ಬೀದಿ ಹೀಗೆ ನಿರ್ಮಾಣವಾಗಿತ್ತು. ಈ ನೆಲಮಾಳಿಗೆಗಳು ಸಾಮಾನು ಕಸ ಕಡ್ಡಿ ತುಂಬಲಿಕ್ಕಲ್ಲ, ಮಾನವಜಂತುಗಳ ವಾಸಕ್ಕಾಗಿ. **ಈ ಬೀದಿಯಲ್ಲಿ ಒಂದು ಮನೆಯೂ ಕಾಲರಾವ್ಯಾಧಿಯನ್ನು ತಪ್ಪಿಸಿಕೊಳ್ಳಲಿಲ್ಲ.** ಒಟ್ಟನಲ್ಲಿ ಈ ಉಪಕರಣಗಳ ಬೀದಿಗಳನ್ನು ನೆಲಗಟ್ಟು ಮಾಡಿಲ್ಲ. ನಡುವೆ ಗೊಬ್ಬರದ ಗುಂಡಿ ಅಥವಾ ಚರಂಡಿ. ಬೆನ್ನಿಗೆ ಬೆನ್ನು ಸೇರಿಸಿ ಕಟ್ಟಿದ ಮನೆಗಳು. ಗಾಳಿ ಬೆಳಕಿಲ್ಲ, ಚರಂಡಿ ವ್ಯವಸ್ಥೆಯಿಲ್ಲ. ನೆಲಮಾಳಿಗೆಯ ಒಂದು ಮೂಲೆಗೋ ಮೇಲ್ಮಟ್ಟದ ಒಂದು ಬದಿಗೋ ಅಡಗಿಕೊಂಡಿರಬೇಕಾಗಿತ್ತು, ಇಡೀ ಸಂಸಾರ."[2]

ಮೇಲೆ ಉದ್ಧರಿಸಿರುವ ಮಾತುಗಳಲ್ಲಿ ದಪ್ಪಗೆ ಅಚ್ಚು ಮಾಡಿರುವ ವಾಕ್ಯವನ್ನು ಮುಖ್ಯವಾಗಿ ಗಮನಿಸಿ. ಇಲ್ಲಿ ವಾಸಿಸಬೇಕಾಗಿದ್ದ ಬಡಜನರ ಆರೋಗ್ಯದ ಮೇಲೆ ಇಂಥ ವಸತಿಯ ಪರಿಸ್ಥಿತಿಯಿಂದ ಆಗುತ್ತಿದ್ದ ಪರಿಣಾಮ ಸ್ಪಷ್ಟ. ಇಂಥ ಕೊಳಕು ಪ್ರದೇಶದಲ್ಲಿ ವಾಸಿಸಬೇಕಾಗಿದ್ದ ದುರದೃಷ್ಟಶಾಲಿಗಳ ಮೇಲೆ, ಈ ದಟ್ಟದರಿದ್ರರ ಮೇಲೆ, ರೋಗ ಸಾವುಗಳು ಎರಗುತ್ತಿದ್ದುವು. ಈ ನಗರದ ಇನ್ನೊಂದು ಬದಿಯಲ್ಲಿ ಹುಟ್ಟಿದವನು ನಿಜವಾಗಿಯೂ ಅದೃಷ್ಟಶಾಲಿ. ಏಕೆಂದರೆ ನಿಮ್ಮ ಆಯುಸ್ಸು ಎಷ್ಟು ಎಂಬುದು ನೀವು

---

[1] Th. Rothstein, *From Chartism to Labourism*, p. 9. Martin Lawrence, Ltd., 1929.

[2] Quoted in F. Engels, *The Condition of the Working Class in England in 1844*. pp. 63, 64. Allen and Unwin, London, 1920.

ಎಲ್ಲಿ ವಾಸಿಸುತ್ತಿದ್ದೀರಿ—ಎಂಬುದನ್ನೇ ಅವಲಂಬಿಸುತ್ತದೆ. ಪಿ. ಎಚ್. ಹಾಲೆಂಡ್ ಎಂಬೊಬ್ಬ ವೈದ್ಯ ೧೮೪೪ರಲ್ಲಿ ಮ್ಯಾಂಚೆಸ್ಟರಿನ ಉಪನಗರವೊಂದರಲ್ಲಿ ಪರಿಶೀಲನೆ ನಡಸಿ ಈ ಬಗ್ಗೆ ಹೀಗೆ ವರದಿ ಒಪ್ಪಿಸಿದ್ದಾನೆ: "ಕೆಲವು ಬೀದಿಗಳಲ್ಲಿನ ಮರಣ ಸಂಖ್ಯೆ ಇನ್ನು ಕೆಲವು ಬೀದಿಗಳ ಮರಣ ಸಂಖ್ಯೆಗಿಂತ ನಾಲ್ಮಡಿ ಇದೆ. ಒಂದು ಇಡೀ ವಿಭಾಗದ ಬೀದಿ ಗಳಲ್ಲಿನ ಮರಣಸಂಖ್ಯೆ ಇತರ ವಿಭಾಗಗಳ ಬೀದಿಗಳಲ್ಲಿನ ಮರಣ ಸಂಖ್ಯೆಯ ಎರಡ ರಷ್ಟಿದೆ. ಬಹು ಹೀನಸ್ಥಿತಿಯಲ್ಲಿರುವ ಬೀದಿಗಳಲ್ಲಿ ಈ ಸಂಖ್ಯೆ ಹೆಚ್ಚಾಗಿ ಇದ್ದೇ ಇದೆ. ಸುಸ್ಥಿತಿಯಲ್ಲಿರುವ ಬೀದಿಗಳಲ್ಲಿ ಈ ಸಂಖ್ಯೆ ಅತ್ಯಂತ ಕಡಿಮೆ. ಇದನ್ನೆಲ್ಲ ನೋಡಿದಾಗ ನಮಗೆ ಒಂದು ವಿಚಾರ ವೇದ್ಯವಾಗುತ್ತದೆ. ನಮ್ಮ ಅಸಂಖ್ಯ ಸಹನಿವಾಸಿಗಳು, ನಮ್ಮ ನೆರೆ ಹೊರೆಯ ನೂರಾರು ಜನ, ಬಹು ಅಗತ್ಯವಾದ ಮುನ್ನೆಚ್ಚರಿಕೆಯ ಕ್ರಮದ ಅಭಾವದ ದೆಸೆಯಿಂದ ವರ್ಷೇ ವರ್ಷೇ ಸಾವಿನ ದವಡೆ ಹೊಗುತ್ತಿದ್ದರೆಂಬುದು ಸ್ವಯಂವೇದ್ಯ."[1]

ತಮ್ಮ "ನೆರೆಹೊರೆಯ ಜನರ" ನಾಶ ಈ ಇನ್ನೊಂದು ರಾಷ್ಟ್ರವನ್ನು—ಎಂದರೆ ಧನಿಕರನ್ನು—ಹೇಗೆ ತಟ್ಟಿತು? ಕಾರಖಾನೆಯ ಹೀನಸ್ಥಿತಿ, ದೀರ್ಘ ಕೆಲಸ, ಮಕ್ಕಳ ದುಡಿಮೆ—ಇವುಗಳ ಬಗ್ಗೆ ಈ ಸ್ಥಿತಿವಂತರ, ಉಳ್ಳವರ ಧೋರಣೆಯೇನು? ಇವರಲ್ಲಿ ಹಲವರು ಈ ಬಗ್ಗೆ ಚಿಂತಿಸಲೇ ಇಲ್ಲ. ಇವರ ಮನಸ್ಸನ್ನು ಇದು ತಾಕಲೇ ಇಲ್ಲ. ಈ ಬಗ್ಗೆ ಆಲೋಚನೆ ನಡಸಿದ ಕೆಲವರೂ ಕೂಡ, ಆಗಬೇಕಾದ್ದೇ ಆಗುತ್ತಿದೆಯೆಂದು ಸಮಾಧಾನ ಮಾಡಿಕೊಂಡರು. "ನಿಮ್ಮೊಡನೆ ದರಿದ್ರರು ಎಂದೆಂದೂ ಇರುವರು,"[2] ಎಂದು ಬೈಬಲ್ಲೇ ಹೇಳಲಿಲ್ಲವೆ? ಆದರೆ ಈ ಬೈಬಲ್ಲಿನಲ್ಲೇ, ಮನುಷ್ಯ-ಮನುಷ್ಯರ ನಡುವಣ ಸಂಬಂಧದ ಬಗ್ಗೆ ಹೇಳಿದ್ದ ಇತರ ಸಂಗತಿಗಳು ಇವರಿಗೆ ತಲೆ ಕೆಡಿಸಲಿಲ್ಲ. ತಾವು ನೋಡ ಬಯಸಿದಷ್ಟನ್ನೇ ಇವರು ಓದಿದರು, ತಾವು ಕೇಳಬಯಸಿದಷ್ಟನ್ನೇ ಆಲಿಸಿದರು. ಉಳಿದದ್ದು ಅವರಿಗೆ ಬೇಡವಾಗಿತ್ತು.

ನೀವೂ ನಾವೂ ಇಂದು ಯಾವುದನ್ನು ಭೀಕರವೆಂದು ಭಾವಿಸುತ್ತೇವೋ ಅವನ್ನು ಆ ಕಾಲದ ಧನಿಕರು ಸಹಜವೂ ಉಚಿತವೂ ಆದದ್ದೆಂದು ತಿಳಿದರು. ಮಕ್ಕಳು ಶಾಲೆ ಬಿಟ್ಟು ಬಂದು, ದಿನಕ್ಕೆ ಹದಿನಾಲ್ಕು ಘಂಟೆ ದುಡಿಯುವುದು ತಪ್ಪಲ್ಲವೆ? ಈ ಪ್ರಶ್ನೆ ಅಸಂಬದ್ಧ ಎಂದ—ಶ್ರೀಮಾನ್ ಜಿ.ಎ.ಲೀ. ಈತ ಹತ್ತಿಗಿರಣಿಯೊಂದರ ಮಾಲಿಕ. ಇಲ್ಲಿ ಮಕ್ಕಳ ದುಡಿಮೆಯ ಕಾಲ ಬೆಳಗ್ಗೆ ಆರರಿಂದ ಸಂಜೆ ಎಂಟರ ವರೆಗೆ. "ಚಿಕ್ಕಂದಿನಲ್ಲೇ ತಾಬೇದಾರಿ, ವಿಧೇಯತೆ, ದುಡಿಮೆ, ಕೆಲಸದಲ್ಲಿ ಸಮಯಪಾಲನೆ—ಈ ಗುಣ ಕಲಿಸುವುದು ಒಳಿತಲ್ಲವೆ?" ಎನ್ನುತ್ತಿದ್ದ—ಈ ಉದ್ಯಮ ಪತಿ.[3]

ಬಡಜನರ ನೀತಿ ನಡವಳಿಕೆಯ ಬಗ್ಗೆ ಶ್ರೀಮಾನ್ ಲೀಗೆ ತುಂಬಾ ಆಸಕ್ತಿ. ರಾಯಲ್ ಸೊಸೈಟಿಯ ಅಧ್ಯಕ್ಷ ಶ್ರೀಮಾನ್ ಗಿಡ್ಡಿಗೂ ಈ ವಿಚಾರದಲ್ಲಿ ತುಂಬಾ ಆಸಕ್ತಿ. ಕಾರ್ಮಿಕರ

---

[1] *Ibid.*, p. 107.

[2] St. John. 12:8.

[3] Hammond, *op. cit.*, p. 163.

ಮಕ್ಕಳಿಗಾಗಿ ಪ್ರಾಥಮಿಕ ಶಾಲೆ ತೆರೆಯುವುದನ್ನು ವಿರೋಧಿಸುತ್ತಿದ್ದ ಈತ. ಗಿಡ್ಡಿಯ ವಾದ ವೈಖರಿ ಈ ರೀತಿ ಇದೆ: "ಬಡ ಕಾರ್ಮಿಕ ಜನಕ್ಕೆ ಶಿಕ್ಷಣ ನೀಡುವುದರಿಂದ ಅವರ ನೀತಿ ಸೌಖ್ಯಗಳಿಗೆ ಹಾನಿ ತಂದಂತೆ. ವ್ಯವಸಾಯದಲ್ಲಿ ಒಳ್ಳೆಯ ಸೇವಕರೂ, ಸಮಾಜದ ಈ ವರ್ಗದ ಜನಕ್ಕೆ ಉಚಿತವಾದ ಇತರ ಬಗೆಯ ದುಡಿಮೆಗಾರರೂ ಆಗಿ, ಜೀವನದಲ್ಲಿ ತಮ್ಮ ಪಾಲಿಗೆ ಬಂದದ್ದು ಪಂಚಾಮೃತ ಎನ್ನದೆ, ತಮ್ಮ ಸ್ಥಿತಿಯನ್ನೇ ದ್ವೇಷಿಸುವಂಥ ಪರಿಸ್ಥಿತಿ ಕಲ್ಪಿಸಿದಂತಾದೀತು....ಪ್ರಜಾಕ್ಷೋಭಕ ಪತ್ರ ಪಠನ ಇವರಿಗೆ ಅಭ್ಯಾಸವಾದೀತು ....ತಮ್ಮ ಮೇಲವರಿಗೇ ಅವಿಧೇಯರಾಗುವಂತೆ, ದುರ್ವಿನೀತರಾಗುವಂತೆ ಇವರನ್ನು ತಯಾರು ಮಾಡೀತು."[1]

ಈ ಕಾಲಕ್ಕೆ ಸಂಬಂಧಿಸಿದ ಇನ್ನೊಬ್ಬ ಪ್ರತ್ಯಕ್ಷ ದರ್ಶಿ ಹೇಳುವುದನ್ನೂ ನಾವು ನಂಬ ಬಹುದಾದರೆ, ಬಡವರು ತಮ್ಮ ಸ್ಥಿತಿಯನ್ನು ದ್ವೇಷಿಸುವ ಬದಲು ಇದಕ್ಕಾಗಿ ಕೃತಜ್ಞ ರಾಗಿರಬೇಕಾದ್ದು ನ್ಯಾಯವೆನ್ನಬೇಕಾಗುತ್ತದೆ. ಮಾನವಜನಾಂಗಕ್ಕೆ ದತ್ತವಾದ ಮಹಾ ವರವೇ ಕಾರಖಾನೆ ವ್ಯವಸ್ಥೆ. ಇದರ ಒಂದು ಭಾಗವಾಗಿರಲು ಈ ಜನ ತುಂಬಾ ಅದೃಷ್ಟ ಪಡೆದಿರಬೇಕು. ಅಂಡ್ರ್ಯೂ ಯುರೇ ಎಂಬವನಂತೂ ಹೀಗೆ ನಂಬಿದ್ದ. ಆತ ೧೮೩೫ರಲ್ಲಿ ಹೀಗೆ ಬರೆದ: "ನನ್ನ ಈಚಿನ ಪ್ರವಾಸದಲ್ಲಿ....ಸಹಸ್ರ ಸಹಸ್ರಮಂದಿ ವೃದ್ಧರು, ತರುಣರು, ಮಧ್ಯವಯಸ್ಕರು, ಗಂಡಸರು, ಹೆಂಗಸರು....ಸ್ವಲ್ಪವೂ ಬೆವರು ಸುರಿಸದೆಯೇ ಧಾರಾಳವಾಗಿ ಆಹಾರ ವಸ್ತ್ರ ವಸತಿ ಸಂಪಾದಿಸುತ್ತಿದ್ದುದನ್ನು ಕಂಡೆ....ಬೇಸಗೆಯ ಬಿಸಿಲಿಲ್ಲದ, ಕೊರೆಯುವ ಚಳಿಯಿಲ್ಲದ, ನಮ್ಮ ಸೊಗಸುಗಾರ ಶ್ರೀಮಂತರು ಸೇರುವ ನಗರ ಕೇಂದ್ರಗಳ ಸಭಾ ಮಂದಿರಗಳಿಗಿಂತ ಒಳ್ಳೆಯ ಮನೆಗಳಲ್ಲಿ ಈ ಜನ ಇರುವುದನ್ನು ಕಂಡೆ....ಸಂಖ್ಯೆ, ಮೌಲ್ಯ, ಉಪಯುಕ್ತತೆ, ರಚನಾವಿಧಾನ ಇವುಗಳಲ್ಲಿ ಪ್ರಖ್ಯಾತವಾದ ಏಷ್ಯಾ ಈಜಿಪ್ಟ್ ರೋಮನ್ ವಾಸ್ತುಶಿಲ್ಪಗಳಿಗಿಂತ ಮಹತ್ತರವಾದ ಭವನಗಳು....ಇದು ನಮ್ಮ ಕಾರ್ಖಾನೆ ವ್ಯವಸ್ಥೆ."[2]

ಬಹುಶಃ ಡಾ|| ಯುರೇ ಯಾವ ಕಾರ್ಖಾನೆಯಲ್ಲೂ ಕೆಲಸ ಮಾಡಿರಲಾರ. ಅವನು ಕಾರಖಾನೆಗಳನ್ನು ಸಂದರ್ಶಿಸಿದ್ದನಷ್ಟೇ. ಇದನ್ನು ನೆನಪಿಸಲ್ಲಿಟ್ಟರೆ ಒಳ್ಳೆಯದು.

ಡಾ|| ಯುರೇ ಕಾರಖಾನೆ ವ್ಯವಸ್ಥೆಯನ್ನು ಹೊಗಳಿ ಹಾಡುವ ಕೆಲಸ ಮಾಡುವುದಕ್ಕೂ ಬಹು ಹಿಂದೆ, ಚರ್ಚಿನವನೊಬ್ಬ ದೀನ ದರಿದ್ರರಿಗೆ ಸಹಾನುಭೂತಿ ಸಹಾಯ ನೀಡಿದ. ಈ ಚರ್ಚಿನ ಅಧಿಕಾರಿ ಸಾಮಾನ್ಯನಲ್ಲ. ಮಹಾಧರ್ಮಾಧಿಕಾರಿ—ಆರ್ಚ್ ಡೀಕನ್—ಪಾಲಿ ಎಂಬವನೇ ಈತ. ತಮ್ಮ ಹೀನಸ್ಥಿತಿಗಾಗಿಯೂ ಧನಿಕರ ಅಟ್ಟಹಾಸಕ್ಕಾಗಿಯೂ ಮರುಗುತ್ತಿದ್ದ ಅತೃಪ್ತ ಕಾರ್ಮಿಕ ಜನಕ್ಕೆ ಈತ ಗೆಲುವಿನ ನುಡಿಯಾಡಿದ. "ಬಡತನ.... ಹೊರಿಸುವ ಕೆಲವು ಅನಿವಾರ್ಯ ಪರಿಸ್ಥಿತಿ ಕಷ್ಟಕರವಲ್ಲ, ಸಂತೋಷದಾಯಕ. ಮಿತವ್ಯಯವೇ, ನಿರಾಡಂಬರ ಜೀವನವೇ, ಸುಖಕರ. ಎಚ್ಚರಿಕೆ, ಯುಕ್ತಿ ಇವುಗಳಿಂದಲೇ

---

[1] *Ibid.*, p. 57.

[2] A. Ure, *The Philosophy of Manufactures* (1835), 3rd ed., p. 17. London, 1861.

ತೃಪ್ತಿ....ಅತಿ ಭೋಗಸಾಮಗ್ರಿಯಿದ್ದರೆ ಈ ಅವಧಾನ, ಈ ಯುಕ್ತಿ ಮಾಯವಾಗುತ್ತವೆ. ....ಇತಿ ಮಿತಿಯಿಲ್ಲದ ಧನದಿಂದ ತೆಗೆದುಕೊಳ್ಳುವುದರಲ್ಲಿ ಸುಖವಿಲ್ಲ....ಕೆಳದರ್ಜೆಯ ಜನರಿಗೆ ಇನ್ನೊಂದು ಸೌಕರ್ಯವಿದೆ. ತಮ್ಮ ಮಕ್ಕಳಿಗೆ ಯಾವ ಕಷ್ಟವೂ ಇಲ್ಲದೆ ಜೀವನೋಪಾಯ ಕಲ್ಪಿಸುವರು ಇವರು. ಬಡವನ ಮಗನೊಬ್ಬ ಹೊಂದಿರಬೇಕಾಗಿದ್ದನ್ನೆಲ್ಲ ಎರಡೇ ಮಾತಿನಲ್ಲಿ ಹೇಳಬಹುದು. 'ದುಡಿಮೆ, ನಿಷ್ಕಳಂಕತೆ.'"[1]

ಪೆದ್ದರಾದ ಕೆಲವು ಬಡಜನ ಮೊಂಡುತನದಿಂದ ಇದನ್ನು ನಂಬದಿದ್ದರೆ, ಬಡತನದಲ್ಲಿ ಸುಖವಿದೆಯೆಂಬ ಮಾತನ್ನು ಒಪ್ಪದಿದ್ದರೆ, ಇಂಥವರಿಗಾಗಿ ಈ ಧರ್ಮಾಧಿಕಾರಿ ತನ್ನ ಬತ್ತಳಿಕೆಯಲ್ಲಿ ಇನ್ನೊಂದು ವಾದದ ಬಾಣ ಇಟ್ಟದ್ದ. ಧನಿಕರಿಗೆ ವಿರಾಮವಿದೆಯೆಂದು ಬಡವರಿಗೆ ಅಸೂಯೆ. ಆದರೆ ಇದೆಂಥ ಭ್ರಾಂತಿ! ಧನಿಕರಿಗೇ ಅಸೂಯೆ. ಏಕೆಂದರೆ ಕಷ್ಟ ಪಟ್ಟು ದುಡಿದ ಮೇಲೆ ತಾನೆ ವಿಶ್ರಾಂತಿಯಲ್ಲಿ ಆನಂದ? ಈತನ ವಾದವೈಖರಿಯನ್ನೇ ಓದಿ: "ಧನಿಕರ ಬಗ್ಗೆ ದರಿದ್ರರ ಅಸೂಯೆಗೆ ಇನ್ನೊಂದು ಕಾರಣವೆಂದರೆ ಅವರ ನಿಶ್ಚಿಂತೆ, ವಿರಾಮ ಜೀವನ. ಆದರೆ ಈ ಬಗ್ಗೆ ಅವರಿಗೆ ಬರೀ ಭ್ರಾಂತಿ....ದುಡಿಮೆಯನ್ನು ನಿಲ್ಲಿಸಿದಾಗ ವಿಶ್ರಾಂತಿ. ಬೆವರು ಸುರಿಸಿ ದುಡಿಯುವುದೇನೆಂಬುದು ಅರಿಯದವರಿಗೆ ವಿಶ್ರಾಂತಿಯಲ್ಲಿ ಸುಖವೂ ಇಲ್ಲ, ರುಚಿಯೂ ಇಲ್ಲ. ಬಡವರಿಗೆ ವಿಶ್ರಾಂತಿಯಿಂದ ಲಭಿಸುವ ನವಚೈತನ್ಯ ಆಹ್ಲಾದಗಳನ್ನು ಧನಿಕರು ಅಸೂಯೆಯಿಂದ ವೀಕ್ಷಿಸದೆ ಇರಲಾರರು."[2]

ಧರ್ಮಾಧಿಕಾರಿ ಪಾಲಿ ೧೭೯೩ರಲ್ಲಿ ಬಡವರ ಕಣ್ಣೊರಸುವ ಈ ಮಾತು ಬರೆದ: ಫ್ರಾನ್ಸಿನಲ್ಲಿ ಬಡವರು ಅನುಕೂಲಸ್ಥರನ್ನು ಅಧಿಕಾರದಿಂದ ಉರುಳಿಸುವ ಸನ್ನಾಹ ಮಾಡುತ್ತಿದ್ದ ಕಾಲ ಇದು—ಎಂಬುದನ್ನು ನೀವು ನೆನಪಿನಲ್ಲಿಡಬೇಕು. ಫ್ರಾನ್ಸಿನ ಮಹಾಕ್ರಾಂತಿ ಹಿಂಸಾತ್ಮಕ ಘಟನೆ. ರಕ್ತ ಸಿಂಚನವಾಯಿತು ಆಗ. ಇಂಗ್ಲೆಂಡಿನ ಧನಿಕರು ಇದನ್ನು ಕಂಡು ಹೇಸಿದರು, ಅವರಿಗೆ ಇದು ಪ್ರಿಯವಾಗಲಿಲ್ಲ. 'ತಲೆ ಕಡಿಯಿರಿ!' ಎಂಬ ಫ್ರೆಂಚರ ಭೀಕರ ಉದ್ಘೋಷ ಇಂಗ್ಲಿಷ್ ಕಡಲ್ಗಾಲುವೆಯನ್ನೂ ದಾಟಿ ತಮ್ಮ ದೇಶದ ದೀನ ದಲಿತರಲ್ಲೂ ಸಾಂಕ್ರಾಮಿಕವಾಗಿ ಹರಡೀತೆಂದು ಇವರು ಭಯಪಟ್ಟರು. ಆದ್ದರಿಂದ ಉದ್ರಿಕ್ತರಾಗಬಹುದಾಗಿದ್ದ ಇಂಗ್ಲೀಷ್ ಬಡಸ್ತೋಮಕ್ಕೆ ಈ ದೀನಬಂಧು ಈ ರೀತಿ ಎಚ್ಚರಿಕೆಯ ಮಾತು ಹೇಳಿದ: "ನಿಧಾನವಾದ, ಪ್ರಗತಿಪರವಾದ ಅಭಿವೃದ್ಧಿಯೇ ನಿಜವಾದ ಪರಿವರ್ತನೆ, ನಾವು ಸ್ವಾಗತಿಸಬಹುದಾದ ಪರಿವರ್ತನೆ....ಇದು ಯಶಸ್ವೀ ದುಡಿಮೆಯ ಸಹಜ ಫಲ.... ಸಾರ್ವಜನಿಕ ಶಿಸ್ತು ಶಾಂತಿ ಇದ್ದಲ್ಲಿ ಮಾತ್ರ ಇದನ್ನು ನಿರೀಕ್ಷಿಸಬಹುದು. ಬೇರೆ ಯಾವ ಸ್ಥಿತಿಯಲ್ಲೂ ಇದು ಲಭಿಸದು....ಧನಿಕರ ಧನ ಮಾನ ಸ್ಥಾನಗಳನ್ನು ಬಯಸುವುದು, ಅಥವಾ ಜನಜಂಗುಳಿಯನ್ನು ಎತ್ತಿ ಕಟ್ಟಿ, ಅನಾಯಕತ್ವ ಸೃಜಿಸಿ, ಇವನ್ನು ಬಲವಂತ

---

[1] W. Paley, *Reasons for Contentment; Addressed to the Labouring Part of the British Public*, pp. 11, 12. London, 1793.

[2] *Ibid.*, p. 16.

ವಾಗಿ ಕಿತ್ತುಕೊಳ್ಳಬೇಕೆಂಬಷ್ಟು ಉತ್ಕಟ ಆಸೆ ಹೊಂದಿರುವುದು ದೌಷ್ಟ್ಯವಷ್ಟೇ ಅಲ್ಲ, ಇದು ಮಹಾಪರಾಧ."[1]

ಇಂಗ್ಲೆಂಡಿನ ಬಡಜನ ಈ ಚರ್ಚಿಗನ ಬುದ್ಧಿವಾದಕ್ಕೆ ಮನ್ನಣೆ ನೀಡಿದರು. ಅವರು "ಧನಿಕರ ಐಶ್ವರ್ಯವನ್ನು ಕಸಿದು"ಕೊಳ್ಳಲಿಲ್ಲ. ಆದರೆ ಆತ ವಾಗ್ದಾನ ಮಾಡಿದ, "ಯಶಸ್ವಿ ದುಡಿಮೆಯ ಸಹಜ ಫಲವಾದ" "ನಿಧಾನವಾದ ಪ್ರಗತಿಪರವಾದ ಅಭಿವೃದ್ಧಿ" ಯನ್ನು ನಿರೀಕ್ಷಿಸಿ ನಿರೀಕ್ಷಿಸಿ ಹಣ್ಣಾದರು, ಸಣ್ಣಾದರು. ಅದು ಬರಲೇ ಇಲ್ಲ. ಆದ್ದರಿಂದ ಅವರು ಅದಕ್ಕಾಗಿ ಹೋರಾಡಿದರು.

ಇಕೊಳ್ಳಿ, ಉದಾಹರಣೆ: ದುಡಿಮೆಯ ಅವಧಿ ಕಡಿಮೆಯಾಗಲೆಂದು ಅವರು ಹೋರಾಡಿದರು. ದಿನಕ್ಕೆ ಹದಿನಾಲ್ಕು ಅಥವಾ ಹದಿನಾರು ಘಂಟೆಯ ದುಡಿಮೆ ತುಂಬಾ ಹೆಚ್ಚೆಂದು ನಂಬುವಷ್ಟು ಮಾನವತೆ ಹೊಂದಿದ್ದ ಕೆಲವರು ಧನಿಕರೂ ಇವರೊಡನೆ ಸೇರಿದರು. ಈ ಕೆಲ ಧನಿಕ ಜನ ಈ ಹೋರಾಟವನ್ನು ಪಾರ್ಲಿಮೆಂಟಿನೊಳಕ್ಕೂ ಕೊಂಡೊಯ್ದರು. ದಿನಕ್ಕೆ ಹತ್ತು ಘಂಟೆಗೆ ದುಡಿತದ ಅವಧಿಯನ್ನು ಮಿತಗೊಳಿಸಬೇಕೆಂದು ಇವರು ಭಾಷಣ ಮಾಡಿದರು. ಈ ಬಗ್ಗೆ ಮಸೂದೆಯೊಂದರ ಪರವಾಗಿ, ತಮ್ಮಂತೆಯೇ, ಮತ ನೀಡಬೇಕೆಂದು ತಮ್ಮ ಸಹಸದಸ್ಯರಲ್ಲಿ ಕೆಲವರನ್ನು ಒಡಂಬಡಿಸಿದರು. ಇದರಿಂದ ಕೆಲವರಿಗೆ ಅಸಂತುಷ್ಟಿಯೂ ಆಯಿತು. ಡಾ|| ಯೂರೇ ಇಂಥವರಲ್ಲೊಬ್ಬ. ಇವನು ಕ್ರುದ್ಧ ನಾದ. ಅದೂ ಯಾವ ಕಾರಣಕ್ಕಾಗಿ? "ಪ್ರತಿಯೊಬ್ಬ ನಿಷ್ಪಕ್ಷಪಾತಿಗೂ ಅಚ್ಚರಿಯಾಗುವ ಅಂಶವಿದು. ವಯಸ್ಕರಾದ ಯಾವ ಕಾರ್ಮಿಕರ ವರ್ಗವೇ ಆಗಲಿ, ದಿನಕ್ಕೆ ಹತ್ತು ಘಂಟೆಗೂ ಮಿಕ್ಕು ಕೆಲಸ ಮಾಡಬಾರದೆಂಬುದಾಗಿ ಮತ ನೀಡಲು ಬ್ರಿಟನ್ನಿನ ಕಾಮನ್ಸ್ ಸಭೆಯಲ್ಲಿ ತೊಂಬತ್ತುಮೂರು ಮಂದಿ ದೊರೆತರಲ್ಲಾ—ಎಂಬುದೀಗ ಆಶ್ಚರ್ಯಕರ. ಕ್ರೈಸ್ತ ಜಗತ್ತಿನ ಯಾವ ಶಾಸನ ಸಭೆಯೂ ಖಂಡಿತ ಸ್ವಾಗತಿಸಲಾರದ ಘಟನೆಯಿದು. ಪ್ರಜೆಗಳ ಹಕ್ಕು ಬಾಧ್ಯತೆಗೆ ಧಕ್ಕೆ ತರುವ ಸಂಗತಿ ಇದು. 'ಕತ್ತಲೆಯ ಯುಗಕ್ಕೆ ಮಾತ್ರ ತಕ್ಕ ಮಸೂದೆ ಇದು' —ಎಂದು ಗ್ಲಾಸೆಸ್ಟರ್‌ಷೈರಿನ ಉತ್ಪಾದಕರು ಇದನ್ನು ವರ್ಣಿಸಿದ್ದು ಉಚಿತವೇ ಆಗಿದೆ."[2]

ಧರ್ಮಾಧಿಕಾರಿ ಪಾಲಿಯಂತೆ ಡಾ|| ಯೂರೆ ಕೂಡ ದುಡಿಮೆಗಾರನ ಗೆಳೆಯನಾಗಿದ್ದ. ಆದ್ದರಿಂದಲೇ ಇವನೂ ಗ್ಲಾಸೆಸ್ಟರ್‌ಷೈರಿನ ಉತ್ಪಾದಕರೂ ಗಿರಣಿ ಯಜಮಾನ ಇಚ್ಛೆ ಯಿದ್ದಷ್ಟು ದೀರ್ಘಕಾಲ ಕೆಲಸ ಮಾಡಲು ಕಾರ್ಮಿಕರಿಗೆ ಇರುವ ಸ್ವಾತಂತ್ರ್ಯವನ್ನು ಮೊಟಕು ಮಾಡುವ ಸೂಚನೆಯನ್ನು ಕಂಡು ಉದ್ರೇಕಗೊಂಡರು. ಸಾಯುವಷ್ಟು ದುಡಿಯುವ ಆಜನ್ಮಸಿದ್ಧ ಹಕ್ಕನ್ನು ಪಾರ್ಲಿಮೆಂಟು ಕಸಿದುಕೊಂಡರೆ ಆಂಗ್ಲ ಪ್ರಜೆಗಳ ಇತಿಹಾಸ ಪ್ರಸಿದ್ಧವಾದ ಸ್ವಾತಂತ್ರ್ಯದ ಗತಿ ಏನು?

ಈ ವಾದ—ದುಡಿಮೆಯ ಕಾಲವನ್ನು ಮಿತಿಗೊಳಿಸುವುದರಿಂದ ಮಾನವನ ಸಹಜ

---

[1] *Ibid.*, pp. 20, 22.

[2] Ure, *op. cit.*, p. 297.

ಸ್ವಾತಂತ್ರ್ಯಕ್ಕೆ ಧಕ್ಕೆ ಒದಗಿದಂತೆ, ಎಂಬ ವಾದ—ಬಹು ಮುಖ್ಯ. ಈ ವಾದ ಇಂಗ್ಲೆಂಡಿ ನಂತೆಯೇ ಅಮೆರಿಕದಲ್ಲೂ ಪದೇ ಪದೇ ಮುಂದೆ ಬಂತು. ಉತ್ಪಾದಕರು ಈ ವಾದ ಮುಂದೊಡ್ಡಿದರು. (ಕಾರ್ಮಿಕರು ಈ ವಿಚಾರದಲ್ಲಿ ತಮ್ಮ ಸ್ವಾಭಾವಿಕ ಸ್ವಾತಂತ್ರ್ಯವನ್ನು ಉದಾಸೀನ ಮಾಡಿದ್ದನ್ನು ಮನಸ್ಸಿಗೆ ಹಚ್ಚಿಕೊಳ್ಳದಿದ್ದುದೀಗ ವಿಚಿತ್ರ.) ತಾಟಸ್ಥ್ಯ ನೀತಿಯ ಪ್ರವಾದಿ, ಮಹಾ ಅರ್ಥ ಶಾಸ್ತ್ರಜ್ಞ ಆಡಂ ಸ್ಮಿತ್ತನಿಂದ ಇವರು ಈ ವಾದಕ್ಕೆ ಸ್ಫೂರ್ತಿ ಪಡೆದರು. ಪ್ರಭುತ್ವವಾದದ ನಿರ್ಬಂಧ ನೀತಿಯ ಪಕ್ಕಾ ವಿರೋಧಿ ಯಾಗಿದ್ದ ಆಡಂ ಸ್ಮಿತ್ ಈ ಬಗೆಯ ಆತಂಕಗಳ ವಿರುದ್ಧವಾಗಿ ಮಾತ್ರ ತನ್ನ ಈ ಪ್ರಬಲ ವಾದ ಹೂಡಿದನೆಂಬುದು ನಿಜ. ಇದನ್ನು ನಾವು ಹಿಂದೆ ಅರಿತಿದ್ದೇವೆ. ಸ್ಮಿತ್ತನ 'ರಾಷ್ಟ್ರಗಳ ಸಂಪತ್ತು' ಗ್ರಂಥದಿಂದ ಉತ್ಪಾದಕರು ಈ ಮಾತುಗಳನ್ನು ಎತ್ತಿ ಆಡಬಹುದಿತ್ತು: "ಪ್ರತಿಯೊಬ್ಬನ ಆಸ್ತಿಯೆಂದರೆ ಆತನ ದುಡಿಮೆ. ಇತರ ಎಲ್ಲ ಬಗೆಯ ಆಸ್ತಿಗೂ ಇದೇ ಆಧಾರಭೂತ, ಅಸ್ತಿಭಾರ. ಆದ್ದರಿಂದ ಇದು ಅತ್ಯಂತ ಪವಿತ್ರ, ಅಲಂಘ್ಯ. ಬಡವನ ಪಿತ್ರಾರ್ಜಿತ ಆಸ್ತಿಯೆಂದರೆ ಆತನ ಶಕ್ತಿ, ಕೈಚಳಕ. ಈ ಶಕ್ತಿ ಕೈಚಳಕಗಳನ್ನು ಈತ ತನ್ನಿಚ್ಛೆ ಬಂದಂತೆ, ನೆರೆಯವರಿಗೆ ತೊಂದರೆಯಾಗದಂತೆ, ಬಳಸಲು ಅಡ್ಡಿಪಡಿಸುವುದು— ಆತನ ಅತ್ಯಂತ ಪವಿತ್ರ ಆಸ್ತಿಯ ಹಕ್ಕಿನ ಉಲ್ಲಂಘನೆ. ಇದು ಸ್ಪಷ್ಟ.....ಈತ ಉದ್ಯೋಗ ಪಡೆಯಲು ಅರ್ಹನೇ—ಎಂಬ ತೀರ್ಮಾನವನ್ನು, ನೇಮಕ ಮಾಡಿಕೊಳ್ಳುವವರ ವಿವೇಚನೆಗೆ ಬಿಡುವುದು ಬಹು ಉಚಿತ. ಏಕೆಂದರೆ ಇದು ಅವರ ಹಿತಕ್ಕೆ ಸಂಬಂಧಿಸಿದ ವಿಚಾರ."[1]

ಧನಪ್ರಭುತ್ವ ಪದ್ಧತಿಯ ನಿಬಂಧನೆ ನಿರ್ಬಂಧಗಳನ್ನು ವಿರೋಧಿಸಿ ಆಡಂ ಸ್ಮಿತ್ ಈ ಮಾತುಗಳನ್ನು ಬರೆದನೆಂಬುದು ನಿರ್ವಿವಾದ. ಆಡಂ ಸ್ಮಿತ್ತನ ಈ ವಾಕ್ಯಗಳನ್ನು ಉದ್ಧರಿಸಿದ ಉತ್ಪಾದಕರು ಆತನ ಈ ಮಾತುಗಳಿಗೆ ಆತನೇ ಕಲ್ಪಿಸದಿದ್ದ ಅರ್ಥ ಕಲ್ಪಿಸಲು ಯತ್ನಿಸಿದರೆಂದು ನಾವು ವಾದಿಸಬಹುದು. ಏಕೆಂದರೆ ಆಡಂ ಸ್ಮಿತ್ ಬರೆದದ್ದು ಬಹು ಹಿಂದೆ—೧೭೭೬ರಲ್ಲಿ, ಬೇರೊಂದು ಬಗೆಯ ನಿರ್ಬಂಧಗಳ ವಿರುದ್ಧವಾಗಿ. ಆದರೆ ಸ್ಮಿತ್ತನ ಈ ಮಾತನ್ನು ಉತ್ಪಾದಕರು ಎತ್ತಿ ಆಡಿದ್ದು ನ್ಯಾಯವೆಂದೇ ಭಾವಿಸೋಣ. ಆದರೆ ಸ್ಮಿತ್ ಹೇಳಿದ ಇನ್ನೊಂದು ಮಾತು ತಮ್ಮ ಹಿತಕ್ಕೆ ಅನುಗುಣವಾಗಿಲ್ಲದಿದ್ದಾಗ ಅದನ್ನು ಇವರು ಮರೆತದ್ದು ನ್ಯಾಯವಲ್ಲ. ಈ ಅನುಕೂಲವೇದಾಂತ—ಸ್ಮಿತ್ ಬರೆದದ್ದರಲ್ಲಿ ತಮಗೆ ಅನುಕೂಲವಾದದ್ದನ್ನು ಎತ್ತಿಕೊಂಡು, ತಮ್ಮ ಕೃತಿಗೆ ವಿರುದ್ಧವಾದದ್ದನ್ನು ಕಡೆಗಣಿಸುವ ಈ ಅಭ್ಯಾಸ—ಆಳುವ ವರ್ಗಕ್ಕೆ ಉಪಯುಕ್ತವಾಗಿತ್ತು. ಈ ಧೋರಣೆ ಕಾರ್ಮಿಕ ವರ್ಗದ ವಿನಾಶಕಾರಿಯಾಗಿತ್ತು. ಸುಮಾರು ನೂರು ವರ್ಷಕಾಲ ಇದೇ ರೀತಿ ನಡೆದುಕೊಂಡು ಬಂತು.

ತಮ್ಮ ಸ್ಥಿತಿ ಉತ್ತಮ ಪಡಿಸಿಕೊಳ್ಳಲು ಕಾರ್ಮಿಕರು ಏನು ಮಾಡಬಹುದಿತ್ತು?

---

[1] Adam Smith, *op. cit.*, vol I, p. 123.

ಕೈಹೆಣಿಗೆ ಕೆಲಸದಿಂದ ತಕ್ಕ ಮಟ್ಟಿಗೆ ಅನುಕೂಲವಾಗಿ ನೀವು ಜೀವನ ನಡಸುತ್ತಿದ್ದೀರೆಂದು ಭಾವಿಸೋಣ. ನಿಮ್ಮ ಕಣ್ಣ ಮುಂದೆಯೇ ಒಂದು ಗಿರಣಿ ಸ್ಥಾಪನೆಯಾಯಿತೆಂದೂ ಭಾವಿಸಿಕೊಳ್ಳಿ. ಇಲ್ಲಿನ ಯಂತ್ರಗಳು ಶೀಘ್ರವಾಗಿ ಬಹು ಅಲ್ಪ ಬೆಲೆಗೆ ಹೆಚ್ಚು ಹೆಣಿಗೆ ವಸ್ತು ತಯಾರಿಸಿದುವೆನ್ನಿ. ಇದರಿಂದ ನಿಮ್ಮ ಅನುಕೂಲ ಸ್ಥಿತಿ ಕ್ರಮೇಣ ಹೋಗಿ, ಕೊನೆಗೆ ನೀವು ಉಪವಾಸದ ಬಾಗಿಲಲ್ಲಿ ನಿಂತಿರೆನ್ನಿ. ಯಂತ್ರ ಬರುವ ಮುನ್ನಿನ ದಿನಗಳನ್ನು ನೀವು ನೆನಸಿಕೊಳ್ಳುವಿರಲ್ಲವೆ? ಆಗ ತಕ್ಕ ಮಟ್ಟಿಗೆ ಅನುಕೂಲವಾಗಿದ್ದ ನೀವು ಆ ಜೀವನವೇ ಸ್ವರ್ಗ ತುಲ್ಯವಾಗಿತ್ತೆಂದು ಭಾವಿಸುವಿರಿ. ಆಗ ನೀವು ನಿಮ್ಮನ್ನೇ ಪರಿಶೀಲಿಸಿಕೊಳ್ಳುವಿರಿ. ನಿಮ್ಮ ಈಗಿನ ಇರವಿನ ಭೀಕರ ದಾರಿದ್ರ್ಯವನ್ನು ಕಂಡು ನಡುಗುವಿರಿ. ಇದಕ್ಕೆ ಕಾರಣವೇನೆಂದು ನಿಮ್ಮನ್ನೇ ನೀವು ಪ್ರಶ್ನಿಸಿಕೊಳ್ಳುವಿರಿ. ಈ ಪ್ರಶ್ನೆಯನ್ನು ನೀವು ಈ ವೇಳೆಗಾಗಲೇ ಸಾವಿರ ಬಾರಿ ಕೇಳಿಕೊಂಡೇ ಇರುತ್ತೀರಿ. ಹಿಂದೆ ಬಂದ ತೀರ್ಮಾನಕ್ಕೇ ಈಗಲೂ ನೀವು ಬರುತ್ತೀರಿ. ಯಂತ್ರ ಇದಕ್ಕೆಲ್ಲ ಕಾರಣ ಎನ್ನುವಿರಿ. ಯಂತ್ರವೇ ಅಲ್ಲವೆ, ಜನರನ್ನು ಕೆಲಸದಿಂದ ಹೊರದೂಡಿದ್ದು? ಪದಾರ್ಥಗಳ ಬೆಲೆ ಅಗ್ಗಗೊಳಿಸಿದ್ದು? ಯಂತ್ರ—ಅದೇ ನಿಜವಾದ ಶತ್ರು.

ನಿರಾಶೆಗೊಂಡ ಜನ ಈ ತೀರ್ಮಾನಕ್ಕೆ ಬಂದದ್ದೇ ತಡ, ಮುಂದಣ ಹೆಜ್ಜೆ ಅನಿವಾರ್ಯವಾಗಿತ್ತು.

ಯಂತ್ರನಾಶನ.

ಕಲಾಬತ್ತು ಚೌಕಟ್ಟು, ಹೆಣಿಗೆ ಚೌಕಟ್ಟು, ಸೆಯ್ಗೆಯಂತ್ರ, ನೂಲು ಯಂತ್ರ —ಎಲ್ಲ ಯಂತ್ರಗಳನ್ನೂ, ಎಲ್ಲೆಲ್ಲಿ ಯಾವ ಯಾವ ಯಂತ್ರ ಕಾರ್ಮಿಕರಿಗೆ ಸಂಕಟ ಉಪವಾಸ ತಂದುವೆಂದು ಕಂಡು ಬಂತೋ ಅವನ್ನೆಲ್ಲ, ನಾಶಗೊಳಿಸಿದರು, ಧ್ವಂಸ ಮಾಡಿದರು, ಅಗ್ನಿಗೆ ಆಹುತಿಕೊಟ್ಟರು. ಯಂತ್ರಭೇದಕರು—ಇವರನ್ನು ಲಡ್ಡೈಟರೆನ್ನುತ್ತಿದ್ದರು—ಯಂತ್ರದ ವಿರುದ್ಧವಾಗಿ ಹೋರಾಟ ನಡಸಿದಾಗ, ತಾವು ಯಾವುದೋ ಒಂದು ಉತ್ತಮ ಜೀವನ ವಿಧಾನಕ್ಕಾಗಿ ಹೋರಾಡುತ್ತಿದ್ದರೆಂದೇ ಭಾವಿಸಿದ್ದರು.

> "ಸುತ್ತಲೂ ಎತ್ತೆತ್ತಲೂ ನಿಲ್ಲುವೆವು ನಾವು
> ಉಣ್ಣೆಗತ್ತರಿ ಕಿಟಕಿ ಮುರಿಯುವೆವು ನಾವು.
> ಗಿರಣಿಗಿಕ್ಕುವೆವಿದೋ ಬೆಂಕಿಕೊಳ್ಳಿ
> ನಮ್ಮಾಣೆ! ಇದು ನಮ್ಮ ದೃಢ ಪ್ರತಿಜ್ಞೆ."[1]

ಇಂಥ ತುಣುಕು ಹಾಡು ಹಾಡುತ್ತಾ ಧ್ವಂಸ ಕಾರ್ಯದಲ್ಲಿ ಈ ಜನ ತೊಡಗಿದಾಗ, ಯಂತ್ರದ ವಿರುದ್ಧ ಅವರಲ್ಲಿ ಅಡಗಿದ್ದ ರೋಷವೆಲ್ಲ ಕೊಚ್ಚಿ ಬಂತು.

---

[1] F. Peel, *The Risings of the Luddites, Chartists and Plug-drawers*, 2nd ed., p. 284. Heckmondwike, 1888.

ಈ ಹಿಂಸಾ ಕೃತ್ಯಗಳ ಪರಿಣಾಮವನ್ನು ನೀವು ಸುಲಭವಾಗಿ ಊಹಿಸಬಲ್ಲಿರಿ. ಜನರ ಗುಂಪುಗಳು ಯಂತ್ರಗಳನ್ನು ನುಚ್ಚುನುರಿ ಮಾಡಿದುವು. ಯಂತ್ರದ ಒಡೆಯರು ಬಹು ಬೇಗ ಕ್ರಮ ಕೈಕೊಂಡರು. ಅವರು ನ್ಯಾಯಪಾಲನೆಗಾಗಿ ಮೊರೆಯಿಟ್ಟರು. ಅವರ ಮೊರೆಗೆ ಬಹು ಬೇಗ ಉತ್ತರ ದೊರಕಿತು. ೧೮೧೨ರಲ್ಲಿ ಪಾರ್ಲಿಮೆಂಟು ಒಂದು ಮಸೂದೆ ತಂದಿತು. ಯಂತ್ರ ಧ್ವಂಸ ಮಾಡಿದವರಿಗೆ ಮರಣದಂಡನೆ ವಿಧಿಸಬೇಕೆಂದು ಈ ಮಸೂದೆ ಯಲ್ಲಿತ್ತು. ಈ ಮಸೂದೆ ಅಂಗೀಕೃತವಾಗುವ ಮುನ್ನ, ಈ ವಿಷಯವನ್ನು ಕುರಿತ ಚರ್ಚೆ ನಡೆಯುತ್ತಿದ್ದಾಗ, ಲಾರ್ಡ್ಸ್ ಸಭೆಯ ಒಬ್ಬ ಸದಸ್ಯ ತನ್ನ ಚೊಚ್ಚಲು ಭಾಷಣದಲ್ಲಿ ಈ ಕ್ರಮವನ್ನು ವಿರೋಧಿಸಿದ. ಜನಧ್ವಂಸ ಕಾರ್ಯವೇ ಯಂತ್ರಧ್ವಂಸಕ್ಕೆ ಕಾರಣವೆಂದು ಈತ ಈ ಶಾಸಕರನ್ನೆಚ್ಚರಿಸಿದ: "ಗಾಬರಿಗೊಳಿಸುವಷ್ಟು ಪ್ರಮಾಣದಲ್ಲಿ ಈ ಅತ್ಯಾಚಾರ ಜರುಗುತ್ತಿದೆ ನಿಜ. ಹಿಂದೆಂದೂ ಕೇಳದ ಕಾಣದ ರೀತಿಯ ಸಂಕಟಕರ ಸನ್ನಿವೇಶದ ಫಲವಿದೆಂಬುದನ್ನು ಒಪ್ಪದಿರಲು ಸಾಧ್ಯವಿಲ್ಲ. ಒಮ್ಮೆ ಪ್ರಾಮಾಣಿಕರೂ ಕಷ್ಟಜೀವಿಗಳೂ ಆಗಿದ್ದ ಈ ಜನ ತಮಗೂ ತಮ್ಮ ಸಂಸಾರಕ್ಕೂ ಸಮಾಜಕ್ಕೂ ಹಾನಿಕಾರಕವಾದ ಇಂಥ ಅತ್ಯಾಚಾರದಲ್ಲಿ ತೊಡಗುವಂತೆ ಮಾಡಲು ಅವರ ಕಟುದಾರಿದ್ರ್ಯವೇ ಕಾರಣ. ಇಂಥ ಕೃತ್ಯದಲ್ಲಿ ಈ ನತದೃಷ್ಟರು ಮುಂದುವರಿಯುತ್ತಲೇ ಇರುವುದೇ ಈ ಮಾತಿಗೆ ಸಾಕ್ಷಿ. ಉತ್ತಮಗೊಂಡ ಉತ್ಪಾದನೋಪಕರಣದಿಂದ ಕೆಲ ಜನ ಧನಿಕರಾಗುವುದಕ್ಕಿಂತ, ದುಡಿಯುವ ಬಡವರ ಮೇಲ್ಮೆಯೇ ಮುಖ್ಯವೆಂದೂ, ಈ ಉಪಕರಣಗಳು ಕಾರ್ಮಿಕನನ್ನು ನಿರುದ್ಯೋಗಗೊಳಿಸಿ ಅವನ ದುಡಿಮೆಗೆ ಬೆಲೆ ಬಾರದಂತೆ ಮಾಡಿರುವುವೆಂದೂ ಈ ಜನ ತಪ್ಪಾಗಿ ಭಾವಿಸಿದರು....

"ನಿರಾಶೆಗೊಂಡ, ಅಪಾಯಕಾರಿ ಅಜ್ಞ ಜನಜಂಗುಳಿಯೆಂದು ಇವರನ್ನು ನೀವು ಹಳಿಯುತ್ತೀರಿ....ಆದರೆ ಈ ಜನಜಂಗುಳಿಯ ಬಗ್ಗೆ ನಮ್ಮ ಕರ್ತವ್ಯವೇನೆಂಬುದನ್ನು ನಾವು ಅರಿತಿದ್ದೇವೆಯೆ? ನಮ್ಮ ಹೊಲದಲ್ಲಿ ದುಡಿಯುವವರು ಈ ಜನಜಂಗುಳಿ. ನಮ್ಮ ಮನೆಯಲ್ಲಿ ಸೇವೆ ಮಾಡುವವರು ಈ ಜನ. ನಿಮ್ಮ ನೌಕಾಬಲದ, ನಿಮ್ಮ ಸೈನ್ಯದ ಉಸಿರು ಇವರು. ನೀವು ಇಡೀ ಜಗತ್ತನ್ನೇ ಎದುರಿಸುವ ಕೆಚ್ಚು ತಂದು ಕೊಟ್ಟವರು ಇವರು. ಉಪೇಕ್ಷೆ, ವಿಪತ್ತುಗಳಿಂದ ರೊಚ್ಚಿದ್ದ ಈ ಜನ ನಿಮ್ಮನ್ನೂ ಪ್ರತಿ ಭಟಿಸಿಯಾರು."[1]

೧೮೧೨ನೆಯ ಇಸವಿ ಫೆಬ್ರುವರಿ ೨೭ರಂದು ಈ ರೀತಿ ಭಾಷಣ ಮಾಡಿದವನು ಬೇರೆ ಯಾರೂ ಅಲ್ಲ—ಸುಪ್ರಸಿದ್ಧಕವಿ ಲಾರ್ಡ್ ಬೈರನ್.

ಯಂತ್ರಧ್ವಂಸ ವಿವೇಕದ ಹುಚಿಕೆಯಾಗಿರಲಿಲ್ಲ. ಈ ಹಂಚಿಕೆ ಜಯಪ್ರದವಾಗಿದ್ದರೂ ಇದರಿಂದ ಕಾರ್ಮಿಕರ ಸಮಸ್ಯೆಗಳ ಇತ್ಯರ್ಥವಾಗುತ್ತಿರಲಿಲ್ಲ. ತಪ್ಪು ಗೊತ್ತಿನ ವಿರುದ್ಧ ಇವರು ಬೊಗಳುತ್ತಿದ್ದರು. ಇವರ ದುಃಖಕಾರಣ ಯಂತ್ರವಲ್ಲ—ಯಂತ್ರದ ಒಡೆಯ. ಈತ

---

[1] *Ibid.*, pp. 71-72, 75.

ಪರೋಕ್ಷವಾಗಿ, ಆದರೆ ನೆಲ ಆಕ್ರಮಿಸಿಕೊಂಡ ಜಮೀನುದಾರನಷ್ಟೇ ಪರಿಣಾಮಕಾರಿಯಾಗಿ, ಈ ಜನರ ಉತ್ಪಾದನ ಸಾಧನವನ್ನು ಇವರಿಂದ ಕಸಿದುಕೊಳ್ಳುತ್ತಿದ್ದ.

ಯಂತ್ರಧ್ವಂಸದಿಂದ ಪ್ರಯೋಜನವಿಲ್ಲವೆಂಬುದನ್ನು ಈ ಕಾರ್ಮಿಕರು ಬೇಗ ಕಂಡುಕೊಂಡರು. ಕೆಲವು ಕಾರ್ಮಿಕರು ಬೇರೆ ವಿಧಾನಗಳನ್ನು ಪ್ರಯೋಗ ಮಾಡಿ ನೋಡಿದರು. ಉದಾಹರಣೆಗೆ, "ಬಡ ನೇಕಾರರು" ಎಂದು ತಮ್ಮನ್ನು ತಾವೇ ವರ್ಣಿಸಿಕೊಂಡ ಜನರ ಗುಂಪೊಂದರ ಕರುಣಾಮಯ ಬಿನ್ನಹವನ್ನು ನೋಡಿ: ೧೮೧೮ರಲ್ಲಿ ಓಲ್ಡ್‌ಹ್ಯಾಮಿನ ತಮ್ಮ ಧಣಿಗಳಿಗೆ ಇವರು ಬರೆದುಕೊಂಡ ಮನವಿ ಇದು: "ಈ ನಗರದ ಹಾಗೂ ಅಕ್ಕಪಕ್ಕದ ನೇಕಾರರಾದ ನಾವು, ನಮ್ಮ ಕೂಲಿ ಬಹುವಾಗಿ ಇಳಿದದ್ದರ ಪರಿಣಾಮವಾಗಿ ಬಹು ಕಾಲದಿಂದ ಎದುರಿಸಬೇಕಾದ ದುಸ್ಥಿತಿಯನ್ನು ಬಹು ವಿನಯದಿಂದ ತಮ್ಮ ಗಮನಕ್ಕೆ ತರಲು ಬಯಸುತ್ತೇವೆ. ನಮ್ಮ ಕೂಲಿ ಹೆಚ್ಚಿಸಿ ನಮ್ಮ ಕಷ್ಟ ಪರಿಹಾರ ಮಾಡುವುದು ಸಾಧ್ಯವೇ—ಎಂಬುದನ್ನು ಪರಿಶೀಲಿಸಲು ನಿಮ್ಮಗಳ ಸಭೆಯೊಂದನ್ನು ಕರೆಯಬೇಕೆಂದು ಪ್ರಾರ್ಥಿಸಿಕೊಳುತ್ತೇವೆ. ನಾವು ಈಗ ಪಡೆಯುತ್ತಿರುವ ಕೂಲಿಯಿಂದ ಜೀವನದ ಸಾಮಾನ್ಯ ಅಗತ್ಯ ವಸ್ತುಗಳನ್ನೂ ಕೂಡ ಸಾಕಷ್ಟು ಕೊಳ್ಳಲು ಸಾಧ್ಯವಿಲ್ಲವಾಗಿದೆ. ನೀವು ಸಾಂಘಿಕವಾಗಿ ಈ ಬಗ್ಗೆ ಯತ್ನ ಮಾಡಿದ್ದೇ ಆದರೆ, ನಿಮ್ಮ ಲಾಭಕ್ಕೆ ಧಕ್ಕೆ ಬಾರದಂತೆ ನಮ್ಮ ಬೇಡಿಕೆಯನ್ನು ಈಡೇರಿಸಬಹುದು. ನಿಮ್ಮ ಲಾಭ ನಾಶಪಡಿಸಲು ನಮಗೆ ಸ್ವಲ್ಪವೂ ಇಚ್ಛೆಯಿಲ್ಲವೆಂಬುದನ್ನು ಅರಿಯೋಣವಾಗಲಿ."[1]

ಇನ್ನೂ ಹಲವು—ನೂರಾರು—ಅರ್ಜಿಗಳು ಹೊರಟವು—ಧಣಿಗಳಿಗೆ ಸಲ್ಲಿಸಿದ ಅರ್ಜಿಗಳಲ್ಲ. ಇಂಥ ಅರ್ಜಿಗಳಿಂದ ಪ್ರಯೋಜನವಿಲ್ಲವೆಂದು ಇವನ್ನು ಶೀಘ್ರವೇ ಕೈ ಬಿಡಲಾಯಿತು. ಈಗ ಅರ್ಜಿ ಹೋದದ್ದು ಪಾರ್ಲಿಮೆಂಟಿಗೆ. ಈ ಅರ್ಜಿಗಳಲ್ಲಿ ಹಲವಕ್ಕೆ ಪಾರ್ಲಿಮೆಂಟು ಲಕ್ಷ್ಯ ಕೊಡಲಿಲ್ಲ. ಆದರೆ ಕೆಲವು ಗಮನ ಸೆಳೆದುವು. ಕಾರ್ಮಿಕ ವರ್ಗದ ಕಷ್ಟವನ್ನು ಕೊಂಚ ಪರಿಹರಿಸಲು ಶಾಸನ ಕಡತದಲ್ಲಿ ಆಗಲೇ ಕೆಲವು ಶಾಸನಗಳಿದ್ದುವು. ಈಗ ಈ ಅರ್ಜಿಗಳ ಫಲವಾಗಿ ಇನ್ನೂ ಹಲವು ಶಾಸನಗಳು ಜಾರಿಗೆ ಬಂದುವು. ತತ್ಪರಿಣಾಮವಾಗಿ ಶಾಸಕರ ಸಮಿತಿಗಳೂ ಈ ಬಗ್ಗೆ ಪರಿಶೀಲನೆ ನಡಸಿದುವು. ಕಾರ್ಮಿಕರು ಹೇಳಿದಷ್ಟೇ ಭೀಕರವಾಗಿ ಅವರ ಸ್ಥಿತಿ ಇರುವುದೆಂಬುದು ಈ ಪರಿಶೀಲನೆಗಳಿಂದ ಸ್ಪಷ್ಟವಾಯಿತು.

ಶಾಸನ ಕಡತದಲ್ಲಿ ಶಾಸನ ಇದ್ದರೆ ತೀರಿತೆ? ಇವು ವಾಸ್ತವವಾಗಿ ಜಾರಿಗೆ ಬಂದಾಗ ತಾನೆ ಇವುಗಳ ಫಲ? ಕಾರ್ಮಿಕರಿಗೆ ಇದು ಬೇಗ ವೇದ್ಯವಾಯಿತು. ಒಂದೇ ಶಾಸನವನ್ನು ತಮಗೆ ಒಂದು ಬಗೆಯಾಗಿಯೂ, ನೇಮಕ ಮಾಡುವ ವರ್ಗಕ್ಕೆ ಇನ್ನೊಂದು ಬಗೆಯಾಗಿಯೂ ಅನ್ವಯಿಸಬಹುದೆಂಬುದೂ ಇವರಿಗೆ ವೇದ್ಯವಾಯಿತು.

ಕಾರ್ಮಿಕರು ತಮ್ಮ ಫಿರ್ಯಾದನ್ನು ನ್ಯಾಯಾಲಯಕ್ಕೆ ತಂದಾಗ, ಇದನ್ನು ಕೇಳಬೇಕಾಗಿದ್ದ ನ್ಯಾಯಾಧೀಶನೇ ಕೆಲಸಗಾರರ ಧಣಿಯೂ ಆಗಿದ್ದ. ಇವನ ವಿರುದ್ಧವಾಗಿ ಇವನೇ

---

[1] J. L. and B. Hammond, *The Skilled Labourer*, 1760-1832, p. 110. Longmans, Green and Co., London, 1919.

ಆಕ್ಷೇಪಣೆ ಕೇಳಬೇಕಾಗುತ್ತಿತ್ತು. ಇಂಥ ಸಂದರ್ಭಗಳೂ ಇದ್ದುವು. ಆಗ ನ್ಯಾಯವಾದ ವಿಚಾರಣೆಗೆ ಎಡೆ ಎಲ್ಲಿತ್ತು ?

ಆದರೆ ವಿಚಾರಣೆಗೂ ಆರೋಪಿಗೂ ಇಂಥ ನೇರ ಸಂಬಂಧವೇ ಇರಬೇಕಾಗಿರಲಿಲ್ಲ. ಹಲವು ವೇಳೆ ಕೆಲಸಗಾರರನ್ನು ನೇಮಿಸಿಕೊಳ್ಳುತ್ತಿದ್ದ ವರ್ಗಕ್ಕೇ ಈ ನ್ಯಾಯಾಧೀಶನೂ ಸೇರಿದ್ದನೆಂಬುದೇ ಸಾಕು. ಅಥವಾ, ಇವರು ಈ ವರ್ಗಕ್ಕೇ ಸೇರಿರದಿದ್ದರೂ, ಒಂದೇ ವಿಚಾರದಲ್ಲಿ ಒಂದೇ ರೀತಿಯಾಗಿ ಆಲೋಚಿಸುತ್ತಿದ್ದರು ಈ ಮಂದಿ. ಕಾರ್ಮಿಕರ ಬಗ್ಗೆ ತುಚ್ಛ ಭಾವ. ಧಣಿಯ ಬಗ್ಗೆ ಗೌರವ ಭಾವ. ತಮ್ಮೆಡೆಗೆ ಎಸೆದ ರೊಟ್ಟಿಯ ತುಣುಕುಗಳಿಗಾಗಿ ಕಾರ್ಮಿಕರು ಕೃತಜ್ಞರಾಗಿರಬೇಕು. ಇದಕ್ಕಾಗಿ ಧಣಿಗಳು ಕೃತಜ್ಞತೆ ಸ್ವೀಕರಿಸಲು ಅರ್ಹರು—ಎಂಬ ಭಾವನೆಯನ್ನು ನ್ಯಾಯಾಧಿಪತಿಗಳು ಹೊಂದಿದ್ದರು. ಇಂಥ ಪೂರ್ವಾಗ್ರಹ ಪೀಡಿತ ನ್ಯಾಯಾಧಿಪತಿಗಳಿದ್ದಾಗ, ಇಂಥ ಸಂದರ್ಭದಲ್ಲಿ, ಈ ಪಗಡೆಯಾಟದಲ್ಲಿ ಕಾರ್ಮಿಕ ವರ್ಗದ ವಿರುದ್ಧ ಗರ ಬಿದ್ದಂತೆಯೇ. "ನಗರ ಶ್ರಮಜೀವಿ" ಎಂಬುದರಲ್ಲಿ ಇಬ್ಬರು ಮಹಾ ಇತಿಹಾಸಕಾರರು ಆ ಕಾಲದಲ್ಲಿ ಸಂಭವಿಸುತ್ತಿದ್ದುದನ್ನು ಹೀಗೆ ಸಂಗ್ರಹವಾಗಿ ಹೇಳಿದ್ದಾರೆ: "ಪಾರ್ಲಿಮೆಂಟು ಕಾರ್ಮಿಕ ವರ್ಗಕ್ಕೆ ಹೆಚ್ಚಾಗಿ ಏನನ್ನೂ ಬಿಟ್ಟು ಕೊಡಲಿಲ್ಲ, ಯಜಮಾನರಿಗೆ ಬೇಡದ ಶಾಸನ ಅನ್ವಯಿಸಲು ನ್ಯಾಯಾಧಿಪತಿಗಳು ನಿರಾಕರಿಸಿದ್ದರಿಂದ ಪಾರ್ಲಿಮೆಂಟು ಕೊಟ್ಟ ಕೆಲವೇ ರಿಯಾಯಿತಿಗಳೂ ಕೂಡ ನಿಸ್ಸಾರವಾದುವು....ಒಡೆಯರು ನ್ಯಾಯಕ್ಕೆ ತಲೆಬಾಗದಿದ್ದರೆ, ಅವರ ವಿಧೇಯತೆಯನ್ನು ಒತ್ತಾಯ ಪಡಿಸುವಂತೆ ಏನು ಮಾಡುವುದೂ ಸಾಧ್ಯವಿಲ್ಲವೆಂಬುದಾಗಿ ಬಹು ಮಂದಿ ನ್ಯಾಯಾಧಿಪತಿಗಳು ಭಾವಿಸಿಕೊಂಡು ಬಿಟ್ಟಿದ್ದರೆಂದು ಕಾಣುತ್ತದೆ....ಒಡೆಯರು ಶಾಸನಕ್ಕೆ ವಿಧೇಯರಾಗಿರುವಂತೆ ಅವರನ್ನು ಒಪ್ಪಿಸಲು ಸಾಧ್ಯವಿಲ್ಲದ್ದರಿಂದ, ಹೀಗಾಗಬೇಕೆಂದು ಬಯಸಿ ಅದಕ್ಕಾಗಿ ಯತ್ನಿಸಿದ ಜನರನ್ನೇ ಇವರು ಜೈಲಿಗೆ ಅಟ್ಟಲಾರಂಭಿಸಿದರು."[1]

ಇದು ಕೇವಲ ಈ ಕಾಲಕ್ಕೆ ಸಂಬಂಧಿಸಿದ ಒಂದು ಆಕಸ್ಮಿಕ ಘಟನೆಯಲ್ಲವೆಂದೂ, ಎಲ್ಲ ಕಾಲಕ್ಕೂ ಎಲ್ಲ ಬಂಡವಾಳ ಷಾಹಿ ರಾಷ್ಟ್ರಗಳಿಗೂ ಸಾಮಾನ್ಯವಾದ ಲಕ್ಷಣವಿದೆಂದೂ ಸೂಕ್ಷ್ಮದರ್ಶಿಯಾದ ಆಡಂ ಸ್ಮಿತ್ ನಂಬಿದ್ದ. ತಮ್ಮ ಈ ನಾಯಕನಿಂದ ತಾವು ಮಾಡುತ್ತಿದ್ದದ್ದಕ್ಕೆಲ್ಲಾ ಒಪ್ಪಿಗೆಯ ಮುದ್ರೆ ದೊರಕಿಸಿಕೊಳ್ಳಬೇಕೆಂದು ಆಶಿಸುತ್ತಿದ್ದ ಧಣಿಗಳು ಈತನ "ರಾಷ್ಟ್ರಗಳ ಸಂಪತ್ತು" ಪುಸ್ತಕದಲ್ಲಿನ ಈ ಮಾತುಗಳನ್ನು ದೀರ್ಘಕಾಲ ಎತ್ತಿ ಆಡದಿರಲು ಎಚ್ಚರಿಕೆ ವಹಿಸಿದ್ದರು: "ಆಸ್ತಿಯ ರಕ್ಷಣೆಗಾಗಿ ಸ್ಥಾಪಿತವಾದ ಪ್ರಜಾಸರಕಾರ ವಾಸ್ತವವಾಗಿ ಬಡವರ ವಿರುದ್ಧ ಧನಿಕರ ಕಾವಲಿಗಾಗಿ, ಆಸ್ತಿ ಹೀನರ ವಿರುದ್ಧ ಆಸ್ತಿವಂತರ ರಕ್ಷಣೆಗಾಗಿ ಸ್ಥಾಪಿತವಾಗಿದೆ."[2]

ತಮ್ಮ ಕಟು ಅನುಭವದಿಂದ ಕಾರ್ಮಿಕರು ಈ ಮಾತಿನ ಸತ್ಯ ಅರಿತುಕೊಂಡರು. ಅವರು ಇದಕ್ಕೇನು ಮಾಡಬೇಕಿತ್ತು ? ತೋರಿಕೆಗೆ ಸಹಜವೆನಿಸಿದ ಉಪಾಯವೊಂದು

---

[1] J. L. and B. Hammond, *op. cit.*, pp. 66, 67.
[2] Adam Smith, *op. cit.*, vol. II, p. 207.

ಅವರಿಗೆ ಹೊಳೆಯಿತು. ಮತ ಕೊಡುವ ಹಕ್ಕನ್ನು ತಾವೇನಾದರೂ ಗಳಿಸಿದರೆ, ಆಗ ಅವರು ಸರಕಾರ ಕೆಲವರಿಗಾಗಿ ಕೆಲವರದಾಗಿರುವ ಬದಲು ಹಲವರಿಗಾಗಿ ಹಲವರದಾಗುವಂತೆ ಮಾರ್ಪಡಿಸಲು ಶಾಸಕರನ್ನು ಒತ್ತಾಯ ಪಡಿಸಬಹುದಿತ್ತು. ಶಾಸಕರ ಆಯ್ಕೆಯಲ್ಲಿ ತಾವೂ ಮತ ನೀಡುವ ಹಕ್ಕು ಗಳಿಸಬೇಕೆಂದು ಅವರಿಗೆ ಎನಿಸಿತು. ಕಾರ್ಮಿಕರೇ ಶಾಸನ ಮಾಡಿದ್ದರೆ, ಆಗ ಅದು ಕಾರ್ಮಿಕರಿಗಾಗಿಯೇ ಇರುತ್ತಿತ್ತು. ಇವರ ಹಾದಿಯಲ್ಲಿ ಶಾಸನ ಹಲವು ತಡೆ ಒಡ್ಡಿತು. ಇದು ಒಡೆಯರಿಂದ ತಾನೆ ನಿರ್ಮಿತವಾಗಿದ್ದದ್ದು ? ಶಾಸನ ನಿರ್ಮಾಣದಲ್ಲಿ ತಮ್ಮ ಪಾತ್ರವೂ ಇದ್ದಿದ್ದರೆ ಆಗ ಕಾರ್ಮಿಕರಿಗೆ ಒಂದು ಅವಕಾಶ ದೊರಕುತ್ತಿತ್ತು. ನೆಲದೊಡೆಯರ ಹಿತವನ್ನು ಸುಂಕಗಳ ಮೂಲಕವೂ ರಕ್ಷಿಸುವುದು ಸರಕಾರಕ್ಕೆ ಸಾಧ್ಯವೆನಿಸಿದರೆ, ಕಾರ್ಮಿಕರ ಕೂಲಿ, ಕೆಲಸದ ವೇಳೆ ಇವುಗಳ ಬಗ್ಗೆಯೂ ಇದು ರಕ್ಷಣೆ ನೀಡಬಹುದಲ್ಲವೆ ? ಆದ್ದರಿಂದ ಈ ಜನ ಮತದಾನದ ಹಕ್ಕಿಗಾಗಿ ಹೋರಾಡಿದರು.

ಇಂದು ಸಂಯುಕ್ತ ಸಂಸ್ಥಾನದಲ್ಲೂ ಇಂಗ್ಲೆಂಡಿನಲ್ಲೂ ರಾಜಕೀಯ ಪ್ರಜಾಪ್ರಭುತ್ವ ಜಾರಿಯಲ್ಲಿದೆ. ಇದು ಅಲ್ಲಿನ ಜನಕ್ಕೆ ಎಷ್ಟು ಒಗ್ಗಿ ಹೋಗಿದೆಯೆಂದರೆ, ಇದು ಎಂದಿನಿಂದಲೂ ಇಲ್ಲಿ ಜಾರಿಯಲ್ಲಿದೆಯೆಂದು ಅಲ್ಲಿನ ಜನ ಭಾವಿಸುವರು. ಆದರೆ ಇದು ನಿಜವಲ್ಲ. ಅಮೆರಿಕದಲ್ಲೂ ಯೂರೋಪಿನ ದೇಶಗಳಲ್ಲೂ ಎಲ್ಲ ಜನಕ್ಕೂ ಮತದಾನದ ಹಕ್ಕನ್ನು ಆಳರಸರು ಮನಃಪೂರ್ವಕವಾಗಿ ನೀಡಲಿಲ್ಲ. ಚಳವಳಿಯ ಫಲವಾಗಿ ಲಭಿಸಿದ್ದು ಇದು. ಇಂಗ್ಲೆಂಡಿನಲ್ಲಿ ಕಾರ್ಮಿಕರು ಚಾರ್ಟಿಸ್ಟ್ ಚಳವಳಿಯ ಹಿಂದೆ ಇದಕ್ಕಾಗಿ ಸಾಲುಗಟ್ಟಿದರು. (ಕೂಲಿ ಜನರ ಸಾಮಾಜಿಕ ಔದ್ಯೋಗಿಕ ಸ್ಥಿತಿ ಉತ್ತಮಪಡಿಸಲು ೧೮೩೩ ರಿಂದ ೧೮೪೮ರ ವರೆಗೆ ಕೈಕೊಂಡ ಚಳವಳಿ ಇದು.) ಈ ಚಳವಳಿಯ ಮುಖ್ಯ ಗುರಿಗಳು ಇವು :

೧. ಸಾರ್ವತ್ರಿಕ ಮತದ ಹಕ್ಕು (ಗಂಡಸರಿಗೆ)
೨. ಕಾಮನ್ಸ್ ಸಭೆಗೆ ಚುನಾಯಿತರಾದ ಸದಸ್ಯರಿಗೆ ವೇತನ (ಇದರಿಂದ ಬಡವರೂ ಸದಸ್ಯತ್ವಕ್ಕಾಗಿ ಸ್ಪರ್ಧಿಸಲು ಸಾಧ್ಯವಾಗುತ್ತದೆ.)
೩. ಪಾರ್ಲಿಮೆಂಟಿನ ವಾರ್ಷಿಕ ಪುನರ್ರಚನೆ.
೪. ಶಾಸನ ಸಭೆಗೆ ಸ್ಪರ್ಧಿಸುವವರಿಗೆ ಆಸ್ತಿ ಇರಬೇಕೆಂಬ ನಿಯಮದ ರದ್ದು.
೫. ಬೆದರಿಸಿ ಮತಗಳಿಸಲು ಸಾಧ್ಯವಾಗದಂತೆ ಗುಪ್ತ ಮತದಾನ ಪದ್ಧತಿಯ ಜಾರಿ.
೬. ಒಂದೇ ಸಮನಾದ ಚುನಾವಣಾ ಕ್ಷೇತ್ರಗಳ ವಿಂಗಡಣೆ.

ಈ ಚಾರ್ಟಿಸ್ಟ್ ಚಳವಳಿಯೇ ಕ್ರಮೇಣ ದುರ್ಬಲವಾಗಿ ಅಳಿಸಿಹೋಯಿತು. ಆದರೂ ಕೊನೆಗೂ ಒಂದೊಂದಾಗಿ ಈ ಕೇಳಿಕೆಗಳೆಲ್ಲ ಲಭಿಸಿದುವು. (ಪ್ರತಿ ವರ್ಷವೂ ಪಾರ್ಲಿಮೆಂಟಿನ ಪುನರ್ರಚನೆಯ ಬೇಡಿಕೆ ಮಾತ್ರ ಈಡೇರಲಿಲ್ಲ.) ಚಾರ್ಟಿಸ್ಟರು ರಾಜಕೀಯ ಪ್ರಜಾಪ್ರಭುತ್ವಕ್ಕಾಗಿ ಹೋರಾಡಿದ್ದಕ್ಕೆ ಕಾರಣವುಂಟು. ಏಕೆಂದರೆ ಕಾರ್ಮಿಕರ ಸ್ಥಿತಿ ಉತ್ತಮಗೊಳ್ಳಬೇಕೆಂಬ ಚಳವಳಿಯಲ್ಲಿ ಇದೊಂದು ಅಸ್ತ್ರವಾಗಿತ್ತು. ಸ್ಟೀಫನ್ಸ್ ಎಂಬ ಮೆಥೊಡಿಸ್ಟನೊಬ್ಬ, ತನ್ನ ಶ್ರೋತೃಗಳನ್ನುದ್ದೇಶಿಸಿ ಈ ರೀತಿ ಹೇಳಿದ : "ಗೆಳೆಯರೆ, ಚಾರ್ಟಿಸ್ಟ್

ಚಳವಳಿ ರಾಜಕೀಯ ಚಳವಳಿಯಲ್ಲ. ಆ ಚಳವಳಿಯಲ್ಲಿ ಮತದಾನದ ಹಕ್ಕು ಗಳಿಸುವುದೇ ಮುಖ್ಯೋದ್ದೇಶ. ಚಾರ್ಟಿಸ್ಟ್ ಚಳವಳಿ ಹೊಟ್ಟೆಗೆ ಸಂಬಂಧಿಸಿದ್ದು, ಚಾರ್ಟರ್ ಎಂದರೆ ಒಳ್ಳೆಯ ವಸತಿ, ಒಳ್ಳೆಯ ಆಹಾರ, ಪಾನೀಯ, ಪುರೋಭಿವೃದ್ಧಿ, ಕಡಮೆ ಕೆಲಸದ ಕಾಲ."[1]

ಪಾದ್ರಿ ಸ್ಟೀಫನ್ಸ್ ಆಶಾವಾದಿ. ಕಾರ್ಮಿಕ ವರ್ಗ ರಾಜಕೀಯ ಪ್ರಜಾ ಪ್ರಭುತ್ವಕ್ಕಾಗಿ ನಡಸಿದ ಹೋರಾಟದಲ್ಲಿ ಗೆದ್ದಿತು. ಆದರೆ ಇದರಿಂದ ಬರುವುದೆಂದು ಈತ ನಿರೀಕ್ಷಿಸಿದ ಒಳ್ಳೆಯ ಫಲ ಬರಲಿಲ್ಲ. ಬಂದರೂ ಬಹು ಸ್ವಲ್ಪ—ಕೆಲಮಟ್ಟಿಗೆ. ಇದು ಬಂದದ್ದಾದರೂ ಮತದಾನದ ಹಕ್ಕಿನಿಂದಲೇ ಅಲ್ಲ. ಉತ್ತಮ ಸ್ಥಿತಿ, ಹೆಚ್ಚಿನ ಕೂಲಿ, ಕೆಲಸದ ಕಾಲದ ಇಳಿತಾಯ—ಇವನ್ನು ಪಡೆಯಲು ನೆರವಾದ ಮುಖ್ಯಕಾರಣವೆಂದರೆ ಬಹುಶಃ ಈ ಕಾರ್ಮಿಕರದೇ ಆದ ಸಂಘ. ಇವರ ಹಿತಕ್ಕಾಗಿ ಹೋರಾಟ ನಡಸಲು ಸ್ಥಾಪಿತವಾದ ಸಂಘ—ಕಾರ್ಮಿಕ ಸಂಘ.

ಕಾರ್ಮಿಕ ಸಂಘಗಳು ಹೊಸವಲ್ಲ. ಕೆಲಸಗಾರರ ಸಂಘಟನೆಯ ಅತ್ಯಂತ ಪ್ರಾಚೀನ ರೂಪಗಳು ಇವು. ಹಳೆಯ ಕಾರೇಗಾರರ ಸಂಘಗಳೇ ಮೂಲಸಂಸ್ಥೆಗಳು. ಕೈಗಾರಿಕೆಯಲ್ಲಿ ಬಂಡವಾಳದ ಪ್ರಾಮುಖ್ಯ ಹೆಚ್ಚಿದಾಗ, ಕಾರ್ಮಿಕರ ಸಂಘಗಳ ಸ್ವರೂಪ ಬದಲಾಯಿತು. ಹಳೆಯ ವೃತ್ತಿಸಂಘದ ಸ್ವರೂಪ ಹೋಗಿ ಇಂದಿನ ಕಾರ್ಮಿಕ ಸಂಘದ ಸ್ವರೂಪ ಬಂತು; ಒಂದು ಉದ್ಯಮದಲ್ಲಿನ ಕಾರ್ಮಿಕರೆಲ್ಲ ಒಂದಾಗಿ, ಉತ್ತಮ ಸ್ಥಿತಿ ಗಳಿಸಲು, ತಮ್ಮ ಹಿತ ರಕ್ಷಣೆಗಾಗಿ ಹೋರಾಡಲು, ಸ್ವಶಕ್ತಿಯನ್ನೇ ಅವಲಂಬಿಸಿ ನಿಲ್ಲುವ ಇಂದಿನ ಮಾದರಿಯ ಕಾರ್ಮಿಕ ಸಂಘದ ಉದಯವಾಯಿತು.

ಕಾರ್ಮಿಕ ಸಂಘಗಳು ಒಮ್ಮೆಲೇ ಹುಟ್ಟಿಕೊಂಡ ಸಂಸ್ಥೆಗಳಲ್ಲ. ವರ್ಗಹಿತ ಸಂಘಟನ ಶಕ್ತಿಯ ಕಲ್ಪನೆ ಬೆಳೆಯಲು ಬಹುಕಾಲವೇ ಬೇಕಾಯಿತು. ಈ ಕಲ್ಪನೆ ಬೆಳೆಯುವ ವರೆಗೂ ರಾಷ್ಟ್ರ ಮಟ್ಟದಲ್ಲಿ ನಿಜವಾದ ಸಂಘಟನೆ ಅಸಾಧ್ಯವಾಗಿತ್ತು. ಕೈಗಾರಿಕಾ ಕ್ರಾಂತಿ ಸಂಭವಿಸಿದ ಮೇಲೆ ಕಾರ್ಮಿಕ ಸಂಘ ಚಳವಳಿ ಪ್ರಚಂಡ ಪ್ರಗತಿ ಸಾಧಿಸಿತು. ಕೈಗಾರಿಕಾ ಕ್ರಾಂತಿಯಿಂದ ಕಾರ್ಮಿಕರು ನಗರಗಳಲ್ಲಿ ಕೇಂದ್ರೀಕರಿಸಿದರು; ರಾಷ್ಟ್ರಾದ್ಯಂತ ಸಂಘಟನೆ ಅಗತ್ಯವಾದ ಸಾರಿಗೆ ಸಂಪರ್ಕ ವ್ಯವಸ್ಥೆ ಉತ್ತಮಗೊಂಡಿತು. ತತ್ಫಲವಾಗಿ ಕಾರ್ಮಿಕ ಚಳವಳಿ ಅಗತ್ಯವೆನಿಸುವ ಪರಿಸ್ಥಿತಿಯ ನಿರ್ಮಾಣವಾಯಿತು. ವರ್ಗ, ವರ್ಗ ಭಾವನೆಗಳೂ ಸಹಕಾರ ಸಂಪರ್ಕಗಳ ಭೌತ ಸಾಧನಗಳೂ ಜನಿಸಲು ಕಾರಣವಾದ ಬಂಡವಾಳ ವ್ಯವಸ್ಥೆಯ ಬೆಳವಣಿಗೆಯೊಡನೆ ಕಾರ್ಮಿಕ ಸಂಘಟನೆಯೂ ಬೆಳೆಯಿತು. ಕೈಗಾರಿಕೆ ಅತ್ಯಂತ ಹೆಚ್ಚಾಗಿ ಬೆಳೆದಿರುವ, ಕಾರ್ಖಾನೆ ವ್ಯವಸ್ಥೆಯ ಫಲವಾಗಿ ಮಹಾ ನಗರಗಳು ಬೆಳೆದಿರುವ, ದೇಶಗಳಲ್ಲೇ ಕಾರ್ಮಿಕ ಸಂಘ ಚಳವಳಿಯೂ ಪ್ರಬಲವಾಗಿರುತ್ತದೆ. ಈ ಅಂಶವನ್ನು ೧೮೪೪ರಲ್ಲಿ ಫ್ರೆಡರಿಕ್ ಎಂಗೆಲ್ಸ್ ತೋರಿಸಿದ: "ಜನಸಾಂದ್ರತೆಯಿಂದ ಆಸ್ತಿವಂತರ ವರ್ಗಕ್ಕೆ ಪ್ರೋತ್ಸಾಹ ದೊರಕುತ್ತದೆ. ಈ ವರ್ಗ ಬೆಳೆಯುತ್ತದೆ. ಕಾರ್ಮಿಕರು ತಾವೆಲ್ಲ ಒಂದೆಂದು, ತಮ್ಮದೇ

[1] Quoted in Engels, *op. cit.*, p. 230.

ಪ್ರತ್ಯೇಕ ವರ್ಗವೆಂದು ಭಾವಿಸಲಾರಂಭಿಸುವರು. ವ್ಯಕ್ತಿಶಃ ದುರ್ಬಲರಾದರೂ, ಒಗ್ಗಟ್ಟಿನಲ್ಲಿ ಶಕ್ತಿಯಿದೆಯೆಂಬುದನ್ನು ಅವರು ಕಾಣಲಾರಂಭಿಸುವರು. ಬೂರ್ಷ್ವಾಸೀಯಿಂದ ಇವರು ಪ್ರತ್ಯೇಕಗೊಳ್ಳುವರು. ಕಾರ್ಮಿಕರಿಗೇ ವಿಶಿಷ್ಟವಾದ, ಇವರ ಜೀವನ ಸ್ಥಿತಿಗೆ ಅನುಗುಣವಾದ ಭಾವನೆಗಳು ಬೆಳೆಯುವುವು. ತಾವು ದಲಿತರೆಂಬ ಭಾವನೆ ಪ್ರಚೋದನೆಗೊಳ್ಳುವುದು. ಕಾರ್ಮಿಕರು ಸಾಮಾಜಿಕ ರಾಜಕೀಯ ಪ್ರಾಮುಖ್ಯ ಪಡೆಯುವರು. ಮಹಾ ನಗರಗಳು ಕಾರ್ಮಿಕ ಚಳವಳಿಗಳ ಉಗಮಸ್ಥಾನಗಳಾಗುವುವು. ಇಲ್ಲೇ ಕಾರ್ಮಿಕರು ಮೊಟ್ಟ ಮೊದಲಿಗೆ ತಮ್ಮ ಸ್ಥಿತಿ ವಿವೇಚನೆ ನಡಸಲಾರಂಭಿಸಿದ್ದು, ಇದನ್ನು ನಿವಾರಿಸಲು ಹೋರಾಟ ಆರಂಭಿಸಿದ್ದು. ಬೂರ್ಷ್ವಾಸೀ–ಕಾರ್ಮಿಕ ಘರ್ಷಣೆ ಮೊಟ್ಟ ಮೊದಲಿಗೆ ಸ್ಪಷ್ಟಗೊಂಡದ್ದು ಇಲ್ಲಿ. ಕಾರ್ಮಿಕ ಸಂಘಗಳು, ಚಾರ್ಟಿಸ್ಟ್ ಚಳವಳಿ, ಸಮಾಜವಾದ—ಎಲ್ಲಾ ಬೆಳೆದದ್ದು ಇಲ್ಲಿ."[1]

ಮೊದಲು ಇಂಗ್ಲೆಂಡಿನಲ್ಲಿ ಸಂಭವಿಸಿದ ಕೈಗಾರಿಕಾ ಕ್ರಾಂತಿ ಇತರ ದೇಶಗಳಿಗೂ ಹಬ್ಬಿತು. ಇದು ಹೊಸ ಹೊಸ ದೇಶಕ್ಕೆ ಇನ್ನೂ ನುಗ್ಗುತ್ತಿದೆ. ಎಲ್ಲ ದೇಶಗಳಲ್ಲೂ ಇದು ಇಂಗ್ಲೆಂಡಿನಲ್ಲಾದ ರೀತಿಯಲ್ಲೇ ಆಗುತ್ತಿಲ್ಲ. ಸ್ಥಿತಿಗತಿಗಳಲ್ಲಿ, ಧನಿಕರ ಧೋರಣೆಯಲ್ಲಿ, ಆಡಳಿತ ಯಂತ್ರ ಜಾರಿಗೆ ತಂದ ಸುಧಾರಣಾ ಶಾಸನಗಳಲ್ಲಿ—ಈ ವಿಚಾರಗಳಲ್ಲಿ ಒಂದೊಂದು ದೇಶವೂ ಭಿನ್ನ. ಆದರೆ ಒಂದೇ ಒಂದು ವಿಚಾರದಲ್ಲಿ ಈ ಎಲ್ಲ ದೇಶಗಳಲ್ಲೂ ಇಂಗ್ಲೆಂಡಿನ ಚರಿತ್ರೆಯೇ ಪುನರಾವರ್ತನೆಗೊಂಡಿದೆ. ಎಲ್ಲೆಲ್ಲೂ ಕಾರ್ಮಿಕ ಸಂಘಗಳ ಮೇಲೆ ಯುದ್ಧ ಸಾಗಿರುವುದಂತೂ ನಿಜ.

ಇದೊಂದು ಪುರಾತನ ಯುದ್ಧ. ಕಾರ್ಮಿಕರ ಸ್ಥಿತಿಗತಿ ಉತ್ತಮ ಪಡಿಸುವ ಉದ್ದೇಶದಿಂದ ಸ್ಥಾಪಿತವಾದ ಸಂಘಗಳು ಶಾಸನಬಾಹಿರವೆಂದು ಹದಿನಾಲ್ಕನೆಯ ಶತಮಾನದಷ್ಟು ಹಿಂದೆಯೇ ಘೋಷಿತವಾಗಿತ್ತು. ಇಲ್ಲಿಂದ ಮುಂದೆ ಪ್ರತಿ ಶತಮಾನದಲ್ಲೂ ಈ ಸಂಘಗಳನ್ನು ಹತ್ತಿಕ್ಕಲು ಶಾಸನ ಮುಂದೆ ಬಂತು. ೧೭೭೬ರಲ್ಲಿ ಆಡಂ ಸ್ಮಿತ್ ಈ ವಿಚಾರವಾಗಿ ಹೀಗೆ ಬರೆದ : "ದುಡಿಮೆಗೆ ಪ್ರತಿಯಾಗಿ ವಾಡಿಕೆಯಾದ ಕೂಲಿ ಎಷ್ಟೆಂಬುದು ಎಲ್ಲೆಲ್ಲೂ ಈ ಎರಡು ಪಕ್ಷಕ್ಕೂ ನಡುವೆ ಸಾಮಾನ್ಯವಾಗಿ ಏರ್ಪಟ್ಟ ಕರಾರಿಗೆ ಅನುಗುಣವಾಗಿರುತ್ತದೆ. ಈ ಎರಡು ಪಕ್ಷಗಳ ಹಿತವೂ ಪರಸ್ಪರ ವಿರುದ್ಧ. ಕಾರ್ಮಿಕರು ಸಾಧ್ಯವಾದಷ್ಟು ಹೆಚ್ಚು ಪಡೆಯಲಿಚ್ಛಿಸುವರು. ಯಜಮಾನರು ಆದಷ್ಟು ಕಡಮೆ ಕೊಡ ಬಯಸುವರು. ಕೂಲಿ ಹೆಚ್ಚಿಸಲು ಕಾರ್ಮಿಕರು ಒಟ್ಟಾಗಲೆತ್ನಿಸುವರು. ಇದನ್ನು ತಗ್ಗಿಸಲು ಯಜಮಾನರೂ ಒಂದಾಗುವರು.

"ಸಾಮಾನ್ಯ ಸಂದರ್ಭಗಳಲ್ಲಿ, ಈ ಎರಡು ಪಕ್ಷಗಳ ನಡುವಣ ವ್ಯಾಜ್ಯದಲ್ಲಿ ಯಾವ ಪಕ್ಷಕ್ಕೆ ಹೆಚ್ಚು ಅನುಕೂಲ ಇದೆಯೆಂಬುದನ್ನು ನಿರೀಕ್ಷಿಸುವುದು ಸುಲಭ....ಯಜಮಾನರ ಸಂಖ್ಯೆ ಕಡಮೆ. ಆದ್ದರಿಂದ ಇವರು ಬಹು ಸುಲಭವಾಗಿ ಒಂದಾಗುವರು. ಶಾಸನವೂ ಕೂಡ ಇವರ ಸಂಘಟನೆಗೆ ಅಧಿಕಾರ ನೀಡುತ್ತದೆ. ಹೀಗೆ ಮಾಡದಿದ್ದರೂ ಇವನ್ನು

[1] Engels, *op. cit.*, p. 122.

ನಿಷೇಧಿಸುವುದಂತೂ ಇಲ್ಲ. ಆದರೆ ಕಾರ್ಮಿಕರ ಸಂಘಟನೆಯನ್ನು ಇದು ನಿಷೇಧಿಸುತ್ತದೆ. ದುಡಿಮೆಯ ಬೆಲೆ ಇಳಿಸುವುದಕ್ಕಾಗಿ ಸಂಘ ಕಟ್ಟುವುದರ ವಿರುದ್ಧ ನಮ್ಮಲ್ಲಿ ಪಾರ್ಲಿಮೆಂಟಿನ ಶಾಸನವಿಲ್ಲ. ಆದರೆ ಇದನ್ನು ಹೆಚ್ಚಿಸುವ ಉದ್ದೇಶದ ಸಂಘಟನೆಯ ವಿರುದ್ಧ ಹಲವು ಶಾಸನಗಳಿವೆ."[1]

೧೭೭೬ರಲ್ಲಿ ಸ್ಮಿತ್ ಬರೆದ ಈ ಮಾತು ಜಗತ್ತಿನ ಪ್ರತಿಯೊಂದು ಬಂಡವಾಳ ರಾಜ್ಯದಲ್ಲೂ ನಿಜವಾಗಿತ್ತು. ಈಗಲೂ ಇದು ನಿಜ. ಉತ್ಪಾದಕರ ಸಂಘ, ಕಾರ್ಮಿಕ ಸಂಘ ಎರಡನ್ನೂ ಶಾಸನ ಬಹಿಷ್ಕರಿಸಿದ ಸಂದರ್ಭದಲ್ಲೂ ಕೂಡ, ಧಣಿಗಳ ವಿರುದ್ಧ ಶಾಸನವನ್ನು ಅನ್ವಯಿಸುತ್ತಿರಲಿಲ್ಲ. ಆದರೆ ನೌಕರರ ವಿರುದ್ಧವಾದದ್ದು ಜಾರಿಗೆ ಬರುತ್ತಿತ್ತು. ಇಂಗ್ಲೆಂಡಿನಲ್ಲಿ, ಫ್ರಾನ್ಸಿನಲ್ಲಿ, ಜರ್ಮನಿಯಲ್ಲಿ, ಸಂಯುಕ್ತ ಸಂಸ್ಥಾನದಲ್ಲಿ—ಇಲ್ಲೆಲ್ಲಾ ಕಾರ್ಮಿಕ ಸಂಘದ ಮೇಲೆ ಶಾಸನದ ಕೊಡಲಿ ಪೆಟ್ಟು ಬಿತ್ತು.

ಇಂಗ್ಲೆಂಡಿನಲ್ಲಿ ಸುಮಾರು ಕಾಲು ಶತಮಾನ ಕಾಲ ಕಾರ್ಮಿಕರು ತಮ್ಮ ಹಿತರಕ್ಷಣೆಗಾಗಿ ಸಂಘ ಕಟ್ಟಿಕೊಳ್ಳುವುದು ನಿಷಿದ್ಧವೆಂದು ಶಾಸನವಿತ್ತು. ಇವರು ಹೀಗೆ ಮಾಡಿದ್ದೇ ಆದರೆ, ಆಗ ನ್ಯಾಯಾಸ್ಥಾನದ ತೀರ್ಮಾನ ಥಟ್ಟನೆ ಅದರ ಮೇಲೆ ಬೀಳುತ್ತಿತ್ತು. "ಸ್ಟಾಕ್‌ಪೋರ್ಟಿನ ಒಂಬತ್ತು ಮಂದಿ ಟೋಪಿ ಕೆಲಸಗಾರರಿಗೆ ಪಿತೂರಿ ನಡಸಿದ್ದಕ್ಕಾಗಿ ೧೮೧೬ರಲ್ಲಿ ಎರಡು ವರ್ಷ ಸಜಾ ವಿಧಿಸಲಾಯಿತು. ನ್ಯಾಯಾಧಿಪತಿ (ಸರ್ ವಿಲಿಯಂ ಗ್ಯಾರೋ) ತನ್ನ ತೀರ್ಪನ್ನು ಉಪಸಂಹಾರ ಮಾಡುತ್ತಾ ಹೀಗೆ ಹೇಳಿದ: 'ಈ ಸುಖೀ ರಾಜ್ಯದಲ್ಲಿ ಶಾಸನದ ದೃಷ್ಟಿಯಲ್ಲಿ ಕಡುದೀನರೂ ಒಂದೇ, ಮಹಾ ವ್ಯಕ್ತಿಯೂ ಒಂದೇ. ಎಲ್ಲರಿಗೂ ಒಂದೇ ಬಗೆಯ ರಕ್ಷಣೆ. ಆದ್ದರಿಂದ ಸಂಘಟನೆಯ ಆವಶ್ಯಕತೆಯೇ ಇಲ್ಲ. ಸುಮಾರು ೧೦೦-೧೩೦ ಮಂದಿಗೆ ಉದ್ಯೋಗ ಕಲ್ಪಿಸುವ ಶ್ರೀಮಾನ್ ಜಾಕ್ಸನನಂಥವನು ಸಮಾಜೋಪಕಾರಿಯೆಂದು ಕೃತಜ್ಞತೆ ಅರ್ಪಿಸುವುದು ನಮ್ಮ ಧರ್ಮ—ಇದನ್ನು ನಾವು ಕಲಿಯಬೇಕು.'"[2]

ಸಂಘ ಸೇರುವ ಸಾಹಸ ಮಾಡಿದ ಈ ಕಾರ್ಮಿಕರಿಗೆ ಎರಡು ವರ್ಷ ಸಜಾ. ಇವರನ್ನು ಕೆಲಸಕ್ಕೆ ನೇಮಿಸಿಕೊಂಡಿದ್ದ ದಯಾವಂತ ಜಾಕ್ಸನ್ನನಿಗೆ ಹೊಗಳಿಕೆ. ನ್ಯಾಯಾಧಿಪತಿಯ ಮೊದಲನೆಯ ವಾಕ್ಯವನ್ನು ಮತ್ತೆ ಓದಿ. ಅವನು ಹೇಳಿದ್ದೇ ಅವನ ಮನಸ್ಸಿನಲ್ಲಿದ್ದ ಅರ್ಥವಾಗಿತ್ತೆ?

ಇಂಗ್ಲೆಂಡಿನಂತೆ ಫ್ರಾನ್ಸಿನಲ್ಲೂ ಕೂಲಿ ಹೆಚ್ಚಿಸಲು ಸಂಘ ಕಟ್ಟುವುದು ಶಾಸನ ಬಾಹಿರವಾಗಿತ್ತು. ನ್ಯಾಯಕ್ಕೆ ಇದಿರಾಗಿ ಸೆಣಸುವ ಹಠ ಮಾಡಿದ ಕಾರ್ಮಿಕರಿಗಾಗಿ ನ್ಯಾಯಾಧಿಪತಿಗಳು ವಿಷಾದಗೊಂಡರು. ಒಟ್ಟಿಗೆ ಕಲೆಯಬಾರದೆಂದು ಇವರು ಕಾರ್ಮಿಕರಿಗೆ ಉಪದೇಶಿಸಿದಂತೆ ಲೆವಾಸೀ ಹೀಗೆ ಹೇಳಿದ್ದಾನೆ. ಆದರೆ, ಒಡೆದರೆ ದೌರ್ಬಲ್ಯ, ಒಗ್ಗಟ್ಟಿನಲ್ಲಿ ಶಕ್ತಿ—ಎಂಬುದನ್ನು ಕಾರ್ಮಿಕರು ಕಂಡುಕೊಂಡಿದ್ದರು. ಆದ್ದರಿಂದ ಅವರು ತಮ್ಮ

---

[1] Adam Smith, *op. cit.*, vol. I, pp. 68, 69.

[2] Hammond, *The Town Labourer*, p. 209, footnote.

ಸಂಘ ಚಳವಳಿಯನ್ನು ಬಿಟ್ಟುಕೊಡದೆ ಮುಂದುವರಿಸಿದರು: "ನ್ಯಾಯಾಧಿಪತಿಗಳು ಶಿಕ್ಷೆ ವಿಧಿಸಿದರು, ಆದರೆ ಶಾಸನದ ಅಸ್ತ್ರವನ್ನು ಪೂರ್ತಿಯಾಗಿ ಪ್ರಯೋಗಿಸಲಿಲ್ಲ. 'ನ್ಯಾಯಾಸ್ಥಾನ ಉದಾರವಾಗಿ ವರ್ತಿಸಿದೆ' ಎಂದರು ಇವರು. 'ಆದರೆ ಇದು ನಿಮಗೆ ವಿವೇಕ ಕಲಿಸಲಿ. ಜ್ಞಾಪಕವಿರಲಿ: ಕೆಲಸದಿಂದ ಸುಖಪ್ರಾಪ್ತಿ, ಫಲಪ್ರಾಪ್ತಿ; ಸಂಘಟನೆಯಿಂದ ಕಾರಾಗೃಹ ಪ್ರಾಪ್ತಿ, ದಾರಿದ್ರ್ಯಪ್ರಾಪ್ತಿ' ಕಾರ್ಮಿಕರು....ಪಾಠ ಕಲಿಯಲಿಲ್ಲ. ಅವರು ನೆನಪಿನಲ್ಲಿಟ್ಟಿದ್ದದ್ದು ಇಷ್ಟು ಮಾತ್ರ: ೧೮೨೨ರ ಮುಷ್ಕರದಿಂದ ಅವರಿಗೆ ಕೂಲಿ ಘಂಟೆಗೆ ೩೫ ಸೆಂಟೈಮಿಗೆ ಹೆಚ್ಚಿತು. ೧೮೩೩ರ ಮುಷ್ಕರದಿಂದ ಇದು ೪೦ ಸೆಂಟೈಮಿಗೆ ಹೆಚ್ಚಿತು. ೧೮೪೫ರಲ್ಲಿ ಅವರು ಮುಷ್ಕರ ಹೂಡಿದಾಗ ಇದು ೫೦ ಸೆಂಟೈಮಿಗೆ ಏರಿತು."[1]

ತಮ್ಮ ಸ್ಥಿತಿ ಉತ್ತಮಗೊಳಿಸಿಕೊಳ್ಳಲು ಅಗತ್ಯವಾದ ಶಕ್ತಿಯನ್ನು ಕಾರ್ಮಿಕ ಸಂಘ ದೊರಕಿಸಿ ಕೊಡುವುದೆಂಬ ಸತ್ಯವನ್ನು ಜರ್ಮನಿಯಲ್ಲೂ ಕೂಡ ಕಾರ್ಮಿಕರು ಅರಿತರು. ೧೮೬೪ರಲ್ಲಿ ಬರ್ಲಿನಿನ ಮುದ್ರಣಕಾರ್ಯ ನಿರತರು ಪ್ರಷಿಯದ ಚೇಂಬರ್ ಆಫ್ ಡೆಪ್ಯುಟೀಸ್ ಸಭೆಗೆ ಹೀಗೆ ಪ್ರಾರ್ಥನಾ ಪತ್ರ ಸಲ್ಲಿಸಿದರು: "ಕಾರ್ಮಿಕ ವರ್ಗಗಳ ಸಾಮಾಜಿಕ ಜೀವನ ಸ್ಥಿತಿಯ ಸುಧಾರಣೆಯಾಗಬೇಕಾದರೆ ಮೊಟ್ಟ ಮೊದಲಾಗಿ ಕಾರ್ಮಿಕರ ಮೇಲೆ ಈಗಣ ಶಾಸನ ಕಡತವಲ್ಲಿ ವಿಧಿಸಿರುವ ನಿರ್ಬಂಧಗಳನ್ನು ವಿಸರ್ಜಿಸುವುದು ಅಗತ್ಯವೆಂಬುದು ನಮಗೆ ಚೆನ್ನಾಗಿ ಮನವರಿಕೆಯಾಗಿರುವುದರಿಂದ, ಕೆಳಗೆ ಸಹಿ ಹಾಕಿರುವ ಮುದ್ರಣ ವೃತ್ತಿಯ ಕಾರೇಗಾರರು ಮನವಿ ಮಾಡಿಕೊಳ್ಳುವುದೇನೆಂದರೆ: ವಸ್ತು ಸರಬರಾಯಿ, ಅದರ ಬೇಡಿಕೆ —ಇವುಗಳ ಪರಸ್ಪರ ಕ್ರಿಯೆಗೆ ಸಂಬಂಧಿಸಿದ ಆರ್ಥಿಕ ಸೂತ್ರದ ಅನ್ವಯದ ಪ್ರಕಾರ ಕಾರ್ಮಿಕನಿಗೆ ಕನಿಷ್ಠ ಜೀವನಾಧಾರವೂ ದೊರಕುತ್ತಿಲ್ಲವಾದುದರಿಂದಲೂ, ಕಾರ್ಮಿಕ ವೈಯಕ್ತಿಕವಾಗಿ ತನ್ನ ಕೂಲಿ ಹೆಚ್ಚಿಸಿಕೊಳ್ಳಲು ಸಾಧ್ಯವಿಲ್ಲವಾದುದರಿಂದಲೂ, ಆದ್ದರಿಂದ ನೀತಿ ನ್ಯಾಯಗಳೆರಡರ ದೃಷ್ಟಿಯಿಂದಲೂ ಸಂಘಟನೆಯ ಹಕ್ಕು ಆತನಿಗೆ ಸಲ್ಲಬೇಕಾದ್ದರಿಂದಲೂ, ೧೮೪೫ರ ಕೈಗಾರಿಕಾ ಶಾಸನದಲ್ಲಿರುವ ಕಾರ್ಮಿಕರ ನಿರುಪಾಧಿಕ ಸಂಘಟನೆಯ ನಿಷೇಧವನ್ನು ರದ್ದು ಮಾಡತಕ್ಕದ್ದು."[2]

ಎಲ್ಲೆಲ್ಲೂ ಇದೇ ಕತೆ. ತಮಗೆ ವ್ಯತಿರಿಕ್ತವಾದ ಅಡ್ಡಿ ಆತಂಕಗಳನ್ನು ತೊಡೆದು ಹಾಕಲು ಸಂಘಟನೆಯ ಹಕ್ಕಿಗಾಗಿ ವಾದ, ಹೋರಾಟ. ಅಮೆರಿಕದಲ್ಲಿ ಮೆಥೊಡಿಸ್ಟರ ಸಮಾಜ ಸೇವಾಸಂಘದ ೧೯೩೫ನೆಯ ವಾರ್ಷಿಕ ವರದಿಯಲ್ಲಿರುವ ಎರಡು ಅಂಶಗಳನ್ನು ಇಲ್ಲಿ ಉಲ್ಲೇಖಿಸಿದರೆ ಸಾಕು, ಸಂಘ ನಿರ್ಮಾಣಕ್ಕಾಗಿ ನಡೆದ ಹೋರಾಟ ಎಷ್ಟು ಉಗ್ರವಾಗಿತ್ತೆಂಬುದು ಅರಿವಾಗುತ್ತದೆ: "ಕಾರ್ಯಶೀಲ ಸಂಘ ಸದಸ್ಯರ ವಿರುದ್ಧ ಒಂದು ದುಷ್ಟ ಹಿಂಸಾತ್ಮಕ ಪ್ರಚಾರವೇ ಸಾಗುತ್ತಿದೆ....ಪ್ರತಿ ದಿನವೂ, ಮುಖವಾಡ ಧರಿಸಿದ ಪುಂಡರ ತಂಡವೊಂದು ಸಂಘದ ಸದಸ್ಯರಲ್ಲಿ ಯಾರನ್ನಾದರೂ ಹಿಡಿದು ಪ್ರಹರಿಸುತ್ತಲೇ

---

[1] E. Levasseur, *op. cit.*, vol. II, p. 241.

[2] H. Muller, *Geschichte der deutschen Gewerkschaften bis zum Jahre 1878*, Verlag Vorwärts, Berlin, 1918.

ಇದೆ. ಇದಕ್ಕೆ ಮೊದಲು ಆಹುತಿಯಾದವನ ಗತಿ ಹೀಗಾಯಿತು. ಆತನನ್ನು ನಗರದಿಂದ ಹದಿನೈದು ಮೈಲಿ ಆಚೆ ಕರೆದುಕೊಂಡು ಹೋದರು. ಅಲ್ಲಿ ಅವನನ್ನು ಸಾಯಬಡಿದು ಬಿಟ್ಟುಬಂದರು....ಇಂದಿನ ವರೆಗೂ ಐವರಿಗೆ ಬಲವಾದ ಪೆಟ್ಟು ಬಿದ್ದಿದೆ. ಇವರ ಪೈಕಿ ಕೊನೆಯವನು ಸಂಯುಕ್ತ ಸಂಘದ ಅಧ್ಯಕ್ಷ....

"ಉಳ್ಳವರ ಹಾಗೂ ಇಲ್ಲದವರ ನಡುವಣ ಘರ್ಷಣೆ ಬಹು ಶೀಘ್ರವಾಗಿ ಹಿಂಸಾತ್ಮಕ ಕೃತ್ಯಗಳಲ್ಲಿ ಪರ್ಯವಸಾನವಾಗುತ್ತಿದೆಯೆಂಬುದು ಎಲ್ಲ ದಾಖಲೆಗಳಿಂದಲೂ ಸ್ಪಷ್ಟವಾಗುತ್ತದೆ. ....ಕನಿಷ್ಠಪಕ್ಷ ಎಪ್ಪತ್ತುಮೂರು ಮಂದಿ ಕಾರ್ಮಿಕರೂ ಗೇಣಿದಾರರೂ, ನೀಗ್ರೋಗಳೂ ಈ ವರ್ಷದ ಆರ್ಥಿಕ ಘರ್ಷಣೆಗಳಲ್ಲಿ, ಜನರೇ ನ್ಯಾಯವಿರೋಧವಾಗಿ ವಿಧಿಸಿದ ದಂಡನೆಗಳಲ್ಲಿ —ಲಿಂಚಿಂಗ್‌ಗಳಲ್ಲಿ—ಮಡಿದರು. ಹೀಗೆ ಮಡಿದವರ ಪೈಕಿ ಒಬ್ಬನೂ ಧಣಿಯಿಲ್ಲ."[1]

ಆದರೆ ಕಾರ್ಮಿಕ ಸಂಘಗಳನ್ನು ನಾಶಪಡಿಸಲು ಕೈಕೊಂಡ ನ್ಯಾಯಾನ್ಯಾಯ ಕ್ರಮಗಳೆಲ್ಲ ವ್ಯರ್ಥವಾದುವು. ಕಾರ್ಮಿಕ ಸಂಘಗಳು ಉಳಿದುವು. ಇದೇನು ಸುಲಭವಾಗಿ ಆಗಲಿಲ್ಲ. ಇದಕ್ಕಾಗಿ ಸಂಘ ಸದಸ್ಯರು ಕಾರಾಗೃಹವಾಸ ಅನುಭವಿಸಿದರು. ಸಂಘದ ನಿಧಿಗೆ ಮುಟ್ಟುಗೋಲು ಬಿತ್ತು. 'ಸಹಾಯ ಸಂಘ', 'ಸಾಮಾಜಿಕ ಸಂಘ'ಗಳ ಹೆಸರಿನಲ್ಲಿ ಇವು ಭೂಗತವಾಗಿ ಕೆಲಸ ಮಾಡಬೇಕಾಗಿ ಬಂತು. ಮುಷ್ಕರ, ಕಾರ್ಮಿಕರು ಕೆಲಸಕ್ಕೆ ಹೋಗದಂತೆ ತಡೆ ಚಳವಳಿ (ಪಿಕೆಟಿಂಗ್) ಮುಂತಾದ ಅಸ್ತ್ರಗಳು ಮೊಂಡುಗೊಳಿಸಲ್ಪಟ್ಟುವು. ಆದರೂ ಕಾರ್ಮಿಕ ಸಂಘಗಳು ಇನ್ನೂ ಜೀವಂತವಾಗಿವೆ. ಕಾರ್ಮಿಕರು ತಮಗೆ ಬೇಕಾದುದನ್ನು—ಉತ್ತಮ ಜೀವನ ಮಟ್ಟವನ್ನು—ಪಡೆಯಲು ಇವೇ ಕಾರ್ಮಿಕರ ಅತ್ಯಂತ ಪ್ರಬಲೋಪಾಯ.

ಒಂದು ಶತಮಾನದ ಹಿಂದೆ ಇಂಗ್ಲೆಂಡಿನಲ್ಲಿ ಮಹಾ ಕವಿಯೊಬ್ಬ 'ಇಂಗ್ಲೆಂಡಿನ ಜನರಿಗೆ' ಎಂದು ಅವರನ್ನುದ್ದೇಶಿಸಿ ಒಂದು ಕವಿತೆ ರಚಿಸಿದ. ಕೈಗಾರಿಕಾ ಕ್ರಾಂತಿಯ ಫಲವಾಗಿ ಉಂಟಾದ ಪರಿಸ್ಥಿತಿಯನ್ನೂ ಇದಕ್ಕೆ ಕಾರ್ಮಿಕರು ಹೇಗೆ ಪ್ರತಿಕ್ರಿಯೆ ವ್ಯಕ್ತಪಡಿಸಿದರೆಂಬುದನ್ನೂ ವಿವರಿಸುವ ಈ ಅಧ್ಯಾಯಕ್ಕೆ ಈ ಮಹಾಕವಿಯ ಪದ್ಯವೇ ಉಪಸಂಹಾರವಾಗಲಿ, ಭರತ ವಾಕ್ಯವಾಗಲಿ :

ಇಂಗ್ಲೆಂಡಿನ ಜನರೇ, ಏಕೆ ಉಳುವಿರಿ ನೀವು
ಕೆಳಗೆ ತಳ್ಳುವ ನಿಮ್ಮ ಪ್ರಭುವಿಗಾಗಿ ?
ನಿಮ್ಮ ಪೀಡಕರುಡುವ ವಸನವನು ನೀವೇಕೆ
ಶ್ರದ್ಧೆಯಿಂದಲಿ ಮಡಿದು ನೇಯುವಿರಿ ಏಕೆ ?

ನಿಮ್ಮ ಬೆವರನು ಹರಿಸಿ ನಿಮ್ಮ ರಕ್ತವ ಹೀರಿ
ನಿಮಗೆ ನೆನಕೆಯ ಕೂಡ ಸಲ್ಲಿಸದ ಇವರ,

---

[1] Methodist Federation for Social Service, *The Social Questions Bulletin*, January, 1936.

ಅಲಸಿಗರ, ಆಜನ್ಮ ಮರಣಪರ್ಯಂತ
ಸಾಕಿ ವಸ್ತ್ರವ ತೊಡಿಸಿ ಕಾಪಿಡುವಿರೇಕೆ?

ಆಂಗ್ಲದೇಶವ ಜೇನು ನೊಣಗಳೇ, ನೀವೇಕೆ
ಅಸ್ತ್ರ ಸರಪಣಿ ಶಾಪ ನಿರ್ಮಿಸುತ್ತಿಹಿರಿ?
ಈ ಮದಡು ಸೋಮಾರಿಗಳು ನಿಮ್ಮ ಬಲ್ಮೆಯ ದುಡಿತ
ಫಲವ ಕೆಡಿಸಲು ಏಕೆ ಅನುವ ಮಾಡುವಿರಿ?

ನಿಮಗೇನು ವಿಶ್ರಾಂತಿಯಿಹುದೆ? ನೆಮ್ಮದಿ, ಶಾಂತಿ,
ನೆರಳು, ಆಹಾರ, ಇನ್ಪಿನಿನಿದಾದ ಸ್ಪರ್ಶ?
ನಿಮ್ಮ ನೋವಿಗೆ, ನಿಮ್ಮ ಕಣ್ಣೀರ ದುಡಿತಕ್ಕೆ
ಪ್ರತಿಯಾಗಿ ಕೊಳ್ಳಲಿಹ ಸರಕದಾವುದು? ಹೇಳಿ.

ಬಿತ್ತುವಿರಿ ನೀವು, ಫಸಲು ಬೇರೊಬ್ಬನಿಗೆ,
ಸಂಪತ್ತು ಅರಸುವಿರಿ ನೀವು, ಅದರ ಒಡೆಯನೊ ಬೇರೆ.
ನೇಯುವಿರಿ ನೀವು ಉಡುಪ, ಉಡುವವನು ಇನ್ನೊಬ್ಬ.
ಅಸ್ತ್ರರಚಕರು ನೀವು, ಧರಿಸುವವನಿನ್ನೊಬ್ಬ.

ಬಿತ್ತಿ ಬೀಜವ—ಫಸಲು ಪೀಡಕನಿಗಾಗದಿರಲಿ.
ಸಂಪತ್ತು ಅರಸಿ—ಠಕ್ಕ ಕಬಳಿಸದಿರಲಿ ಅದನು.
ಉಡುಪು ನೇಯಿರಿ—ಮತ್ತೆ ಸೋಮಾರಿಗೇಕೆ ಈ ತೊಡಿಗೆ?
ಅಸ್ತ್ರಗಳ ರಚಿಸಿ—ಆದರವು ನಿಮ್ಮ ರಕ್ಷಣೆಗಾಗಿ ಮಾತ್ರ.[1]

—ಪಿ. ಬಿ. ಷೆಲ್ಲಿ.

---

[1] *Shelley Complete Poetical Works*, edited by G. E. Woodberry, pp. 364, 365. Houghton Mifflin Company, 1901.

## ೧೭. ಯಾರ ನೈಸರ್ಗಿಕ ಸಿದ್ಧಾಂತ?

ವಸ್ತುಗಳು ಬೀಳುವುದು ಕೆಳಕ್ಕೆ, ಮೇಲಕ್ಕಲ್ಲ. ಕಿಟಕಿಯಿಂದಾಚೆಗೆ ನೆಗೆದರೆ ನಿಮಗೇ ನಾಗುವುದು ಬಲ್ಲಿರಾ? ಭೌತ ವಿಜ್ಞಾನಿಗಳು ಇದನ್ನು ವಿವರಿಸಿ ಉಪಕರಿಸಿದ್ದಾರೆ. ಭೌತ ಪ್ರಪಂಚವನ್ನು ನಿರ್ದೇಶಿಸುವ ನಾನಾ ನಿಸರ್ಗ ನಿಯಮಗಳ ಪೈಕಿ ಒಂದನ್ನು—ಆಕರ್ಷಣ ಶಕ್ತಿಯನ್ನು—ನ್ಯೂಟನ್ ಪ್ರತಿಪಾದಿಸಿದ್ದಾನೆ. ಈ ನೈಸರ್ಗಿಕ ಸೂತ್ರಗಳನ್ನು ಅರಿತಿರುವುದ ರಿಂದ ಉದ್ದಿಷ್ಟ ಗುರಿಯನ್ನು ಮುಟ್ಟಲು ಸೂಕ್ತ ಕ್ರಮ ಕೈಕೊಳ್ಳುವುದು ಸಾಧ್ಯವಾಗುತ್ತದೆ. ಇವನ್ನು ಕಡೆಗಣಿಸಿ ನಡೆದರೆ—ಅಥವಾ ಅರಿಯದೆ ನಡೆದರೆ—ಆಗುವ ಪರಿಣಾಮವನ್ನು ಅನುಭವಿಸಲೇಬೇಕು.

ಇದೇ ರೀತಿ, ಕೈಗಾರಿಕಾ ಕ್ರಾಂತಿಯ ಕಾಲದ ಅರ್ಥಶಾಸ್ತ್ರಜ್ಞರು ಹಲವು ಸೂತ್ರ ಗಳನ್ನು ರೂಪಿಸಿದರು. ಭೌತಪ್ರಪಂಚದಲ್ಲಿ ವಿಜ್ಞಾನಿಗಳು ಕಂಡುಹಿಡಿದ ಸೂತ್ರಗಳು ಎಷ್ಟು ಪ್ರಮಾಣಬದ್ಧವೋ, ತಮ್ಮ ಈ ಸಾಮಾಜಿಕ ಆರ್ಥಿಕ ಸೂತ್ರಗಳೂ ಅಷ್ಟೇ ಪ್ರಮಾಣಬದ್ಧವೆಂಬುದಾಗಿ ಇವರು ಹೇಳಿದರು. ತಾವು ಕಂಡದ್ದೇ ಸತ್ಯ—ಎಂದು ಇವರು ಹೆಮ್ಮೆಯಿಂದ ಬೀಗಿದರು. ಈ ನಿಯಮ ತಪ್ಪೇ, ಸರಿಯೇ—ಎಂಬ ವಿಚಾರವಾಗಿ ವಾದಿಸಲು ಅವರು ಇಚ್ಛಿಸಲಿಲ್ಲ. ತಮ್ಮ ಸೂತ್ರಗಳು ಸ್ಥಿರ, ಶಾಶ್ವತ. ಜನರು ವಿವೇಕಿ ಗಳಾಗಿದ್ದು, ಈ ಸೂತ್ರಗಳಿಗೆ ಅನುಸಾರವಾಗಿ ವರ್ತಿಸಿದರೆ ಒಳ್ಳೆಯದು. ಆದರೆ ಜನರು ಮೂರ್ಖರಾದರೆ, ಈ ನೈಸರ್ಗಿಕ ನಿಯಮಾನುಸಾರ ನಡೆಯದಿದ್ದರೆ, ಅವರೇ ಅದರ ಪರಿಣಾಮ ಭೋಗಿಸಬೇಕಾದೀತು.

ಸತ್ಯಾನ್ವೇಷಣೆಯ ಹಾದಿಯಲ್ಲಿ ಈ ಅರ್ಥಶಾಸ್ತ್ರಜ್ಞರು ತಮ್ಮ ಅನ್ವೇಷಣೆಯ ನೈಜ ಪರಿಣಾಮಗಳತ್ತ ಗಮನಕೊಟ್ಟಿರಬಹುದು, ಕೊಟ್ಟಿರದೆ ಇರಬಹುದು. ಆದರೆ ಈ ಜನ ರಕ್ತಮಾಂಸ ತುಂಬಿದ ಜನ; ಒಂದೆಡೆಯಲ್ಲಿ, ಒಂದು ಕಾಲದಲ್ಲಿ ಜೀವಿಸಿದ್ದ ಜನ. ಆದ್ದರಿಂದ ಆ ಕಾಲದಲ್ಲಿ, ಆ ಸ್ಥಳದಲ್ಲಿ ಉದ್ಭವಿಸಿದ ಸಮಸ್ಯೆಗಳನ್ನೇ ಇವರು ಚಿಂತಿಸಿದರು. ಇವರ ಸೂತ್ರಗಳು ಸಮಾಜದ ಪ್ರಬಲ ಗುಂಪುಗಳ ಮೇಲೆ ಪರಿಣಾಮ ಉಂಟು ಮಾಡಿ ದುವು. ಈ ಗುಂಪುಗಳು ತಂತಮ್ಮ ಹಿತಕ್ಕೆ ಅನುಗುಣವಾಗಿ ಈ ಸಿದ್ಧಾಂತಗಳನ್ನು ಪುರಸ್ಕರಿಸಿದುವು, ಅಥವಾ ತಿರಸ್ಕರಿಸಿದುವು. ಈ ಗುಂಪಿನ ಜನ ತಮ್ಮ ಮೂಗಿನ ನೇರಕ್ಕೆ ಈ ಸಿದ್ಧಾಂತಗಳ ಹಿಂದಣ "ಸತ್ಯ"ವನ್ನು ವೀಕ್ಷಿಸಿದರು.

ವಾಣಿಜ್ಯ ಕ್ರಾಂತಿಯ ಅನಂತರ ಉದಿಸಿದ ವರ್ತಕವರ್ಗದೊಡನೆ ಧನಪ್ರಭುತ್ವವಾದ ಉದಿಸಿದಂತೆ, ವ್ಯವಸಾಯ ಪ್ರಧಾನ ದೇಶವಾದ ಫ್ರಾನ್ಸಿನಲ್ಲಿ ನೆಲದ ಸಂಪತ್ತೇ ಮುಖ್ಯ ವೆಂಬ ಪ್ರಕೃತಿ ಪ್ರಾಧಾನ್ಯವಾದಿಗಳ ಸಿದ್ಧಾಂತ ಬೆಳೆದಂತೆ, ಇಂಗ್ಲೆಂಡಿನಲ್ಲಿ ಕೈಗಾರಿಕಾ ಕ್ರಾಂತಿಯ ಕಾಲದಲ್ಲಿ ಉದಿಸಿದ ಕೈಗಾರಿಕೋದ್ಯಮಿಗಳೊಡನೆ ಆ ಕಾಲಕ್ಕೆ ಅನು ಗುಣವಾದ ಆರ್ಥಿಕ ಸಿದ್ಧಾಂತಗಳು ಬಂದುವು. ಕೈಗಾರಿಕಾ ಕ್ರಾಂತಿಯ ಸಿದ್ಧಾಂತ

ಗಳನ್ನು "ಪ್ರೌಢ ಪ್ರಾಚೀನ ಅರ್ಥಶಾಸ್ತ್ರ" (ಕ್ಲಾಸಿಕಲ್ ಎಕನಾಮಿಕ್ಸ್) ಎನ್ನುತ್ತೇವೆ.

ಆಡಂ ಸ್ಮಿತ್ತನ ಕೆಲವು ಸಿದ್ಧಾಂತಗಳು ನಮಗೆ ಆಗಲೇ ಪರಿಚಿತ. ಪ್ರೌಢಪ್ರಾಚೀನ ಮತದ ಸ್ಥಾಪಕ ಇವನು—ಎನ್ನಬಹುದು. ರಿಕಾರ್ಡೋ, ಮಾಲ್ಥಸ್, ಜೇಮ್ಸ್ ಮಿಲ್, ಮ್ಯಕ್‌ಕುಲ್ಲಾಕ್, ಸೀನಿಯರ್ ಮತ್ತು ಜಾನ್ ಸ್ಟೂವರ್ಟ್ ಮಿಲ್ ಇವರು ಇತರ ಪ್ರೌಢಪ್ರಾಚೀನ ಅರ್ಥಶಾಸ್ತ್ರಜ್ಞರ ಪೈಕಿ ಪ್ರಮುಖರು. ಇವರೆಲ್ಲ ಸ್ಮಿತ್ತನೊಡನಾಗಲಿ, ಪರಸ್ಪರವಾಗಿಯಾಗಲಿ ಒಮ್ಮತ ಹೊಂದಿರಲಿಲ್ಲ. ಆದರೆ ಕೆಲವು ಮೂಲಭೂತ ಸಾಮಾನ್ಯ ತತ್ವಗಳ ಬಗ್ಗೆ ಇವರೆಲ್ಲರಲ್ಲೂ ಒಮ್ಮತವಿತ್ತು.

ಆ ಕಾಲದ ವ್ಯವಹಾರನಿರತರು ಈ ತತ್ವಗಳನ್ನು ಮನಸಾರ ಒಪ್ಪಿದ್ದರು. ಇದಕ್ಕೆ ಬಹು ಒಳ್ಳೆಯ ಕಾರಣವೂ ಇತ್ತು. ಈ ಪ್ರೌಢಪ್ರಾಚೀನ ಸಿದ್ಧಾಂತ ಇವರಿಗೆ ಬೇಕಾಗಿದ್ದದ್ದೇ ಆಗಿತ್ತು. ತಮ್ಮ ಕೃತಿಗೆ ಅನುಗುಣವಾದ ನೈಸರ್ಗಿಕ ಸೂತ್ರಗಳನ್ನು ಬಹು ಸುಲಭವಾಗಿ ಇವುಗಳಿಂದ ಇವರು ಆರಿಸಿಕೊಳ್ಳಬಹುದಿತ್ತು.

ಸುಸಮಯ ಯಾವಾಗ ಒದಗಿ ಬಂದೀತೆಂದು ಈ ಉದ್ಯಮಿಗಳು ಕಣ್ಣು ತೆರೆದು ಕುಳಿತಿದ್ದರು. ಇವರಿಗೆ ಬೇಕಾಗಿದ್ದದ್ದು ಲಾಭ. ಬಂದರು—ಪ್ರೌಢಪ್ರಾಚೀನ ಅರ್ಥಶಾಸ್ತ್ರಜ್ಞರು; ಇವರಿಗೆ ಯಾವುದರಲ್ಲಿ ಆಸಕ್ತಿಯಿದೆಯೋ ಅದೇ ಸರಿಯೆಂದೂ ಸೂಕ್ತವೆಂದೂ ಈ ಅರ್ಥಶಾಸ್ತ್ರಜ್ಞರು ಹೇಳಿದರು. ಅಷ್ಟೇ ಅಲ್ಲ. ಸಾಹಸಪ್ರಿಯ ಉದ್ಯಮಿಗೆ ಇನ್ನೂ ಹೆಚ್ಚಿನ ಪ್ರೋತ್ಸಾಹ ಸಿಕ್ಕಿತು. ತನ್ನ ಲಾಭದ ಗಳಿಕೆಗಾಗಿ ಈತ ವ್ಯಯಿಸುತ್ತಿದ್ದ ಪ್ರತಿಯೊಂದು ನಿಮಿಷವೂ ರಾಷ್ಟ್ರಹಿತಕ್ಕೂ ಅನುಗುಣವಾಗಿದೆಯೆಂದು ಈ ಅರ್ಥಶಾಸ್ತ್ರಜ್ಞರು ಹೇಳಿದರು. ಆಡಂ ಸ್ಮಿತ್ ಹೇಳಿದ ಮಾತು ಓದಿ. ದುಡ್ಡು ಗಳಿಸುವ ಲೋಭಿ ಅಂತರಾತ್ಮದ ಕೊರೆತಕ್ಕೆ ಸಿಲುಕಿ, ನಿದ್ದೆಗೆಡಬೇಕಾದ ಪ್ರಸಂಗ ಬಂದಾಗ ಆತನಿಗೆ ನೆಮ್ಮದಿ ನೀಡಬಹುದಾದ ಈ ಮಾತುಗಳನ್ನು ನೋಡಿ: "ತನ್ನಲ್ಲಿರಬಹುದಾದ ಬಂಡವಾಳವನ್ನೆಲ್ಲಾ ಅತ್ಯಂತ ಸಮರ್ಪಕ ರೀತಿಯಲ್ಲಿ ಹೂಡುವ ಹಾದಿಯನ್ನು ಕಂಡು ಹಿಡಿಯುವ ಯತ್ನದಲ್ಲೇ ಪ್ರತಿಯೊಬ್ಬ ವ್ಯಕ್ತಿಯೂ ನಿರತನಾಗಿರುತ್ತಾನೆ. ಸಮಾಜದ ಹಿತವಲ್ಲ—ತನ್ನ ಹಿತವೇ ಈತನ ಗುರಿ. ಆದರೆ ತನ್ನ ಹಿತದ ನಿರೀಕ್ಷಣೆಯಲ್ಲಿ ಈತ ಸಹಜವಾಗಿ ಇಡೀ ಸಮಾಜದ ಹಿತಕ್ಕೆ ತಕ್ಕ ರೀತಿಯಲ್ಲಿ ಹಣ ಹೂಡುತ್ತಾನೆ ಇದು ಅಂತ್ಯ ಪರಿಣಾಮ."[1] ವಿಷಯ ಅರ್ಥವಾಯಿತೆ?

ವ್ಯಕ್ತಿ ಹಿತವೇ ಸಮಾಜ ಹಿತ, ಇವೆರಡಕ್ಕೂ ಗಂಟು. ಪ್ರತಿವಿಜ್ಞಾನಿಗೂ ಸಂಪೂರ್ಣ ಸ್ವಾತಂತ್ರ್ಯ ಕೊಡಿ. ಸಾಧ್ಯವಾದಷ್ಟು ಲಾಭಗಳಿಸಬೇಕೆಂದು ಆತನಿಗೆ ಹೇಳಿ. ಆತನ ಸ್ವಂತ ಹಿತದ ಮಾತನ್ನಾಡಿ. ಕೊನೆಗೆ ಏನು ಪರಿಣಾಮ? ಇಡೀ ಸಮಾಜವೇ ಪ್ರಗತಿ ಹೊಂದುವುದು. ನಿಮ್ಮ ಒಳಿತಿಗಾಗಿ ಶ್ರಮಿಸಿ. ಇಡೀ ಸಮಾಜದ ಹಿತವನ್ನೇ ಸಾಧಿಸುವಿರಿ. ಹೆಚ್ಚು

---

[1] Adam Smith, *op. cit.*, vol. I, p. 419.

ಹೆಚ್ಚು ಲಾಭದ ಬೇಟೆಗೆ ಸಜ್ಜಾಗಿ ನಿಂತ ಉದ್ಯಮಿಗೆ ಎಂಥ ಸದವಕಾಶ! ರಥ ಸಾಗಲಿ. ದಾರಿ ಬಿಡಿ.

ಸರಕಾರ ಕಾರ್ಮಿಕರ ದುಡಿಮೆಯ ಕಾಲ ಕೂಲಿಗಳನ್ನು ನಿಬಂಧನೆಗೊಳಪಡಿಸಬೇಕೆ? ಪ್ರೌಢ ಪ್ರಾಚೀನ ಅರ್ಥಶಾಸ್ತ್ರಜ್ಞರು ಹೇಳಿದರು—ಹೀಗೆ ಮಾಡುವುದರಿಂದ ನೈಸರ್ಗಿಕ ನಿಯಮದ ನಡುವೆ ಪ್ರವೇಶಿಸಿದಂತೆ; ಆದ್ದರಿಂದ ಇದು ನಿಷ್ಫಲ.

ಹಾಗಾದರೆ ಸರಕಾರದ ಕರ್ತವ್ಯವೇನು? ಶಾಂತಿ ಪಾಲನೆ, ಆಸ್ತಿ ರಕ್ಷಣೆ, ಶತ್ರು ನಿವಾರಣೆ.

ಸ್ಪರ್ಧೆಯೇ ಕಾಲಧರ್ಮ. ನೀತಿ ಮುಖ್ಯವಲ್ಲ. ದುರ್ಬಲರ, ಅಸಮರ್ಥರ ನಿರ್ಮೂಲ; ಬಲಿಷ್ಠರ, ಸಮರ್ಥರ ವಿಜಯ—ಇದು ಸ್ಪರ್ಧೆಯ ನಿಶ್ಚಿತ ಫಲ. ಬೆಲೆ ಹೆಚ್ಚಿಸಲು ಬಂಡವಾಳಿಗರ ಏಕಸ್ವಾಮ್ಯವಾಗಲಿ, ಕೂಲಿ ಹೆಚ್ಚಿಸಲು ಕಾರ್ಮಿಕ ಸಂಘಗಳ ಏಕಸ್ವಾಮ್ಯವಾಗಲಿ, ನೈಸರ್ಗಿಕ ನಿಯಮಕ್ಕೆ ವ್ಯತಿರಿಕ್ತ—ಎಂಬುದು ಸ್ವಯಂ ವೇದ್ಯ.

ಈ ಸ್ಥೂಲ ತತ್ವಗಳನ್ನು ಆಡಂ ಸ್ಮಿತ್ತನೇ ಧನಪ್ರಭುತ್ವವಾದಿ ನಿಬಂಧನೆಗಳಿಗೆ, ನಿರ್ಬಂಧಗಳಿಗೆ, ಉತ್ತರವಾಗಿ ರೂಪಿಸಿದ್ದನೆಂಬುದು ನಿಮ್ಮ ನೆನಪಿನಲ್ಲಿರಬಹುದು. ೧೭೭೬ರಲ್ಲಿ, ಕೈಗಾರಿಕಾ ಕ್ರಾಂತಿಯ ಆದಿಕಾಲಕ್ಕೆ ಸರಿಯಾಗಿ, ಆತ ಈ ಮಹಾಗ್ರಂಥ ಬರೆದ. ಈ ಸಿದ್ಧಾಂತಗಳನ್ನು ಸ್ವೀಕರಿಸಿ, ವಿಸ್ತರಿಸಿ, ಜನಪ್ರಿಯಗೊಳಿಸಿದ ಪ್ರೌಢಪ್ರಾಚೀನ ಅರ್ಥಶಾಸ್ತ್ರಜ್ಞರು ತಮ್ಮ ಕೃತಿಗಳನ್ನು ರಚಿಸಿದ್ದಾದರೂ ಕೈಗಾರಿಕಾ ಕ್ರಾಂತಿಯ ಉತ್ಕರ್ಷೆಯ ಕಾಲದಲ್ಲಿ—ಪದಾರ್ಥೋತ್ಪತ್ತಿ ಹೆಚ್ಚುತ್ತಿದ್ದ, ಬಂಡವಾಳಿಗ ವರ್ಗ ಅಧಿಕಾರಾರೂಢವಾಗುತ್ತಿದ್ದ ಕಾಲದಲ್ಲಿ. ಈ ಅರ್ಥಶಾಸ್ತ್ರಜ್ಞರು ಆಡಂ ಸ್ಮಿತ್ತನ ಸಿದ್ಧಾಂತಗಳ ಜತೆಗೆ ತಮ್ಮವೇ ಆದ—ಆ ಕಾಲದ ಸ್ಥಿತಿಗತಿಗಳಿಗೆ ಒಪ್ಪುವ—ನೈಸರ್ಗಿಕ 'ಸೂತ್ರ'ಗಳನ್ನು ರಚಿಸಿದರು.

ಥಾಮಸ್ ಆರ್. ಮಾಲ್ಥಸ್ ಬರೆದ 'ಜನಸಂಖ್ಯೆಯ ಸಿದ್ಧಾಂತ ಕುರಿತ ಪ್ರಬಂಧ' ಆ ಕಾಲದ ಅತ್ಯಂತ ಪ್ರಸಿದ್ಧ ಪುಸ್ತಕಗಳಲ್ಲೊಂದು. ೧೭೯೮ರಲ್ಲಿ ಪ್ರಥಮವಾಗಿ ಈ ಪುಸ್ತಕ ಪ್ರಕಟವಾಯಿತು. ಷೆಲ್ಲಿಯ ಮಾವ ವಿಲಿಯಂ ಗಾಡ್ವಿನ್ ಬರೆದ ಒಂದು ಪುಸ್ತಕಕ್ಕೆ ಕೊಟ್ಟ ಜವಾಬು ಈ ಪುಸ್ತಕ. ಗಾಡ್ವಿನ್ನನ 'ರಾಜಕೀಯ ನ್ಯಾಯಪರಿಶೀಲನೆ' ಎಂಬ ಪುಸ್ತಕ ಪ್ರಕಟವಾದದ್ದು ೧೭೯೩ರಲ್ಲಿ. ಎಲ್ಲ ಸರಕಾರಗಳೂ ಪಾಪದ ಪೀಳಿಗೆಗಳು. ನ್ಯಾಯಪರನಾಗಿ ನಡೆದಾಗ ಮಾತ್ರ ಮಾನವನ ಪ್ರಗತಿ, ಸುಖಪ್ರಾಪ್ತಿ. ಹೀಗೆಂದು ಗಾಡ್ವಿನ್ ಹೇಳಿದ. ಗಾಡ್ವಿನ್ನನ ಈ ಅಪಾಯಕಾರಿ ನಂಬಿಕೆಯನ್ನು ಪ್ರತಿಭಟಿಸ ಬಯಸಿದ, ಮಾಲ್ಥಸ್. ಮಾನವನ ವಿಧಿ ಉತ್ತಮಗೊಳ್ಳಲು ಸಾಧ್ಯವಿಲ್ಲ. ಇದ್ದದ್ದರಲ್ಲೇ ಮನುಷ್ಯ ತೃಪ್ತಿಹೊಂದಬೇಕು. ಫ್ರೆಂಚರಂತೆ ಕ್ರಾಂತಿ ಸಾಧಿಸಲು ಯತ್ನಿಸುವುದು ಹೊಲ್ಲ. ಹೀಗೆಂದು ಮಾಲ್ಥಸ್ ವಾದಿಸಿದ.

ಗಾಡ್ವಿನ್ನನ ಮತವನ್ನು ಟೀಕಿಸಿ ಅವನು ಬರೆದಿರುವ ಮಾತು ಇದು: "ನಾಗರಿಕ ಸಮಾಜದ ಎಲ್ಲ ಅನೀತಿ ಸಂಕಟಗಳಿಗೂ ಮಾನವ ನಿರ್ಮಿತ ಸಂಸ್ಥೆಗಳೇ ಕಾರಣವೆಂಬುದಾಗಿ

ಗಾಡ್ವಿನ್ನನ ಭಾವನೆ. ಇಡೀ ಗ್ರಂಥದ ಉದ್ದಕ್ಕೂ ಈ ತಪ್ಪುಭಾವನೆ ಹರಿದಿದೆ. ರಾಜಕೀಯ ನಿಬಂಧನೆ, ಅನೂಚಾನವಾಗಿ ಬಂದ ಆಸ್ತಿ ವ್ಯವಸ್ಥೆ—ಇವೆರಡೂ ಆತನ ದೃಷ್ಟಿಯಲ್ಲಿ ಎಲ್ಲ ಅನಿಷ್ಟದ ಮೂಲ, ಮಾನವನನ್ನು ಅಧಃಪತನಗೊಳಿಸುವ ಎಲ್ಲ ಅಪರಾಧಗಳ ಹೊಲೆಮನೆ. ನಿಜಪರಿಸ್ಥಿತಿ ಹೀಗಿದ್ದರೆ, ಜಗತ್ತಿನ ಅನೀತಿಯನ್ನೆಲ್ಲ ತೊಲಗಿಸುವುದು ಅಸಾಧ್ಯವೇನಲ್ಲ. ವಿವೇಚನೆಯೇ ಈ ಮಹಾ ಉದ್ದೇಶದ ಉಚಿತ ಹಾಗೂ ಸಮರ್ಥ ಉಪಾಯವೆನಿಸ ಬಹುದು. ಆದರೆ ಇದು ನಿಜವಲ್ಲ. ಮಾನವ ನಿರ್ಮಿತ ಸಂಸ್ಥೆಗಳೇ ಮಾನವಕುಲದ ಸಹಜ ಸ್ಪಷ್ಟ ಶತ್ರುಗಳೆಂದು ತೋರಿದರೂ, ವಾಸ್ತವವಾಗಿ ಈ ಸಂಸ್ಥೆಗಳದು ಬಹು ಲಘುವಾದ ತೋರ್ಕೆಯ ವ್ಯವಸ್ಥೆ. ಮಾನವ ಜೀವನ ಪ್ರವಾಹವನ್ನೆಲ್ಲ ಬಗ್ಗಡಗೊಳಿಸಿ ಅಶುದ್ಧಿಗೊಳಿಸುವ ಆಂತರಿಕ ಕಾರಣಗಳು ಬೇರೆ ಇವೆ. ಇವು ಕೇವಲ ಮೇಲ್ಮೈಯ ಮೇಲೆ ತೇಲುವ ಪುಕ್ಕ."[1]

ಮಾನವ ಕುಲಕ್ಕೆ ಸಂಕಟಕಾರಕವಾದ ಈ ಆಂತರಿಕ ಕಾರಣಗಳಾದರೂ ಯಾವುವು? ಜನ ಬದುಕಲು ಆಹಾರ ಅಗತ್ಯ. ಆದರೆ ಆಹಾರೋತ್ಪತ್ತಿ ಅಧಿಕವಾಗುವುದಕ್ಕಿಂತ ವೇಗವಾಗಿ ಜನಸಂಖ್ಯೆ ಹೆಚ್ಚುತ್ತದೆ. ಇದು ಮಾಲ್ಥಸನ ಉತ್ತರ. ತತ್ಫಲವಾಗಿ ಪದೇ ಪದೇ ಒದಗುವ ಸ್ಥಿತಿ ಇದು: ಇರುವ ಆಹಾರವನ್ನು ತಿನ್ನಬಹುದಾದ್ದಕ್ಕಿಂತ ಹೆಚ್ಚು ಬಾಯಿಗಳಿರುತ್ತವೆ. "ಜನಸಂಖ್ಯೆಯನ್ನು ತಡೆಯದಿದ್ದರೆ ಅದು ಜ್ಯಾಮಿತೀಯ ಪ್ರಮಾಣದಲ್ಲಿ ಹೆಚ್ಚುತ್ತದೆ. ಆಹಾರವಾದರೋ, ಗಣಿತ ಪ್ರಮಾಣದಲ್ಲಿ ಅಧಿಕವಾಗುತ್ತದೆ....ಇದರಿಂದ ಉದರಂಭರಣ ಪದೇ ಪದೇ ಕಷ್ಟವೆನಿಸಿ, ಜನಸಂಖ್ಯೆಯ ಬೆಳವಣಿಗೆಗೆ ತಡೆ ಬೀಳುತ್ತಿರುತ್ತದೆ. ಈ ಕಷ್ಟ ಎಲ್ಲಾದರೂ ಅನುಭವಕ್ಕೆ ಬರಲೇಬೇಕು. ಮಾನವಕುಲದ ದೊಡ್ಡಭಾಗ ಇದರ ತೀವ್ರತೆ ಯನ್ನು ಅನುಭವಿಸಲೇಬೇಕು....

"ಈ ದ್ವೀಪದ (ಇಂಗ್ಲೆಂಡಿನ) ಜನಸಂಖ್ಯೆ ಎಪ್ಪತ್ತು ಲಕ್ಷ ಎಂದು ಅಂದಾಜು. ಈ ಸಂಖ್ಯೆಯ ಜನರ ಸಂರಕ್ಷಣೆಗೆ ಸಾಕಷ್ಟಿದೆ ನಮ್ಮ ಆಹಾರ—ಎಂದಿಟ್ಟುಕೊಳ್ಳೋಣ. ಮೊದಲ ಇಪ್ಪತ್ತೈದು ವರ್ಷಗಳಲ್ಲಿ ಈ ಜನಸಂಖ್ಯೆ ದ್ವಿಗುಣವಾಗುತ್ತದೆ, ೧೪೦ ಲಕ್ಷವಾಗುತ್ತದೆ. ಜನಸಂಖ್ಯೆಯ ಈ ಪ್ರಗತಿಗೆ ಅನುಗುಣವಾಗಿಯೆ ಇರುತ್ತದೆ ಆಹಾರೋತ್ಪನ್ನ—ಉದರಂಭರಣ ಸಾಮಗ್ರಿ. ಮುಂದಣ ಇಪ್ಪತ್ತೈದು ವರ್ಷದಲ್ಲಿ ಜನಸಂಖ್ಯೆ ೨೮೦ ಲಕ್ಷ ವಾಗುತ್ತದೆ. ಆದರೆ ೨೧೦ ಲಕ್ಷ ಜನಕ್ಕೆ ಮಾತ್ರ ಸಾಕಾಗುವಷ್ಟು ಆಹಾರೋತ್ಪನ್ನವಾಗು ತ್ತದೆ. ಮುಂದಣ ಇಪ್ಪತ್ತೈದು ವರ್ಷಕಾಲದಲ್ಲಿ ಜನಸಂಖ್ಯೆ ೫೬೦ ಲಕ್ಷವಾಗುತ್ತದೆ. ಇದರ ಅರ್ಧದಷ್ಟು ಜನಕ್ಕೆ ಮಾತ್ರ ಸಾಕಾಗುವಷ್ಟು ಆಹಾರ ಲಭಿಸುತ್ತದೆ. ಮೊದಲನೆಯ ಶತಮಾನ ಸಮಾಪ್ತಿಯಾಗುವ ವೇಳೆಗೆ ಜನಸಂಖ್ಯೆ ೧೧೨೦ ಲಕ್ಷ, ಒದಗಿ ಬರುವ ಆಹಾರ ಸಾಮಗ್ರಿ ೩೫೦ ಲಕ್ಷಕ್ಕೆ ಮಾತ್ರ. ಎಂದರೆ ಉಳಿದ ೭೭೦ ಲಕ್ಷಕ್ಕೆ ಯಾವ ಜೀವನೋ ಪಾಯವೂ ಇಲ್ಲ."[2]

---

[1] T. R. Malthus, *An Essay on the Principle of Population*, 1st ed., pp. 176, 177. J. Johnson, London, 1798.

[2] *Ibid.*, pp. 14, 23, 24.

ಆದರೆ ವಾಸ್ತವವಾಗಿ ಹೀಗಾಗುವುದಿಲ್ಲ—ಎಂದ ಮಾಲ್ಥಸ್. ಏಕೆಂದರೆ (ಸಾಂಕ್ರಾಮಿಕ ರೋಗಾದಿ ಉಪದ್ರವಗಳ ರೂಪದಲ್ಲಿ) ಮರಣದೇವತೆ ಪ್ರವೇಶಿಸುತ್ತದೆ ; ಅಧಿಕಗೊಳ್ಳುತ್ತಿರುವ ಜನರ ರೂಪದಲ್ಲಿ ತನ್ನ ಸುಂಕ ತೆಗೆದುಕೊಳ್ಳುತ್ತದೆ. ಸರಬರಾಯಿ ಆಗುತ್ತಿರುವ ಆಹಾರಕ್ಕೆ ಸಮನಾಗುತ್ತದೆ ಜನಸಂಖ್ಯೆ. "ಜನಸಂಖ್ಯೆಯ ಮೇಲುಗೈ ದಮನವಾಗುತ್ತದೆ. ದುಃಖ ಪಾಪಗಳ ಮೂಲಕ ಜನಸಂಖ್ಯೆ ವಾಸ್ತವವಾಗಿ ಆಹಾರ ಸಾಧನಕ್ಕೆ ಸರಿಗಟ್ಟಿ ನಿಲ್ಲುವಂತಾಗುತ್ತದೆ."[1]

ಆದ್ದರಿಂದ ಮಾಲ್ಥಸ್ ಹೇಳಿದ: ಕಾರ್ಮಿಕ ವರ್ಗ ದಾರಿದ್ರ್ಯಸ್ಥಿತಿಯಲ್ಲಿರುವುದಕ್ಕೆ ಕಾರಣ ಲಾಭದ ಮಟ್ಟ ಹೆಚ್ಚಾಗಿರುವುದಲ್ಲ. (ಇದು ಮಾನವ ಕೃತ ಕಾರಣ); ಆಹಾರೋತ್ಪನ್ನ ಹೆಚ್ಚುವುದಕ್ಕಿಂತ ಶೀಘ್ರವಾಗಿ ಜನಸಂಖ್ಯೆ ಬೆಳೆಯುವುದೇ ಆಗಿದೆ. (ನೈಸರ್ಗಿಕ ನಿಯಮ). ಹಾಗಾದರೆ ಬಡ ಜನರ ಸ್ಥಿತಿ ಉತ್ತಮಗೊಳಿಸಲು ಏನೂ ಮಾಡುವುದು ಸಾಧ್ಯವಿಲ್ಲವೆ ? "ಯಾವ ಉಪಾಯವೂ ಇಲ್ಲ," ಎಂದ ಮಾಲ್ಥಸ್, ತನ್ನ ಪುಸ್ತಕದ ಪ್ರಥಮ ಆವೃತ್ತಿಯಲ್ಲಿ. "ಅಸಾಧಾರಣ ಪ್ರಗತಿಯ ಹಾದಿಯಲ್ಲಿರುವ ಅತಿದೊಡ್ಡ ವಿಘ್ನವನ್ನು ನಾವು ನಿವಾರಿಸಲೇ ಲಾರೆವು. ಇದು ಬಹು ನಿರಾಶಾದಾಯಕ ವಿಚಾರವೆಂಬುದು ನಿಸ್ಸಂಶಯ."[2]

ಆದರೆ ೧೮೦೩ರಲ್ಲಿ ಪ್ರಕಟವಾದ ತನ್ನ ಪುಸ್ತಕದ ದ್ವಿತೀಯ ಆವೃತ್ತಿಯಲ್ಲಿ ಮಾಲ್ಥಸ್ ಇದಕ್ಕೆ ಒಂದು ಹಾದಿ ಕಂಡ. ಜನಸಂಖ್ಯೆಯ ಬೆಳವಣಿಗೆ ಅದುಮಿಡಲು ದುಃಖ ಪಾಪಗಳ ಜತೆಗೆ ಮೂರನೆಯ ಬಗೆಯ ತಡೆಯೂ ಒಂದಿದೆ. ಇದೂ ಸಾಧ್ಯ. ಅದು "ನೈತಿಕ ಸಂಯಮ." ಮುಷ್ಕರವಾಗಲಿ, ಕ್ರಾಂತಿಯಾಗಲಿ, ದಾನವಾಗಲಿ, ಸರಕಾರದ ನಿಬಂಧನೆಯಾಗಲಿ ಬಡಜನರ ಸಂಕಟವನ್ನು ದೂರಗೊಳಿಸಲಾರದು. ಇದಕ್ಕೆ ಇವರು ತಮ್ಮನ್ನು ತಾವೇ ಹಳಿದುಕೊಳ್ಳಬೇಕು. ಏಕೆಂದರೆ ಅವರು ತಮ್ಮ ಸಂತಾನಾಭಿವೃದ್ಧಿಯನ್ನು ಇಷ್ಟು ವೇಗವಾಗಿ ಏಕೆ ನಡಸಬೇಕು ? ಅವರು ಚಿಕ್ಕ ವಯಸ್ಸಿನಲ್ಲೇ ಮದುವೆಯಾಗದಿರಲಿ; 'ನೈತಿಕ ಸಂಯಮ' ಅಭ್ಯಾಸಿಸಲಿ. ಇಷ್ಟು ದೊಡ್ಡದಾಗಿ ಸಂಸಾರ ಬೆಳಸುವುದು ಬೇಡ. ಹೀಗೆ ಮಾಡಿದರೆ ಅವರು ತಮ್ಮ ಅಭ್ಯುದಯ ಸಾಧಿಸುವ ಆಶೆ ಹೊಂದಬಹುದು. ಸಮಾಜ ಸೇವೆ ಮಾಡುವವರು ಯಾರು ?—ಮದುವೆಯಾಗಿ ಹಲವು ಮಕ್ಕಳನ್ನು ಹೆತ್ತ ಹೆಂಗಸೆ, ಅಥವಾ ಮದುವೆಯಾಗದ ವೃದ್ಧ ಮಹಿಳೆಯೆ ? ಅವಿವಾಹಿತ ವೃದ್ಧಮಹಿಳೆಗೇ ಮಾಲ್ಥಸನ ವೋಟು : "ಹತ್ತು ಹನ್ನೆರಡು ಮಂದಿಯ ಸಂಸಾರ ಬೆಳಸಿದ ತಾಯಿಯ ಮಕ್ಕಳು ಬಹುಶಃ ತಮ್ಮ ದೇಶದ ಪರವಾಗಿ ಯುದ್ಧದಲ್ಲಿ ನಿರತರಾದ ಯೋಧರಾಗಬಹುದು. ಇದಕ್ಕಾಗಿ ತನಗೆ ಸಮಾಜ ಋಣಿಯಾಗಿರಬೇಕೆಂದು ಈಕೆ ಯೋಚಿಸಬಹುದು ....ಆದರೆ ಈ ಅಂಶವನ್ನು ಸರಿಯಾಗಿ ವಿಚಾರಿಸಿದ್ದೇ ಆದರೆ, ಈ ಗೌರವಾನ್ವಿತ ಮಹಿಳೆ

---

[1] *Ibid.*, p. 141.

[2] *Ibid.*, p. 346.

ಯನ್ನೂ, ಉಪೇಕ್ಷಿಸಲ್ಪಟ್ಟ ಅವಿವಾಹಿತ ಮಹಿಳೆಯನ್ನೂ ತಕ್ಕಡಿಯಲ್ಲಿಟ್ಟು ತೂಗಿದರೆ, ಈ ಗೌರವಾನ್ವಿತ ಮಹಿಳೆಯ ಕಡೆಯ ತಟ್ಟೆ ಮೇಲೇರುತ್ತದೆ."[1]

ಬಡವರ ಬಡತನಕ್ಕೆ ಬಡವರೇ ಹೊಣೆ—ಎಂಬುದು ಧನಿಕರಿಗೆ ಬಹು ಉಲ್ಲಾಸಕರ ಸಂಗತಿಯಾಗಿತ್ತು.

ಆಡಂ ಸ್ಮಿತ್ತನ ಅನಂತರ ಬಂದ ಬಹು ಮುಖ್ಯನಾದ ಪ್ರೌಢಪ್ರಾಚೀನ ಅರ್ಥಶಾಸ್ತ್ರಜ್ಞನೆಂದರೆ ಡೇವಿಡ್ ರಿಕಾರ್ಡೋ—ಲಂಡನ್ನಿನ ಒಬ್ಬ ಯಹೂದಿ. ಬಂಡವಾಳಪತ್ರಗಳ ದಳ್ಳಾಳಿಯಾಗಿ ಈತ ಅಗಾಧ ಐಶ್ವರ್ಯ ಸಂಪಾದಿಸಿದ. ಈತನ "ಅರ್ಥ ನೀತಿ ಹಾಗೂ ತೆರಿಗೆ ವ್ಯವಸ್ಥೆಯ ಸೂತ್ರಗಳು" ಎಂಬ ಪುಸ್ತಕ ೧೮೧೭ರಲ್ಲಿ ಪ್ರಕಟವಾಯಿತು. ಅರ್ಥಶಾಸ್ತ್ರವೂ ಒಂದು ಶಾಸ್ತ್ರವೆಂದು ಮೊಟ್ಟಮೊದಲಿಗೆ ಪರಿಗಣಿಸಿದ ಗ್ರಂಥ ಇದು—ಎಂದು ಹಲವರು ಭಾವಿಸಿದ್ದಾರೆ. ರಿಕಾರ್ಡೋವಿನ ಕೃತಿಯೊಂದಿಗೆ ಹೋಲಿಸಿ ನೋಡಿದರೆ, ಆಡಂ ಸ್ಮಿತ್ ಬರೆದ "ರಾಷ್ಟ್ರಗಳ ಸಂಪತ್ತು" ಗ್ರಂಥ ಬಹು ಸರಳ—ಓದಲು ಸುಲಭ. ಇದಕ್ಕೆ ಒಂದು ಮುಖ್ಯ ಕಾರಣವೆಂದರೆ, ಸ್ಮಿತ್ ರಿಕಾರ್ಡೋಗಿಂತ ಬಹು ಉತ್ತಮ ಲೇಖಕ. ಇದಕ್ಕೂ ಮುಖ್ಯವಾದ ಇನ್ನೊಂದು ಕಾರಣವಿದೆ. ಸ್ಮಿತ್ತನ ಲೇಖನ ಮೂರ್ತ, ವಾಸ್ತವಿಕ. ತನ್ನ ಭಾವನೆಗಳನ್ನು ಸ್ಪಷ್ಟಗೊಳಿಸಲು ಪರಿಚಿತ ಉದಾಹರಣೆಗಳನ್ನೇ ಈತ ಕೊಟ್ಟಿದ್ದಾನೆ. ಆದರೆ ರಿಕಾರ್ಡೋ ಹೀಗಲ್ಲ. ಆತನ ವರ್ಣನೆ ಅಮೂರ್ತ, ದುರವಗಾಹ್ಯ. ಅವನು ಕೊಡುವ ಉದಾಹರಣೆ ಸ್ವಕಪೋಲ ಕಲ್ಪಿತ—ವಸ್ತುಸ್ಥಿತಿಗೆ ಇದು ಸಂಬಂಧಿಸಿರಬಹುದು, ಇಲ್ಲದಿರಬಹುದು. ಸಾಮಾನ್ಯವಾಗಿ ಶಾಸ್ತ್ರಗಳು ಕ್ಲಿಷ್ಟ. ರಿಕಾರ್ಡೋ ಗ್ರಂಥ ಇದಕ್ಕೆ ಹೊರತಲ್ಲ. ಆದರೂ ಆತ ಹೇಳಬೇಕಾಗಿದ್ದದ್ದು ಬಹಳ ಮುಖ್ಯ. ಆದ್ದರಿಂದ ಆಗಿ ಹೋದ ಮಹಾ ಅರ್ಥಶಾಸ್ತ್ರಜ್ಞರಲ್ಲಿ ಈತನಿಗೂ ಒಂದು ಹಿರಿಯ ಸ್ಥಾನವಿದೆ.

ಈ ಪುಸ್ತಕದ ಮಿತಿಯಲ್ಲಿ ನಾವು ಆತನ ಕೆಲವೇ ಸಿದ್ಧಾಂತಗಳನ್ನು, ಅದೂ ಬಹು ಸಂಗ್ರಹವಾಗಿ, ವಿವೇಚಿಸಬಹುದು. "ಕೂಲಿಯ ಕಟು ಸೂತ್ರ" (The iron law of wages) ಮೊದಲನೆಯದು. ಕಾರ್ಮಿಕರು ತಮ್ಮ ದುಡಿಮೆಗಾಗಿ ಪಡೆಯುತ್ತಿದ್ದ ಕೂಲಿಯನ್ನು ಕುರಿತ ವಿವೇಚನೆ ರಿಕಾರ್ಡೋಗಿಂತ ಹಿಂದಣ ಲೇಖಕರ ಗಮನ ಸೆಳೆದಿತ್ತು. ೧೭೭೬ರಲ್ಲಿ ಟರ್ಗಾಟ್ ಒಂದು ಪುಟ್ಟ ಪುಸ್ತಕ ಬರೆದಿದ್ದ. "ಸಂಪತ್ತಿನ ಉತ್ಪಾದನೆ ವಿತರಣೆ ಕುರಿತ ಆಲೋಚನೆ" ಎಂದು ಅದರ ಹೆಸರು. ಅದರಲ್ಲಿ ಆತ ಹೀಗೆ ಹೇಳಿದ್ದ: "ಕೇವಲ ತನ್ನ ಕೈ, ತನ್ನ ದುಡಿಮೆ ಇವುಗಳನ್ನೇ ಅವಲಂಬಿಸಿದ ಕಾರ್ಮಿಕನ ಆಸ್ತಿಯೆಂದರೆ ಆತ ಇತರರಿಗೆ ಕೊಡಬಹುದಾದ ತನ್ನ ದುಡಿಮೆಯ ಭಾಗ. ಇದನ್ನು ಆತ ಅಗ್ಗದ ಬೆಲೆಗೋ ಹೆಚ್ಚಿನ ಬೆಲೆಗೋ ಮಾರುತ್ತಾನೆ. ಆದರೆ ಈ ಹೆಚ್ಚಿನ ಅಥವಾ ಕಡಮೆಯ ಬೆಲೆ ಕೇವಲ ಆತನನ್ನೇ ಅವಲಂಬಿಸಿದ್ದಲ್ಲ. ಆತನನ್ನು ನೇಮಿಸಿಕೊಳ್ಳುವವನಿಗೂ ಆತನಿಗೂ ನಡುವೆ ಆತ ಮಾಡಿಕೊಳ್ಳುವ ಕರಾರನ್ನೇ ಇದು ಅವಲಂಬಿಸುತ್ತದೆ. ಆತನನ್ನು ನೇಮಕ ಮಾಡಿ

[1] *Ibid.*, 2nd ed., p. 549.

ಕೊಳ್ಳುವವನು ಅವನಿಗೆ ಆದಷ್ಟು ಕಡಮೆ ಕೂಲಿ ಕೊಡುತ್ತಾನೆ. ಹಲವು ಮಂದಿ ಕಾರ್ಮಿಕರಲ್ಲಿ ಯಾರನ್ನು ಬೇಕಾದರೂ ಆರಿಸಿಕೊಳ್ಳಲು ಯಜಮಾನನಿಗೆ ಅವಕಾಶವಿದೆ ಯಾದ್ದರಿಂದ, ಯಾರು ಅತಿ ಕಡಮೆ ಕೂಲಿಗೆ ಬರುತ್ತಾರೋ ಅವರನ್ನೇ ಅವನು ನೇಮಿಸಿ ಕೊಳ್ಳುತ್ತಾನೆ. ಆದ್ದರಿಂದ ಕಾರ್ಮಿಕರು ತಮ್ಮ ತಮ್ಮಲ್ಲೇ ಸ್ಪರ್ಧಿಸಿ ತಮ್ಮ ಬೆಲೆಯನ್ನು ಇಳಿಸಿಕೊಳ್ಳಲೇ ಬೇಕಾಗುತ್ತದೆ. ಪ್ರತಿಯೊಂದು ಬಗೆಯ ದುಡಿಮೆಯಲ್ಲೂ ಕೊನೆಗೆ ಆಗ ಬೇಕಾದುದು, ವಾಸ್ತವವಾಗಿ ಆಗುವುದು, ಹೀಗೆ : ಕಾರ್ಮಿಕ ಜೀವಿಸಲು ಎಷ್ಟು ಬೇಕೋ ಅಷ್ಟಕ್ಕೆ ಆತನ ಕೂಲಿ ಮಿತಿಗೊಳ್ಳುತ್ತದೆ."[1]

ಟರ್ಗಾಟ್ ಈ ವಿಚಾರವನ್ನು ಇಷ್ಟಕ್ಕೇ ಬಿಟ್ಟ. ರಿಕಾರ್ಡೋ ಈ ವಿಷಯವನ್ನು ಮುಂದುವರಿಸಿ ಬೆಳಸಿದ. ಆದ್ದರಿಂದ "ಕೂಲಿಯ ಕಟು ಸೂತ್ರ" ಈತನ ಹೆಸರಿನೊಂದಿಗೆ ಜೋಡಿಸಲ್ಪಟ್ಟದೆ. ಈತನೇ ಈ ಸೂತ್ರದ ಪ್ರತಿಪಾದಕನೆಂದು ಪರಿಗಣಿತನಾಗಿದ್ದಾನೆ. ಕಾರ್ಮಿಕನೂ ಅವನ ಸಂಸಾರವೂ ಬದುಕಲು ಎಷ್ಟು ಬೇಕೋ ಅಷ್ಟೇ ಕೂಲಿ ಅವನಿಗೆ ದೊರಕುತ್ತದೆ. "ದುಡಿಮೆಯ ಸಹಜ ಬೆಲೆ....ಕಾರ್ಮಿಕನ ಹಾಗೂ ಆತನ ಸಂಸಾರ ಬದುಕಲು ಬೇಕಾದ ಆಹಾರ, ಅವಶ್ಯ ವಸ್ತು ಇವುಗಳ ಬೆಲೆಯನ್ನೆ ಅವಲಂಬಿಸುತ್ತದೆ. ಆಹಾರ ಹಾಗೂ ಅಗತ್ಯ ವಸ್ತುಗಳ ಬೆಲೆ ಏರಿದರೆ ದುಡಿಮೆಯ ಸಹಜ ಬೆಲೆಯೂ ಏರು ತ್ತದೆ. ಇವುಗಳ ಬೆಲೆ ಇಳಿದರೆ ದುಡಿಮೆಯ ಬೆಲೆಯೂ ಇಳಿಯುತ್ತದೆ."[2]

ಆದರೆ ನಿಮಗೂ ನಮಗೂ ಗೊತ್ತಿರುವ ವಿಚಾರ ಇದು : ಕೆಲವು ವೇಳೆ ಕಾರ್ಮಿಕರು ಬದುಕಲು ಬೇಕಾದಷ್ಟಕ್ಕಿಂತ ಹೆಚ್ಚು ಕೂಲಿ ಪಡೆಯುವರು. ರಿಕಾರ್ಡೋ ಇದನ್ನೂ ಗಣನೆಗೆ ತೆಗೆದುಕೊಳ್ಳುತ್ತಾನೆ. ಆತ ದುಡಿಮೆಯ "ಪೇಟೆಯ ಬೆಲೆ"ಗೂ ಅದರ ಸಹಜ ಬೆಲೆಗೂ ನಡುವಣ ವ್ಯತ್ಯಾಸವನ್ನು ತೋರಿಸುತ್ತಾನೆ. ದುಡಿಮೆಯ ಸರಬರಾಯಿಗೂ ಅದರ ಬೇಡಿಕೆಗೂ ಇರುವ ಪ್ರಮಾಣದ ಸಹಜ ಕ್ರಿಯೆಗೆ ಅನುಗುಣವಾಗಿ, ದುಡಿಮೆಗೆ ಪ್ರತಿಯಾಗಿ ವಾಸ್ತವವಾಗಿ ಕೊಟ್ಟ ಬೆಲೆಯೇ ದುಡಿಮೆಯ ಪೇಟೆ ಬೆಲೆ. ಕಾರ್ಮಿಕರ ಅಭಾವವಿದ್ದಾಗ ಅವರ ಕೂಲಿ ಹೆಚ್ಚು, ಅವರ ಸರಬರಾಯಿ ಹೆಚ್ಚಾದಾಗ ಕೂಲಿ ಕಡಮೆ. ದುಡಿಮೆಯ ಪೇಟೆಬೆಲೆ ಅದರ ಸಹಜಬೆಲೆಯಿಂದ ಆಚೀಚೆ ಎಷ್ಟೇ ಸರಿದಾಡಲಿ, ಪದಾರ್ಥಗಳಂತೆ ಇದೂ ಕೂಡ ಸಹಜ ಬೆಲೆಗೆ ಹೊಂದಿಕೊಳ್ಳುವ ಪ್ರವೃತ್ತಿ ಪಡೆದಿರುತ್ತದೆ."[3]

ಪೇಟೆಬೆಲೆ ಸಹಜಬೆಲೆಗೆ ಹೊಂದಿಕೊಳ್ಳುವ ಪ್ರವೃತ್ತಿ ಪಡೆದಿರುವುದೆಂಬ, ಮೇಲಣ ಕೊನೆಯ ವಾಕ್ಯದ, ಸತ್ಯಾಂಶವನ್ನು ತೋರಿಸಿಕೊಡಲು ರಿಕಾರ್ಡೋ ಮಾಲ್ಥಸನ ಕೃತಿ ಯಿಂದ ಒಂದು ಪುಟವನ್ನು ಎತ್ತಿಕೊಂಡಿದ್ದಾನೆ. ಪೇಟೆ ಬೆಲೆ ಹೆಚ್ಚಿದ್ದಾಗ, ಕಾರ್ಮಿಕರು

---

[1] M. Turgot, *Reflections on the Formation and Distribution of Wealth* (1766), E. Spragg, London, 1793.

[2] D. Ricardo, *The Principles of Political Economy and Taxation* (1817), p. 52. J. M. Dent & Sons, 1926.

[3] *Ibid.*, p. 53.

ತಮ್ಮ ಸಂಸಾರ ಸಾಗಿಸಲು ಅಗತ್ಯವಾದ್ದಕ್ಕಿಂತ ಹೆಚ್ಚು ಕೂಲಿ ಪಡೆಯುತ್ತಿದ್ದಾಗ, ಅವರು ತಮ್ಮ ಸಂಸಾರವನ್ನು ವಿಸ್ತರಿಸಲು ಯತ್ನಿಸುವರು. ಆಗ ಕಾರ್ಮಿಕರ ಸರಬರಾಯಿ ಅಧಿಕಗೊಳ್ಳುತ್ತದೆ, ಕೂಲಿ ಇಳಿಯುತ್ತದೆ. ಪೇಟೆ ಬೆಲೆ ಇಳಿದಾಗ, ತಮ್ಮ ಸಂಸಾರ ಸಾಗಿಸಲು ಅಗತ್ಯವಾದ್ದಕ್ಕಿಂತ ಕಡಮೆ ಕೂಲಿಯನ್ನು ಕಾರ್ಮಿಕರು ಪಡೆಯುತ್ತಿದ್ದಾಗ, ಅವರ ಸಂಖ್ಯೆ ಕಡಮೆಯಾಗುತ್ತದೆ. ಕಾರ್ಮಿಕರ ಸಂಖ್ಯೆ ಕಡಮೆಯಾದಾಗ ಕೂಲಿ ಏರುತ್ತದೆ.

ಹಾಗಾದರೆ, ರಿಕಾರ್ಡೋವಿನ ಕೂಲಿಯ ನಿಯಮವಿದು; ದೀರ್ಘಕಾಲದಲ್ಲಿ, "ಕಾರ್ಮಿಕರು ಬದುಕು ಸಾಗಿಸಲೂ, ತಮ್ಮ ಒಟ್ಟು ಸಂಖ್ಯೆ ಏರಿಳಿಯದ ರೀತಿಯಲ್ಲಿ ಸಂತಾನೋತ್ಪಾದನೆ ಮಾಡಲೂ ಅಗತ್ಯವಾದ"[1]ದ್ದಕ್ಕಿಂತ ಹೆಚ್ಚು ಕೂಲಿಯನ್ನು ಅವರು ಎಂದೂ ಪಡೆಯಲಾರರು.

ರಿಕಾರ್ಡೋವಿನ ಸಿದ್ಧಾಂತಗಳಲ್ಲಿ ಅತ್ಯಂತ ಪ್ರಸಿದ್ಧವಾದ ಗೇಣಿಯ ಸೂತ್ರವನ್ನು ಹೆಚ್ಚು ಸಮರ್ಪಕವಾಗಿ ಅರಿಯಬೇಕಾದರೆ, ನಾವು ರಿಕಾರ್ಡೋವಿನ "ಸೂತ್ರಗಳು" ಪ್ರಕಟವಾದ ಕಾಲದಲ್ಲಿ ಧಾನ್ಯದ ಶಾಸನಗಳನ್ನು ಕುರಿತು ಇಂಗ್ಲೆಂಡಿನಲ್ಲಿ ಬೀಸುತ್ತಿದ್ದ ವಾದ–ಪ್ರತಿವಾದಗಳ ಬಿರುಗಾಳಿಯನ್ನರಿಯಬೇಕು. ಈ ವ್ಯಾಜ್ಯದಲ್ಲಿನ ಪಕ್ಷ ಪ್ರತಿ ಪಕ್ಷಗಳೆಂದರೆ ಜಮೀನುದಾರರು ಹಾಗೂ ಉತ್ಪಾದಕರು.

ಗೋಧಿಯ ರಕ್ಷಣೆಗಾಗಿ ಹಾಕಿದ್ದ ಒಂದು ಬಗೆಯ ಸುಂಕದ ವ್ಯವಸ್ಥೆಯೇ ಧಾನ್ಯದ ಶಾಸನವೆನಿಸಿದೆ. ಸ್ವದೇಶದ ಗೋಧಿಯ ಬೆಲೆ ಒಂದು ಗೊತ್ತಾದ ಮಟ್ಟವನ್ನು ಮುಟ್ಟುವವರೆಗೂ ಅನ್ಯದೇಶಗಳಿಂದ ಗೋಧಿ ಆಯಾತಮಾಡಿಕೊಳ್ಳುವಂತಿರಲಿಲ್ಲ. (ಈ ಮಟ್ಟ ಆಗಿಂದಾಗ್ಗೆ ನಿಷ್ಕರ್ಷೆಯಾಗುತ್ತಿತ್ತು.)

ಜರೂರು ಪರಿಸ್ಥಿತಿಯೇನಾದರೂ ಒದಗಿದರೆ ಇಂಗ್ಲೆಂಡಿನಲ್ಲಿ ಸಾಕಷ್ಟು ಗೋಧಿಯ ಪೂರೈಕೆಯಾಗಬೇಕು. ಈ ಉದ್ದೇಶದಿಂದ ಸ್ವದೇಶದ ಗೋಧಿ ವ್ಯವಸಾಯಕ್ಕೆ ಪ್ರೋತ್ಸಾಹ ನೀಡುವುದೇ ಈ ಶಾಸನಗಳ ಉದ್ದೇಶ. ಆಂಗ್ಲ ಬೇಸಾಯಗಾರನ ಧಾನ್ಯಕ್ಕೆ ಒಳ್ಳೆಯ ಬೆಲೆ ದೊರಕುವುದೆಂಬ ಭರವಸೆ ನೀಡುವುದರ ಮೂಲಕ ಬೇಸಾಯಕ್ಕೆ ಪ್ರೋತ್ಸಾಹ ನೀಡಲಾಗಿತ್ತು. ಆತ ಹೊರದೇಶದ ಗೋಧಿಯ ಪೈಪೋಟಿಯ ಅಂಜಿಕೆ ಹೊಂದಿರಬೇಕಾದ್ದಿರಲಿಲ್ಲ. ಏಕೆಂದರೆ ಆತನ ಗೋಧಿ ಒಂದು ಗೊತ್ತಾದ ಬೆಲೆ ಮುಟ್ಟುವವರೆಗೂ ಅನ್ಯದೇಶದ ಗೋಧಿ ದೇಶದೊಳಕ್ಕೆ ಬರಲಪ್ಪಣೆಯಿರಲಿಲ್ಲ. ಇದರಿಂದ ಒಳ್ಳೆಯ ಲಾಭ. ದೇಶದ ಬೇಡಿಕೆಯನ್ನು ಮೀರಿ ಬೆಳೆ ತೆಗೆದಾಗ ಮಾತ್ರ ಪರಿಸ್ಥಿತಿ ವ್ಯತ್ಯಾಸವಾದೀತು. ಆದರೆ ಇಂಥ ವ್ಯತ್ಯಸ್ತ ಪರಿಸ್ಥಿತಿ ೧೭೭೦ರಿಂದ ಈಚೆಗೆ ಸಂಭವಿಸಿರಲಿಲ್ಲ.

ನೆಪೋಲಿಯನ್ನನ ಯುದ್ಧಗಳ ಫಲವಾಗಿ ಗೋಧಿಯ ಬೆಲೆ ಮೇಲಕ್ಕೆ ಚಿಮ್ಮಿತು. ಹೆಚ್ಚು ಹೆಚ್ಚು ನೆಲ ಬೇಸಾಯಕ್ಕೆ ಬಂತು. ಜಮೀನ್ದಾರರು ಗೋಧಿಯ ಬೆಲೆ ಹೆಚ್ಚಾಗಿಯೇ ಇರಬೇಕೆಂದು ಬಯಸಿದರು. ಏಕೆಂದರೆ ಹೀಗಾದರೆ ಇವರಿಗೆ ಹೆಚ್ಚು ಹಣ. ಉತ್ಪಾದಕ

[1] *Ibid.*, p. 52.

ರಾದರೋ, ಗೋಧಿಯ ಬೆಲೆ ಹೆಚ್ಚಾಗಬಾರದೆಂದು ಬಯಸಿದರು. ಏಕೆಂದರೆ ಇದರಿಂದ ಕಾರ್ಮಿಕರ ಜೀವನದ ವೆಚ್ಚ ಹೆಚ್ಚುವುದು; ತತ್ಫಲವಾಗಿ ಅತೃಪ್ತಿ, ಮುಷ್ಕರ, ಅಲ್ಲದೆ ಕೊನೆಗೆ ಹೆಚ್ಚು ಕೂಲಿ; ಇವರ ಜೇಬಿನಿಂದ ಹಣ ಹರಿದು ಹೋಗುವುದು. ಆದ್ದರಿಂದ ಇವರಿಬ್ಬರ ನಡುವೆ ಹೋರಾಟ ಸಾಗಿತು. ಜಮೀನುದಾರರು ಗೋಧಿಗೆ ರಕ್ಷಣೆ ನೀಡಬೇಕೆಂದು ಕೂಗಿದರು. ಉತ್ಪಾದಕರು ನಿರುಪಾಧಿಕ ವ್ಯಾಪಾರವೆಂದು ಬೊಬ್ಬೆ ಯಿಟ್ಟರು.

ಈ ಹೋರಾಟದ ಗೊಂದಲದ ನಡುವೆ ಇದ್ದ, ರಿಕಾರ್ಡೋ. ಈತನ ಸಹಾನುಭೂತಿ ಉತ್ಪಾದಕರ ಕಡೆಗೆ. ಏಕೆಂದರೆ ಈತನೂ ಪ್ರವರ್ಧಮಾನಕ್ಕೆ ಬರುತ್ತಿದ್ದ ಬೂರ್ಷ್ವಾಸೀ ಯಲ್ಲೊಬ್ಬ. ಆದ್ದರಿಂದಲೇ, "ಜಮೀನ್ದಾರರನ್ನು ಬಿಟ್ಟು ಉಳಿದ ಎಲ್ಲ ವರ್ಗಗಳೂ ಧಾನ್ಯದ ಬೆಲೆ ಏರಿಕೆಯಿಂದ ತೊಂದರೆ ಅನುಭವಿಸಬೇಕಾಗುತ್ತದೆ,"[1] ಎಂದು ತೋರಿಸುವ ಸೂತ್ರಗಳು—ಗೇಣಿ ಕುರಿತ ನೈಸರ್ಗಿಕ ಸೂತ್ರಗಳು—ಆತ ಪ್ರತಿಪಾದಿಸಿರುವ ನಾನಾ ವಿಚಾರಗಳ ಪೈಕಿ ಇರುವುದು ಆಶ್ಚರ್ಯವೇನಲ್ಲ.

ಆತ ಈ ತೀರ್ಮಾನಕ್ಕೆ ಹೇಗೆ ಬಂದ? ಧಾನ್ಯದ ಬೆಲೆ ಹೆಚ್ಚಿದಷ್ಟೂ ಗೇಣಿಯೂ ಹೆಚ್ಚುತ್ತದೆ—ಎಂಬುದಾಗಿ ಸಿದ್ಧಪಡಿಸುವುದರ ಮೂಲಕ. ಕೃಷಿಯ ನೆಲಕ್ಕೆ ಮಿತಿ ಇರುವುದರಿಂದ, ಅದರ ಸಾರ ಸ್ಥಳದಿಂದ ಸ್ಥಳಕ್ಕೆ ವ್ಯತ್ಯಾಸಗೊಳ್ಳುವುದರಿಂದ, ಗೇಣಿ ಉದ್ಭವಿಸುತ್ತದೆ—ಎಂದು ರಿಕಾರ್ಡೋ ವಾದಿಸುತ್ತಾನೆ. "ಎಲ್ಲ ನೆಲವೂ ಒಂದೇ ಬಗೆಯದಾಗಿದ್ದರೆ, ಅದರ ಪ್ರಮಾಣ ಅಮಿತವಾಗಿದ್ದರೆ, ಗುಣ ಒಂದೇ ತೆರನಾಗಿದ್ದರೆ, ಅದರ ಬಳಕೆಗೆ ಯಾವ ಶುಲ್ಕವನ್ನೂ ವಿಧಿಸಬೇಕಾದ್ದಿರಲಿಲ್ಲ....ನೆಲ ಅಮಿತವಾಗಿಲ್ಲದಿರುವುದರಿಂದಲೇ, ಗುಣದಲ್ಲಿ ಒಂದೇ ತೆರನಾಗಿಲ್ಲದಿರುವುದರಿಂದಲೇ, ಜನಸಂಖ್ಯೆ ಅಧಿಕಗೊಂಡಂತೆಲ್ಲ ಕಡಮೆ ಗುಣವುಳ್ಳ ನೆಲವನ್ನೂ....ಬೇಸಾಯಕ್ಕೆ ಬಳಸಿಕೊಳ್ಳ ಬೇಕಾಗುವುದರಿಂದ, ನೆಲದ ಬಳಕೆಗೆ ಗೇಣಿ ಕೊಡಬೇಕಾಗುತ್ತದೆ. ಸಮಾಜ ಮುಂದುವರಿದಾಗ, ಎರಡನೆಯ ದರ್ಜೆಯ ಫಲವತ್ತಿನ ನೆಲವನ್ನೂ ಬೇಸಾಯಕ್ಕೆ ಪಡೆಯಬೇಕಾದಾಗ, ತಕ್ಷಣವೇ ಮೊದಲನೆ ದರ್ಜೆಯ ಫಲವತ್ತಿನ ನೆಲದ ಮೇಲೆ ಗೇಣಿ ಆರಂಭವಾಗುತ್ತದೆ. ಈ ಗೇಣಿಯ ಮೊತ್ತ ಈ ಎರಡು ಬಗೆಯ ಭೂ ವಿಭಾಗಗಳ ಗುಣದಲ್ಲಿರುವ ವ್ಯತ್ಯಾಸವನ್ನವಲಂಬಿಸುತ್ತದೆ.

"ಮೂರನೆಯ ದರ್ಜೆಯ ಗುಣದ ನೆಲವನ್ನು ಬೇಸಾಯಕ್ಕೆ ಆರಿಸಿಕೊಂಡಾಗ, ತಕ್ಷಣವೇ ಎರಡನೆಯ ದರ್ಜೆಯ ನೆಲದ ಮೇಲೆ ಗೇಣಿ ಆರಂಭವಾಗುತ್ತದೆ. ಮೊದಲಿನಂತೆ ಇದೂ ಕೂಡ ಅವುಗಳ ಉತ್ಪಾದನ ಶಕ್ತಿಯಲ್ಲಿನ ವ್ಯತ್ಯಾಸಕ್ಕೆ ಅನುಗುಣವಾಗಿ ನಿಶ್ಚಿತವಾಗುತ್ತದೆ. ....ಜನಸಂಖ್ಯೆಯ ಬೆಳವಣಿಗೆ ಹೀಗೆ ಮುಂದುವರಿದಂತೆಲ್ಲಾ, ಹೆಜ್ಜೆ ಹೆಜ್ಜೆಗೂ, ಆಹಾರದ ಸರಬರಾಯಿ ಹೆಚ್ಚಿಸಿಕೊಳ್ಳುವ ಸಲುವಾಗಿ, ಕಡಮೆ ದರ್ಜೆಯ ನೆಲವನ್ನು ಬಳಸಬೇಕಾದ

---

[1] *Ibid.*, p. 225.

ಸ್ಥಿತಿ ಒಂದು ದೇಶಕ್ಕೆ ಒದಗಿ ಬಂದು, ಈ ನೆಲಕ್ಕಿಂತ ಹೆಚ್ಚು ಫಲವತ್ತಾದ ನೆಲದ ಮೇಲೆಲ್ಲಾ ಗೇಣಿ ಉದ್ಭವಿಸುತ್ತದೆ."[1]

ಧಾನ್ಯ ಶಾಸನಗಳ ಫಲವಾಗಿ ಗೋಧಿಯ ಬೆಳೆ ಹೆಚ್ಚಿಸಿದ್ದರಿಂದ, ಗೋಧಿ ಬೆಳೆಯುವುದಕ್ಕೋಸ್ಕರ ರೈತರು ಕಡಮೆ ಫಲವತ್ತಿನ ನೆಲದತ್ತ ದೃಷ್ಟಿ ಹರಿಸಬೇಕಾಗಿ ಬಂತೆಂಬುದು ರಿಕಾರ್ಡೋವಿನ ಮತ. ಇದು ಸಂಭವಿಸಿದಾಗ, ಹೆಚ್ಚು ಫಲವತ್ತಾದ ನೆಲಗಳ ಮೇಲೆ ಗೇಣಿ ಕೊಡಬೇಕಾಯಿತು. ಕ್ರಮೇಣ, ಕಡಮೆ ಫಲವತ್ತಿನ ನೆಲ ಅಧಿಕಾಧಿಕವಾಗಿ ಬೇಸಾಯಕ್ಕೆ ಬಂತು; ಗೇಣಿ ಏರುತ್ತೇರುತ್ತ ನಡೆಯಿತು. ಈ ಗೇಣಿ ನೆಲದೊಡೆಯರಿಗೆ ಬಂತು. ಆದರೆ ಇದಕ್ಕಾಗಿ ಅವರೇನಾದರೂ ಕೆಲಸ ಮಾಡಿದರೆ? ಅವರೇನೂ ಮಾಡಲಿಲ್ಲ. ಆದರೂ ಗೇಣಿಗಳು ಏರುತ್ತಲೇ ಇದ್ದುವು. "ಜಮೀನುದಾರನ ಹಿತ ಬಳಕೆದಾರನ ಮತ್ತು ಉತ್ಪಾದಕನ ಹಿತಕ್ಕೆ ಯಾವಾಗಲೂ ವಿರುದ್ಧವಾಗಿರುತ್ತದೆ. ಧಾನ್ಯ ಬೆಳೆಯಲು ಹೆಚ್ಚು ದುಡಿಮೆ ಅಗತ್ಯವಾದಾಗ ಮಾತ್ರ ಶಾಶ್ವತವಾಗಿ ಅದರ ಬೆಲೆ ಏರಿರುವುದು ಸಾಧ್ಯ. ಏಕೆಂದರೆ ಅದರ ಉತ್ಪಾದನ ವೆಚ್ಚ ಹೆಚ್ಚಾಗಿರುತ್ತದೆ. ಈ ವೆಚ್ಚ ಗೇಣಿಯನ್ನೂ ಏರಿಸಿಯೇ ಏರಿಸುತ್ತದೆ. ಆದ್ದರಿಂದ ಧಾನ್ಯದ ಬೆಳೆಗೆ ಸಂಬಂಧಿಸಿದ ವೆಚ್ಚವನ್ನು ಹೆಚ್ಚಿಸುವುದು ಜಮೀನುದಾರನ ಹಿತಕ್ಕೆ ಅನುಗುಣವಾದದ್ದು. ಆದರೆ ಇದು ಬಳಕೆದಾರನ ಹಿತಕ್ಕೆ ಅನುಗುಣವಾಗಿಲ್ಲ. ಹಣ, ವಸ್ತು ಇವುಗಳಿಗೆ ಸಂಬಂಧಿಸಿದಂತೆ ಧಾನ್ಯದ ಬೆಲೆ ಕಡಮೆಯಾಗಿರಬೇಕಾದ್ದು ಆತನಿಗೆ ಅನುಕೂಲಕರ. ಏಕೆಂದರೆ ಆತ ಧಾನ್ಯ ಕೊಳ್ಳುವುದು ಯಾವಾಗಲೂ ಹಣದಿಂದ, ಅಥವಾ ವಸ್ತುವಿನ ಮೂಲಕ. ಧಾನ್ಯದ ಬೆಲೆ ಹೆಚ್ಚಿರುವುದು ಉತ್ಪಾದಕನ ದೃಷ್ಟಿಯಿಂದಲೂ ಉಚಿತವಲ್ಲ. ಏಕೆಂದರೆ ಧಾನ್ಯದ ಬೆಲೆ ಹೆಚ್ಚಿದಾಗ ಹೆಚ್ಚು ಕೂಲಿ ಕೊಡಬೇಕಾಗುತ್ತದೆ. ಆದರೆ ಆತ ಉತ್ಪಾದಿಸಿದ ವಸ್ತುವಿನ ಬೆಲೆ ಮಾತ್ರ ಅಧಿಕಗೊಳ್ಳುವುದಿಲ್ಲ."[2]

ಮೇಲಣ ಮಾತುಗಳ ಕೊನೆಯ ವಾಕ್ಯವೇ ತಿಕ್ಕಾಟಕ್ಕೆ ಎಡೆ ಕೊಟ್ಟದ್ದು. ರಿಕಾರ್ಡೋವೇ ರಚಿಸಿದ ಕೂಲಿಯ ಸೂತ್ರದ ದೃಷ್ಟಿಯಿಂದ ನೋಡುವುದಾದರೆ, ಕಾರ್ಮಿಕರಿಗೆ ಜೀವನಭರಣ ಕೂಲಿ ದೊರಕುತ್ತಿರುವವರೆಗೂ ಧಾನ್ಯದ ಬೆಲೆ ಹೆಚ್ಚೇ, ಕಡಮೆಯೇ —ಎಂಬುದು ಮುಖ್ಯವಾಗಿರಲಿಲ್ಲ. ಏಕೆಂದರೆ ಧಾನ್ಯದ ಬೆಲೆ ಇಳಿದಾಗ ಅವರ ಕೂಲಿ ಇಳಿಯುವಂತೆಯೇ, ಅದರ ಬೆಲೆ ಏರಿದಾಗ ಅವರ ಕೂಲಿಯೂ ಏರಲೇ ಬೇಕಲ್ಲವೇ? ಆದರೆ ಈ ಬೆಲೆ ಏರಿಕೆ ಉತ್ಪಾದಕರ ದೃಷ್ಟಿಯಿಂದ ಬಹು ಮುಖ್ಯ, ಬಹು ಆತಂಕಕಾರಿ. ಏಕೆಂದರೆ ಧಾನ್ಯದ ಬೆಲೆ ಹೆಚ್ಚಿತೆಂದೇ, ಕೂಲಿಯ ಮಟ್ಟ ಏರಿತೆಂದೇ, ಅವರು ತಮ್ಮ ಪದಾರ್ಥಗಳನ್ನು ಹೆಚ್ಚು ಬೆಲೆಗೆ ಮಾರುವಂತಿರಲಿಲ್ಲ. ಜಮೀನುದಾರರೂ ಉತ್ಪಾದಕರೂ ಸಲ್ಲಿಸುವ ಸೇವೆಯನ್ನು ರಿಕಾರ್ಡೋ ಪರಸ್ಪರ ಹೋಲಿಕೆಗೆ ಗುರಿಪಡಿಸುತ್ತಾನೆ. ಮತ್ತೆ

---

[1] *Ibid.*, p. 35.

[2] *Ibid.*, p. 225.

ಜಮೀನ್ದಾರನಲ್ಲೇ ಕುಂದು: "ಜಮೀನ್ದಾರನಿಗೂ ಸಾರ್ವಜನಿಕರಿಗೂ ನಡುವಣ ವ್ಯವಹಾರಕ್ಕೂ, ವ್ಯಾಪಾರ ಪ್ರಪಂಚದಲ್ಲಿ ನಡೆಯುವ ವ್ಯವಹಾರಕ್ಕೂ ವ್ಯತ್ಯಾಸವಿದೆ. ಇಲ್ಲಿ ಮಾರುವವ ಕೊಳ್ಳುವವರಿಬ್ಬರೂ ಸಮವಾಗಿ ಲಾಭ ಪಡೆಯುವರೆಂದು ಹೇಳುವರಾದರೂ ವಾಸ್ತವವಾಗಿ ಒಂದು ಪಕ್ಷಕ್ಕೆ ಸಂಪೂರ್ಣ ನಷ್ಟ, ಇನ್ನೊಂದು ಪಕ್ಷಕ್ಕೆ ಸಂಪೂರ್ಣ ಲಾಭ."[1]

ಸರಕಾರದ ರಕ್ಷಣಾ ನೀತಿಯ ವಿರುದ್ಧವಾದ ಬತ್ತಳಿಕೆಯಲ್ಲಿ ಕೈಗಾರಿಕೋದ್ಯಮಿಗಳಿಗೆ ಇನ್ನೊಂದು ಅಸ್ತ್ರ ಸೇರಿತು. ಧಾನ್ಯಶಾಸನಗಳು ರದ್ದಾಗಬೇಕು, ನಿರುಪಾಧಿಕ ವ್ಯಾಪಾರ ಯುಗ ಆರಂಭವಾಗಬೇಕು—ಎಂದು ಇವರು ಬಯಸಿದರು. ಆದರೆ ಪಾರ್ಲಿಮೆಂಟು ಜಮೀನುದಾರರ ಹತೋಟಿಗೆ ಒಳಪಟ್ಟಿತ್ತು. ಆದ್ದರಿಂದ ಧಾನ್ಯಶಾಸನಗಳು ಬಹುಕಾಲ (೧೮೪೬ರ ವರೆಗೂ) ಉಳಿದುಕೊಂಡೇ ಬಂದುವು. ಗೋಧಿಯ ಬೆಲೆ ಅಗ್ಗವಾಗುವುದರಿಂದ ದೇಶಕ್ಕೆ ಲಭಿಸಬಹುದಾದ ಅನುಕೂಲಗಳೇನೆಂಬುದನ್ನು ಅರಿಯಲಾಗದೆ ಹೋದ ಕೆಲವು ಜಮೀನುದಾರರು ಕಾರ್ಖಾನೆಯಲ್ಲಿನ ಸ್ಥಿತಿಗತಿ, ದುಡಿಮೆಯ ಕಾಲಾವಧಿ ಇವುಗಳ ಬಗ್ಗೆ ಆಸಕ್ತಿ ವಹಿಸಿದರು. ಕೈಗಾರಿಕೆ ಪದ್ಧತಿಯ ದುಷ್ಪರಿಣಾಮ ನಿವಾರಣೆಗಾಗಿ ಬೊಬ್ಬೆಯಿಡುತ್ತಿದ್ದ ಮಾನವ ಹಿತವಾದಿಗಳು ಈ ಬಲಿಷ್ಠ ಜಮೀನ್ದಾರರು ತಮ್ಮ ಪಕ್ಷಕ್ಕೆ ಬೆಂಬಲ ನೀಡುತ್ತಿರುವುದನ್ನು ಕಂಡರು. ಧಾನ್ಯಶಾಸನಗಳನ್ನು ವಿರೋಧಿಸುತ್ತಿದ್ದ ಉತ್ಪಾದಕರಿಗೆ ಪ್ರತಿಸವಾಲು ಹಾಕಬಯಸಿದರು ಈ ಜಮೀನುದಾರರು. ಪಾರ್ಲಿಮೆಂಟಿನ ಸಮಿತಿಗಳು ಕಾರ್ಮಿಕರ ಸ್ಥಿತಿಗತಿಗಳನ್ನು ಪರಿಶೀಲಿಸಿ ವರದಿ ಒಪ್ಪಿಸಿದುವು. ದುಡಿಮೆಯ ಕಾಲಾವಧಿ ಕಡಮೆ ಮಾಡುವ ಶಾಸನ ಜಾರಿಗೆ ತರಲು ಯತ್ನ ನಡೆಯಿತು. ಉತ್ಪಾದಕರು ಇದನ್ನು ಬಹು ತೀವ್ರವಾಗಿ ವಿರೋಧಿಸಿದರೆಂಬುದು ಸಹಜ. ಕಾರ್ಮಿಕರು ಹಿಂದೆ ಯಂತ್ರಗಳ ಮುಂದೆ ಕೆಲಸ ಮಾಡುತ್ತಿದ್ದಷ್ಟೇ ಕಾಲ ಮುಂದೆಯೂ ಮಾಡದಿದ್ದರೆ ತಮ್ಮ ವಿನಾಶ ಖಂಡಿತವೆಂದು ಉತ್ಪಾದಕರು ಭವಿಷ್ಯ ನುಡಿದರು. ಆದರೆ ಕಾರ್ಮಿಕರ, ಮಾನವಹಿತವಾದಿಗಳ, ಜಮೀನ್ದಾರರ ಸಂಘಟಿತ ಯತ್ನ ಸಫಲವಾಯಿತು. ದುಡಿಮೆಯ ಕಾಲ ಮಿತಿಗೊಳಪಡಿಸುವ, ದುಡಿಮೆಯ ಸ್ಥಿತಿಗತಿ ಸುಧಾರಿಸಿ ನಿಶ್ಚಯಿಸುವ ಕಾರ್ಖಾನೆ ಶಾಸನಗಳು ಜನ್ಮತಾಳಿದುವು. ಈ ಗರಿಷ್ಠ ಮಿತಿಯನ್ನು ಇನ್ನೂ ಇಳಿಸುವ, ಸ್ಥಿತಿಗತಿಗಳನ್ನು ಇನ್ನೂ ಉತ್ತಮಪಡಿಸುವ ನಿಬಂಧನೆಗಳಿಗಾಗಿ ಚಳವಳಿ ಮುಂದುವರಿಯಿತು.

ಪ್ರೌಢಪ್ರಾಚೀನ ಅರ್ಥಶಾಸ್ತ್ರಜ್ಞರಲ್ಲೊಬ್ಬ, ನಾಸ್ಸೌ ಸೀನಿಯರ್. ಕಾರ್ಯದ ವೇಳೆಯನ್ನು ಇನ್ನೂ ಕಡಮೆ ಮಾಡುವುದು ಸಾಧ್ಯವಿಲ್ಲವೆಂಬುದಾಗಿ 'ರುಜುವಾತು' ಪಡಿಸುವ ಸಿದ್ಧಾಂತವೊಂದನ್ನು ಈತ ರಚಿಸಿದ. ಅದಕ್ಕೆ ಈತ ಕೊಟ್ಟ ಕಾರಣ ಹೀಗೆ: ಕೆಲಸದ ಕೊನೆಯ ಘಂಟೆಯಿಂದ ಬಂದದ್ದೇ ಧಣಿಯ ಲಾಭ. ಈ ಕೊನೆ ಘಂಟೆಯನ್ನು ಕಸಿದದ್ದೇ ಆದರೆ ಲಾಭವೂ ಕತ್ತರಿಸಿ ಹೋಗುತ್ತದೆ. ಇದರಿಂದ ಕೈಗಾರಿಕೆಯೇ ನಾಶವಾಗುತ್ತದೆ. "ಈಗಿನ ಶಾಸನದಲ್ಲಿ ಹದಿನೆಂಟು ವರ್ಷಕ್ಕಿಂತ ಕಡಮೆ ವಯಸ್ಸಿನವರನ್ನು ನೇಮಿಸಿ

---

[1] *Ibid.*, p. 225.

ಕೊಂಡಿರುವ ಯಾವ ಗಿರಣಿಯೂ ವಾರಕ್ಕೆ ಐದು ದಿನದಲ್ಲಿ ದಿನಕ್ಕೆ ಹನ್ನೆರಡು ಗಂಟೆಗಿಂತ ಹೆಚ್ಚಾಗಿಯೂ, ಶನಿವಾರದಂದು ಒಂಬತ್ತು ಗಂಟೆಗೆ ಮೀರಿಯೂ ಕೆಲಸ ಮಾಡುವಂತಿಲ್ಲ. ಹೀಗೆ ಕೆಲಸ ಮಾಡುತ್ತಿರುವ ಗಿರಣಿಯಲ್ಲಿ ಅದರ ಇಡೀ ನಿವ್ವಳಲಾಭ **ಕೊನೆ ಗಂಟೆಯ ಕೆಲಸ**ದಿಂದಲೇ ಬರುವುದೆಂಬುದನ್ನು ಮುಂದೆ ಕೊಟ್ಟಿರುವ ವಿಶ್ಲೇಷಣೆಯಿಂದ ಅರಿಯಬಹುದು."[1]

ಸೀನಿಯರನ ವಿಶ್ಲೇಷಣೆ ಕೇವಲ ಕಾಲ್ಪನಿಕ ಉದಾಹರಣೆಯ ಮೇಲೆ ನಿಂತಿತ್ತು. ಇದರ ಲೆಕ್ಕಾಚಾರವೇನೋ ನಿಖರ, ಆದರೆ ಮಾಡಿದ ಸಿದ್ಧಾಂತ ತಪ್ಪು. ಪ್ರತಿ ಸಾರಿ ಕಾರ್ಖಾನೆಯ ಕೆಲಸದ ಕಾಲ ಇಳಿಸಿದಾಗಲೂ ಅದು ಮುಚ್ಚದೆ ನಡೆದುಕೊಂಡೇ ಹೋಯಿತೆಂಬುದೇ ಇದಕ್ಕೆ ಸಾಕ್ಷಿ.

ಕಾರ್ಮಿಕರಿಗೆ ಸೀನಿಯರನ ಕೊನೆ ಗಂಟೆ ಕುರಿತ ವಿಶ್ಲೇಷಣೆಗಿಂತ ಹೆಚ್ಚು ಅಪಾಯಕಾರಿಯಾಗಿದ್ದದ್ದು ಕೂಲಿ ನಿಧಿಯ ಸಿದ್ಧಾಂತ. ಇದು ಹೆಚ್ಚು ಅಪಾಯಕಾರಿಯೆನ್ನಲು ಬಹುತೇಕ ಅರ್ಥಶಾಸ್ತ್ರಜ್ಞರು ಇದನ್ನು ನಂಬಿದ್ದುದೇ ಕಾರಣ, ಇದನ್ನು ಪ್ರಚಾರ ಮಾಡುತ್ತಿದ್ದುದೇ ಕಾರಣ. ಕೆಲಸದ ಕಾಲ ಕಡಮೆ ಮಾಡಬೇಕೆಂಬ ಚಳವಳಿಯನ್ನು ಎದುರಿಸಲು ಕೊನೆ ಘಂಟೆಯ ತತ್ವವನ್ನು ಬಳಸಿಕೊಳ್ಳಲಾಗಿತ್ತು. ಆದರೆ ಕೂಲಿ ನಿಧಿಯ ಸಿದ್ಧಾಂತವಾದರೋ, ಹೆಚ್ಚು ಕೂಲಿ ಬೇಕೆಂಬ ಚಳವಳಿಯನ್ನು ಎದುರಿಸಲು ಉಪಯೋಗಿಸಲ್ಪಟ್ಟಿತು.

ಹೆಚ್ಚು ಕೂಲಿ ಬೇಕು—ಎಂಬ ಕಾರಣದಿಂದ ಕೆಲಸಗಾರರು ಕಾರ್ಮಿಕ ಸಂಘ ಸೇರಿದರು, ಮುಷ್ಕರ ಹೂಡಿದರು. ಇದು 'ಶುದ್ಧ ಹುಚ್ಚು' ಎಂದರು ಅರ್ಥಶಾಸ್ತ್ರಜ್ಞರು. ಏಕೆ? ಏಕೆಂದರೆ ಕೂಲಿ ಪಾವತಿ ಮಾಡಲು ನಿಗದಿಯಾದ ನಿಧಿಯೊಂದಿದೆ. ಕೂಲಿ ಪಡೆವವರ ಸಂಖ್ಯೆಯೂ ನಿಸ್ಪೃಷ್ಟ. ಕಾರ್ಮಿಕರು ಕೂಲಿಯ ರೂಪದಲ್ಲಿ ಪಡೆವ ಹಣ ಈ ಎರಡು ಅಂಶಗಳನ್ನು ಅವಲಂಬಿಸಿದೆ. ಎಂದರೆ ಗೊತ್ತಾಯಿತಲ್ಲ? ಕೂಲಿಯ ನಿಧಿ ನಿಖರವಾಗಿರುವಾಗ, ಕೂಲಿಗಾರರ ಸಂಖ್ಯೆಯೂ ನಿಖರವಾಗಿರುವಾಗ, ಅದಕ್ಕದು ತಾಳೆ. ಕೂಲಿ ಹೆಚ್ಚಿಸಲು ಕಾರ್ಮಿಕ ಸಂಘ ಮಾಡಬಲ್ಲುದಾದರೂ ಏನು?

ಜಾನ್‌ಸ್ಟೂವರ್ಟ್ ಮಿಲ್ ಇದನ್ನು ಹೀಗೆ ಹೇಳಿದ: "ಒಂದು ಗೊತ್ತಾದ ಬಂಡವಾಳ ಮತ್ತು ಜನಸಂಖ್ಯೆಗೆ ಅನುಗುಣವಾಗಿ ಕೂಲಿಯೂ ನಿರ್ಣಯಿಸಲ್ಪಡುತ್ತದೆ. ಸ್ಪರ್ಧೆಯ ನಿಯಮ ಇರುವಾಗ ಇದು ಬೇರೆ ಯಾವುದರಿಂದಲೂ ನಿಷ್ಕರ್ಷೆಯಾಗುವುದು ಸಾಧ್ಯವಿಲ್ಲ. ಕಾರ್ಮಿಕರನ್ನು ನೇಮಿಸಿಕೊಳ್ಳಲು ಎತ್ತಿಟ್ಟ ಒಟ್ಟು ನಿಧಿಯನ್ನು ಹೆಚ್ಚಿಸದೆ, ಅಥವಾ ಕೆಲಸ ಬಯಸಿ ತಂತಮ್ಮಲ್ಲೇ ಸ್ಪರ್ಧಿಸುವ ಕಾರ್ಮಿಕರ ಸಂಖ್ಯೆಯನ್ನು ಇಳಿಸದೆ....ಕೂಲಿ ಹೆಚ್ಚಿಸುವುದು ಸಾಧ್ಯವಿಲ್ಲ. ಅಂತೆಯೇ ಕೂಲಿಗಾರರಿಗಾಗಿ ಮುಡಿಪಾದ ನಿಧಿಯ ಮೊತ್ತವನ್ನು ಕಡಮೆ

[1] N. W. Senior, *Letters on the Factory Act as It Affects the Cotton Manufacture* (1837), 3rd ed., pp. 4, 5. London, 1844.

ಮಾಡದೆ, ಅಥವಾ ಕೂಲಿ ಕೊಡಬೇಕಾದ ಕಾರ್ಮಿಕರ ಸಂಖ್ಯೆ ಹೆಚ್ಚಿಸದೆ ಕೂಲಿ ಇಳಿಸುವುದೂ ಸಾಧ್ಯವಿಲ್ಲ."[1]

ಈ ವಾದ ಬಹು ಸುಲಭ, ಅಲ್ಲವೆ? ಕೂಲಿಯ ನಿಧಿ ಹೆಚ್ಚಿಸದಿದ್ದರೆ, ಅಥವಾ ಕೂಲಿಗಾರರ ಸಂಖ್ಯೆ ಇಳಿಸದಿದ್ದರೆ, ಕಾರ್ಮಿಕರು ಹೆಚ್ಚು ಕೂಲಿ ನಿರೀಕ್ಷಿಸುವ ಆಶೆಯೇ ಇಲ್ಲ. ಕೆಲಸಗಾರರಲ್ಲಿ ಯಾರಾದರೂ ತಾವು ಬದುಕಲು ಹೆಚ್ಚು ಕೂಲಿ ಬೇಕೆಂದು ಹಠ ಹಿಡಿಯುವಷ್ಟು ಮಂದಮತಿಗಳಾಗಿದ್ದದ್ದೇ ಆದರೆ, ಅಂಥವರಿಗೆ ಗಣಿತ ಶಾಸ್ತ್ರದ ಸುಲಭ ಪಾಠ ಹೇಳಿಕೊಡಬೇಕು: "ಅಂಕಗಣಿತದ ನಾಲ್ಕು ಮುಖ್ಯ ಸೂತ್ರಗಳು ಸುಳ್ಳೆ? ಇವಕ್ಕೆ ಎದುರು ವಾದಿಸಿ ಏನು ಫಲ? ಕೂಲಿಯ ಪ್ರಶ್ನೆಯೆಂದರೆ ಭಾಗಾಕಾರದ ಲೆಕ್ಕ. ಭಾಗಲಬ್ಧ ಬಹು ಕಡಮೆಯೆಂಬುದೇ ಆಕ್ಷೇಪಣೆ. ಹಾಗಾದರೆ ಭಾಗಲಬ್ಧ ಹೆಚ್ಚಿಸುವ ಮಾರ್ಗಗಳು ಎಷ್ಟು? ಎರಡಲ್ಲವೆ? ಭಾಜಕವನ್ನು ಹಾಗೇ ಇಟ್ಟು, ಭಾಜ್ಯವನ್ನು ಹೆಚ್ಚಿಸಿದರೆ ಆಗ ಭಾಗಲಬ್ಧವೂ ಹೆಚ್ಚುತ್ತದೆ. ಅಥವಾ, ಭಾಜ್ಯವನ್ನು ಹಾಗೇ ಇಟ್ಟು, ಭಾಜಕವನ್ನು ಇಳಿಸಿದರೂ ಭಾಗಲಬ್ಧ ಹೆಚ್ಚುತ್ತದೆ."[2]

ಈ ಗಣಿತ ಪಾಠದ ಪುಟದಲ್ಲಿ ಕೆಳಗೆ ಕೊಟ್ಟಿರುವ ಚಿತ್ರಗಳು ಬಹುಶಃ ಹೀಗೆ ಇದ್ದಾವು:




ಹೆಚ್ಚು ಕೂಲಿ ಪಡೆಯುವುದು ಹೇಗೆ? ಭಾಗಲಬ್ಧ ಹೆಚ್ಚಿಸುವುದು ಹೇಗೆ?
ಮೊದಲನೆಯ ವಿಧಾನ—ಭಾಜ್ಯವನ್ನು ಹೆಚ್ಚಿಸಿ.



[1] J. S. Mill, *Principles of Political Economy*, (1848), 2 vols , 3rd ed., vol.I, p. 409. Parker & Son, London, 1852.

[2] Prof. Perry quoted in *The Wages Question*, by Francis A. Walker, p. 143. Henry Holt and Company, inc., N. Y., 1891 (first published 1876).

ಎರಡನೆಯ ವಿಧಾನ—ಭಾಜಕವನ್ನು ಕಡಮೆ ಮಾಡಿ



ಎಲ್ಲಾ ಬಲು ಸುಲಭ, ಸ್ಪಷ್ಟ. ಹೆಚ್ಚು ಕೂಲಿ ಪಡೆಯಲು ಇರುವ ವಿಧಾನ ಎರಡು. ಎರಡನೆಯ ವಿಧಾನ, "ಭಾಜಕವನ್ನು ಕಡಮೆ ಮಾಡಿ"—ಎಂದರೆ ಕೆಲಸಗಾರರ ಸಂಖ್ಯೆ ಕಡಮೆ ಮಾಡಿ. ಕಾರ್ಮಿಕರಿಗೆ ಇವರು ನೀಡಿದ ಹಳೆಯ ಸಲಹೆ. ಮಾಲ್ಥಸ್ ಇದನ್ನೇ ನೈತಿಕ ಸಂಯಮ ಎಂದು ಕರೆದಿದ್ದ.

ಮೊದಲನೆಯ ವಿಧಾನ, "ಭಾಜ್ಯವನ್ನು ಹೆಚ್ಚಿಸಿ"—ಎಂದರೆ ಕೂಲಿ ನಿಧಿಯ ಮೊತ್ತ ಹೆಚ್ಚಿಸಿ. "ಪ್ರತಿಯೊಬ್ಬನೂ ಯಾವ ರೀತಿ ಶ್ರಮಿಸಿದರೆ ಹೆಚ್ಚು ಲಾಭವೆಂದು ಅನುಭವದಿಂದ ಅರಿಯುವನೋ ಆ ರೀತಿ ಯತ್ನ ನಡಸಲು ಪ್ರತಿಯೊಬ್ಬನಿಗೂ ಅವಕಾಶ ನೀಡುವುದರಿಂದ; ಕೆಲವು ವೇಳೆ ಸಮುದ್ದೇಶಪೂರ್ವಕ ಅಜ್ಞಾನದಿಂದಲೂ, ಕೆಲವು ವೇಳೆ ದಯೆಯಿಂದಲೂ, ಕೆಲವು ವೇಳೆ ರಾಷ್ಟ್ರೀಯ ಅಸೂಯೆಯಿಂದಲೂ ಪ್ರೇರಿತವಾಗಿ ಸರಕಾರಗಳು ಪ್ರತಿಬಂಧಕ, ನಿಷೇಧ, ರಕ್ಷಣಾಸುಂಕ ಮುಂತಾದ ತಪ್ಪು ವಿಧಾನಗಳ ಮೂಲಕ ಕೈಗಾರಿಕೆಯನ್ನು ನಾಶ ಪಡಿಸುವುದನ್ನು ನಿಲ್ಲಿಸಿ, ಕೈಗಾರಿಕೆಯನ್ನು ಇವುಗಳಿಂದ ವಿಮೋಚನೆಗೊಳಿಸುವುದರಿಂದ."[1] ಎರಡನೆಯ ವಿಧಾನ ಸಾಧ್ಯವೆಂದು ಸೀನಿಯರ್ ಹೇಳಿದ. ಉದ್ಯಮವನ್ನು ಅವರ ಪಾಡಿಗೇ ಬಿಟ್ಟು ಬಿಡಿ. ಫಲಿತಾಂಶ ಸ್ಪಷ್ಟ: ಕೂಲಿಗಾಗಿ ತೆಗೆದಿಟ್ಟ ನಿಧಿಯಲ್ಲಿ ಹೆಚ್ಚು ಹಣ. ವ್ಯಾಪಾರಿಗಳು ಈ ವಾದವನ್ನೊಪ್ಪಿದರು.

ಕಾರ್ಮಿಕರ, ಕಾರ್ಮಿಕ ಸಂಘಗಳ ಬೇಡಿಕೆಗಳಿಗೆ ಉತ್ಪಾದಕರೂ ಅರ್ಥಶಾಸ್ತ್ರಜ್ಞರೂ ನೀಡುತ್ತಿದ್ದ ಉತ್ತರವೆಂದರೆ ಕೂಲಿಯ ನಿಧಿಯ ಸಿದ್ಧಾಂತ. ಕಾರ್ಮಿಕರು ಈ ಸಿದ್ಧಾಂತ ಒಪ್ಪಲಿಲ್ಲ. ಏಕೆಂದರೆ ಇದು ಸುಳ್ಳೆಂದು ಅವರು ಬಲ್ಲರು. ಕಾರ್ಮಿಕ ಸಂಘ ಚಳವಳಿ ತಮಗೆ ಹೆಚ್ಚು ಕೂಲಿ ಗಳಿಸಿಕೊಟ್ಟಿತೆಂಬುದನ್ನು ಅವರು ಬಲ್ಲರು. ಮುಂಗಡವಾಗಿ ತೆಗೆದಿಟ್ಟ ಸ್ಥಿರವಾದ ನಿಧಿಯೊಂದುಂಟೆಂಬ, ಇದರಿಂದ ಕೂಲಿ ಪಾವತಿಯಾಗುವುದೆಂಬ, ಸೂತ್ರವನ್ನು ಇವರು ನಂಬಲಿಲ್ಲ. ಅವರು ಅನುಭವದಿಂದ ಕಲಿತದ್ದು ಬೇರೆ. ಇವರ ಈ ಅನುಭವದ ಪಾಠಕ್ಕೆ ಫ್ರಾನ್ಸಿಸ್ ವಾಕರನ ಸಿದ್ಧಾಂತದ ಮುದ್ರೆಯೂ ಬಿದ್ದಿತ್ತು. ೧೮೭೬ರಲ್ಲಿ ಈ

---

[1] N. W. Senior, *Three Lectures on the Rate of Wages*, 2nd ed., Preface. John Murray, London, 1831.

ವಿಚಾರವಾಗಿ ಬರೆಯುತ್ತಿದ್ದ ಅಮೆರಿಕನ್ ಅರ್ಥಶಾಸ್ತ್ರಜ್ಞ ಈತ. ಕೂಲಿ ನಿಧಿಯ ಸಿದ್ಧಾಂತ ವನ್ನು ಈತ ತನ್ನ ವಾದ ವೈಖರಿಯಿಂದ ಉಡಾಯಿಸಿದ. "ಕೂಲಿ ಬಂಡವಾಳದಿಂದ ಪಾವತಿಯಾಗುವುದೆಂಬ ನಂಬಿಕೆಯ ಆಧಾರದ ಮೇಲೆ....ಲೋಕವಿದಿತ ಸಿದ್ಧಾಂತವೊಂದು ಪ್ರತಿಪಾದಿತವಾಗಿದೆ. ಬಂಡವಾಳವೆಂದರೆ ಕೈಗಾರಿಕೆಯ ಫಲ—ಭೂತ ಕಾಲದಲ್ಲಿ ಉಳಿತಾಯವಾದದ್ದು. ಕೂಲಿ ಬಂಡವಾಳದಿಂದ ಪಾವತಿಯಾಗುವುದೆಂಬ ನಂಬಿಕೆಯಿರುವುದ ರಿಂದಲೇ, ಬಂಡವಾಳ ಎಷ್ಟಿದೆಯೋ ಅದಕ್ಕೆ ತಕ್ಕಂತೆ ಕೂಲಿ, ಎಂಬ ವಾದ ಎದ್ದಿದೆ. ನಾನು ಇದನ್ನು ಒಪ್ಪುವುದಿಲ್ಲ. ಪ್ರಸಕ್ತ ಕೈಗಾರಿಕೆಯ ಉತ್ಪಾದನೆಯಿಂದ ಕೂಲಿ ಪಾವತಿ ಯಾಗುವುವೆಂದು ನನ್ನ ನಂಬಿಕೆ. ಆದ್ದರಿಂದ ಕೂಲಿಯ ನಿಷ್ಕರ್ಷೆ ಆಗುವುದು ಉತ್ಪಾದನೆ ಯಿಂದ....ದುಡಿಮೆ ಕೊಳ್ಳಲಿಕ್ಕಾಗಿ ಯಜಮಾನ ಕೂಲಿ ಕೊಡುವನೇ ವಿನಾ, ತನ್ನಲ್ಲಿರುವ ನಿಧಿ ವೆಚ್ಚಮಾಡಲಿಕ್ಕಲ್ಲ.....ದುಡಿಮೆಯ ಫಲದ ಮೇಲೆ ಕಣ್ಣಿಟ್ಟೇ ಯಜಮಾನ ಕೊಳ್ಳು ತ್ತಾನೆ. ಉತ್ಪಾದನೆಯಾದ ಪದಾರ್ಥದ ಗುಣ ಮೊತ್ತಗಳಿಗೆ ಅನುಸಾರವಾಗಿ ಆತ ಎಷ್ಟು ಕೂಲಿ ಕೊಡಬಹುದೆಂಬುದರ ನಿರ್ಣಯವಾಗುತ್ತದೆ....ಆದ್ದರಿಂದ, ಮುಂದೆ ಉತ್ಪಾದಿಸ ಬೇಕಾದ್ದರ ಸಲುವಾಗಿಯೇ ಕಾರ್ಮಿಕರು ನೇಮಕವಾಗುತ್ತಾರೆ. ಯಜಮಾನ ಹಂಚ ಬೇಕಾದ ನಿಧಿಯೊಂದು ಅವನಲ್ಲಿದೆಯೆಂಬ ಕಾರಣದಿಂದ ಖಂಡಿತ ಕಾರ್ಮಿಕರು ನೇಮಕ ಗೊಳ್ಳುವುದಿಲ್ಲ. ಉತ್ಪಾದನೆಯ ಮೌಲ್ಯವನ್ನೇ ಅವಲಂಬಿಸುತ್ತದೆ—ಕೊಡಬಹುದಾದ ಕೂಲಿಯ ಮೊತ್ತ. ಯಜಮಾನನ ಬಳಿ ಎಷ್ಟು ಸಂಪತ್ತು ಇದೆ, ಎಷ್ಟರ ಮೇಲೆ ಆತನ ಸ್ವಾಮ್ಯ ಇದೆ—ಎಂಬುದು ಮುಖ್ಯವಲ್ಲ. ಆದ್ಧರಿಂದ ಕೂಲಿಗಾರರ ನೇಮಕದ ಉದ್ದೇಶ, ಕೂಲಿಯ ಮೊತ್ತ ಇವು ನಿಷ್ಕರ್ಷೆಯಾಗುವುದು ಉತ್ಪಾದನೆಯಿಂದ, ಬಂಡವಾಳದಿಂದಲ್ಲ."[1]

ಕೂಲಿ ಬಂಡವಾಳದಿಂದ ಕಾರ್ಮಿಕನಿಗೆ ಕೊಟ್ಟ 'ಮುಂಗಡ'ವಲ್ಲ—ಎಂಬ ವಾಕರನ ವಾದವನ್ನು ಸಮರ್ಥಿಸಲು ಜಪಾನು ಇಂಡಿಯಾಗಳಲ್ಲಿ ಇಂದು ಸಾಮಾನ್ಯವಾಗಿರುವ ಪದ್ಧತಿಗಿಂತ ಉತ್ತಮ ದೃಷ್ಟಾಂತವಿಲ್ಲ. ಇಲ್ಲಿ ಕೂಲಿಯನ್ನು "ಹಿಡಿದಿಡುವುದು" ಪದ್ಧತಿ. ಜಪಾನಿನಲ್ಲಿ, "ರೇಷ್ಮೆ ಎಳೆ ತೆಗೆಯುವ ಕಾರ್ಖಾನೆಗಳಲ್ಲೂ ಸಣ್ಣ ಹತ್ತಿಗಿರಣಿಗಳಲ್ಲೂ ಹುಡುಗಿಯರು ಸಂಪಾದಿಸಿದ ಕೂಲಿ ಸಾಮಾನ್ಯವಾಗಿ ನೇರವಾಗಿ ಇವರ ತಂದೆತಾಯಂದಿರಿಗೆ ಪಾವತಿಯಾಗುತ್ತದೆ....ಈ ಕೂಲಿಯನ್ನು ಅರ್ಧ ವರ್ಷಕ್ಕೊಮ್ಮೆ ಕೊಡಬಹುದು. ಅಥವಾ ರೇಷ್ಮೆ ಎಳೆ ತೆಗೆಯುವ ಕಾರ್ಖಾನೆಗಳಲ್ಲಿರುವ ಪದ್ಧತಿಯಂತೆ ಒಂದು ವರ್ಷ ದುಡಿದ ಮೇಲೆ, ವರ್ಷಾಂತ್ಯದಲ್ಲಿ ಕೊಡಬಹುದು.....[ಇಂಡಿಯದಲ್ಲಿ] ಒಂದು ಒಂದೂವರೆ ತಿಂಗಳ ಬಾಕಿ ನಿಂತಮೇಲೆ ಕೊಡುವುದು ವಾಡಿಕೆ. ಕಾರ್ಮಿಕರು ಆಗಲೇ ದುಡಿದು ಸಂಪಾದಿಸಿರುವ ಕೂಲಿಯ ಆಧಾರದ ಮೇಲೆ ಅವರಿಗೆ ಕೊಟ್ಟಿರುವಾಯಿದೆ ಮುಂಗಡಗಳ ಮೇಲೆ ಶೇಕಡ ಒಂಬತ್ತರಂತೆ ಈ ಗಿರಣಿಗಳು ಬಡ್ಡಿ ವಸೂಲು ಮಾಡುವುದೂ ಉಂಟು."[2]

---

[1] Walker, *op. cit.*, pp. 128-130.

[2] F. Utley, *Lancashire and the Far East*, pp. 110, 387. Allen & Unwin, Ltd., London, 1931.

ಕೂಲಿ ನಿಧಿಯ ಸಿದ್ಧಾಂತ ತಪ್ಪೆಂದು ತೋರಿಸಲು ಇಪ್ಪತ್ತನೆಯ ಶತಮಾನದಲ್ಲಿ ದೃಷ್ಟಾಂತ ದೊರಕುವ ವರೆಗೂ ಕಾಯಬೇಕಾದ ಅಗತ್ಯವಿರಲಿಲ್ಲ. ಈ ಸಿದ್ಧಾಂತ ಪುರಸ್ಕಾರ ಯೋಗ್ಯವಲ್ಲವೆಂಬುದು ತಮ್ಮ ಅನುಭವವೆಂದು ಕಾರ್ಮಿಕರು ಏಕಪ್ರಕಾರವಾಗಿ ಇದನ್ನು ತಿರಸ್ಕರಿಸಿದರು. ಈ ಸಿದ್ಧಾಂತದಲ್ಲಿ ಹುರುಳಿಲ್ಲವೆಂದು ತೋರಿಸಲು ಅಮೆರಿಕನ್ ಜೀವನದಿಂದ ಹಲವಾರು ದೃಷ್ಟಾಂತಗಳನ್ನು ೧೮೭೬ರಲ್ಲಿ ವಾಕರ್ ನೀಡಿದ. ಕೂಲಿ ನಿಧಿಯ ಸಿದ್ಧಾಂತದ ಶವದ ಪೆಟ್ಟಿಗೆಗೆ ಕೊನೆಯ ಮೊಳೆ ಹೊಡೆಯುವ ಕೆಲಸ ಕೈಕೊಂಡವನು ವಾಕರ್. ಇವನು ಈ ಕೆಲಸ ಮಾಡುವುದಕ್ಕೂ ಏಳು ವರ್ಷ ಮುಂಚೆಯೇ, ಅರ್ಥಶಾಸ್ತ್ರಜ್ಞರೂ ಕೂಡ ಈ ನೈಸರ್ಗಿಕ ಸೂತ್ರ ಸೂತ್ರವೇ ಅಲ್ಲವೆಂಬುದನ್ನು ಒಪ್ಪಿಕೊಳ್ಳಲಾರಂಭಿಸಿದ್ದರು. ಈ ಸಿದ್ಧಾಂತ ತುಂಬಾ ಪ್ರಚಾರವಾಗಲು ಕಾರಣವಾದ ಪುಸ್ತಕ 'ರಾಜನೀತಿ ತತ್ವಗಳು'. ಇದು ಪ್ರಕಟವಾದದ್ದು ೧೮೪೮ರಲ್ಲಿ. ಇದರ ಕರ್ತೃ ಜಾನ್ ಸ್ಟೂವರ್ಟ್ ಮಿಲ್. ಈತನೇ ೧೮೬೯ರ ಮೇ ತಿಂಗಳಲ್ಲಿ 'ಫಾರ್ಟ್‌ನೈಟ್ಲಿ ರಿವ್ಯೂ' (ಪಾಕ್ಷಿಕ ವಿಮರ್ಶೆ) ಎಂಬ ಪತ್ರಿಕೆಗಾಗಿ ಒಂದು ಪುಸ್ತಕದ ವಿಮರ್ಶೆ ಮಾಡುತ್ತಾ, ತಾನೇ ಹಿಂದೆ ಪ್ರಚಾರ ಮಾಡಿದ ಈ ಸಿದ್ಧಾಂತದ ಬಗ್ಗೆ ತನ್ನ ಈಗಿನ ಪ್ರತಿಕ್ರಿಯೆಯನ್ನು ಕುರಿತು ಹೀಗೆ ಬರೆದ: "ಎಲ್ಲ ಅರ್ಥಶಾಸ್ತ್ರಜ್ಞರೂ—ಅಥವಾ ಬಹು ಮಂದಿ ಅರ್ಥಶಾಸ್ತ್ರಜ್ಞರು—(ಇವರಲ್ಲಿ ನಾನೂ ಸೇರಿದ್ದೆ) —ಇದುವರೆಗೂ ಬೋಧಿಸುತ್ತಿದ್ದ ಸಿದ್ಧಾಂತಕ್ಕೆ—ಕಾರ್ಮಿಕ ಸಂಘಗಳು ಕೂಲಿ ಏರಿಸಬಹುದೆಂಬುದನ್ನು ಒಪ್ಪದಿದ್ದ ಸಿದ್ಧಾಂತಕ್ಕೆ—ಈ ಸಂಘಗಳು ಇಲ್ಲದಿದ್ದರೂ ಕೂಡ, ಏರಬಹುದಾಗಿದ್ದ ಪೇಟೆಯ ಸ್ಪರ್ಧೆಯ ಫಲವಾಗಿ ಸ್ವಲ್ಪ ಮಟ್ಟಿಗೆ ಕೂಲಿಯ ಮಟ್ಟಕ್ಕಿಂತಲೂ ಹೆಚ್ಚಾಗಿ ಕೂಲಿಯನ್ನು ಏರಿಸುವುದು ಈ ಸಂಘಗಳ ಚಟುವಟಿಕೆಗಳಿಂದ ಸಾಧ್ಯವಿಲ್ಲವೆಂಬ ಸಿದ್ಧಾಂತಕ್ಕೆ—ಯಾವ ವೈಜ್ಞಾನಿಕ ಆಧಾರವೂ ಇಲ್ಲ. ಆದ್ದರಿಂದ ಈ ಸಿದ್ಧಾಂತವನ್ನು ಕಿತ್ತೊಗೆಯಬೇಕು."[1]

ಜೆ. ಎಸ್. ಮಿಲ್ಲನ ಈ ನಿಲವು ಬಹು ಎದೆಗಾರಿಕೆಯ ನಿಲವು. ಇವನು ಮುಂಚೆ ಒಂದು ತಪ್ಪು ಮಾಡಿದ್ದ. ಈಗ ಅದನ್ನು ಇವನು ಪ್ರಾಮಾಣಿಕವಾಗಿ ಒಪ್ಪಿಕೊಂಡ, ಸಂಪೂರ್ಣವಾಗಿ ಒಪ್ಪಿಕೊಂಡ. ಆದರೆ ಕಾರ್ಮಿಕರ ದೃಷ್ಟಿಯಿಂದ ಈ ತಪ್ಪೊಪ್ಪಿಗೆ ತುಂಬಾ ತಡವಾಗಿ ಬಂತು. ಈ ವೇಳೆಗಾಗಲೇ ಈ ಸಿದ್ಧಾಂತ ಸಾಕಷ್ಟು ಅನರ್ಥ ಮಾಡಿತ್ತು, ಅರ್ಧ ಶತಮಾನಕ್ಕೂ ಹೆಚ್ಚು ಕಾಲ ಪಿಡುಗಿನ ಕೆಲಸ ಮಾಡಿತ್ತು. ಕಾರ್ಮಿಕರು ಮುಂದುವರಿಯಲು ಪ್ರತಿ ಸಾರಿ ಯತ್ನಿಸಿದಾಗಲೂ ಇವರ ಶತ್ರುಗಳಿಗೆ ಒಂದು ತೋಫ್‌ಖಾನೆಯ ತುಂಬಾ ಗುಂಡು ಒದಗಿಸುತ್ತಿದ್ದ ಈ ಅರ್ಥಶಾಸ್ತ್ರದಿಂದ ಕಾರ್ಮಿಕರಿಗೆ ಯಾವ ಉಪಯೋಗವೂ ಇರಲಿಲ್ಲ. ಇವರ ಜೀವನವನ್ನು ಉತ್ತಮಗೊಳಿಸುವ ಆಸೆಯನ್ನೇ ನೀಡದ ಈ ಶಾಸ್ತ್ರದಿಂದ ಇವರಿಗೇನು ಪ್ರಯೋಜನ? ಇವರನ್ನು ಸೇವಕ ಮಾಡಿಕೊಳ್ಳುತ್ತಿದ್ದವರ

---

[1] J. S. Mill, *Principles of Political Economy*, edited by W. J. Ashley, p. 993. Longmans, Green and Co., London, 1909.

ವರ್ಗವನ್ನೇ ಸಲಸಲವೂ ಓಲೈಸುತ್ತಿದ್ದ, ಅವರಿಗೆ ನೆರವು ನೀಡುತ್ತಿದ್ದ ಈ ಶಾಸ್ತ್ರವನ್ನು ಕಟ್ಟಿಕೊಂಡು ಅವರೇನು ಮಾಡಬೇಕು?

ಅರ್ಥಶಾಸ್ತ್ರದ ಬಗ್ಗೆ ಕಾರ್ಮಿಕರು ಇಷ್ಟೊಂದು ಅಪನಂಬಿಕೆ ಪಡಲು ನಿಜವಾದ ಕಾರಣವಿತ್ತೆಂಬುದನ್ನು ಪ್ರೌಢಪ್ರಾಚೀನ ಸಂಪ್ರದಾಯದ ಮುಖ್ಯ ಅನುಯಾಯಿಗಳಲ್ಲೊಬ್ಬನಾದ ಪ್ರೊ॥ ಜೆ. ಇ. ಕೇರ್ನ್ಸ್ ಎಂಬವನೇ ಒಪ್ಪಿಕೊಂಡಿದ್ದಾನೆ. ೧೮೭೩ರಲ್ಲಿ ಪ್ರಕಟವಾದ "ಅರ್ಥನೀತಿಯ ಪ್ರಬಂಧಗಳು" ಎಂಬ ಪುಸ್ತಕದಲ್ಲಿ, ಅರ್ಥಶಾಸ್ತ್ರವೆಂಬುದು ಬೂರ್ಷ್ವಾ ವರ್ಗದ ಅಸ್ತ್ರವಾಗಿ ಪರಿಣಮಿಸಿದೆಯೆಂದು ಈತ ಹೇಳಿದ್ದಾನೆ: "ಅರ್ಥನೀತಿ, ಸಾಮಾನ್ಯವಾಗಿ, ಎತ್ತು ಈದರೆ ಕೊಟ್ಟಿಗೆಯಲ್ಲಿ ಕಟ್ಟು, ಎಂಬ ರೀತಿಯ ವಿಚಾರಹೀನ ಸೂತ್ರಗಳ ರೂಪು ತಳೆದು ಬಂದಿದೆ. ಕಾರ್ಮಿಕರಿಗೆ ಸಂಬಂಧಿಸಿದಂತೆಯಂತೂ ಅದರ ನಿಲವು ಇಂಥದೇ ಆಗಿದೆ. ಕಟ್ಟಳೆ ವಿಧಿಸುವ, ಒಂದು ಬಗೆಯ ಸಾಮಾಜಿಕ ವ್ಯವಸ್ಥೆಯನ್ನು 'ಮಂಜೂರು' ಮಾಡುವ, ಇನ್ನೊಂದು ಬಗೆಯದನ್ನು 'ತೆಗಳುವ,' ಜನರು ಇದರ ಬಗ್ಗೆ ಚಿಂತನಪರರಾಗಿರಬಾರದೆಂಬ, ಅವರು ಇದಕ್ಕೆ ವಿಧೇಯರಾಗಿರಬೇಕೆಂಬ, ನಿಯಮಾವಳಿಯಾಗಿದೆ ಇದು. ಅರ್ಥನೀತಿಯ ಹೆಸರಿನಲ್ಲಿ ಜಗತ್ತಿಗೆ ವಿಧಿಸಲಾಗುತ್ತಿರುವ ಕಟ್ಟಳೆಗಳನ್ನು, ಈಗಿರುವ ಸಮಾಜವ್ಯವಸ್ಥೆಯೇ ಸರಿಯೆಂದು ಒಪ್ಪಿಗೆಯ ಮುದ್ರೆ ಒತ್ತುವ ಕಟ್ಟಳೆಗಳನ್ನು, ನಾವು ಪರಿಗಣಿಸಿದ್ದೇ ಆದರೆ, ಹಲವರು ಇದರ ಬಗ್ಗೆ ಅಸಹನೆಯನ್ನು—ತೀವ್ರ ವಿರೋಧವನ್ನೂ ಕೂಡ—ಹೊಂದಿರುವುದೇಕೆಂಬುದನ್ನು ನಾವು ಅರಿಯಬಹುದು. ಆರ್ಥಿಕ ಸೂತ್ರಗಳೆಂದು ಇಂದು ಹೆಸರಿಸಿಕೊಳ್ಳುವ ಸೂತ್ರಗಳನ್ನು ಪ್ರತಿಪಾದಿಸಿದ ಕೆಲವು ಮಂದಿ ಅರ್ಥಶಾಸ್ತ್ರಜ್ಞರ ಮೆಚ್ಚಿಕೆಗೆ ಪಾತ್ರವಾದ ಪ್ರಸಕ್ತ ಕೈಗಾರಿಕಾ ವ್ಯವಸ್ಥೆಯನ್ನು ಈ ಅರ್ಥಶಾಸ್ತ್ರಜ್ಞರಂತೆಯೇ ಮೆಚ್ಚಲೊಲ್ಲದ, ಹೀಗೆ ಮೆಚ್ಚದಿರಲು ಸಾಕಷ್ಟು ಕಾರಣ ಹೊಂದಿರುವ, ಜನರಿದ್ದಾರೆ. 'ಅರ್ಥನೀತಿ' ಮುಷ್ಕರಗಳನ್ನು ತೆಗಳುವುದೆಂಬುದಾಗಿ, ದುಡಿಮೆಯ ಕಾಲವನ್ನು ಮಿತಿಗೊಳಿಸಬೇಕೆಂಬ ಸಲಹೆಯನ್ನು ತಾತ್ಸಾರದಿಂದ ಕಾಣುವುದೆಂಬುದಾಗಿ, ಆದರೆ ಬಂಡವಾಳ ಶೇಖರಣೆಯನ್ನು "ಮಂಜೂರು" ಮಾಡುವುದೆಂಬುದಾಗಿ, ಕೂಲಿಯ ಪೇಟೆಬೆಲೆಗೆ ಒಪ್ಪಿಗೆ ನೀಡುವುದೆಂಬುದಾಗಿ, ಯಾವನಾದರೂ ಕಾರ್ಮಿಕನೊಬ್ಬನಿಗೆ ಹೇಳಿದರೆ ಆತ ಎಂಥ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿಯಾನು? 'ಅರ್ಥನೀತಿ ಕಾರ್ಮಿಕನಿಗೆ ವಿರುದ್ಧವಾಗಿರುವುದರಿಂದ, ಕಾರ್ಮಿಕನು ಅರ್ಥನೀತಿಗೆ ವಿರುದ್ಧವಾಗಿರಬೇಕು,' ಎಂದು ಆತ ಹೇಳಿದರೆ ಅದು ಅಸಹಜ ಪ್ರತಿಕ್ರಿಯೆಯೆನಿಸಲಾರದು. ಈ ಹೊಸ ನಿಯಮಾವಳಿಯನ್ನು ಆತ ಸಂಶಯ ದೃಷ್ಟಿಯಿಂದ ಕಂಡರೆ, ಯಜಮಾನರ ಹಿತಕ್ಕೆ ಅನುಗುಣವಾಗಿ ರಚಿತವಾದ ವಿಚಾರ ಸರಣಿ ಇದು—ಎಂದು ಆತ ಪರಿಗಣಿಸಿದರೆ, ವಿವೇಕಶಾಲಿಯಾದ ಕಾರ್ಮಿಕ ಇದನ್ನು ತಿರಸ್ಕರಿಸಬೇಕೆಂದು ಭಾವಿಸಿದರೆ, ಇದರಲ್ಲಿ ಅಸಹಜವಾದದ್ದೇನಿದೆ?"[1]

ಅರ್ಥನೀತಿ ಕಾರ್ಮಿಕನಿಗೆ ವಿರುದ್ಧವಾಗಿತ್ತೆಂಬುದು ನಿಜ. ಅದು ಉದ್ಯಮಿಗಳ ಪರವಾಗಿ

---

[1] J. E. Cairnes, *Essays in Political Economy*, pp. 260, 261. Macmillan & Company ,London, 1873.

—ಅದರಲ್ಲೂ ಇಂಗ್ಲೆಂಡಿನ ಉದ್ಯಮಿಗಳ ಪರವಾಗಿ—ಇತ್ತೆಂಬುದೂ ನಿಜ. ಪ್ರೌಢಪ್ರಾಚೀನ ಅರ್ಥಶಾಸ್ತ್ರಜ್ಞರ ಬೋಧನೆಗಳು ಫ್ರಾನ್ಸ್ ಜರ್ಮನಿಗಳಿಗೂ ಹಬ್ಬಿತ್ತು. ಹತ್ತೊಂಬತ್ತನೆಯ ಶತಮಾನದ ಮೊದಲ ಇಪ್ಪತ್ತೈದು ವರ್ಷಗಳಲ್ಲಿ ಈ ದೇಶಗಳಲ್ಲಿ ಪ್ರಕಟವಾದ ಪ್ರಸಿದ್ಧ ಅರ್ಥಶಾಸ್ತ್ರ ಗ್ರಂಥಗಳು ಮುಖ್ಯವಾಗಿ ಇಂಗ್ಲಿಷ್ ಪ್ರೌಢಪ್ರಾಚೀನ ಅರ್ಥಶಾಸ್ತ್ರಜ್ಞರ ಗ್ರಂಥಗಳ ಭಾಷಾಂತರಗಳೋ, ವ್ಯಾಖ್ಯಾನಗಳೋ ಆಗಿದ್ದವು. ಪ್ರೌಢಪ್ರಾಚೀನ ಸಿದ್ಧಾಂತ ಕೇವಲ ವ್ಯಾಪಾರಗಾರನ ಸಿದ್ಧಾಂತವಲ್ಲ; ಕೆಲವು ವಿಚಾರಗಳಲ್ಲಿ ಇದು ವಿಶಿಷ್ಟವಾಗಿ ಇಂಗ್ಲಿಷ್ ವ್ಯಾಪಾರಗಾರನ ಸಿದ್ಧಾಂತವಾಗಿತ್ತೆಂಬುದು ಈ ಎರಡು ದೇಶಗಳ ವಿಚಾರ ಪರರಿಗೆ ಕ್ರಮೇಣ ಮನವರಿಕೆಯಾಯಿತು. ಈ ಪ್ರೌಢಪ್ರಾಚೀನ ಅರ್ಥಶಾಸ್ತ್ರಜ್ಞರು ಇಂಗ್ಲೆಂಡಿನ ವ್ಯಾಪಾರಗಾರರಿಗೆ ಸಹಾಯ ಮಾಡಬೇಕೆಂಬ ಸ್ಪಷ್ಟೋದ್ದೇಶದಿಂದಲೇ ಹೊರ ಟಿದ್ದರೆಂದಲ್ಲ. ಅದು ಅಗತ್ಯವೆನಿಸಿರಲಿಲ್ಲ. ಇಂಗ್ಲೆಂಡಿನಲ್ಲಿ ಒಂದು ನಿರ್ದಿಷ್ಟ ಕಾಲದಲ್ಲ ಇವರು ಜೀವಿಸಿದ್ದರಿಂದ ಇವರ ಸಿದ್ಧಾಂತಗಳು ಆ ವಾತಾವರಣದಿಂದ ಪ್ರಭಾವಿತವಾಗಿರುವುದು ಅನಿವಾರ್ಯವಾಗಿತ್ತು. ಅವರು ಈ ಪ್ರಭಾವಕ್ಕೆ ಒಳಗಾಗಿದ್ದರು. ಇತರ ದೇಶಗಳ ವ್ಯಾಪಾರ ಗಾರರೂ ಅರ್ಥಶಾಸ್ತ್ರಜ್ಞರೂ ಇದನ್ನು ಗುರುತಿಸಿದರು.

ಉದಾಹರಣೆಗೆ ನಿರುಪಾಧಿಕ ವ್ಯಾಪಾರವನ್ನೇ ತೆಗೆದುಕೊಳ್ಳಿ. ಆಡಂ ಸ್ಮಿತ್ ಇದನ್ನು ಬೋಧಿಸಿದ್ದ. ಇವನ ಅನುಯಾಯಿಗಳಾದ ರಿಕಾರ್ಡೋ ಮತ್ತಿತರರೂ ಇದನ್ನೇ ಬೋಧಿಸಿ ದ್ದರು. ಇವರೆಲ್ಲ ಲೋಕೋವಿಶಾಲವಾದ ನಿರುಪಾಧಿಕ ವ್ಯಾಪಾರವನ್ನೇ ಬೋಧಿಸಿದರು. ಆಂತರಿಕ ಅಡಚಣೆಗಳಷ್ಟೇ ಅಲ್ಲ, ದೇಶದೇಶಗಳ ನಡುವಣ ಅಡಚಣೆಗಳನ್ನೂ ಕಿತ್ತೊಗೆಯ ಬೇಕು; ನಿರುಪಾಧಿಕ ಅಂತರರಾಷ್ಟ್ರೀಯ ವ್ಯಾಪಾರ ಏರ್ಪಡಬೇಕು—ಎಂಬ ವಾದವನ್ನು ರಿಕಾರ್ಡೋ ಬಹು ಸ್ಪಷ್ಟವಾಗಿಯೇ ಮಂಡಿಸುತ್ತಾನೆ: "ಅಪ್ಪಟ ನಿರುಪಾಧಿಕ ವಾಣಿಜ್ಯ ವ್ಯವಸ್ಥೆಯಲ್ಲಿ ಪ್ರತಿಯೊಂದು ದೇಶವೂ ತನ್ನ ಬಂಡವಾಳ ದುಡಿಮೆಗಳನ್ನು ತನಗೆ ಅತ್ಯಂತ ಅನುಕೂಲಕರವಾದ ಉದ್ಯಮಗಳಲ್ಲೇ ಹೂಡುತ್ತದೆ. ಈ ವೈಯಕ್ತಿಕಾನುಕೂಲದ ಅನುಸರಣೆ ಇಡೀ ವಿಶ್ವದ ಹಿತಕ್ಕೆ ಬಹು ಚೆನ್ನಾಗಿ ಹೊಂದಿಕೊಳ್ಳುತ್ತದೆ. ಈ ನಿರುಪಾಧಿಕ ಅಂತರ ರಾಷ್ಟ್ರೀಯ ವ್ಯಾಪಾರದಿಂದ ಕೈಗಾರಿಕೆಗೆ ಉತ್ತೇಜನ ದೊರಕುತ್ತದೆ, ಕೌಶಲಕ್ಕೆ ಬಹುಮಾನ ಲಭಿಸುತ್ತದೆ, ಪ್ರಕೃತಿದತ್ತವಾದ ವಿಶಿಷ್ಟ ಶಕ್ತಿಗಳನ್ನು ಬಹು ಸಮರ್ಪಕವಾಗಿ ಬಳಸು ವಂತಾಗಿ, ಅತ್ಯಂತ ಪರಿಣಾಮಕಾರಿಯಾಗಿಯೂ, ಲಾಭಪ್ರದವಾಗಿಯೂ ದುಡಿಮೆಯ ಹಂಚಿಕೆಯಾಗುತ್ತದೆ; ಒಟ್ಟು ಉತ್ಪಾದನೆಯ ಪ್ರಮಾಣವನ್ನು ಅಧಿಕಗೊಳಿಸಿ, ಒಟ್ಟು ಅನುಕೂಲವನ್ನು ಸಾರ್ವತ್ರಿಕವಾಗಿ ವಿತರಣೆಗೊಳಿಸುತ್ತದೆ; ಸಮಾನ ಹಿತ ಸಂಬಂಧಗಳ ಮೂಲಕ ಇಡೀ ನಾಗರಿಕ ಜಗತ್ತಿನಲ್ಲಿ ಏಕತ್ರವಾದ ಸಮಾಜದ ಬಂಧ ರಚಿಸುತ್ತದೆ. ಫ್ರಾನ್ಸ್ ಪೋರ್ಚುಗಲ್ಲುಗಳಲ್ಲಿ ಮದ್ಯ ತಯಾರಾಗಬೇಕೆಂಬುದನ್ನು, ಅಮೆರಿಕಾ ಪೋಲೆಂಡುಗಳಲ್ಲಿ ಧಾನ್ಯ ಬೆಳೆಯಬೇಕೆಂಬುದನ್ನು, ಕಬ್ಬಿಣದ ಸಾಮಾನೇ ಮುಂತಾದ ಪದಾರ್ಥಗಳು ಇಂಗ್ಲೆಂಡಿನಲ್ಲಿ ತಯಾರಾಗಬೇಕೆಂಬುದನ್ನು ನಿರ್ಣಯಿಸುವ ತತ್ತ್ವ ಇದು."[1]

---

[1] **Ricardo, *op. cit.*, p. 81.**

ನಿರುಪಾಧಿಕ ಅಂತರರಾಷ್ಟ್ರೀಯ ಪದಾರ್ಥವಿನಿಮಯದ ಪ್ರಾಮುಖ್ಯದ ವಿಚಾರವಾಗಿ ರಿಕಾರ್ಡೋ ಬರೆದಿರುವ ಮಾತು ನಿಜವಿರಬಹುದು, ಅಥವಾ ಇಲ್ಲದಿರಬಹುದು. ಆದರೆ ಆತ ಇದನ್ನು ಬರೆದ ಕಾಲದಲ್ಲಿ ಇಂಗ್ಲೆಂಡಿನ ವಿಚಾರದಲ್ಲಿ ಈ ಮಾತು ಸಂಪೂರ್ಣ ಸತ್ಯವಾಗಿತ್ತೆಂಬುದಂತೂ ನಿರ್ವಿವಾದ. ಕೈಗಾರಿಕಾ ಕ್ರಾಂತಿ ಮೊದಲು ಬಂದದ್ದು ಇಂಗ್ಲೆಂಡಿಗೆ. ಪ್ರಪಂಚದ ಇತರೆಡೆಯಲ್ಲಿನ ಉತ್ಪಾದಕರಿಗಿಂತ ಮುಂಚೆ ಇವರು ಉತ್ಪಾದನೆ ಆರಂಭಿಸಿದ್ದರು. ಉತ್ಪಾದನ ವಿಧಾನದಲ್ಲಿ, ಯಂತ್ರಗಳ ವೈವಿಧ್ಯದಲ್ಲಿ, ಸಾರಿಗೆ ಸೌಲಭ್ಯದಲ್ಲಿ—ಎಲ್ಲದರಲ್ಲೂ ಆಂಗ್ಲ ಉತ್ಪಾದಕರದೇ ಮೇಲುಗೈ. ಇಂಗ್ಲಿಷರು ತಮ್ಮ ಕಾರ್ಖಾನೆಗಳ ವಸ್ತುಗಳಿಂದ ಜಗತ್ತನ್ನೇ ಆವರಿಸಲು ಶಕ್ತರೂ ಸಿದ್ಧರೂ ಆಗಿದ್ದರು. ಆದ್ದರಿಂದ ಅಂತರರಾಷ್ಟ್ರೀಯ ನಿರುಪಾಧಿಕ ವ್ಯಾಪಾರವೆಂದರೆ ಅವರಿಗೆ ತಮ್ಮ ಬೀದಿಯ ವ್ಯಾಪಾರದಂತೆಯೇ ಆಗಿತ್ತು.

ಈ ಕಾರಣಗಳಿಂದಲೇ ಇದು ಇತರ ದೇಶಗಳ ವ್ಯಾಪಾರಗಾರರಿಗೆ ಒಪ್ಪಿಗೆಯಾಗಲಿಲ್ಲ. ಅಮೆರಿಕದಲ್ಲಿ ಅಲೆಕ್ಸಾಂಡರ್ ಹ್ಯಾಮಿಲ್ಟನ್ ಕೇಂದ್ರ ಆಡಳಿತದಲ್ಲಿ ರಕ್ಷಣಾ ಸುಂಕದ ವ್ಯವಸ್ಥೆಯನ್ನಳವಡಿಸಿದ. ಇತರ ದೇಶಗಳೂ ಕೂಡ ಸುಂಕದ ಕೋಟೆ ಕಟ್ಟಿಕೊಂಡಿದ್ದವು. ಆದರೆ ಆಂಗ್ಲ ಪ್ರೌಢಪ್ರಾಚೀನವಾದಿ ಅರ್ಥಶಾಸ್ತ್ರಜ್ಞರ ಪ್ರಭಾವದಿಂದಾಗಿ ಇವು ನಿರುಪಾಧಿಕ ವ್ಯಾಪಾರದ ಕಲ್ಪನೆಗಳೊಡನೆ ಚೆಲ್ಲಾಟವಾಡುತ್ತಿದ್ದುವು.

೧೮೪೧ರಲ್ಲಿ, ಅಂತರರಾಷ್ಟ್ರೀಯ ನಿರುಪಾಧಿಕ ವ್ಯಾಪಾರದ ಆಂಗ್ಲಗೀತೆ ಇತರ ದೇಶಗಳಲ್ಲೂ ತುಂಬಾ ಜನಪ್ರಿಯವಾಗುತ್ತಿದ್ದಾಗ, ಫ್ರೆಡರಿಕ್ ಲಿಸ್ಟ್ ಎಂಬವನು ತಾನು ಪ್ರಕಟಿಸಿದ "ರಾಷ್ಟ್ರೀಯ ಅರ್ಥನೀತಿ ವ್ಯವಸ್ಥೆ" ಎಂಬ ಪುಸ್ತಕದಲ್ಲಿ ಇದನ್ನು ಟೀಕಿಸಿದ. ಲಿಸ್ಟ್ ಒಬ್ಬ ಜರ್ಮನ. ಆ ಕಾಲದಲ್ಲಿ ಜರ್ಮನಿಯ ಕೈಗಾರಿಕೆ ಇನ್ನೂ ಶೈಶವಾವಸ್ಥೆಯಲ್ಲಿತ್ತು. ಆತ ಅಮೆರಿಕಾ ಸಂಯುಕ್ತ ಸಂಸ್ಥಾನದಲ್ಲಿ ಕೆಲವು ವರ್ಷ ಕಳೆದಿದ್ದ. ಅಮೆರಿಕದ ಕೈಗಾರಿಕೆಯ ವಿಚಾರದಲ್ಲೂ ಇದು ನಿಜವಾಗಿತ್ತೆಂಬುದನ್ನಾತ ಕಂಡಿದ್ದ. ಅಂತರರಾಷ್ಟ್ರೀಯ ನಿರುಪಾಧಿಕ ವ್ಯಾಪಾರ ಸ್ಥಾಪನೆಯಾದದ್ದೇ ಆದರೆ, ಇಂಗ್ಲೆಂಡಿಗೆ ಸಮನಾಗಿ ಬೆಳೆಯದ ದೇಶಗಳು ಆ ದೇಶದ ಸಮಕ್ಕೆ ಬರುವುದು ಸಾಧ್ಯವಾಗಲಾರದೆಂದು—ಸಾಧ್ಯವಾದರೂ ಹೀಗಾಗಲು ಬಹುಕಾಲ ಬೇಕಾಗುವುದೆಂದು—ಆತ ಅರಿತುಕೊಂಡ. ನಿರುಪಾಧಿಕ ವ್ಯಾಪಾರ ಇರಲಿ; ಆದರೆ ಈಗಲೇ ಅಲ್ಲ; ಹೆಚ್ಚು ಬೆಳೆಯದ ರಾಷ್ಟ್ರಗಳು ಮುಂದುವರಿದ ರಾಷ್ಟ್ರಗಳ ಮಟ್ಟಕ್ಕೆ ಬಂದ ಮೇಲೆ—ಎಂದು ಆತನ ಮತ. "ದುರದೃಷ್ಟವಶಾತ್ ಯಾವುದಾದರೂ ದೇಶ ಇತರ ದೇಶಗಳಿಗಿಂತಲೂ ಕೈಗಾರಿಕೆ, ವಾಣಿಜ್ಯ, ನೌಕಾಯಾನವೇ ಮುಂತಾದ ವಿಚಾರಗಳಲ್ಲಿ ಹಿಂದುಳಿದಿದ್ದರೆ, ಇಂಥ ದೇಶದ ಬೆಳವಣಿಗೆಗೆ ಅಗತ್ಯವಾದ ಬೌದ್ಧಿಕ ಹಾಗೂ ಭೌತಿಕ ಸಾಧನಗಳು ಇಲ್ಲಿದ್ದರೆ, ಇಂಥ ದೇಶ ಮೊದಲು ತನ್ನ ಸ್ವಂತ ಶಕ್ತಿ ಬೆಳಸಿಕೊಳ್ಳಬೇಕು. ಹೆಚ್ಚು ಮುಂದುವರಿದ ದೇಶಗಳೊಡನೆ ನಿರುಪಾಧಿಕ ಸ್ಪರ್ಧೆ ನಡಸುವಂಥ ಸ್ಥಿತಿ ಗಳಿಸಿಕೊಳ್ಳಬೇಕು."[1]

---

[1] F. List, *National System of Political Economy*, Preface. Longmans, Green and Co., London, 1904 (first published 1841).

ಪದಾರ್ಥದ ಬೆಲೆ ಅಗ್ಗವಾಗಿದ್ದರೆ ಮಾತ್ರ ಸಾಲದು—ಎಂಬುದು ಅವನ ಭಾವನೆ. ಪದಾರ್ಥ ಒಂದು ದೃಷ್ಟಿಯಿಂದ ಅಗ್ಗವಾಗಿದ್ದರೂ ಇನ್ನೊಂದು ದೃಷ್ಟಿಯಿಂದ ಬಲು ತಗ್ಗು. ಯಾವುದಾದರೊಂದು ಕಾಲದಲ್ಲಿ ಎಷ್ಟು ಮೌಲ್ಯದ ದಾಸ್ತಾನಿದೆಯೆಂಬುದರಿಂದಲೇ ಒಂದು ದೇಶ ದೊಡ್ಡದಾಗುವುದಿಲ್ಲ. ಈ ಮೌಲ್ಯದ ಉತ್ಪಾದನ ಶಕ್ತಿ ಎಷ್ಟರ ಮಟ್ಟಿಗೆ ಇದಕ್ಕಿದೆಯೆಂಬುದರ ಮೇಲಿಂದ ಇದರ ಹಿರಿತನವನ್ನರಿಯಬೇಕು, **ಐಶ್ವರ್ಯದ ಸಾಧನ ಐಶ್ವರ್ಯಕ್ಕಿಂತ** ಭಿನ್ನವಾದದ್ದು. ಒಬ್ಬಾತ ಐಶ್ವರ್ಯ ಹೊಂದಿರಬಹುದು. ಆದರೆ ಆತ ಅನುಭೋಗಿಸುವುದಕ್ಕಿಂತ ಹೆಚ್ಚು ಮೌಲ್ಯದ ವಸ್ತು ಉತ್ಪಾದಿಸುವ ಶಕ್ತಿ ಆತನಿಗಿಲ್ಲದಿದ್ದರೆ, ಆತ ಬಡವನಾಗುತ್ತಾನೆ....ಆದ್ದರಿಂದ **ಸಂಪತ್ತಿನ ಸಂಪಾದನೆಯ ಶಕ್ತಿ ಸಂಪತ್ತಿಗಿಂತ** ಬಹುಮುಖ್ಯ. ಖಾಸಗಿ ವ್ಯಕ್ತಿಗಳಿಗಿಂತ ಇಡೀ ರಾಷ್ಟ್ರಗಳ ವಿಚಾರದಲ್ಲಿ ಇದು ಇನ್ನೂ ಮುಖ್ಯ."[1]

ನಿರುಪಾಧಿಕ ವ್ಯಾಪಾರ ತನ್ನ ಆದರ್ಶಸೂತ್ರವಾಗುವ ಮುನ್ನ ಹಿರಿಮೆ ಗಳಿಸಿದ ಇಂಗ್ಲೆಂಡು ಈಗ ಇತರ ದೇಶಗಳೂ ಅದರ ಹೆಜ್ಜೆ ಅನುಸರಿಸುವುದು ಸಾಧ್ಯವಾಗದಂತೆ ಮಾಡಲು ಯತ್ನಿಸುತ್ತಿದೆಯೆಂದು ಲಿಸ್ಟ್ ಹೇಳಿದ್ದಾನೆ: "ಮಹೋನ್ನತಿಯನ್ನು ಅಡರಿದವನು ತಾನು ಏರಿ ಬಂದ ಏಣಿಯನ್ನು ಒದೆದು ತಳ್ಳುವುದು ಸಾಮಾನ್ಯ ಬುದ್ಧಿವಂತಿಕೆ. ಅವನ ಹಿಂದೆ ಇತರರೂ ಹತ್ತದಂತೆ ಎಸಗುವುದು ಆತನ ಉದ್ದೇಶ."[2]

ಆದ್ದರಿಂದ, ಶೈಶವ ಕೈಗಾರಿಕೆಗಳ ಹಿಂದೆ ರಕ್ಷಣೆ ಏರ್ಪಡಬೇಕು; ಸುಂಕದ ಕೋಟೆ ರಚಿಸಬೇಕು. ದೇಶೀಯ ಪೇಟೆಯ ಭರವಸೆಯಿದ್ದಾಗ ಇವು ಬೆಳೆಯಲು ಸಾಧ್ಯ; ತಮ್ಮ ಕಾಲ ಮೇಲೆ ತಾವು ನಿಲ್ಲುವುದು ಸಾಧ್ಯ. ಇದು ಲಿಸ್ಟನ ಅಭಿಪ್ರಾಯ. ಸಾಕಷ್ಟು ಶಕ್ತಿ ಸಂಗ್ರಹಿಸಿದ ಮೇಲೆಯೇ ಈ ಕೈಗಾರಿಕೆಗಳನ್ನು ಹೋರಾಟಕ್ಕಾಗಿ ನಿರುಪಾಧಿಕ ವ್ಯಾಪಾರ ಪ್ರಪಂಚಕ್ಕೆ ಕಳುಹಿಸಬಹುದು. ಅಂತರರಾಷ್ಟ್ರೀಯ ಆರ್ಥಿಕ ವ್ಯವಸ್ಥೆಗೆ ವ್ಯತಿರಿಕ್ತವಾಗಿ, ರಾಷ್ಟ್ರೀಯ ಆರ್ಥಿಕ ವ್ಯವಸ್ಥೆಯ ಪ್ರಬಲ ಪ್ರತಿಪಾದಕನಾದನೀತ. ಈತನ ಭಾವನೆಗಳು ಮುಖ್ಯವಾಗಿ ಜರ್ಮನಿ ಹಾಗೂ ಸಂಯುಕ್ತ ಸಂಸ್ಥಾನದಲ್ಲಿ ಬಹು ಪ್ರಭಾವಶಾಲಿಗಳಾದುವು.

ಪ್ರೌಢಪ್ರಾಚೀನ ಮತ ಅಮೋಘವಾದದ್ದೆಂಬುದನ್ನು ನಂಬದವರ ಸಂಖ್ಯೆ ಹೆಚ್ಚುತ್ತಿತ್ತು. ಇವರ ಪೈಕಿ ಲಿಸ್ಟನೂ ಒಬ್ಬ. ಆಡಂ ಸ್ಮಿತ್ತನೂ, ಅವನ ಅನುಯಾಯಿಗಳೂ ನಂಬಿದ್ದ ನಿರುಪಾಧಿಕ ವ್ಯಾಪಾರ ಸಿದ್ಧಾಂತದ ವಿರುದ್ಧ, ರಕ್ಷಣಾ ನೀತಿಯ ಪರವಾಗಿ, ಈತ ಬಹು ಬಿರುಸಾಗಿ ವಾದ ಮಾಡಿದ. ಹತ್ತೊಂಬತ್ತನೆಯ ಶತಮಾನದ ಪ್ರಥಮಾರ್ಧದಲ್ಲಿ ಬಹು ಜನಪ್ರಿಯವೂ ಬಹು ಪ್ರಬಲವೂ ಆಗಿದ್ದ ಪ್ರೌಢಪ್ರಾಚೀನ ಅರ್ಥಶಾಸ್ತ್ರ ಈ ಶತಮಾನದ ದ್ವಿತೀಯಾರ್ಧದಲ್ಲಿ ತನ್ನ ಶಕ್ತಿಯನ್ನು ಸ್ವಲ್ಪ ಕಳೆದುಕೊಳ್ಳಲಾರಂಭಿಸಿತು. ಈ ಕಾಲಕ್ಕೆ ಇನ್ನೊಬ್ಬನ ಗ್ರಂಥಗಳು ಪ್ರಕಟವಾಗಲಾರಂಭಿಸಿದುವು. ಪ್ರೌಢಪ್ರಾಚೀನರ ಕೆಲವು ಸೂತ್ರಗಳನ್ನು ಈತ ಒಪ್ಪಿದನಾದರೂ, ಇವನ್ನು ಬೇರೊಂದು ದಿಕ್ಕಿನಲ್ಲಿ ತೆಗೆದುಕೊಂಡುಹೋಗಿ, ಬೇರೆ ಬಗೆಯ ತೀರ್ಮಾನವನ್ನೇ ತಲಪಿದ. ಈತನೂ ಜರ್ಮನನೇ. ಈತನ ಹೆಸರು ಕಾರ್ಲ್ ಮಾರ್ಕ್ಸ್.

---

[1] *Ibid.*, p. 108.
[2] *Ibid.*, p. 295.

## ೧೮. "ಎಲ್ಲ ದೇಶಗಳ ದುಡಿಮೆಗಾರರೇ, ಒಂದಾಗಿರಿ!"

"ನನ್ನಲ್ಲಿ ಹತ್ತು ಲಕ್ಷ ಡಾಲರ್ ಏನಾದರೂ ಇದ್ದಿದ್ದರೆ!" ಇಂಥ ಆಹ್ಲಾದಕರ ವಿಚಾರದ ಗುಂಗಿನಲ್ಲಿ ನೀವು ನಾವು ಎಷ್ಟೊಂದು ಸಾರಿ ಮೈಮರೆತಿಲ್ಲ? ಐರಿಷ್ ಲಾಟರಿಗಳಲ್ಲಿ ಬಹುಮಾನ ಗಳಿಸಿದ ಅದೃಷ್ಟ ಶಾಲಿಗಳ ಚಿತ್ರಗಳನ್ನು ಪತ್ರಿಕೆಗಳಲ್ಲಿ ನೋಡಿದಾಗಲೆಲ್ಲ ಇಂಥ ಭಾವನೆ ನಮ್ಮಲ್ಲಿ ಬರುತ್ತದೆ. ಇದೇ ರೀತಿಯಾಗಿ, ತಮ್ಮ ಸುತ್ತ ಈಗ ಇರುವುದಕ್ಕಿಂತ ಒಳ್ಳೆಯ ಸಮಾಜ ನಿರ್ಮಾಣದ ಬಗ್ಗೆ ಚಿಂತಿಸುವುದರಲ್ಲೇ ತಮ್ಮ ಜೀವಮಾನದ ಬಹುಭಾಗ ಕಳೆದ ಜನರೂ ಯಾವಾಗಲೂ ಇದ್ದರು. ಆದರೆ ಈ ಚಿಂತನೆ ಸಾಮಾನ್ಯವಾಗಿ ಹಗಲುಗನಸಿನ ಮಟ್ಟದಿಂದ ಮುಂದಕ್ಕೆ ಹೋಗುವುದೇ ಇಲ್ಲ. ಒಮ್ಮೊಮ್ಮೆ ಈ ಕನಸುಗಾರರು ಇದರಲ್ಲೇ ತಲ್ಲೀನರಾಗಿರುತ್ತಾರೆ, ಈ ಭಾವನೆಗಳನ್ನು ಕುರಿತು ತೀವ್ರವಾಗಿ ಆಲೋಚನೆ ನಡೆಸಿರುತ್ತಾರೆ, ತಮ್ಮ ಭೂಸ್ವರ್ಗದ ಸ್ಪಷ್ಟ ಚಿತ್ರಣ ನೀಡಿದ್ದಾರೆ, ಭವಿಷ್ಯ ಆದರ್ಶಸಮಾಜದ ಕಾಣ್ಕೆ ಹೊಂದಿದ್ದಾರೆ.

ವಾಸ್ತವವಾಗಿ ಈ ಕಾರ್ಯ ಅಷ್ಟೇನೂ ಕಷ್ಟಕರವಾಗಿರಲಿಲ್ಲ. ಕಲ್ಪನಾ ಸಾಮರ್ಥ್ಯವುಳ್ಳ ಪ್ರತಿಯೊಬ್ಬನೂ ಬಹುಶಃ ಮಾಡಬಹುದಾದ್ದು ಇದು. ನಿಮ್ಮ ಸುತ್ತ ನೋಡಿ, ಯಾವುದು ತ್ಯಾಜ್ಯವೆಂಬುದನ್ನರಿಯಿರಿ. ಇಷ್ಟೇ ನೀವು ಮಾಡಬೇಕಾದ್ದು. ಎಲ್ಲೆಲ್ಲೂ ಬಡವರನ್ನೆ ಕಾಣುವಿರಲ್ಲವೆ? ನಿಮ್ಮ ಭೂಸ್ವರ್ಗದಲ್ಲಿ, ಕಾಲ್ಪನಿಕ ದ್ವೀಪದಲ್ಲಿ, ಯುಟೋಪಿಯದಲ್ಲಿ, ಬಡತನ ಇರದಂತೆ ಮಾಡಬೇಕಾದ್ದು ಮೊದಲ ಕೆಲಸ. ವಸ್ತುವಿನ ಉತ್ಪಾದನ ವಿತರಣ ಗಳಲ್ಲಿ ಬೇಕಾದಷ್ಟು ವ್ಯರ್ಥವಾಗುತ್ತಿದೆಯಲ್ಲವೆ? ನಿಮ್ಮ ಯುಟೋಪಿಯದಲ್ಲಿ ಶೇಕಡಾ ನೂರರಷ್ಟು ದಕ್ಷವಾದ ಉತ್ಪಾದನ ವಿತರಣ ವ್ಯವಸ್ಥೆಯನ್ನು ನಿರ್ಮಿಸಿದರೆ ಆಯಿತು. ನಿಮ್ಮ ಸುತ್ತ ಎತ್ತೆತ್ತಲೂ ನಾನಾಬಗೆಯ ಅನ್ಯಾಯ ತಾಂಡವವಾಡುತ್ತಿದೆಯಲ್ಲವೆ? ನಿಮ್ಮ ಯುಟೋಪಿಯದಲ್ಲಿ ಪ್ರಾಮಾಣಿಕವಾದ ನ್ಯಾಯಾಲಯಗಳಿರಲಿ, ಇವುಗಳಲ್ಲಿ ಅಗ್ರಾಸನಾ ಸೀನರಾದ ನ್ಯಾಯಾಧಿಪತಿಗಳೂ ಪ್ರಾಮಾಣಿಕರಾಗಿರುವಂತೆ ಮಾಡಿದರೆ ತೀರಿತು. (ಅಥವಾ, ನ್ಯಾಯಾಲಯಗಳೂ ನ್ಯಾಯಾಧೀಶರೂ ಅಗತ್ಯವೇ ಇಲ್ಲದ ಪರಿಸ್ಥಿತಿ ನಿರ್ಮಿಸಿದರೆ ಹೇಗೆ?) ರೋಗ, ಸಂಕಟ, ಅಸುಖ—ಎಲ್ಲಾ ಇವೆಯಲ್ಲವೆ, ನಿಮ್ಮ ಸುತ್ತ? ಯುಟೋಪಿಯದಲ್ಲಿ ಆರೋಗ್ಯ, ಐಶ್ವರ್ಯ, ತುಷ್ಟಿ, ಪುಷ್ಟಿ—ಎಲ್ಲವೂ ಎಲ್ಲರಿಗೂ ಸಿದ್ಧಿಯಾಗುವಂತೆ ಮಾಡಿದರೆ ಆಯಿತಲ್ಲ?

ಯುಟೋಪಿಯದ ನಿರ್ಮಾಪಕರ ದೃಷ್ಟಿಯಿಂದ ಬಹುಮುಖ್ಯವಾದ ಪ್ರಥಮ ಸೂತ್ರ ವೆಂದರೆ ಬಂಡವಾಳ ಪದ್ಧತಿಯ ನಿರ್ಮೂಲ. ಬಂಡವಾಳ ವ್ಯವಸ್ಥೆಯಲ್ಲಿ ಇವರು ಎಲ್ಲೆಲ್ಲೂ ಕೆಟ್ಟದ್ದನ್ನೆ ಕಂಡರು. ಈ ವ್ಯವಸ್ಥೆ ವ್ಯರ್ಥಕರ, ಅನ್ಯಾಯಕರ, ಅಯೋಜಿತ. ಆದ್ದರಿಂದ ಯೋಜನಾಬದ್ಧ ಸಮಾಜವನ್ನು, ದಕ್ಷವೂ ನ್ಯಾಯಪೂರಿತವೂ ಆದ ಸಮಾಜವನ್ನು, ಇವರು ಬಯಸಿದರು. ಬಂಡವಾಳ ವ್ಯವಸ್ಥೆಯಲ್ಲಿ ದುಡಿಯದೆಯೇ ಇದ್ದ ಕೆಲವರು

ಉತ್ಪಾದನ ಸಾಧನಗಳ ಸ್ವಾಮ್ಯ ಪಡೆದು, ತನ್ಮೂಲಕ ಸುಖಜೀವನ, ಭೋಗಜೀವನ ನಡಸುತ್ತಿದ್ದರು. ಯುಟೋಪಿಯನರು—ಆದರ್ಶ ರಾಜ್ಯನಿರ್ಮಾಣದ ಕನಸುಗಾರರು—ಉತ್ಪಾದನ ಸಾಧನ ಎಲ್ಲರ ಸೊತ್ತಾಗಲಿ, ಎಂದರು; ತನ್ಮೂಲಕ ಸುಖಜೀವನ ಸಾಧ್ಯವಾದೀತೆಂದರು. ಆದ್ದರಿಂದ ಇವರು ತಮ್ಮ ಕಾಲ್ಪನಿಕ ಸಮಾಜಗಳಲ್ಲಿ ಬಹುಸಂಖ್ಯಾತರಾದ ಕೆಲಸಗಾರರು ಉತ್ಪಾದನ ಸಾಧನಗಳ ಒಡೆತನ ಹೊಂದುವುದರ ಮೂಲಕ ಸುಖ ಭೋಗಜೀವನ ನಡಸಬಹುದೆಂದು ಕಲ್ಪಿಸಿಕೊಂಡರು. ಇದೇ ಸಮಾಜವಾದ—ಇದೇ ಯುಟೋಪಿಯನರ ಕನಸು.

ಅನಂತರ ಬಂದ, ಕಾರ್ಲ್ ಮಾರ್ಕ್ಸ್.

ಈತನೂ ಕೂಡ ಸಮಾಜವಾದಿಯಾಗಿದ್ದ. ಈತನೂ ಕೂಡ ಕಾರ್ಮಿಕವರ್ಗದ ಸ್ಥಿತಿಗತಿ ಸುಧಾರಿಸಬೇಕೆಂದು ಬಯಸಿದ. ಈತನೂ ಕೂಡ ಉತ್ಪಾದನ ಸಾಧನಗಳ ಒಡೆತನವನ್ನು ಎಲ್ಲ ಜನರೂ ಹೊಂದಿರಬೇಕೆಂದು ಬಯಸಿದ. ಆದರೆ—ಇದು ಬಹು ಮುಖ್ಯ—ಈತ ಯುಟೋಪಿಯದ ಚಿತ್ರ ಕಲ್ಪಿಸಲಿಲ್ಲ. ಭವಿಷ್ಯ ಸಮಾಜ ಹೇಗೆ ಕೆಲಸಮಾಡುವುದೆಂಬ ಬಗ್ಗೆ ಈತ ಅಷ್ಟಾಗಿ ಏನನ್ನೂ ಬರೆಯಲೇ ಇಲ್ಲ. ಈತ ಗತಕಾಲದ ಸಮಾಜದಲ್ಲಿ ಬಹು ಆಸಕ್ತನಾಗಿದ್ದ. ಇದು ಉದಿಸಿದ್ದು, ಬೆಳೆದದ್ದು, ಕ್ಷೀಣಿಸಿದ್ದು. ಇಂದಿನ ಸಮಾಜವಾಗಿ ಪರಿಣಮಿಸಿದ್ದು ಹೇಗೆ? ಈ ವಿಚಾರದಲ್ಲಿ ಈತನಿಗೆ ತೀವ್ರ ಆಸಕ್ತಿ. ಈತ ಇಂದಿನ, ಪ್ರಸಕ್ತ, ಸಮಾಜದಲ್ಲಿ ಅಗಾಧ ಆಸಕ್ತಿ ಹೊಂದಿದ್ದ. ಏಕೆಂದರೆ ಇದು ಮತ್ತೆ ಬದಲಾಯಿಸಿ, ಭವಿಷ್ಯ ಸಮಾಜವಾಗಿ ಪರಿಣಮಿಸುವಂತೆ ಮಾಡುವ ಪ್ರವೃತ್ತಿಗಳನ್ನು ಇದರಲ್ಲಿ ಕಾಣಬಯಸಿದ. ಆದರೆ ನಾಳಿನ ಆರ್ಥಿಕವ್ಯವಸ್ಥೆಗಳ ಬಗ್ಗೆ ಕುತೂಹಲ ಹೊಂದಿರಲಿಲ್ಲ. ಅದನ್ನರಿಯುವ ಯತ್ನದಲ್ಲಿ ಕಾಲ ವ್ಯಯಿಸಲಿಲ್ಲ. ಇಂದಿನ ಆರ್ಥಿಕ ವ್ಯವಸ್ಥೆಗಳನ್ನು ಅರಿಯುವ ಯತ್ನದಲ್ಲೇ ತನ್ನ ಇಡೀ ಕಾಲವನ್ನು ವಿನಿಯೋಗಿಸಿದ. ತಾನು ಜೀವಿಸಿದ್ದ ಕಾಲದ ಬಂಡವಾಳ ಸಮಾಜದ ಚಕ್ರ ಉರುಳುವಂತೆ ಮಾಡಿದ್ದುದು ಯಾವುದೆಂಬುದನ್ನು ಈತ ಅರಿಯ ಬಯಸಿದ. ಈತನ ಮಹೋನ್ನತ ಗ್ರಂಥದ ಹೆಸರು "ಬಂಡವಾಳ—ಬಂಡವಾಳ ಪದ್ಧತಿಯ ಉತ್ಪಾದನೆಯ ವಿಮರ್ಶಾತ್ಮಕ ವಿಶ್ಲೇಷಣೆ."

ಬಂಡವಾಳ ಸಮಾಜದ ವಿಶ್ಲೇಷಣೆ ಮಾಡಿದ ಈತ ಇದರಿಂದ ಸಮಾಜವಾದಿ ವ್ಯವಸ್ಥೆ ಬರುವುದೆಂಬ ತೀರ್ಮಾನಕ್ಕೆ ಬಂದ. ಯುಟೋಪಿಯನರಂತೆ ಇದು ಈತನ ಕನಸಿನ ಶಿಶುವಲ್ಲ. ಸಮಾಜದಲ್ಲಿ ಕಾರ್ಯನಿರತವಾಗಿರುವ ನಿರ್ದಿಷ್ಟ ಪ್ರವೃತ್ತಿಗಳ ಫಲವಾಗಿ ಸಮಾಜವಾದ ಬರುತ್ತದೆ; ಈ ವ್ಯವಸ್ಥೆಯನ್ನು ಆಹ್ವಾನಿಸಲು ಸಂಘಟಿತ ಕ್ರಾಂತಿಕಾರಿ ಕಾರ್ಮಿಕ ವರ್ಗ ಅಗತ್ಯ—ಎಂದು ತಿಳಿದಿದ್ದ, ಮಾರ್ಕ್ಸ್. ಪ್ರೌಢಪ್ರಾಚೀನ ಅರ್ಥಶಾಸ್ತ್ರದಲ್ಲಿ ವ್ಯಾಪಾರಗಾರನಿಗೆ ಬೆಂಬಲವೂ ಸಮಾಧಾನವೂ ದೊರಕುತ್ತಿದ್ದುದರಿಂದ ಅದನ್ನು ವ್ಯಾಪಾರಗಾರನ ಅರ್ಥಶಾಸ್ತ್ರವೆಂದು ಕರೆಯಬಹುದಾದರೆ, ಮಾರ್ಕ್ಸ್‌ನ ಅರ್ಥಶಾಸ್ತ್ರವನ್ನು ದುಡಿಮೆಗಾರನ ಅರ್ಥಶಾಸ್ತ್ರವೆಂದು ಕರೆಯಬಹುದು. ಏಕೆಂದರೆ ಇದರಲ್ಲಿ ವರ್ಣಿತವಾಗಿರುವ ವ್ಯವಸ್ಥೆಯಲ್ಲಿ ಕಾರ್ಮಿಕನಿಗೆ ಒಂದು ಪ್ರಮುಖ ಸ್ಥಾನವಿತ್ತು.

ಕಾರ್ಮಿಕನ ಶೋಷಣೆಯ ಮೇಲೆ ಬಂಡವಾಳ ವ್ಯವಸ್ಥೆ ನಿಂತಿದೆಯೆಂಬುದೇ ಮಾರ್ಕ್ಸ್‌ನ ಆರ್ಥಿಕ ಸಿದ್ಧಾಂತದ ಮುಖ್ಯಾಂಶ.

ಗುಲಾಮಗಿರಿಯ ಕಾಲದಲ್ಲಿ ಕಾರ್ಮಿಕನಿಗೆ—ಎಂದರೆ ಗುಲಾಮನಿಗೆ—ನ್ಯಾಯ ಸಲ್ಲುತ್ತಿರಲಿಲ್ಲವೆಂಬುದನ್ನು ಅರಿಯುವುದು ಸುಲಭ. ಇದರ ಬಗ್ಗೆ ಭಿನ್ನಾಭಿಪ್ರಾಯವೇ ಇಲ್ಲ. ಹೆಚ್ಚು ಸೂಕ್ಷ್ಮವೇದಿಗಳಾದವರು ಕೋಪದಿಂದ ಕನಲಲೂ ಬಹುದು : "ಅಬ್ಬಾ! ಭೀಕರ, ಒಬ್ಬ ಇನ್ನೊಬ್ಬನಿಗಾಗಿ ದುಡಿಯಬೇಕೆಂಬುದು ಸಂಪೂರ್ಣ ತಪ್ಪು! ಸದ್ಯ, ಗುಲಾಮಗಿರಿ ರದ್ದಾದ್ದು ಬಹು ಒಳ್ಳೆಯದು," ಎನ್ನಬಹುದು.

ಇಂತೆಯೇ, ಊಳಿಗಮಾನ್ಯ ಯುಗದಲ್ಲೂ ಕೂಡ ಕಾರ್ಮಿಕನಿಗೆ–ಎಂದರೆ ಜೀತಗಾರನಿಗೆ–ನ್ಯಾಯ ಸಲ್ಲುತ್ತಿರಲಿಲ್ಲವೆಂಬುದೂ ಸುಸ್ಪಷ್ಟ. ಈ ಬಗ್ಗೆಯೂ ಸಂಶಯ ಉದ್ಭವಿಸುವುದಿಲ್ಲ. ಏಕೆಂದರೆ ಈತನೂ ಕೂಡ, ಗುಲಾಮನಂತೆ, ಇನ್ನೊಬ್ಬನಿಗಾಗಿ, ತನ್ನ ಪ್ರಭುವಿಗಾಗಿ, ದುಡಿಯಬೇಕಾಗಿತ್ತು. ಉದಾಹರಣೆಗೆ ಹೇಳುವುದಾದರೆ, ವಾರಕ್ಕೆ ನಾಲ್ಕು ದಿನ ಈತ ತನ್ನ ನೆಲದಲ್ಲಿ ದುಡಿದರೆ, ಉಳಿದ ಎರಡು ದಿನ ಪ್ರಭುವಿನ ನೆಲದಲ್ಲಿ ದುಡಿಯಬೇಕಾಗಿತ್ತು. ಈ ಎರಡು ವ್ಯವಸ್ಥೆಗಳಲ್ಲೂ ಕಾರ್ಮಿಕನ ಶೋಷಣೆ ಸ್ಪಷ್ಟವಾಗಿತ್ತು.

ಆದರೆ ಬಂಡವಾಳ ಸಮಾಜದಲ್ಲೂ ಕಾರ್ಮಿಕನಿಗೆ ನ್ಯಾಯ ಸಲ್ಲುತ್ತಿಲ್ಲವೆಂಬುದನ್ನು ಸುಲಭವಾಗಿ ಹೇಳಲು ಸಾಧ್ಯವಿಲ್ಲ. ಏಕೆಂದರೆ ಕಾರ್ಮಿಕನಿಗೆ ಈಗ ಕೆಲಸ ಮಾಡಲು ಒಪ್ಪುವ ಬಿಡುವ ಸ್ವಾತಂತ್ರ್ಯವಿದೆಯೆಂದು ನಂಬಿಕೆ. ಗುಲಾಮನಂತೆ ಅಥವಾ ಜೀತಗಾರನಂತೆ ಈತ ಈ ಒಡೆಯನಿಗಾಗಿಯೋ ಆ ಪ್ರಭುವಿಗಾಗಿಯೋ ದುಡಿಯಬೇಕಾಗಿಲ್ಲ. ಇಷ್ಟ ಬಂದರೆ ಕೆಲಸ ಮಾಡಬಹುದು, ಇಲ್ಲದಿದ್ದರೆ ಬಿಡಬಹುದು. ಹೀಗೆಂದು ತೋರುತ್ತದೆ. ಯಾವ ಯಜಮಾನನಿಗಾಗಿ ಕೆಲಸ ಮಾಡಬೇಕೆಂಬುದನ್ನು ಈತ ಆರಿಸಿಕೊಂಡಮೇಲೆ, ಕಾರ್ಮಿಕನ ದುಡಿಮೆಗೆ ಆಯಾ ವಾರದ ಕೊನೆಯಲ್ಲೇ ಕೂಲಿ ಸಲ್ಲುತ್ತದೆ. ನಿಜಕ್ಕೂ ಇದು ಹಿಂದಣ ಪದ್ಧತಿಗಿಂತ ಭಿನ್ನವಲ್ಲವೇ ? ಇದು ದುಡಿಮೆಗಾರನ ಶೋಷಣೆಯೆ ?

ಆದರೆ ಮಾರ್ಕ್ಸ್ ಈ ವಾದವನ್ನು ಒಪ್ಪಲಿಲ್ಲ. ಗುಲಾಮಗಿರಿಯ ಹಾಗೂ ಊಳಿಗಮಾನ್ಯ ಪದ್ಧತಿಯ ಸಮಾಜವಲ್ಲಿ ಕಾರ್ಮಿಕನ ಶೋಷಣೆಯಾಗುತ್ತಿದ್ದಂತೆಯೇ ಬಂಡವಾಳ ಸಮಾಜದಲ್ಲೂ ಆತನ ಶೋಷಣೆಯಾಗುತ್ತಿದೆಯೆಂದು ಮಾರ್ಕ್ಸ್ ಹೇಳಿದ. ಬಂಡವಾಳ ಸಮಾಜದಲ್ಲಿ ಈ ಶೋಷಣೆಗೆ ಮುಖವಾಡ ಕವಿದಿದೆ. ಇದು ಮೇಲೆ ಗೋಚರವಾಗತಕ್ಕದ್ದಲ್ಲ. ಮಾರ್ಕ್ಸ್ ಈ ಮುಖವಾಡವನ್ನು ಹರಿದೆಸೆದ. ಶೇಷಮೌಲ್ಯದ—ಅತಿರಿಕ್ತ ಮೌಲ್ಯದ (Surplus value)—ಸಿದ್ಧಾಂತವೇ ಆತ ಉಪಯೋಗಿಸಿದ ಅಸ್ತ್ರ.

ಆಡಂ ಸ್ಮಿತ್ತನಿಂದ ಜಾನ್ ಸ್ಟೂವರ್ಟ್ ಮಿಲ್ಲನ ವರೆಗೆ ಬಹುಮಂದಿ ಪ್ರೌಢಪ್ರಾಚೀನ ವಾದಿಗಳು ನಂಬಿದ್ದ ರಿಕಾರ್ಡೋವಿನ ದುಡಿಮೆಯ ಮೌಲ್ಯ ಸಿದ್ಧಾಂತವನ್ನೇ—ಪರಿಶ್ರಮ ಮೌಲ್ಯ ಮೀಮಾಂಸೆಯನ್ನೇ (Labour theory of value)—ಮಾರ್ಕ್ಸನೂ ತೆಗೆದುಕೊಂಡು ಅದನ್ನು ಬೆಳಸುತ್ತಾನೆ. ಒಂದು ಪದಾರ್ಥದ ಮೌಲ್ಯ ಅದನ್ನು ತಯಾರಿಸಲು ಆಗತ್ಯವಾದ ದುಡಿಮೆಯ ಪ್ರಮಾಣವನ್ನೇ ಅವಲಂಬಿಸಿದೆಯೆಂಬುದು ಈ ಸಿದ್ಧಾಂತದ

ತಿರುಳು. ಪ್ರಸಿದ್ಧ ಅರ್ಥಶಾಸ್ತ್ರಜ್ಞ ಬೆಂಜಮಿನ್ ಫ್ರಾಂಕ್‌ಲಿನ್ ಈ ಪರಿಶ್ರಮ ಮೌಲ್ಯ ಸಿದ್ಧಾಂತದಲ್ಲಿ ನಂಬಿಕೆಯಿಟ್ಟಿದ್ದನೆಂದು ಮಾರ್ಕ್ಸ್ ಹೇಳುತ್ತಾನೆ. ಆತನ ಮಾತುಗಳನ್ನೇ ಮಾರ್ಕ್ಸ್ ಉದ್ಧರಿಸಿ ಹೇಳಿದ್ದಾನೆ: "ವಿಲಿಯಂ ಪೆಟಿಯ ಅನಂತರ ಮೊಟ್ಟ ಮೊದಲಿಗೆ ಬಂದ ಬೆಂಜಮಿನ್ ಫ್ರಾಂಕ್‌ಲಿನ್ ಎಂಬ ಪ್ರಸಿದ್ಧ ಅರ್ಥಶಾಸ್ತ್ರಜ್ಞ ಮೌಲ್ಯಗಳ ಸ್ವಭಾವವನ್ನರಿತಿದ್ದ. ಆತ ಹೀಗೆ ಹೇಳಿದ್ದಾನೆ: ಒಟ್ಟಿನಲ್ಲಿ ವ್ಯಾಪಾರವೆಂದರೆ ದುಡಿಮೆಗೆ ದುಡಿಮೆಯ ವಿನಿಮಯ ಮಾಡುವುದೇ ಆದದ್ದರಿಂದ, ಎಲ್ಲ ಪದಾರ್ಥಗಳ ಮೌಲ್ಯವೂ ದುಡಿಮೆಯಿಂದಲೇ ಅಳೆಯಲ್ಪಡುವುದು ಉಚಿತ."[1]

ನಾವು ಸಾಮಾನ್ಯವಾಗಿ ಬಳಸುವ ವಸ್ತು (goods) ಎಂಬ ಪದಕ್ಕೂ ಪದಾರ್ಥ (Commodity) ಎಂಬ ಪದಕ್ಕೂ ವ್ಯತ್ಯಾಸವುಂಟೆಂದು ಮಾರ್ಕ್ಸ್ ಹೇಳುತ್ತಾನೆ. ಬಂಡವಾಳ ಸಮಾಜದ ವೈಶಿಷ್ಟ್ಯವೆಂದರೆ ಪದಾರ್ಥೋತ್ಪಾದನೆ. "ಬಂಡವಾಳ ಪದ್ಧತಿಯ ಉತ್ಪಾದನ ವಿಧಾನ ಜಾರಿಯಲ್ಲಿರುವ ಸಮಾಜಗಳಲ್ಲಿ ಸಂಪತ್ತೆಂದರೆ 'ಪದಾರ್ಥಗಳ ಅಗಾಧ ರಾಶಿ;' ಒಂದು ಪದಾರ್ಥವೇ ಈ ರಾಶಿಯ ಮೂಲಾಂಶ, ಏಕಾಂಶ. ಆದ್ದರಿಂದ ಒಂದು ಪದಾರ್ಥದ ವಿಶ್ಲೇಷಣೆಯಿಂದಲೇ ನಮ್ಮ ವಿಚಾರಣೆ ಆರಂಭವಾಗಬೇಕು."[2]

ಒಂದು ವಸ್ತು ಪದಾರ್ಥವಾಗಿ ಪರಿವರ್ತನೆಗೊಳ್ಳುವುದು ಅದು ಉತ್ಪಾದನೆಯಾದಾಗ —ನೇರ ಬಳಕೆಗಾಗಿಯಲ್ಲ, ವಿನಿಮಯಕ್ಕಾಗಿ. ಒಬ್ಬ ಒಂದು ಅಂಗಿಯನ್ನು ತನ್ನ ಉಪಯೋಗಕ್ಕಾಗಿಯೇ ಹೊಲಿದುಕೊಂಡರೆ ಅದು ಪದಾರ್ಥವಲ್ಲ. ಇನ್ನೊಬ್ಬನಿಗೆ ಮಾರಲಿಕ್ಕಾಗಿ[2]-ಹಣಕ್ಕೆ ಪ್ರತಿಯಾಗಿಯೋ ಇನ್ನೊಂದು ಸರಕಿಗೆ ಪ್ರತಿಯಾಗಿಯೋ ಕೊಡಲು —ಇದನ್ನು ತಯಾರಿಸಿದ್ದೇ ಆದರೆ, ಆಗ ಇದು ಪದಾರ್ಥ. "ತನ್ನ ದುಡಿಮೆಯ ಫಲವಾಗಿ ಬಂದದ್ದರಿಂದ ತನ್ನ ಇಚ್ಛೆಗಳನ್ನು ನೇರವಾಗಿ ಪೂರೈಸಿಕೊಳ್ಳುವವನು ಸೃಷ್ಟಿಸುವುದು ಉಪಯುಕ್ತ ಮೌಲ್ಯಗಳನ್ನು (use values), ಪದಾರ್ಥಗಳನ್ನಲ್ಲ. ಪದಾರ್ಥಗಳನ್ನು ತಯಾರಿಸಲು ಆತ ಕೇವಲ ಉಪಯುಕ್ತ ಮೌಲ್ಯಗಳನ್ನು ಮಾತ್ರವೇ ತಯಾರಿಸಿದರೆ ಸಾಲದು. ಇತರರಿಗಾಗಿ ಉಪಯುಕ್ತ ಮೌಲ್ಯಗಳನ್ನು, ಸಾಮಾಜಿಕ ಉಪಯುಕ್ತ ಮೌಲ್ಯಗಳನ್ನು, ತಯಾರಿಸಬೇಕು."[3]

ತಾನೇ ಧರಿಸಿರುವ ಉದ್ದೇಶದಿಂದಲ್ಲದೆ, ವಿನಿಮಯಕ್ಕಾಗಿ, ಮಾರಾಟಕ್ಕಾಗಿ, ಅಂಗಿಯನ್ನು ಹೊಲಿಯುವವನು ತಯಾರಿಸುವುದು ಪದಾರ್ಥವನ್ನು.

ಈಗ ವಿಚಾರಿಸಬೇಕಾದ ಮುಖ್ಯ ಪ್ರಶ್ನೆ ಇದು: ಈ ಪದಾರ್ಥ ವಿನಿಯೋಗ ಯಾವ ದರದಲ್ಲಿ? ಈ ಪದಾರ್ಥದ ಮೌಲ್ಯವನ್ನು ನಿರ್ಣಯಿಸುವುದು ಯಾವುದು? ಈ ಅಂಗಿಯನ್ನು ಇನ್ನೊಂದು ಪದಾರ್ಥದೊಡನೆ—ಒಂದು ಜತೆ ಪಾದರಕ್ಷೆಗಳೊಡನೆ—ಹೋಲಿಸಿ ನೋಡಿ.

---

[1] *Capital*, vol. I, p. 19, footnote.

[2] *Ibid.*, p. 1.

[3] *Ibid.*, p. 8.

ವಸ್ತುಗಳಾಗಿ, ಮಾನವನ ಇಚ್ಛೆಗಳನ್ನು ಪೂರೈಸುವ ಸಾಧನಗಳಾಗಿ, ಇವೆರಡಕ್ಕೂ ಸಾಮಾನ್ಯವಾದ ಲಕ್ಷಣ ಯಾವುದೂ ಇಲ್ಲ. ಅಂತೆಯೇ ಇವಕ್ಕೂ ರೊಟ್ಟಿ, ಸೀಸದ ಕಡ್ಡಿ, ಮಾಂಸದ ಭಕ್ಷ್ಯ ಮುಂತಾದ ಇತರ ಪದಾರ್ಥಗಳಿಗೂ ನಡುವೆ ಯಾವ ಸಮಾನ ಲಕ್ಷಣವೂ ಇಲ್ಲ. ಆದರೆ ಇವನ್ನು ವಿನಿಮಯ ಮಾಡುವುದು ಸಾಧ್ಯವಾಗಿರುವುದು ಇವಕ್ಕೆಲ್ಲಾ ಸಮಾನವಾಗಿರುವ ಒಂದು ಗುಣದಿಂದ ಮಾತ್ರ. ಇವಕ್ಕೆಲ್ಲಾ ಸಮಾನವಾಗಿರುವ ಒಂದು ಗುಣವೆಂದರೆ ಇವೆಲ್ಲಾ ದುಡಿಮೆಯ ಫಲಗಳು ಎಂಬುದೇ—ಎನ್ನುತ್ತಾನೆ ಮಾರ್ಕ್ಸ್. ಎಲ್ಲ ಪದಾರ್ಥಗಳೂ ದುಡಿಮೆಯ ಫಲಗಳು. ಆದ್ದರಿಂದ ಮೌಲ್ಯ—ಅಥವಾ ಪದಾರ್ಥಗಳ ವಿನಿಮಯ ದರ—ಇವುಗಳಲ್ಲಿ ಅಡಗಿರುವ ದುಡಿಮೆಯ ಪ್ರಮಾಣವನ್ನೇ ಅವಲಂಬಿಸಿದೆ. ದುಡಿಮೆಯ ಪ್ರಮಾಣವನ್ನು ಅಳೆಯುವುದು ಆ ಪದಾರ್ಥಕ್ಕಾಗಿ ಎಷ್ಟುಕಾಲ ದುಡಿಯಲಾಯಿತು, ಎಂಬುದರ ಮೂಲಕ. ಎಂದರೆ ಶ್ರಮಕಾಲಗಳ ಗುಣಲಬ್ಧವೇ ದುಡಿಮೆಯ ಪ್ರಮಾಣವನ್ನು ಅಳೆಯುವ ಸಾಧನ. ಇದನ್ನು ಶ್ರಮ - ಕಾಲ—labour time—ಎನ್ನಬಹುದು. "ಯಾವ ಸರಕಿನ ಪ್ರಾಮುಖ್ಯ ಎಷ್ಟೆಂಬುದು, ಇದರ ಉತ್ಪಾದನೆಗಾಗಿ ಸಾಮಾಜಿಕವಾಗಿ ಅಗತ್ಯವಾದ ದುಡಿಮೆಯ ಪ್ರಮಾಣವೆಷ್ಟು ಎಂಬುದರಿಂದ ನಿರ್ಣಯಿಸಲ್ಪಡುತ್ತದೆ....ಒಂದು ಪದಾರ್ಥದ ಮೌಲ್ಯಕ್ಕೂ ಇನ್ನೊಂದು ಪದಾರ್ಥದ ಮೌಲ್ಯಕ್ಕೂ ಇರುವ ಸಂಬಂಧ, ಇವೆರಡರ ಉತ್ಪಾದನೆಗಾಗಿ ವಿನಿಯೋಗಿಸಲ್ಪಟ್ಟ ಶ್ರಮ - ಕಾಲಗಳ ಪರಸ್ಪರ ಸಂಬಂಧವನ್ನೇ ಅವಲಂಬಿಸಿದೆ."[1]

ಅಂಗಿ ಹೊಲಿಯಲು ಹದಿನಾರು ಘಂಟೆ ಬೇಕಾಗಿದ್ದು, ಪಾದರಕ್ಷೆ ಹೊಲಿಯಲು ಎಂಟು ಘಂಟೆಕಾಲ ಬೇಕಾಗಿದ್ದರೆ ಅಂಗಿಯ ಮೌಲ್ಯ ಪಾದರಕ್ಷೆಗಳ ಮೌಲ್ಯದ ಎರಡರಷ್ಟಿರುತ್ತದೆ. ಒಂದು ಅಂಗಿಗೆ ಬದಲಾಗಿ ಎರಡು ಜತೆ ಪಾದರಕ್ಷೆಗಳು ಲಭಿಸುತ್ತವೆ. ಈ ಎರಡೂ ಬಗೆಯ ಉತ್ಪಾದನೆಗಳಿಗೆ ಅಗತ್ಯವಾದ ಶ್ರಮ ಒಂದೇ ಬಗೆಯದಲ್ಲವೆಂಬುದನ್ನು ಮಾರ್ಕ್ಸ್ ಅರಿತಿದ್ದ. ಅಂಗಿಯ ರಚನೆ ನೂಲುವವನ, ನೇಯುವವನ, ದರ್ಜಿಯ ಶ್ರಮವನ್ನೊಳಗೊಂಡಿದೆ. ಪಾದರಕ್ಷೆಗಳ ತಯಾರಿಕೆಯಲ್ಲಿ ಬೇರೆ ಬಗೆಯ ದುಡಿಮೆ ಸೇರಿದೆ. ಆದರೆ ಎಲ್ಲ ದುಡಿಮೆಯೂ ಮಾನವನಶ್ರಮ ಶಕ್ತಿಯ ವಿನಿಯೋಗವೆಂಬ ದೃಷ್ಟಿಯಲ್ಲಿ ಎಲ್ಲ ದುಡಿಮೆಯೂ ಒಂದೇ. ಆದ್ದರಿಂದ ಅದರ ಪರಸ್ಪರ ಹೋಲಿಕೆ ಸಾಧ್ಯ–ಎಂಬುದಾಗಿ ಮಾರ್ಕ್ಸ್ ಹೇಳುತ್ತಾನೆ. ಸರಳ, ಕೌಶಲರಹಿತ ಸಾಮಾನ್ಯ ದುಡಿಮೆಯನ್ನೂ ಕೌಶಲಪೂರಿತ ದುಡಿಮೆಯನ್ನೂ ಹೋಲಿಸಬಹುದು. ಎರಡನೆಯದು ಮೊದಲನೆಯದರ ಇಷ್ಟು ಮಡಿ—ಎನ್ನಬಹುದು. ಉದಾಹರಣೆಗೆ, ಒಂದು ಗಂಟೆಯ ಕೌಶಲಪೂರಿತ ದುಡಿಮೆ—ನಿಪುಣ ದುಡಿಮೆ—ಎರಡು ಗಂಟೆಗಳ ಅನಿಪುಣ ದುಡಿಮೆಗೆ ಸಮವೆಂದು ಹೇಳಬಹುದಲ್ಲವೆ ?

ಆದ್ದರಿಂದ ಮಾರ್ಕ್ಸನ ದೃಷ್ಟಿಯಲ್ಲಿ ಒಂದು ಪದಾರ್ಥವನ್ನು ಉತ್ಪಾದಿಸಲು ಅವಶ್ಯವಾದ ಸಾಮಾಜಿಕ ಶ್ರಮಕಾಲಕ್ಕೆ ಅನುಸಾರವಾಗಿ ಅದರ ಮೌಲ್ಯ ನಿರ್ಧರವಾಗುತ್ತದೆ.

---

[1] *Ibid.*, p. 6.

"ಆದರೆ ಅಸಮರ್ಥನೊಬ್ಬ ಬಹು ನಿಧಾನವಾಗಿ ಒಂದು ಪದಾರ್ಥ ತಯಾರಿಸಿದರೆ ಅದರ ಮೌಲ್ಯ ಸಮರ್ಥನೊಬ್ಬನಿಂದ ಶೀಘ್ರವಾಗಿ ತಯಾರಾದ ಪದಾರ್ಥಕ್ಕಿಂತ ಹೆಚ್ಚು—ಎಂದು ಹೇಳಿದಂತಾಗುವುದಿಲ್ಲವೆ ? ಏಕೆಂದರೆ ನಿಧಾನವಾಗಿ ದುಡಿಯುವವರಿಗೆ ಅದನ್ನು ಮುಗಿಸಲು ಹೆಚ್ಚು ಕಾಲ ಬೇಕು," ಎಂದು ನೀವು ಆಕ್ಷೇಪಿಸಬಹುದು. ಮಾರ್ಕ್ಸ್ ಈ ಆಕ್ಷೇಪಣೆಯನ್ನು ನಿರೀಕ್ಷಿಸಿಯೇ ಇದ್ದ. ಇದಕ್ಕೆ ಆತನ ಉತ್ತರ ಇದು : "ಒಂದು ಪದಾರ್ಥದ ಮೌಲ್ಯ ಅದರ ಉತ್ಪಾದನೆಗಾಗಿ ವಿನಿಯೋಗವಾದ ದುಡಿಮೆಯ ಪ್ರಮಾಣಕ್ಕೆ ಅನುಗುಣವಾಗಿ ನಿರ್ಧರವಾಗುವುದೆಂದರೆ, ಒಬ್ಬ ಹೆಚ್ಚು ಸೋಮಾರಿಯಾಗಿದ್ದಷ್ಟೂ, ಅವನ ಕೆಲಸ ಒರಟಾಗಿದ್ದಷ್ಟೂ, ಆತನ ಪದಾರ್ಥದ ಮೌಲ್ಯ ಹೆಚ್ಚಾಗುತ್ತದೆಯೆಂದು ತೋರಬಹುದು. ಏಕೆಂದರೆ ಆ ಪದಾರ್ಥ ತಯಾರಿಕೆ ಪೂರೈಸಲು ಹೆಚ್ಚು ಕಾಲದ ದುಡಿಮೆ ಅಗತ್ಯವಾಗುವುದು. ಆದರೆ ಹೀಗೆ ಭಾವಿಸುವುದು ಒಂದು ದೊಡ್ಡ ತಪ್ಪು. ನಾನು 'ಸಾಮಾಜಿಕ ದುಡಿಮೆ' ಎಂಬ ಪದ ಪ್ರಯೋಗಿಸಿದೆನೆಂಬುದು ನಿಮ್ಮ ನೆನಪಿನಲ್ಲಿರಬಹುದು. 'ಸಾಮಾಜಿಕ' ಎಂಬ ಪದದಲ್ಲಿ ಹಲವು ಅಂಶಗಳು ಅಡಗಿವೆ. ಒಂದು ಪದಾರ್ಥದಲ್ಲಿ ವಿನಿಯೋಗವಾದ ಅಥವಾ ಅಂತರ್ಗತವಾದ ಹೆಪ್ಪು ಗಟ್ಟಿದ ದುಡಿಮೆಯ ಪ್ರಮಾಣದಿಂದ ಅದರ ಮೌಲ್ಯ ನಿರ್ಧರಿಸಲ್ಪಡುತ್ತದೆಯೆಂದು ಹೇಳಿದರೆ, ಅದಕ್ಕೆ ಹಲವು ಷರತ್ತುಗಳನ್ನೂ ಹಾಕಬೇಕಾಗುತ್ತದೆ. ಒಂದು ಗೊತ್ತಾದ ಪರಿಸ್ಥಿತಿಯಲ್ಲಿ, ಗೊತ್ತಾದ ರೀತಿಯಲ್ಲಿ, ಶ್ರಮದ ವಿನಿಯೋಗವಾದಾಗ ಮಾತ್ರ ಈ ಮಾತು ಸತ್ಯ. ಸಮಾಜದ ಅವಸ್ಥೆ ಎಂಥದು, ಸಾಮಾಜಿಕವಾಗಿ ಸರಾಸರಿ ಉತ್ಪಾದನೆಯ ಪರಿಸ್ಥಿತಿ ಎಂತಿದೆ ? ಸಾಮಾನ್ಯವಾಗಿ ಕೆಲಸದ ತೀವ್ರತೆ ಎಷ್ಟು ? ಬಳಸಲಾದ ದುಡಿಮೆಯ ಕೌಶಲದ ಸರಾಸರಿ ಎಷ್ಟು ?—ಇವೆಲ್ಲವನ್ನೂ ಅರಿತಾಗಲೇ ಈ ಮೌಲ್ಯ ನಿರ್ಣಯ ಸಾಧ್ಯ."[1]

ಉದಾಹರಣೆಗೆ, ಇನ್ನೂರು ಮಂದಿ ಕಾರ್ಮಿಕರನ್ನು ಹೊಂದಿರುವ ಒಂದು ಕಾರ್ಖಾನೆಯಲ್ಲಿ ಕೆಲವರು ಇತರರಿಗಿಂತ ಚೆನ್ನಾಗಿ ದುಡಿಯುವರು. ಆದರೆ ಇವರೆಲ್ಲರ ದುಡಿಮೆಯ ಸರಾಸರಿ ಗುಣವೊಂದುಂಟಲ್ಲವೆ ? ಈ ಸರಾಸರಿಗಿಂತ ಮೇಲು ಮಟ್ಟದ ದುಡಿಮೆಯೂ ಕೆಳಮಟ್ಟದ ದುಡಿಮೆಯೂ ಒಂದನ್ನೊಂದು ಸರಿತೂಗಿಸುತ್ತವೆ. ಒಂದು ಅಂಗಿ ರಚಿಸಲು ಅಗತ್ಯವಾದ ಸರಾಸರಿ—ಸಾಮಾಜಿಕವಾಗಿ ಅಗತ್ಯವಾದ ಶ್ರಮ - ಕಾಲ—ಹದಿನಾರು ಗಂಟೆಯೆನ್ನಿ. ಅಂಗಿ ರಚಿಸಲು ಕೆಲವರಿಗೆ ಕಡಮೆ ಕಾಲವೇ ಸಾಕು, ಕೆಲವರಿಗೆ ಹೆಚ್ಚು ಕಾಲವೇ ಬೇಕು. ಆದರೆ ಇವು ಸಾಮಾನ್ಯ ಮಟ್ಟದಿಂದ ಕೆಲಮಟ್ಟಿಗೆ ಉಂಟಾದ ದಿಕ್ಚ್ಯುತಿ. ಉತ್ಪಾದನ ಸಾಧನಗಳ ಬಗ್ಗೆಯೂ, ಪದಾರ್ಥ ಉತ್ಪಾದಿಸಲು ಕಾರ್ಮಿಕರು ಬಳಸುವ ಯಂತ್ರದ ಬಗ್ಗೆಯೂ ಇದೇ ಮಾತು ನಿಜ. ಒಟ್ಟು ವಸ್ತ್ರತಯಾರಿಕೆಯ ಕೈಗಾರಿಕೆ ತೆಗೆದುಕೊಂಡರೆ, ಕೆಲವು ಸಂಸ್ಥೆಗಳು ಹಳತಾದ ಮಗ್ಗಗಳನ್ನು ಹೊಂದಿರಬಹುದು. ಇನ್ನು ಕೆಲವು ಇನ್ನೂ ಸಾಮಾನ್ಯವಾಗಿ ಬಳಕೆಗೆ ಬಾರದ ಅತ್ಯಂತ ನವೀನ ಯಂತ್ರಗಳನ್ನೇ

---

[1] K. Marx, *Value, Price and Profit*, (1865), edited by Eleanor Aveling, p. 33. International Publishers, N. Y., 1935.

ಹೊಂದಿರಬಹುದು. ಆದರೆ ಮತ್ತೆ ಇವೆಲ್ಲವನ್ನೂ ಒಟ್ಟಿಗೆ ಪರಿಗಣಿಸಿದರೆ, ಒಂದು ಸರಾಸರಿ ಯಂತ್ರೋಪಕರಣ ವ್ಯವಸ್ಥೆ ಇದೆಯೆಂದು ಇಟ್ಟುಕೊಳ್ಳಬಹುದು. ಮೇಲಣ ಕೆಳಗಣ ಮಟ್ಟಗಳು ಒಂದಕ್ಕೊಂದು ಸರಿತೂಗಿಸುತ್ತವೆ. ಆದ್ದರಿಂದ ಸಾಮಾಜಿಕವಾಗಿ ಅಗತ್ಯವಾದ ಶ್ರಮ-ಕಾಲವೆಂದರೆ ಸರಾಸರಿ ಉಪಕರಣದ ಸಹಾಯದಿಂದ ನಡೆಯುವ ಸರಾಸರಿ ದುಡಿಮೆ. ಇದು ಬೇರೆಬೇರೆ ಕಾಲಕ್ಕೆ, ಬೇರೆಬೇರೆ ಸ್ಥಳಕ್ಕೆ ಬೇರೆಬೇರೆಯಾಗಿರುತ್ತದೆಂಬುದು ಸಹಜ. ಆದರೆ ಯಾವುದಾದರೊಂದು ಕಾಲದಲ್ಲಿ, ಯಾವುದಾದರೊಂದು ದೇಶದಲ್ಲಿ, ದುಡಿಮೆಗೂ ಉತ್ಪಾದನ ಸಾಧನಕ್ಕೂ ಹೊಂದಿಕೊಳ್ಳುವ ಸರಾಸರಿ ಮಟ್ಟವೊಂದಿರುತ್ತದೆ.

ಎಂದರೆ ಏನಾಯಿತು ? ಒಂದು ಪದಾರ್ಥದ ಮೌಲ್ಯ ಅದನ್ನು ತಯಾರಿಸಲು ಸಾಮಾಜಿಕವಾಗಿ ಅಗತ್ಯವಾದ ಶ್ರಮ-ಕಾಲವನ್ನೇ ಅವಲಂಬಿಸುತ್ತದೆಯೆಂಬುದನ್ನು ಒಪ್ಪಿದೆವೆಂದೇ ಇಟ್ಟುಕೊಳ್ಳಿ. ಆದರೆ ಬಂಡವಾಳ ಸಮಾಜದಲ್ಲಿ ಕೂಲಿಗಾರರ ಶೋಷಣೆ ಯಾಗುತ್ತದೆಯೆಂಬ, ಆಸ್ತಿಯಿಲ್ಲದವರ ವರ್ಗದ ದುಡಿಮೆಯ ಮೇಲೆ ಆಸ್ತಿಯುಳ್ಳವರ ವರ್ಗ ಜೀವಿಸುತ್ತಿದೆಯೆಂಬ, ವಾದಕ್ಕೂ ಇದಕ್ಕೂ ಏನು ಸಂಬಂಧ ? ಕಾರ್ಮಿಕನೂ ಜೀತಗಾರನಂತೆ ತನ್ನ ಕಾಲದಲ್ಲಿ ಒಂದು ಭಾಗವನ್ನು ತನಗಾಗಿಯೂ ಇನ್ನೊಂದು ಭಾಗವನ್ನು ಧಣಿಗಾಗಿಯೂ ವಿನಿಯೋಗಿಸುವನೆಂಬುದಕ್ಕೂ ಇದಕ್ಕೂ ಏನು ಸಂಬಂಧ ?

ಬೇಕಾದಷ್ಟು ಸಂಬಂಧವಿದೆ.

ಬಂಡವಾಳ ಸಮಾಜದಲ್ಲಿ ಕೂಲಿಗಾರ ಸ್ವತಂತ್ರ ಪ್ರಜೆ. ಗುಲಾಮಗಿರಿಯಲ್ಲಿಯಂತೆ ಆತ ಒಬ್ಬ ಯಜಮಾನನ ಸ್ವತ್ತಲ್ಲ. ಜೀತ ಪದ್ಧತಿಯಲ್ಲಿದ್ದಂತೆ ಆತ ನೆಲಕ್ಕೇ ಬಂಧಿಸಲ್ಪಟ್ಟೂ ಇಲ್ಲ. ಆತನಿಗೆ ತನ್ನ ಯಜಮಾನನಿಂದಲೇ ಅಲ್ಲದೆ ತನ್ನ ಉತ್ಪಾದನ ಸಾಧನಗಳಿಂದಲೂ ಹೇಗೆ ಮುಕ್ತಿ ದೊರಕಿತೆಂಬುದನ್ನು (ಅಧ್ಯಾಯ ೧೪ರಲ್ಲಿ) ನಾವಾಗಲೇ ಕಂಡಿದ್ದೇವೆ. ಉತ್ಪಾದನ ಸಾಧನಗಳು (ಎಂದರೆ ನೆಲ, ಉಪಕರಣ, ಯಂತ್ರ ಮುಂತಾದುವು) ಹೇಗೆ ಒಂದು ಸಣ್ಣ ಗುಂಪಿನ ಒಡೆತನಕ್ಕೆ ಬಂದುವು, ಹೇಗೆ ಇವು ಎಲ್ಲ ಕಾರ್ಮಿಕರ ನಡುವೆಯೂ ವಿತರಣೆಯಾಗುವುದು ನಿಂತಿತು—ಎಂಬುದನ್ನು ನೋಡಿದ್ದೇವೆ. ಉತ್ಪಾದನ ಸಾಧನಗಳನ್ನು ಹೊಂದಿಲ್ಲದವರು, ತಮ್ಮ ದುಡಿಮೆಯನ್ನು ಪಡೆಯಬಯಸುವವರಿಗೆ ತಮ್ಮನ್ನೇ ಕೂಲಿಗಾಗಿ ತಾತ್ಕಾಲಿಕವಾಗಿ ಒಪ್ಪಿಸಿಕೊಳ್ಳುವುದರಿಂದ ಮಾತ್ರ ಜೀವನೋಪಾಯ ಗಳಿಸಬಲ್ಲರು. ಕಾರ್ಮಿಕ ಬಂಡವಾಳಿಗನಿಗೆ ತನ್ನನ್ನು ಮಾರಿಕೊಳ್ಳುವುದಿಲ್ಲವೆಂಬುದೇನೋ ನಿಜ. (ಹಾಗೆ ಮಾಡಿದರೆ ಆತ ಗುಲಾಮನಾಗುತ್ತಾನೆ.) ಆದರೆ ತನ್ನಲ್ಲಿರುವ ಏಕೈಕ ಪದಾರ್ಥ ವನ್ನು ಆತ ಮಾರುತ್ತಾನೆ. ಆ ಪದಾರ್ಥವೆಂದರೆ ದುಡಿಮೆಯ ಸಾಮರ್ಥ್ಯ— ಶ್ರಮಶಕ್ತಿ.

“ಆದ್ದರಿಂದ ತನ್ನ ಹಣವನ್ನು ಬಂಡವಾಳವಾಗಿ ಪರಿವರ್ತಿಸಬೇಕಾದರೆ ಹಣದೊಡೆಯ ಪೇಟೆಯಲ್ಲಿ ಸ್ವತಂತ್ರ ದುಡಿಮೆಗಾರನೊಡನೆ ವ್ಯವಹಾರ ನಡಸಬೇಕು. ಈ ದುಡಿಮೆಗಾರ ಎರಡು ದೃಷ್ಟಿಯಲ್ಲಿ ಸ್ವತಂತ್ರ. ತನ್ನ ಶ್ರಮ ಶಕ್ತಿಯನ್ನು ತನ್ನ ಪದಾರ್ಥವೆಂದೇ ವಿನಿಯೋ ಗಿಸುವ ಸ್ವಾತಂತ್ರ್ಯ ಇವನಿಗಿದೆ. ಅಲ್ಲದೆ, ಮಾರಬಹುದಾದ ಬೇರಾವ ಪದಾರ್ಥವೂ

ಇವನಲ್ಲಿಲ್ಲದುದರಿಂದ, ತನ್ನ ಶ್ರಮ ಶಕ್ತಿಯ ಫಲ ಪಡೆಯಲು ಅಗತ್ಯವಾದ ಬೇರಾವ ಸಾಧನವೂ ಈತನಲ್ಲಿಲ್ಲ."[1]

ಈ ಸ್ವತಂತ್ರ ಕಾರ್ಮಿಕ ತನ್ನ ಈ ಪದಾರ್ಥವನ್ನು ಯಾವ ದರದಲ್ಲಿ ಮಾರಬೇಕು? ಎಂದರೆ ಈತನ ಶ್ರಮ ಶಕ್ತಿಯ ಮೌಲ್ಯವೆಷ್ಟು? ಶ್ರಮ ಶಕ್ತಿಯ ಮೌಲ್ಯವೂ ಇತರ ಪದಾರ್ಥಗಳ ಮೌಲ್ಯದಂತೆ ಅದನ್ನು ಉತ್ಪಾದಿಸಲು ಅಗತ್ಯವಾದ ಶ್ರಮಕ್ಕೆ ಅನುಗುಣ ವಾಗಿಯೇ ನಿರ್ಣಯವಾಗುತ್ತದೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಕಾರ್ಮಿಕ ಬದುಕುವುದಕ್ಕೂ ಕಾರ್ಮಿಕರ ಸರಬರಾಯಿ ಹೀಗೆಯೇ ಮುಂದುವರಿಯಲು ಅಗತ್ಯವಾದ ಸಂಸಾರವನ್ನು ಅವನು ಪೋಷಿಸಿ ಬೆಳಸುವುದಕ್ಕೂ ಅಗತ್ಯವಾದ ಎಲ್ಲ ಪದಾರ್ಥಗಳಿಗೆ ಸಮನಾಗಿರುತ್ತದೆ—ಕಾರ್ಮಿಕನ ಶ್ರಮ ಶಕ್ತಿಯ ಮೌಲ್ಯ. ಹೀಗೆ ಬೇಕಾದ ಪದಾರ್ಥಗಳು ಯಾವುವು? ಎಷ್ಟು?—ಎಂಬುದು ಬೇರೆಬೇರೆ ಕಾಲಗಳಲ್ಲಿ ಬೇರೆಬೇರೆ ಸ್ಥಳಗಳಲ್ಲಿ ಬೇರೆ ಬೇರೆಯಾಗಿರುತ್ತದೆ. (ಉದಾಹರಣೆಗೆ, ಇದು ಇಂದು ಅಮೆರಿಕದಲ್ಲೂ ಚೀಣದಲ್ಲೂ ಒಂದೇ ಆಗಿಲ್ಲ.) ತನ್ನ ಶ್ರಮಶಕ್ತಿಗೆ ಪ್ರತಿಯಾಗಿ ದುಡಿಮೆಗಾರನಿಗೆ ಕೂಲಿ ದೊರಕುತ್ತದೆ. ಈ ಕಾರ್ಮಿಕ ತನ್ನಲ್ಲೂ ತನ್ನ ಮಕ್ಕಳಲ್ಲೂ ಈ ಶ್ರಮ ಶಕ್ತಿಯನ್ನು ಪುನರುತ್ಪಾದಿಸಲು ಅಗತ್ಯವಾದ ಪದಾರ್ಥಗಳನ್ನು ಕೊಳ್ಳಲು ಅಗತ್ಯವಾದ ಹಣಕ್ಕೆ ಈ ಕೂಲಿ ಯಾವಾಗಲೂ ಸಮನಾಗಿರುವ ಪ್ರವೃತ್ತಿ ತೋರುತ್ತದೆ.

ಮಾರ್ಕ್ಸ್ ಇದನ್ನು ಈ ರೀತಿ ವಿವರಿಸುತ್ತಾನೆ: "ದುಡಿಮೆಗಾರನ ಜೀವನಕ್ಕೆ ಅಗತ್ಯ ವಾದ ಸಾಧನಗಳ ಮೌಲ್ಯವೇ ಶ್ರಮಶಕ್ತಿಯ ಮೌಲ್ಯ. ದುಡಿಮೆಗಾರನಾಗಿ ಆತ ತನ್ನ ಸಾಮಾನ್ಯ ಸಾಮರ್ಥ್ಯ ಉಳಿಸಿಕೊಳ್ಳಲು ಸಾಕಾದಷ್ಟು ಜೀವನ ಸಾಧನ ಆತನಿಗೆ ದೊರಕ ಬೇಕು. ಆಹಾರ ಉಡುಪು, ಇಂಧನ, ವಸತಿ ಮುಂತಾದ ಆತನ ಸಹಜಾಗತ್ಯಗಳು, ಅವನ ದೇಶದ ವಾಯುಗುಣ ಹಾಗೂ ಇತರ ಭೌತ ಲಕ್ಷಣಗಳಿಗೆ ಅನುಸಾರವಾಗಿ ವ್ಯತ್ಯಾಸ ಗೊಳ್ಳುತ್ತವೆ....ಈ ಸಹಜಾಗತ್ಯಗಳ ಜತೆಗೆ ಇತರ ಅಗತ್ಯಗಳೂ, ಕಲ್ಪಿತಾಗತ್ಯಗಳೂ ಉಂಟು. ಇವುಗಳ ಸಂಖ್ಯೆ, ಪ್ರಮಾಣ ಇವು ಮಾತ್ರ ಐತಿಹಾಸಿಕ ಪ್ರಗತಿಯ ಫಲ. ಆದ್ದ ರಿಂದ ಇವು ಬಹು ಮಟ್ಟಿಗೆ ಒಂದು ದೇಶದ ನಾಗರಿಕತೆಯ ಮಟ್ಟವನ್ನೇ ಅನುಸರಿಸುತ್ತವೆ ....ಸ್ವತಂತ್ರ ಕಾರ್ಮಿಕವರ್ಗದ ಅಭ್ಯಾಸ, ಸುಖಾಪೇಕ್ಷೆಯ ವ್ಯಾಪ್ತಿ ಇವುಗಳನ್ನೇ ಅವಲಂಬಿಸುತ್ತವೆ....

"ಶ್ರಮ ಶಕ್ತಿಯ ಒಡೆಯ ಅಮರನಲ್ಲ....ಜರಾಮರಣ ವ್ಯಾಧಿಗಳೇ ಮುಂತಾದ ಕಾರಣ ಗಳಿಂದಾಗಿ ಪೇಟೆಯಿಂದ ನಿರ್ಗಮಿಸಿದ ಶ್ರಮಶಕ್ತಿಗೆ ಪ್ರತಿಯಾಗಿ ಕನಿಷ್ಠಪಕ್ಷ ಇದೇ ಪ್ರಮಾಣದಲ್ಲಿ ಹೊಸ ಶ್ರಮಶಕ್ತಿ ಬರುತ್ತಲೇ ಇರಬೇಕು. ಆದ್ದರಿಂದ ಶ್ರಮಶಕ್ತಿಯ ಉತ್ಪಾದನೆಗೆ ಅಗತ್ಯವಾದ ಜೀವನ ಸಾಧನಗಳ ಮೊತ್ತದಲ್ಲಿ, ಕಾರ್ಮಿಕನಿಗೆ ಪ್ರತಿಯಾಗಿ ಬರುವವರಿಗೆ—ಎಂದರೆ ಆತನ ಮಕ್ಕಳಿಗೆ—ಅಗತ್ಯವಾದ ಜೀವನ ಸಾಧನಗಳೂ ಸೇರಿರ

---

[1] *Capital, op. cit.*, vol. I, p. 147.

ಬೇಕು. ಈ ವಿಶಿಷ್ಟ ಪದಾರ್ಥದ ಒಡೆಯರ ಕುಲ ಶಾಶ್ವತವಾಗಿ ಪೇಟೆಗೆ ಬರುತ್ತಿರಬೇಕಾದರೆ ಇದೂ ಅಗತ್ಯ."[1]

ಒಟ್ಟನಲ್ಲಿ ಇದರ ಅರ್ಥವಿಷ್ಟು: ಕಾರ್ಮಿಕ ತನ್ನ ಶ್ರಮ ಶಕ್ತಿಗೆ ಪ್ರತಿಯಾಗಿ ಕೂಲಿ ಪಡೆಯುತ್ತಾನೆ. ಈ ಕೂಲಿ ಈತನೂ ಈತನ ಸಂಸಾರವೂ ಜೀವಂತವಾಗಿರಲು ಅಗತ್ಯ ವಾದಷ್ಟು, ಅಲ್ಲದೇ (ಇನ್ನು ಕೆಲವು ದೇಶಗಳಲ್ಲಿ) ಒಂದು ರೇಡಿಯೋವನ್ನೋ, ಒಂದು ಕಾರನ್ನೋ, ಆಗೊಮ್ಮೆ ಈಗೊಮ್ಮೆ ಸಿನಿಮಾ ನೋಡಲು ಪ್ರವೇಶವನ್ನೊ ಪಡೆಯಲು ಅಗತ್ಯವಾದ ಇನ್ನಷ್ಟು, ಇರುತ್ತದೆ.

ಮೇಲೆ ಉದ್ಧರಿಸಿದ ವಾಕ್ಯಗಳಲ್ಲಿ ಮಾರ್ಕ್ಸ್, "ಈ ವಿಶಿಷ್ಟ ಪದಾರ್ಥದ ಒಡೆಯರ ಕುಲ" ಎಂಬುದಾಗಿ ಹೇಳಿರುವುದನ್ನು ಗಮನಿಸಿ. ಕಾರ್ಮಿಕನ ಪದಾರ್ಥದ ಬಗ್ಗೆ, ಶ್ರಮ ಶಕ್ತಿಯ ಬಗ್ಗೆ, ವಿಶಿಷ್ಟವಾದದ್ದಾದರೂ ಏನು? ಇದು ಇತರ ಪದಾರ್ಥಗಳಂತಲ್ಲವೆಂಬುದು ಇದರ ವೈಶಿಷ್ಟ್ಯ. ತನ್ನ ಮೌಲ್ಯಕ್ಕಿಂತ ಅಧಿಕವಾದ ಮೌಲ್ಯ ಸೃಷ್ಟಿಸುವ ಗುಣ ಶ್ರಮಕ್ಕಿದೆ. ಇತರ ಪದಾರ್ಥಗಳಿಗೆ ಈ ಗುಣವಿಲ್ಲ. ಕೂಲಿಗಾರ ತನ್ನನ್ನು ತಾನೇ ಬಾಡಿಗೆಗೆ ನೀಡಿ ಕೊಂಡರೆ ಆತ ತನ್ನ ಕೂಲಿಯ ಮೌಲ್ಯದ ಉತ್ಪಾದನೆಗೆ ಅಗತ್ಯವಾದ ಕಾಲದ ಶ್ರಮ ಶಕ್ತಿಯಷ್ಟನ್ನೇ ಮಾರುವುದಿಲ್ಲ, ಇಡೀ ದುಡಿಮೆಯ ದಿನದ ಅವಧಿಯ ಶ್ರಮ ಶಕ್ತಿಯನ್ನೇ ಮಾರುತ್ತಾನೆ. ದಿನದ ದುಡಿಮೆಯ ಕಾಲ ಹತ್ತು ಘಂಟೆಯಾಗಿದ್ದರೆ, ಮತ್ತು ದುಡಿಮೆ ಗಾರನ ಕೂಲಿಯ ಮೌಲ್ಯದ ಉತ್ಪಾದನೆಗೆ ಅಗತ್ಯವಾದ ಕಾಲ ಆರು ಗಂಟೆಯಾದರೆ, ಆಗ ಆತನ ದುಡಿಮೆಯ ದಿನದಲ್ಲಿ ಉಳಿದ ನಾಲ್ಕು ಘಂಟೆಯ ಕಾಲ ಆತ ತನ್ನ **ಯಜಮಾನನಿಗಾಗಿ ದುಡಿಯುತ್ತಿರುತ್ತಾನೆ, ತನಗಾಗಿಯಲ್ಲ.** ಈ ಆರು ಘಂಟೆ ಗಳನ್ನು ಅಗತ್ಯ-ಶ್ರಮ-ಕಾಲವೆಂದೂ, ಉಳಿದ ನಾಲ್ಕು ಘಂಟೆಗಳನ್ನು ಶೇಷಶ್ರಮ-ಕಾಲ ಅಥವಾ ಅತಿರಿಕ್ತ ಶ್ರಮಕಾಲವೆಂದೂ (Surplus labour-time) ಮಾರ್ಕ್ಸ್ ಕರೆಯು ತ್ತಾನೆ. ಹತ್ತು ಘಂಟೆಗಳ ಒಟ್ಟು ಉತ್ಪನ್ನದ ಮೌಲ್ಯದಲ್ಲಿ ಹತ್ತನೆಯ ಆರು ಪಾಲು ಆತನ ಕೂಲಿಗೆ ಸಮ; ಉಳಿದ ಹತ್ತನೆಯ ನಾಲ್ಕು ಭಾಗ ಶೇಷಮೌಲ್ಯ—ಅತಿರಿಕ್ತ ಮೌಲ್ಯ (Surplus value). ಇದನ್ನು ಯಜಮಾನ ಪಡೆದುಕೊಳ್ಳುತ್ತಾನೆ. ಇದು ಆತನ ಲಾಭ.

"ಒಂದು ಪದಾರ್ಥದ ಮೌಲ್ಯ ಅದರಲ್ಲಿ ಅಡಕವಾದ ಶ್ರಮದ ಪ್ರಮಾಣವನ್ನೇ ಅವಲಂಬಿಸಿದೆ. ಈ ಶ್ರಮದ ಪ್ರಮಾಣದಲ್ಲಿ ಒಂದು ಭಾಗ ಮೌಲ್ಯವಾಗಿ ಮಾರ್ಪಟ್ಟು ಇದಕ್ಕೆ ಸಮನಾಗಿ ಕೂಲಿಯ ವಿನಿಯೋಗವಾಗುತ್ತದೆ. ಈ ಪ್ರಮಾಣದ ಇನ್ನೊಂದು ಭಾಗದಿಂದ ಉದಿಸಿದ ಮೌಲ್ಯಕ್ಕೆ ಪ್ರತಿಯಾಗಿ ಯಾರಿಗೂ ಹಣ ಸಲ್ಲುವುದಿಲ್ಲ. ಈ ಪದಾರ್ಥದಲ್ಲಿ ಅಡಕವಾದ ಶ್ರಮದಲ್ಲಿ ಒಂದು ಭಾಗ ಬೆಲೆ ಕೊಟ್ಟು ಕೊಂಡ ದುಡಿಮೆ; ಇನ್ನೊಂದು ಭಾಗ ಹಣ ಕೊಡದೆಯೇ ಪಡೆದ ದುಡಿಮೆ. ಆದ್ದರಿಂದ ಈ ಪದಾರ್ಥವನ್ನು

---

[1] *Ibid.*, pp. 149, 150.

ಅದರ ಮೌಲ್ಯಕ್ಕೆ—ಎಂದರೆ ಅದರ ಮೇಲೆ ವಿನಿಯೋಗವಾದ ಒಟ್ಟು ದುಡಿಮೆಯ ಘನೀಕೃತ ಮೌಲ್ಯಕ್ಕೆ-ಬಂಡವಾಳಗಾರ ಮಾರಿದಾಗ, ಆತ ಇದನ್ನು ಲಾಭಕ್ಕೇ ಮಾರುವ ನೆಂಬುದು ಸ್ವತಃಸಿದ್ಧ. ಪ್ರತಿಯಾಗಿ ಬೆಲೆ ಕೊಟ್ಟು ಪಡೆದದ್ದನ್ನಷ್ಟೇ ಅಲ್ಲದೆ, ಆತ ಮುಫತ್ತಾಗಿ ಪಡೆದದ್ದನ್ನೂ ಮಾರುತ್ತಾನೆ. ಇದಕ್ಕೆ ಆತ ಏನೂ ಬೆಲೆ ಕೊಡದಿದ್ದರೂ ಆತನ ಕೆಲಸ ಗಾರನ ದುಡಿಮೆ ತಗುಲಿರುವುದೆಂಬುದನ್ನು ನೆನಪಿನಲ್ಲಿಡಬೇಕು. ಬಂಡವಾಳಗಾರನ ದೃಷ್ಟಿ ಯಲ್ಲಿ ಈ ಪದಾರ್ಥದ ಅಸಲು ಬೆಲೆಯೂ (ಮೂಲ್ಯ), ಈ ಪದಾರ್ಥದ ನಿಜವಾದ ಅಸಲು ಬೆಲೆಯೂ ಬೇರೆಬೇರೆ. ಆದ್ದರಿಂದ ನಾನು ಪುನರ್ ಪ್ರತಿಪಾದಿಸುವ ವಿಚಾರವಿಷ್ಟು: ಪದಾರ್ಥಗಳನ್ನು ಅವುಗಳ ನಿಜ ಮೌಲ್ಯಕ್ಕಿಂತ **ಹೆಚ್ಚಿನ ಬೆಲೆಗಲ್ಲದೆ ನಿಜ ಮೌಲ್ಯಕ್ಕೇ** ಮಾರಿದಾಗಲೇ ಸಹಜ ಸರಾಸರಿ ಲಾಭ ದೊರಕುತ್ತದೆ."[1]

ಬಂಡವಾಳ ಸಮಾಜದಲ್ಲಿ ದುಡಿಮೆಗಾರನ ಶೋಷಣೆಯಾಗುವುದೆಂಬ ರಹಸ್ಯ ಮಾರ್ಕ್ಸನ ಶೇಷಮೌಲ್ಯ ಸಿದ್ಧಾಂತದಿಂದ—ಅತಿರಿಕ್ತ ಮೌಲ್ಯ ಸಿದ್ಧಾಂತದಿಂದ—ಬಯಲಾಗುತ್ತದೆ. ಈ ಇಡೀ ಪ್ರಕ್ರಿಯೆಯ ಸಾರಾಂಶವನ್ನು ಸಂಗ್ರಹವಾದ ವಾಕ್ಯಗಳಲ್ಲಿ ಹೀಗೆ ಹೇಳ ಬಹುದು :

ಮಾರಾಟದ ವಸ್ತುಗಳ, ಪದಾರ್ಥಗಳ, ಉತ್ಪಾದನೆಯೇ ಬಂಡವಾಳ ವ್ಯವಸ್ಥೆಯ ಗುರಿ.

ಒಂದು ಪದಾರ್ಥದ ಉತ್ಪಾದನೆಗಾಗಿ ವಿನಿಯೋಗವಾದ, ಸಾಮಾಜಿಕವಾಗಿ ಅಗತ್ಯವಾದ ಶ್ರಮ-ಕಾಲದ ಪ್ರಮಾಣದಿಂದ ಆ ಪದಾರ್ಥದ ಮೌಲ್ಯ ನಿರ್ಧರಿಸಲ್ಪಡುತ್ತದೆ.

ಉತ್ಪಾದನ ಸಾಧನಗಳ (ಎಂದರೆ ನೆಲ, ಉಪಕರಣ, ಕಾರ್ಖಾನೆ ಇತ್ಯಾದಿ) ಒಡೆತನ ಕಾರ್ಮಿಕನಿಗೆ ಸೇರಿಲ್ಲ.

ಕಾರ್ಮಿಕ ಬದುಕಬೇಕಾದರೆ ಆತ ತನ್ನಲ್ಲಿರುವ ಒಂದೇ ಒಂದು ಪದಾರ್ಥವನ್ನು—ಎಂದರೆ ತನ್ನ ಶ್ರಮ-ಶಕ್ತಿಯನ್ನು—ಮಾರಾಟ ಮಾಡಬೇಕು.

ಇತರ ಪದಾರ್ಥಗಳ ಮೌಲ್ಯದಂತೆಯೇ ಆತನ ಶ್ರಮ-ಶಕ್ತಿಯ ಮೌಲ್ಯವೂ ಕೂಡ ಅದನ್ನು ಪುನರುತ್ಪಾದಿಸಲು ಅಗತ್ಯವಾದ ಮೊಬಲಗನ್ನೇ ಅವಲಂಬಿಸಿದೆ—ಎಂದರೆ, ಈ ಸಂದರ್ಭದಲ್ಲಿ, ಆತ ಜೀವಿಸಲು ಅಗತ್ಯವಾದ ಮೊಬಲಗು ಇದು.

ಆದ್ದರಿಂದ ಆತನಿಗೆ ಕೊಡುವ ಕೂಲಿ ಆತನ ಬದುಕಿಗೆ ಅಗತ್ಯವಾದದ್ದಕ್ಕೆ ಸಮನಾಗಿ ಮಾತ್ರ ಇರುತ್ತದೆ.

ಆದರೆ ಈ ಮೊಬಲಗನ್ನು ಆತ—ಕಾರ್ಮಿಕ—ತನ್ನ ದುಡಿಮೆಯ ದಿನದ ಒಂದು ಭಾಗದ ಕಾಲದಲ್ಲೇ ಉತ್ಪಾದಿಸಬಲ್ಲ.

ಎಂದರೆ ಇಡೀ ಕಾಲದ ಒಂದು ಭಾಗದಲ್ಲಿ ಮಾತ್ರ ಆತ ತನಗಾಗಿಯೇ ಕೆಲಸ ಮಾಡುತ್ತಾನೆ.

ಉಳಿದ ಕಾಲದಲ್ಲಿ ಆತ ತನ್ನ ಯಜಮಾನನಿಗಾಗಿ ಕೆಲಸ ಮಾಡುತ್ತಾನೆ.

---

[1] *Value, Price, and Profit, op. cit.*, pp. 44, 45.

ಕೂಲಿಯ ರೂಪದಲ್ಲಿ ಕೆಲಸಗಾರ ಪಡೆಯುವುದಕ್ಕೂ, ಆತ ಉತ್ಪಾದಿಸುವ ಪದಾರ್ಥದ ಮೌಲ್ಯಕ್ಕೂ ಇರುವ ವ್ಯತ್ಯಾಸವೇ ಶೇಷಮೌಲ್ಯ—ಅತಿರಿಕ್ತ ಮೌಲ್ಯ.

ಶೇಷಮೌಲ್ಯ—ಅತಿರಿಕ್ತ ಮೌಲ್ಯ—ಧಣಿಗಳಿಗೆ ಹೋಗುತ್ತದೆ. ಇವರೇ ಉತ್ಪಾದನ ಸಾಧನಗಳ ಒಡೆಯರು.

ಲಾಭ, ಬಡ್ಡಿ, ಗೇಣಿ ಇವುಗಳ—ಆಸ್ತಿ ಉಳ್ಳ ವರ್ಗಗಳಿಗೆ ಸಲ್ಲುವ ಪ್ರತಿಫಲಗಳಾದ ಲಾಭ, ಬಡ್ಡಿ, ಗೇಣಿ ಇವುಗಳ—ಮೂಲವೇ ಶೇಷಮೌಲ್ಯ ಅಥವಾ ಅತಿರಿಕ್ತ ಮೌಲ್ಯ.

ಬಂಡವಾಳ ವ್ಯವಸ್ಥೆಯಲ್ಲಿ ಕೂಲಿಗಾರರ ಶೋಷಣೆಯನ್ನು ಅಳೆಯುವ ಸಾಧನವೇ ಶೇಷಮೌಲ್ಯ—ಅತಿರಿಕ್ತ ಮೌಲ್ಯ.

ಕಾರ್ಲ್ ಮಾರ್ಕ್ಸ್ ಅಮೆರಿಕನ್ ಚರಿತ್ರೆಯನ್ನು ಆಸಕ್ತಿಯಿಂದ ಅಭ್ಯಾಸ ಮಾಡಿದ್ದ. ಆದ್ದರಿಂದ ಬಹುಶಃ ಆತ ಅಬ್ರಹಾಂ ಲಿಂಕನ್ನನ ಕೃತಿಗಳ, ಭಾಷಣಗಳ ಪರಿಚಯ ಹೊಂದಿದ್ದ. ಕಾರ್ಲ್ ಮಾರ್ಕ್ಸ್‌ನ ಯಾವ ಕೃತಿಗಳನ್ನಾಗಲಿ ಓದುವ ಅವಕಾಶ ಅಬ್ರಹಾಂ ಲಿಂಕನ್ನನಿಗಿತ್ತೋ ಇಲ್ಲವೋ ನಾವು ಅರಿಯೆವು. ಆದರೆ ಕೆಲವು ವಿಚಾರಗಳಲ್ಲಿ ಇವರಿಬ್ಬರ ಆಲೋಚನೆ ಒಂದೇ ರೀತಿಯಾಗಿತ್ತು—ಎಂಬುದನ್ನು ನಾವು ಬಲ್ಲೆವು. ಅಬ್ರಹಾಂ ಲಿಂಕನ್ನನ ಈ ಮಾತುಗಳನ್ನು ಓದಿ: "ಮೊದಲು ದುಡಿಮೆಯ ವೆಚ್ಚ ಮಾಡದೆ ಯಾವ ಒಳ್ಳೆಯ ವಸ್ತುವನ್ನೂ ನಾವು ಭೋಗಿಸಿಲ್ಲ, ಭೋಗಿಸಲೂ ಆರೆವು. ಹಲವು ಒಳ್ಳೆಯ ಪದಾರ್ಥಗಳು ದುಡಿಮೆಯಿಂದ ಉತ್ಪಾದನೆಯಾಗುವುದರಿಂದ, ಇಂಥ ಪದಾರ್ಥಗಳೆಲ್ಲಾ ಇವನ್ನು ಉತ್ಪಾದಿಸಿದ ಕಾರ್ಮಿಕರಿಗೇ ನ್ಯಾಯವಾಗಿ ಸೇರತಕ್ಕದ್ದು. ಆದರೆ ಜಗತ್ತಿನಲ್ಲಿ ಎಲ್ಲ ಯುಗಗಳಲ್ಲೂ ಕೆಲವರು ದುಡಿದಿದ್ದಾರೆ, ಇತರರು ದುಡಿಯದೆ ಕುಳಿತು ಇವರ ದುಡಿಮೆಯ ಫಲದ ಹೆಚ್ಚು ಭಾಗವನ್ನು ಅನುಭವಿಸಿದ್ದಾರೆ. ಇದು ತಪ್ಪು. ಈ ಪರಿಸ್ಥಿತಿ ಮುಂದುವರಿಯ ಬಾರದು. ಪ್ರತಿ ಕಾರ್ಮಿಕನಿಗೂ ಆತನ ದುಡಿಮೆಯ ಇಡೀ ಫಲವನ್ನು ಅಥವಾ ಆ ಫಲದ ಆದಷ್ಟು ಹೆಚ್ಚು ಭಾಗವನ್ನು ದೊರಕಿಸಿಕೊಡುವುದು ಒಳ್ಳೆಯ ಸರಕಾರದ ಸಾರ್ಥಕ ಗುರಿ."[1]

ಇದನ್ನು ಬರೆದವನು ಅಬ್ರಹಾಂ ಲಿಂಕನ್. ದುಡಿಮೆಯಿಂದಲೇ ಉತ್ಪಾದನೆ; ಆದರೆ ಬಂಡವಾಳದೊಡನೆ ಪಾಲ್ಗೊಳ್ಳುವಾಗ ಒಂದು ರೀತಿಯಲ್ಲಿ ಇದರ ಕೊಳ್ಳೆಯಾಗುತ್ತದೆ—ಎಂಬ ಸತ್ಯವನ್ನರಿಯುವ ಹಾದಿಯಲ್ಲೇ ಇವನೂ ನಡೆದಿದ್ದ. ಲಿಂಕನ್ ಇನ್ನೂ ಮುಂದೆ ಹೋಗಿದ್ದಾನೆ. ಈತನ ಕೊನೆಯ ವಾಕ್ಯವನ್ನು ಮತ್ತೊಮ್ಮೆ ಓದಿ. ಈ ಬಗ್ಗೆ ಏನಾದರೂ ಮಾಡಬೇಕೆಂಬುದು ಆತನ ಇಚ್ಛೆ. ಯುಟೋಪಿಯನರೂ ಇದನ್ನೇ ಬಯಸಿದರು. ಮಾರ್ಕ್ಸ್‌ನೂ ಇದನ್ನೇ ಬಯಸಿದ. ಆದರೆ ಇದನ್ನು ಸಾಧಿಸುವ ಮಾರ್ಗದ ಬಗ್ಗೆ ಇವರಲ್ಲಿ ಒಮ್ಮತವಿರಲಿಲ್ಲ.

---

[1] Nicolay and Hay, *Abraham Lincoln, Complete Works*, vol. I, p. 92, Century Company, N. Y., 1920.

ಯುಟೋಪಿಯನ್ ಸಮಾಜವಾದಿಗಳು "ತಮ್ಮ ಆದರ್ಶ ರಾಜ್ಯಗಳನ್ನು—ಯುಟೋಪಿಯಗಳನ್ನು—ಕಲ್ಪಿಸಿಕೊಳ್ಳುವಾಗ....ಸಮಾಜದಲ್ಲಿ ಕಾರ್ಯಾಸಕ್ತವಾಗಿರುವ ಮಹಾ ಕೈಗಾರಿಕಾ ಶಕ್ತಿಗಳು ಈ ನಿರೀಕ್ಷಿತ ಪರಿವರ್ತನೆಯನ್ನು ಆಗಗೊಡಿಸುವುವೇ ?—ಎಂಬುದನ್ನು ಇವರು ತಲೆಗೆ ಹಚ್ಚಿಕೊಳ್ಳಲೇ ಇಲ್ಲ."[1] ಆದರ್ಶ ಸಮಾಜವೊಂದರ ಯೋಜನೆಯ ರಚನೆ ಮುಖ್ಯವೆಂದು ಮಾತ್ರ ಇವರು ನಂಬಿದ್ದರು. ಬಲಿಷ್ಠರೋ ಐಶ್ವರ್ಯವಂತರೋ (ಅಥವಾ ಇಬ್ಬರೂ ಕೂಡಿಯೋ) ಈ ಹಂಚಿಕೆಯಲ್ಲಿ ಆಸಕ್ತಿ ಹೊಂದುವಂತೆ ಮಾಡಬೇಕು. ಇವರ ನೆರವಿನೊಡನೆ ಸಣ್ಣ ಪ್ರಮಾಣದಲ್ಲಿ ಇದರ ಪ್ರಯೋಗ ಪರೀಕ್ಷೆ ನಡಸಬೇಕು. ಅನಂತರ ಇದನ್ನು ಕಾರ್ಯಗತಗೊಳಿಸುವ ವಿವೇಚನೆಯೂ ಒಳ್ಳೆಯತನವೂ ಜನರಲ್ಲಿರುವುದೆಂದು ನಿರೀಕ್ಷಿಸಿ ಕೂರುವುದು. ಈ ಮಾರ್ಗದಲ್ಲಿ ಇವರು ನಂಬಿಕೆಯಿಟ್ಟಿದ್ದರು.

ಪ್ರಸಿದ್ಧ ಆಂಗ್ಲ ಸಮಾಜವಾದಿಯಾದ ರಾಬರ್ಟ್ ಓವೆನ್ ಎಂಬುವನು ಒಂದು ಪುಸ್ತಕ ಬರೆದ. ಈ ಪುಸ್ತಕದ ಹೆಸರೇ ಇದರಲ್ಲಿ ಪ್ರತಿಪಾದಿತವಾಗಿರುವ ವಿಷಯವನ್ನು ಸೂಚಿಸುತ್ತದೆ. 'ಹೊಸ ನೈತಿಕ ಜಗತ್ತು' ಎಂಬುದು ಈ ಪುಸ್ತಕದ ಹೆಸರು. ತಾನು ಕಂಡ ಹೊಸ ಸಮಾಜ ಸ್ಥಾಪನೆಗಾಗಿ, ಕಾರ್ಮಿಕವರ್ಗದ ಬಂಡಾಯಕ್ಕಾಗಿ ಇವನು ಕರೆ ಕೊಡುತ್ತಾನೆಯೆ? ಇಲ್ಲ. ತನ್ನ ಪುಸ್ತಕದ ಕೊನೆಯಲ್ಲಿ ಇವನು ಗ್ರೇಟ್ ಬ್ರಿಟನ್ನಿನ ದೊರೆ ನಾಲ್ಕನೆಯ ವಿಲಿಯಂಗೆ ಒಂದು ಪತ್ರ ಬರೆಯುತ್ತಾನೆ: "ಹೊಸ ನೈತಿಕ ಜಗತ್ತಿನ ಮುಖ್ಯ ತತ್ವಗಳನ್ನು ಈ ಪುಸ್ತಕ ವಿವರಿಸುತ್ತದೆ. ಸಮಾಜದ ಪುನರ್ನಿರ್ಮಾಣಕ್ಕೆ, ಮಾನವಕುಲದ ಸ್ವಭಾವದ ಪುನರ್ರಚನೆಗೆ ಇದು ಹೊಸ ಅಸ್ತಿಭಾರವನ್ನು ಹಾಕುತ್ತದೆ. ಪ್ರಮುಖ ಕಲ್ಪನಾದೋಷಗಳಿಂದಲೇ ಸಮಾಜ ಉದ್ಭವಿಸಿದೆ. ಜಗತ್ತಿನಲ್ಲಿರುವ ಮಾನವನ ಎಲ್ಲ ಸಂಸ್ಥೆಗಳೂ, ಸಾಮಾಜಿಕ ವ್ಯವಸ್ಥೆಗಳೂ ಈ ದೋಷಗಳ ಆಧಾರದ ಮೇಲೆಯೇ ರಚಿತವಾಗಿವೆ. ಮಹಾಸ್ವಾಮಿಯವರ ಆಳಿಕೆಯಲ್ಲಿ ಈ ವ್ಯವಸ್ಥೆಯಿಂದಲೂ, ಇದರ ಎಲ್ಲ ದುಷ್ಟ ಪರಿಣಾಮಗಳಿಂದಲೂ ಬಿಡುಗಡೆ ಹೊಂದಿ, ಸ್ವಯಂಸಿದ್ಧ ಸತ್ಯಗಳ ಮೇಲೆ ನಿರ್ಮಿತವಾದ ಇನ್ನೊಂದು ವ್ಯವಸ್ಥೆಯ, ಎಲ್ಲರಿಗೂ ಸೌಖ್ಯದ ಭರವಸೆ ನೀಡುವ ವ್ಯವಸ್ಥೆಯ, ಸ್ಥಾಪನೆಯಾಗುವುದೆಂದು ಧಾರಾಳವಾಗಿ ನಿರೀಕ್ಷಿಸಬಹುದು."[2]

ಚಾರ್ಲ್ಸ್ ಫೋರಿಯರ್ ಒಬ್ಬ ಪ್ರಸಿದ್ಧ ಫ್ರೆಂಚ್ ಸಮಾಜವಾದಿ. ಈತನೂ ಕೂಡ ಕಾರ್ಮಿಕ ವರ್ಗದಿಂದಾಚೆಗೆ ಹಣವಂತರ ಕಡೆಗೆ ದೃಷ್ಟಿ ಹೊರಳಿಸಿದ. ತನ್ನ ಹೊಸ ವ್ಯವಸ್ಥೆಯ ಪ್ರಯೋಗಗಳನ್ನು ಆರಂಭಿಸಲು ಇವರ ನೆರವು ನಿರೀಕ್ಷಿಸಿದ: "ಪ್ರತಿ ದಿನವೂ ಒಂದು ಗೊತ್ತಾದ ಹೊತ್ತಿಗೆ ತಾನು ಮನೆಯಲ್ಲಿಯೇ ಇರುವುದಾಗಿಯೂ, ತನ್ನ ತತ್ವಗಳ ಮೇಲೆ ನಿರ್ಮಿತವಾಗುವ ಒಂದು ಅಧಿನಿವೇಶಕ್ಕಾಗಿ ಹತ್ತು ಲಕ್ಷ ಫ್ರಾಂಕ್ ಧನ ನೀಡ

---

[1] H. W. Laidler, *A History of Socialist Thought*, p. 56. Thomas Y. Crowell Company, N. Y., 1927.

[2] Robert Owen, *Book of the New Moral World*, p. 58. London, 1836.

ಬಯಸಬಹುದಾದ ಯಾವ ಧರ್ಮಿಷ್ಠನಾದರೂ ಈ ಹೊತ್ತಿನಲ್ಲಿ ತನ್ನನ್ನು ನೋಡಬಹುದೆಂದೂ ಒಮ್ಮೆ ಈತ ಪ್ರಕಟಿಸಿದ. ಅನಂತರ ಹನ್ನೆರಡು ವರ್ಷಕಾಲ ಈತ ಪ್ರತಿದಿನವೂ ಮಧ್ಯಾಹ್ನ ಹನ್ನೆರಡು ಘಂಟೆಗೆ ಸರಿಯಾಗಿ ತನ್ನ ಧಾರಾಳಿ ಆಗಂತುಕನಿಗಾಗಿ ಕಾದು ಕಾದು ಮನೆಯಲ್ಲಿ ಕುಳಿತಿರುತ್ತಿದ್ದ. ಆದರೆ ಪಾಪ! ಯಾವ ಲಕ್ಷಾಧೀಶ್ವರನೂ ಬರಲೇ ಇಲ್ಲ."[1]

ಇನ್ನೊಬ್ಬ ಫ್ರೆಂಚ್ ಸಮಾಜವಾದಿಯಾದ ಸೆಯಿಂಟ್ ಸೈಮನ್ನನ ಅನುಯಾಯಿಗಳು ಫೋರಿಯರನ ಬಗ್ಗೆ ಬಹು ತಾತ್ಸಾರ ತಳೆದಿದ್ದರು. ಆದರೆ ಇವರೂ ಕೂಡ ಸಾಮಾಜಿಕ ಪರಿವರ್ತನೆ ಸಾಧಿಸಲು ಬೂರ್ಷ್ವಾ ವರ್ಗದೊಡನೆ ಸಾಹಚರ್ಯ ಅಗತ್ಯವೆಂದು ನಂಬಿದ್ದರು. ಇವರ ಪತ್ರಿಕೆಯಾದ 'ಗ್ಲೋಬ್' ಎಂಬುದರಲ್ಲಿ, ೧೮೩೧ರ ನವೆಂಬರ್ ೨೮ರಂದು ಪ್ರಕಟವಾದ ಈ ವಿಚಾರ ಸ್ವಾರಸ್ಯವಾಗಿದೆ. "ಮೇಲಣ ವರ್ಗಗಳು ಕೈಚಾಚಿ ಎಳೆದುಕೊಳ್ಳದಿದ್ದರೆ ಕಾರ್ಮಿಕ ವರ್ಗಗಳು ಮೇಲೇರಲಾರವು. ಮೇಲಣ ವರ್ಗಗಳಿಂದಲೇ ಈ ಬಗೆ ಯತ್ನ ನಡೆಯಬೇಕು."[2]

ಯುಟೋಪಿಯನರ ಈ ಸಲಹೆಗಳನ್ನು ಮಾರ್ಕ್ಸ್ ಅಪಹಾಸ್ಯಕ್ಕೆ ಗುರಿಪಡಿಸಿದ. ಇವು ಭ್ರಾಮಕ ವಿಚಾರಗಳೆಂದು ಇವನು ಭಾವಿಸಿದ್ದ. ಇವನೂ ಇವನ ಆಜೀವ ಸ್ನೇಹಿತ ಫ್ರೆಡರಿಕ್ ಎಂಗೆಲ್ಸನೂ ಒಟ್ಟಿಗೆ ಕಲೆತು ೧೮೪೮ರಲ್ಲಿ ಬರೆದ 'ಕಮ್ಯೂನಿಸ್ಟ್ ಮ್ಯಾನಿಫೆಸ್ಟೋ' ಅಥವಾ 'ಕಮ್ಯೂನಿಸ್ಟ್ ಪ್ರಣಾಳಿಕೆ'ಯಲ್ಲಿ ಇವರು ಯುಟೋಪಿಯನ್ ಸಮಾಜವಾದಿಗಳ ವಿಚಾರವನ್ನೊಪ್ಪುವುದಿಲ್ಲವೆಂದು ಬರೆದಿದ್ದಾರೆ. [ಮಾರ್ಕ್ಸ್ ಸತ್ತಾಗ ಮುಗಿಯದೆ ಉಳಿದಿದ್ದ 'ಕ್ಯಾಪಿಟಲ್' (ಬಂಡವಾಳ) ಎಂಬ ಪುಸ್ತಕದ ಎರಡು ಮೂರನೆಯ ಸಂಪುಟಗಳನ್ನು ಎಂಗೆಲ್ಸ್ ಬರೆದ.] ಸಮಾಜವಾದಿಗಳ ಬಗ್ಗೆ ಇವರು ಹೇಳಿರುವುದು ಹೀಗೆ: "ಈ ಸಮಾಜವಾದಿಗಳು ಸಮಾಜದ ಪ್ರತಿಯೊಬ್ಬ ವ್ಯಕ್ತಿಯ ಸ್ಥಿತಿಯನ್ನೂ, ತುಂಬಾ ಅನುಕೂಲಸ್ಥನಾದವನ ಸ್ಥಿತಿಯನ್ನೂ ಕೂಡ, ಉತ್ತಮಗೊಳಿಸಬೇಕೆಂದು ಬಯಸುತ್ತಾರೆ. ಆದ್ದರಿಂದ ಇವರು ವಾಡಿಕೆಯಾಗಿ ಇಡೀ ಸಮಾಜಕ್ಕೇ ಬಿನ್ನವಿಸಿಕೊಳ್ಳುತ್ತಾರೆ; ವರ್ಗ ಭಿನ್ನತೆಯನ್ನು ಇವರು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಅಷ್ಟೇ ಅಲ್ಲ. ಆಳುವ ವರ್ಗಕ್ಕೇ ಅವರು ಮನ್ನಣೆ ನೀಡುತ್ತಾರೆ. ಏಕೆಂದರೆ, ಒಮ್ಮೆ ತಮ್ಮ ವ್ಯವಸ್ಥೆಯನ್ನು ಅರ್ಥಮಾಡಿಕೊಂಡ ಜನರು ಇವರಲ್ಲಿ ಅತ್ಯಂತ ಶ್ರೇಷ್ಠ ಸಾಮಾಜಿಕ ಸ್ಥಿತಿಯ ಉತ್ತಮ ವಿಧಾನ ಯಾವುದೆಂಬುದನ್ನು ಅರಿಯದೆ ಹೋಗುವುದು ಸಾಧ್ಯವೆ?

"ಆದ್ದರಿಂದ ಅವರು ಎಲ್ಲ ರಾಜಕೀಯ ಕ್ರಮವನ್ನೂ—ಮುಖ್ಯವಾಗಿ ಎಲ್ಲ ಕ್ರಾಂತಿಕಾರಿ ಕ್ರಮವನ್ನೂ—ತಳ್ಳಿಹಾಕುತ್ತಾರೆ. ಅವರು ಶಾಂತಿಯುತವಾಗಿ ತಮ್ಮ ಗುರಿ ಸಾಧಿಸ ಬಯಸುತ್ತಾರೆ. ಸಣ್ಣಸಣ್ಣ ಪ್ರಯೋಗ ನಡಸಿ ಈ ಬಗೆಯ ಯತ್ನ ಮುಂದುವರಿಸಬಯಸುತ್ತಾರೆ. ಇಂಥ ಮೇಲ್ಪಂಕ್ತಿ ಹಾಕಿ ಎಲ್ಲರಿಗೂ ಇದರ ಶ್ರೇಷ್ಠ ಗುಣದ ಮನವರಿಕೆ ಮಾಡಿ,

---

[1] H. W. Laidler, *op. cit.*, p. 70.

[2] E. Levasseur, *op. cit.*, vol. II, p. 18.

ಹೊಸ ಸಾಮಾಜಿಕ ಸುವ್ಯವಸ್ಥೆಯ ಸ್ಥಾಪನೆಯ ಹಾದಿಯನ್ನು ಸುಗಮಗೊಳಿಸಲೆತ್ನಿಸುತ್ತಾರೆ. ಆದರೆ ಇಂಥ ಪ್ರಯೋಗಗಳೆಲ್ಲ ನಿಷ್ಫಲವೆನಿಸುವುದು ಅನಿವಾರ್ಯ....

"ತಮ್ಮ ಸಾಮಾಜಿಕ ಯುಟೋಪಿಯಗಳ ಪ್ರಯೋಗ ಪೂರ್ವಕ ಸಾಧನೆಯ ಕನಸನ್ನು, ಪ್ರತ್ಯೇಕ 'ಫ್ಯಾಲಂಸ್ಟರಿ'ಗಳೆಂಬ [ಫ್ಯೂರೇ ಕಲ್ಪಿತ] ಸಮಾಜವಾದಿ ಭವನಗಳನ್ನು, 'ಗೃಹಾಧಿನಿವೇಶ'ಗಳನ್ನು (Home colonies), ಸಣ್ಣ ಪಾಳೆಯಗಳನ್ನು (Little Icario) [ಎಟೀನ್ ಕ್ಯಾಬೇ ಎಂಬ ಇನ್ನೊಬ್ಬ ಫ್ರೆಂಚ್ ಸಮಾಜವಾದಿ ಮಾಡಿದ ಸಲಹೆ] —ಹೊಸ ಜೆರುಸಲೇಮಿನ, ಭೂಸ್ವರ್ಗದ, ಸಣ್ಣ ಆಕೃತಿಗಳನ್ನು—ಸ್ಥಾಪಿಸುವ ಕನಸನ್ನು ಈ ಜನ ಇನ್ನೂ ಕಾಣುತ್ತಿದ್ದಾರೆ; ಈ ಗಾಳಿಗೋಪುರಗಳನ್ನೆಲ್ಲ ಸಾಧಿಸಬಯಸುತ್ತಾರೆ. ಇದಕ್ಕಾಗಿ ಇವರು ಬೂರ್ಷ್ವಾ ವರ್ಗದ ಒಲವಿಗಾಗಿಯೂ ಕಾಂಚನಕ್ಕಾಗಿಯೂ ಪ್ರಾರ್ಥನೆ ಮಾಡಿಕೊಳ್ಳುತ್ತಾರೆ."[1]

ಈ "ಬೂರ್ಷ್ವಾವರ್ಗದ ಒಲವಿಗಾಗಿಯೂ ಕಾಂಚನಕ್ಕಾಗಿಯೂ" ಮಾಡಿಕೊಳ್ಳುತ್ತಿದ್ದ ಪ್ರಾರ್ಥನೆಯೇ ಮಾರ್ಕ್ಸ್, ಎಂಗೆಲ್ಸ್ ಇವರನ್ನು ಮುಖ್ಯವಾಗಿ ಸಿಟ್ಟಿಗೆಬ್ಬಿಸಿದ್ದು. ಹೊಸ ಸಮಾಜಕ್ಕೆ ಪರಿವರ್ತನೆ ಆಗಬೇಕಾದ್ದು ಆಳುವ ವರ್ಗದ ಪ್ರಯತ್ನದಿಂದಲ್ಲ, ಕಾರ್ಮಿಕವರ್ಗದ ಕ್ರಾಂತಿಕಾರಿ ಕ್ರಮಗಳಿಂದ—ಎಂದು ಅವರ ಭಾವನೆ. ಬೆಬೆಲ್, ಲೀಬ್‌ನೆಕ್ಟ್ ಮುಂತಾದ ಜರ್ಮನ್ ಕ್ರಾಂತಿವಾದಿಗಳಿಗೆ ೧೮೭೯ರ ಸೆಪ್ಟೆಂಬರಿನಲ್ಲಿ ಬರೆದ ಪತ್ರದಲ್ಲಿ ಇವರು ಈ ವಿಚಾರವಾಗಿ ತಮ್ಮ ಖಚಿತಾಭಿಪ್ರಾಯ ನಿರೂಪಣೆ ಮಾಡಿದ್ದಾರೆ. "ಸುಮಾರು ನಲವತ್ತು ವರ್ಷಗಳ ಕಾಲ ನಾವು ವರ್ಗಘರ್ಷಣೆಯೇ ಇತಿಹಾಸದ ತಕ್ಷಣದ ಪ್ರೇರಕಶಕ್ತಿಯೆಂದು ಒತ್ತಿ ಹೇಳಿದ್ದೇವೆ. ಅದರಲ್ಲೂ ಮುಖ್ಯವಾಗಿ ಬೂರ್ಷ್ವಾಸೀ ಮತ್ತು ಕಾರ್ಮಿಕವರ್ಗಗಳ ನಡುವಣ ಘರ್ಷಣೆಯೇ ಆಧುನಿಕ ಸಾಮಾಜಿಕ ಕ್ರಾಂತಿಯ ಹಿಂದಣ ಬಹು ದೊಡ್ಡ ಶಕ್ತಿಯಾಗಿದೆ. ಆದ್ದರಿಂದ ಈ ಚಳವಳಿಯಿಂದ ವರ್ಗ ಘರ್ಷಣೆಯನ್ನು ತೊಡೆದುಹಾಕಬಯಸುವ ಜನರೊಡನೆ ನಾವು ಸಹಕರಿಸುವುದು ಸಾಧ್ಯವಿಲ್ಲ. ಅಂತರರಾಷ್ಟ್ರೀಯ ಕೂಲಿಗಾರರ ಸಂಘ ಸ್ಥಾಪಿತವಾದಾಗ ನಾವು ಈ ಯುದ್ಧ ಘೋಷಣೆಯನ್ನು ಸ್ಪಷ್ಟವಾಗಿ ರೂಪಿಸಿದೆವು: ದುಡಿಮೆಗಾರರ ಬಿಡುಗಡೆಯನ್ನು ದುಡಿಮೆಗಾರರೇ ಸಾಧಿಸಬೇಕು. ಆದ್ದರಿಂದ, ಕಾರ್ಮಿಕರು ತುಂಬಾ ಅಶಿಕ್ಷಿತರೆಂದೂ, ಇವರು ತಮ್ಮ ಬಿಡುಗಡೆಯನ್ನು ತಾವೇ ಸಾಧಿಸಲು ಸಾಧ್ಯವಿಲ್ಲವೆಂದೂ, ಮೇಲಣ ದಾನಶೀಲ ಬೂರ್ಷ್ವಾಗಳೂ ಚಿಕ್ಕಪುಟ್ಟ ಬೂರ್ಷ್ವಾಗಳೂ ಮೊದಲು ಇವರ ಬಿಡುಗಡೆಯನ್ನು ಸಾಧಿಸಬೇಕೆಂದೂ, ಹೇಳುವ ಜನರೊಡನೆ ನಾವು ಸಹಕರಿಸಲಾರೆವು."[2]

ವರ್ಗಘರ್ಷಣೆಯೇ "ಇತಿಹಾಸದ ತಕ್ಷಣದ ಪ್ರೇರಕಶಕ್ತಿ" ಎಂದೂ, ಬೂರ್ಷ್ವಾ

---

[1] K. Marx and F. Engels, *Manifesto of the Communist Party* (1848), edited by Engels. Kerr edition, pp. 54, 56.

[2] Martin Lawrence, *Karl Marx and Friedrich Engels Correspondence, 1846-1895*, pp. 376, 377. London, 1934.

ಮತ್ತು ಕಾರ್ಮಿಕವರ್ಗಗಳ ನಡುವಣ ಘರ್ಷಣೆಯೇ "ಆಧುನಿಕ ಸಾಮಾಜಿಕಕ್ರಾಂತಿಯ ಹಿಂದಣ ಬಹು ದೊಡ್ಡ ಶಕ್ತಿ" ಎಂದೂ ಮಾರ್ಕ್ಸ್-ಎಂಗೆಲ್ಸ್ ಹೇಳಿದಾಗ ಅವರು ಸೂಚಿಸಿದ ಅರ್ಥವಾದರೂ ಏನು? ಅವರು ಇತಿಹಾಸವನ್ನು ನೋಡಿದ ರೀತಿಯನ್ನು ಪರಿಶೀಲಿಸುವುದರಿಂದ ನಾವು ಈ ಪ್ರಶ್ನೆಗಳಿಗೆ ಉತ್ತರ ಪಡೆಯಬಹುದು.

ಇತಿಹಾಸದ ಬಗ್ಗೆ ನಿಮ್ಮ ದರ್ಶನವೇನು? ಘಟನೆಗಳೆಲ್ಲ ಕೇವಲ ಆಕಸ್ಮಾತ್ ಸಂಭವಿಸಿದ ಘಟನೆಗಳೆಂದು, ಉದ್ದಕ್ಕೂ ಹರಿಯುವ ಏಕಸೂತ್ರವಿಲ್ಲದ ಅಸಂಬದ್ಧ ಘಟನೆಗಳು ಇವೆಂದು, ನೀವು ಭಾವಿಸುವಿರಾ? ಅಥವಾ, ವಿಚಾರಗಳ, ಭಾವನೆಗಳ ಶಕ್ತಿಯಿಂದ ಈ ಚಾರಿತ್ರಿಕ ವ್ಯತ್ಯಾಸಗಳಾಗುವುವೆಂದು ನೀವು ಭಾವಿಸುವಿರಾ? ಅಥವಾ, ಮಹಾವ್ಯಕ್ತಿಗಳಿಂದ ಚರಿತ್ರೆಯ ಗತಿ ಪ್ರಭಾವಿತವಾಯಿತೆಂದು ನಿಮ್ಮ ಭಾವನೆಯೇ? ನೀವು ಈ ಯಾವ ದರ್ಶನವನ್ನೇ ಹೊಂದಿದ್ದರೂ, ಆಗ ನೀವು ಮಾರ್ಕ್ಸ್‌ವಾದಿಗಳಲ್ಲ. ಮಾರ್ಕ್ಸ್‌ನಿಂದ ಸ್ಥಾಪಿತವಾದ, ಮಾರ್ಕ್ಸ್‌ನಿಂದ ಅದ್ಭುತವಾದ ರೀತಿಯಲ್ಲಿ ಪ್ರತಿಪಾದಿತವಾದ, ಇತಿಹಾಸಕಾರರ ಪರಂಪರೆ ಈ ಚರಿತ್ರೆಯ ಗತಿಯನ್ನು ಬೇರೆ ರೀತಿ ವಿವರಿಸುತ್ತದೆ. ಸಮಾಜದಲ್ಲಿ ವರ್ತಿಸುತ್ತಿರುವ ಆರ್ಥಿಕ ಪ್ರವೃತ್ತಿಗಳ, ಶಕ್ತಿಗಳ ಪರಿಣಾಮವಾಗಿ ಸಮಾಜದಲ್ಲಿ ಬದಲಾವಣೆಗಳಾಗುತ್ತವೆ. ಇದೇ ಚರಿತ್ರೆಯ ಬೆಳವಣಿಗೆಗೆ ಕಾರಣ.

ಈ ಪರಂಪರೆಯ ಇತಿಹಾಸಕಾರರ ದೃಷ್ಟಿಯಲ್ಲಿ ಘಟನೆಗಳು ಪರಸ್ಪರ ಸ್ವತಂತ್ರವಲ್ಲ; ಪರಸ್ಪರಾವಲಂಬಿತ. ಚರಿತ್ರೆ ಕ್ರಮರಹಿತ ಸಂಗತಿಗಳ, ಘಟನೆಗಳ ಕಲಸುಮೇಲೋಗರವಾಗಿ ಕಾಣಬಹುದು. ಆದರೆ ವಾಸ್ತವವಾಗಿ ಇದು ಕಲಸುಮೇಲೋಗರವಲ್ಲ. ಸ್ಪಷ್ಟ ನಿಯಮಗಳ ಚೌಕಟ್ಟಿನಲ್ಲೇ ಇದು ಸಾಗುತ್ತಿರುವುದನ್ನು ಕಾಣಬಹುದು.

ಮಾರ್ಕ್ಸ್‌ನ ದರ್ಶನದ ಮೂಲವನ್ನು ಎಂಗೆಲ್ಸ್ ಈ ರೀತಿ ವಿವರಿಸುತ್ತಾನೆ: "ಇಡೀ ಭೌತಚಾರಿತ್ರಿಕ ಬೌದ್ಧಿಕ ಜಗತ್ತು ಒಂದೇ ಒಂದು ಪ್ರತಿಕ್ರಿಯೆಯೆಂದು ಮೊಟ್ಟಮೊದಲ ಬಾರಿಗೆ ಪ್ರತಿಪಾದಿಸುವುದು ಈ ದರ್ಶನದ ಮಹಾಗುಣ. ಎಂದರೆ ಇದು ಸದಾ ಚಲಿಸುತ್ತಿದೆ, ವ್ಯತ್ಯಾಸಗೊಳ್ಳುತ್ತಿದೆ, ಪರಿವರ್ತನೆ ಹೊಂದುತ್ತಿದೆ, ಬೆಳವಣಿಗೆ ಹೊಂದುತ್ತಿದೆ. ಈ ಎಲ್ಲ ಚಲನೆ ಹಾಗೂ ಬೆಳವಣಿಗೆಯನ್ನು ಒಂದುಗೂಡಿಸಲು ಕಾರಣವಾದ ಅಂತಃಸೂತ್ರವನ್ನು ಗುರುತಿಸುವ ಯತ್ನ ಇಲ್ಲಿ ನಡೆದಿದೆ. ಈ ದೃಷ್ಟಿಕೋನದಿಂದ ನೋಡಿದ್ದೇ ಆದರೆ, ಮಾನವ ಕುಲದ ಚರಿತ್ರೆ ಅರ್ಥವಿಲ್ಲದ ವಿಚಾರಗಳ ಲಕ್ಷ್ಯಹೀನ ಪರಿಭ್ರಮಣವೆಂದು ಕಾಣಿಸದು....ಇದು ಮಾನವನ ವಿಕಾಸಕ್ರಿಯೆಯೇ ಆಗಿದೆ."[1]

ಪ್ರತಿಯೊಂದು ನಾಗರಿಕತೆಯ ಅರ್ಥಶಾಸ್ತ್ರವೂ, ರಾಜಕೀಯವೂ, ಶಾಸನ ಮತ್ತು ಶಿಕ್ಷಣ ಎಲ್ಲವೂ ಒಂದಕ್ಕೊಂದು ಗಂಟು. ಒಂದನ್ನು ಇನ್ನೊಂದು ಅವಲಂಬಿಸಿದೆ. ಉಳಿದವು ಇರುವುದರಿಂದಲೇ ಒಂದೊಂದೂ ಈ ರೀತಿ ಇದೆ. ಈ ಎಲ್ಲ ಶಕ್ತಿಗಳ ಪೈಕಿ ಆರ್ಥಿಕಶಕ್ತಿ ಅತ್ಯಂತ ಮುಖ್ಯವಾದದ್ದು. ಇದೇ ಮೂಲ. ಪದಾರ್ಥೋತ್ಪಾದಕರ ಪಾತ್ರದಲ್ಲಿ

---

[1] F. Engels, *Socialism, Utopian and Scientific*, Kerr edition, p. 85.

ಮನುಷ್ಯ ಮನುಷ್ಯರ ನಡುವೆ ಇರುವ ಸಂಬಂಧಗಳು ಎಂಥವು—ಎಂಬುದೇ ಈ ಕಮಾನಿನ ನೆತ್ತಿಗಲ್ಲು. ಮನುಷ್ಯರು ತಮ್ಮ ಜೀವನೋಪಾಯವನ್ನು ಯಾವ ರೀತಿ ಸಂಪಾದಿಸುತ್ತಾರೋ ಅದನ್ನೇ ಅವರ ಜೀವನ ವಿಧಾನ ಅವಲಂಬಿಸುತ್ತದೆ. ಒಂದು ಗೊತ್ತಾದ ಕಾಲದಲ್ಲಿ ಗೊತ್ತಾದ ಸಮಾಜದೊಳಗಡೆ ಇರುವ ಉತ್ಪಾದನ ವಿಧಾನ ಎಂಥದೋ ಅದಕ್ಕೆ ತಕ್ಕಂತೆಯೇ ಮನುಷ್ಯರ ಜೀವನವ್ಯವಸ್ಥೆ.

ಮಾರ್ಕ್ಸ್ ಇದನ್ನು ಈ ರೀತಿ ವಿವರಿಸುತ್ತಾನೆ: "ಶಾಸನಬದ್ಧ ಸಂಬಂಧಗಳನ್ನೂ ಸರಕಾರದ ವಿವಿಧ ರೂಪಗಳನ್ನೂ ಪ್ರತ್ಯೇಕವಾಗಿ ಅರಿಯುವುದು ಸಾಧ್ಯವಿಲ್ಲ; ಮಾನವ ಕುಲ ಪ್ರಗತಿಯೆಂದು ನಾವು ಯಾವುದನ್ನು ಕರೆಯುತ್ತೇವೋ ಅದರ ಮೂಲಕವೂ ಅರಿಯುವುದು ಸಾಧ್ಯವಿಲ್ಲ. ಜೀವನದ ಪ್ರಾಪಂಚಿಕ ಪರಿಸ್ಥಿತಿಗಳೇ ಇವುಗಳಿಗೆ ಮೂಲ. ವ್ಯಾಸಂಗದಿಂದ ನನಗೆ ಗೋಚರವಾದ ವಿಚಾರ ಇದು. ಮನುಷ್ಯರು ಅನುಸರಿಸುವ ಸಾಮಾಜಿಕ ಉತ್ಪಾದನ ಕಾರ್ಯದಲ್ಲಿ ಅವರು ಪರಸ್ಪರ ನಿರ್ದಿಷ್ಟ ಸಂಬಂಧಗಳನ್ನೇ ಅವಲಂಬಿಸುತ್ತಾರೆ.... ಈ ಉತ್ಪಾದನ ಸಂಬಂಧಗಳು ಅವರ ಉತ್ಪಾದನಶಕ್ತಿ ಎಷ್ಟರ ಮಟ್ಟಿಗೆ ಬೆಳೆದಿದೆಯೋ ಅದಕ್ಕೆ ತಕ್ಕಂತಿರುತ್ತವೆ. ಈ ಉತ್ಪಾದನ ಸಂಬಂಧಗಳ ಮೊತ್ತವೇ ಸಮಾಜದ ಆರ್ಥಿಕರಚನೆಯ ಸಾರಸರ್ವಸ್ವ. ಶಾಸನಬದ್ಧ ರಾಜಕೀಯ ವ್ಯವಸ್ಥೆ ರಚಿತ ವಾಗುವುದು ಈ ನಿಜವಾದ ಅಸ್ತಿಭಾರದ ಮೇಲೆ. ಇವುಗಳಿಗೆ ಅನುಸಾರವಾಗಿಯೇ ಸಮಾಜಪ್ರಜ್ಞೆಯ ನಿರ್ದಿಷ್ಟ ರೂಪಗಳು ಜನ್ಮತಾಳುತ್ತವೆ. ಪ್ರಾಪಂಚಿಕ ಜೀವನದಲ್ಲಿ ನಡೆಯುವ ಉತ್ಪಾದನ ಕ್ರಿಯೆಯ ವಿಧಾನವೇ ಜೀವನದ ಸಾಮಾಜಿಕ ರಾಜಕೀಯ ಆಧ್ಯಾತ್ಮಿಕ ಪ್ರಕ್ರಿಯೆಗಳ ಸಾಮಾನ್ಯ ಲಕ್ಷಣವನ್ನು ನಿರ್ದಿಷ್ಟಗೊಳಿಸುತ್ತದೆ. ಇವುಗಳ ಸ್ಥಿತಿ ಮನುಷ್ಯರ ಅಂತಃಪ್ರಜ್ಞೆಯಿಂದ ನಿರ್ಧರಿಸಲ್ಪಡುವುದಿಲ್ಲ. ಪ್ರತಿಯಾಗಿ, ಅವರ ಸಾಮಾಜಿಕ ಸ್ಥಿತಿಯೇ ಅವರ ಪ್ರಜ್ಞೆಯನ್ನು ನಿರ್ಧರಿಸುತ್ತದೆ."[1]

ಚರಿತ್ರೆಯ ವಿಶ್ಲೇಷಣೆ ಅರ್ಥವಿವರಣೆಗಳ ಉಪಕರಣ ನಮಗೆ ದೊರಕುವುದು ಈ ದರ್ಶನದಿಂದ. ಮನುಷ್ಯರ ಜೀವನೋಪಾಯ ಸಂಪಾದನೆಯ ವಿಧಾನ—ಉತ್ಪಾದನ ವಿನಿಮಯ ವಿಧಾನ—ಇದೇ ಪ್ರತಿಯೊಂದು ಸಮಾಜದ ಅಡಿಗಲ್ಲು. "ಸಂಪತ್ತಿನ ವಿತರಣೆ ಯಾಗುವ ಬಗೆ, ಸಮಾಜ ವಿವಿಧ ವರ್ಗಗಳಾಗಿ ವಿಂಗಡವಾಗುವ ಬಗೆ....ಇವು ಉತ್ಪಾದನೆ ಯಾಗುವ ಪದಾರ್ಥವನ್ನು ಅವಲಂಬಿಸಿವೆ; ಈ ಪದಾರ್ಥ ಹೇಗೆ ಉತ್ಪಾದನೆಯಾಗು ವುದೆಂಬುದನ್ನು ಅವಲಂಬಿಸಿವೆ; ಈ ಪದಾರ್ಥಗಳ ವಿನಿಮಯ ಹೇಗೆ ನಡೆಯುವು ದೆಂಬುದನ್ನು ಅವಲಂಬಿಸಿವೆ." ಅಂತೆಯೇ, ಪ್ರತಿಯೊಂದು ಸಮಾಜವೂ ಹೊಂದಿರುವ ನೀತಿ, ನ್ಯಾಯ, ಶಿಕ್ಷಣ ಇವೇ ಮುಂತಾದ ಹಲವು ಭಾವನೆಗಳೂ ಕೂಡ ಆ ಸಮಾಜ ಸಾಧಿಸಿರುವ ಬೆಳೆವಣಿಗೆಯ ಘಟ್ಟವನ್ನೇ ಅವಲಂಬಿಸಿರುತ್ತವೆ. ಸಾಮಾಜಿಕ ರಾಜಕೀಯ ಕ್ರಾಂತಿಗೆ ಕಾರಣವಾದವುಗಳಾದರೂ ಯಾವುವು? ಮನುಷ್ಯರ ಭಾವನೆಗಳು ಬದಲಾದುದ

---

[1] K. Marx, *A Contribution to the Critique of "Political Economy"* (1859), Kerr edition, 1904, Preface, p. 11.

ರಿಂದಲೇ ಕ್ರಾಂತಿ ಏರ್ಪಡುವುದೆ? ಇಲ್ಲ. ಅರ್ಥ ವ್ಯವಸ್ಥೆಯಲ್ಲಿ—ಉತ್ಪಾದನ ವಿತರಣ ವಿಧಾನದಲ್ಲಿ—ಮೊದಲು ಬದಲಾವಣೆ. ಅನಂತರ ಇದಕ್ಕನುಗುಣವಾಗಿ ಭಾವನೆಗಳು ರೂಪುಗೊಳ್ಳುತ್ತವೆ.

ಮನುಷ್ಯ ಪ್ರಕೃತಿಯ ಮೇಲೆ ಸ್ಥಾಪಿಸಿದ ಜಯವೇ ಆತನ ಪ್ರಗತಿ. ಪದಾರ್ಥೋತ್ಪಾದನೆಯ, ವಿತರಣೆಯ ಹೊಸ ಉತ್ತಮ ವಿಧಾನಗಳು ಪತ್ತೆಯಾಗುತ್ತಿರುತ್ತವೆ, ನಿರ್ಮಾಣವಾಗುತ್ತಿರುತ್ತವೆ. ಈ ಬದಲಾವಣೆಗಳು ಮೂಲಭೂತವೂ ಬಹು ವ್ಯಾಪಕವೂ ಆದಾಗ ಸಾಮಾಜಿಕ ಘರ್ಷಣೆಗಳು ಆರಂಭವಾಗುತ್ತವೆ. ಹಳೆಯ ಉತ್ಪಾದನ ವಿಧಾನದೊಡನೆ ಬೆಳೆದು ಬಂದ ಸಂಬಂಧಗಳು ಈಗ ಘನೀಕರಿಸುತ್ತವೆ. ಸಹಜೀವನದ ಹಳೆಯ ಪದ್ಧತಿಗಳು ಶಾಸನ, ರಾಜ್ಯವ್ಯವಸ್ಥೆ, ಮತ, ವಿದ್ಯಾಭ್ಯಾಸ ಇವುಗಳಲ್ಲಿ ಸ್ಥಿರೀಕೃತವಾಗುತ್ತವೆ. ಅಧಿಕಾರಾರೂಢವರ್ಗ ಆ ಅಧಿಕಾರವನ್ನುಳಿಸಿಕೊಳ್ಳಲು ಬಯಸುತ್ತದೆ. ಹೊಸ ಉತ್ಪಾದನ ವಿಧಾನದೊಡನೆ ಸಾಮರಸ್ಯಹೊಂದಿರುವ ವರ್ಗದೊಡನೆ ಈ ವರ್ಗದ ಘರ್ಷಣೆ ಏರ್ಪಡುತ್ತದೆ. ಪರಿಣಾಮ—ಕ್ರಾಂತಿ.

ಇತಿಹಾಸದ ಬಗ್ಗೆ ಈ ನಿಲವು ತಳೆದರೆ, ಆಗ ಅನ್ಯಥಾ ಅರಿಯಲಸದಳವಾದ ಈ ಜಗತ್ತನ್ನು ಅರಿತುಕೊಳ್ಳುವುದು ಸಾಧ್ಯ—ಎಂಬುದಾಗಿ ಮಾರ್ಕ್ಸ್‌ವಾದಿಗಳು ಹೇಳುತ್ತಾರೆ. ಜನರು ಜೀವನೋಪಾಯ ಸಂಪಾದಿಸುವ ವಿಧಾನಕ್ಕೆ ಅನುಗುಣವಾಗಿ ವರ್ಗಸಂಬಂಧ ಏರ್ಪಡುತ್ತದೆ. ಈ ದೃಷ್ಟಿಯಿಂದ ಇತಿಹಾಸದ ಘಟನೆಗಳನ್ನು ವೀಕ್ಷಿಸುವುದರಿಂದ, ಇದು ವರೆಗೂ ಸ್ಪಷ್ಟವಾಗದೆ ಇದ್ದದ್ದು ಸ್ಪಷ್ಟವಾಗುತ್ತದೆ. ಇತಿಹಾಸವೂ ಜಗತ್ತನ್ನರಿಯುವ ಸಾಧನವೆಂಬ ಈ ದೃಷ್ಟಿಯಿಂದ ನಾವು ಊಳಿಗಮಾನ್ಯ ವ್ಯವಸ್ಥೆಯಿಂದ ಬಂಡವಾಳ ವ್ಯವಸ್ಥೆಗೂ, ಬಂಡವಾಳ ವ್ಯವಸ್ಥೆಯಿಂದ ಸಮತಾವಾದಕ್ಕೂ (ಕಮ್ಯೂನಿಸಂ) ಆಗುವ ಪರಿವರ್ತನೆಯ ಸ್ವರೂಪವನ್ನರಿಯಬಹುದು.

ಮಾರ್ಕ್ಸ್, ಎಂಗೆಲ್ಸ್ ಇವರು ಗತಕಾಲವನ್ನು ಈ ದೃಷ್ಟಿಯಿಂದ ನೋಡಿದ್ದರಿಂದಲೇ ಇವರು ಚರಿತ್ರೆಯಲ್ಲಿ ಬೂರ್ಷ್ವಾ ವರ್ಗಕ್ಕೆ ಯಾವ ಸ್ಥಾನ ಸಲ್ಲಬೇಕೋ ಅದನ್ನೇ ಕೊಡಲು ಶಕ್ತರಾದರು. ಬಂಡವಾಳ ವ್ಯವಸ್ಥೆಯೂ ಬಂಡವಾಳಿಗರೂ ಕೆಟ್ಟವರೆಂದು ಇವರು ಹೇಳಲಿಲ್ಲ. ಬಂಡವಾಳ ರೀತಿಯ ಉತ್ಪಾದನ ವ್ಯವಸ್ಥೆ ಹಿಂದಣ ವ್ಯವಸ್ಥೆಗಳಿಂದ ಹೇಗೆ ಬೆಳೆಯಿತೆಂಬುದನ್ನು ಇವರು ವಿವರಿಸಿದ್ದಾರೆ. ಬೂರ್ಷ್ವಾ ವರ್ಗ ತನ್ನ ಬೆಳವಣಿಗೆಯ ಘಟ್ಟದಲ್ಲೂ, ಊಳಿಗಮಾನ್ಯ ಪದ್ಧತಿಯೊಡನೆ ನಡಸಿದ ಘರ್ಷಣೆಯಲ್ಲೂ ಹೊಂದಿದ್ದ ಕ್ರಾಂತಿಪರ ಲಕ್ಷಣವನ್ನು ಇವರು ಒತ್ತಿ ಹೇಳಿದರು. "ಎಂದರೆ ಹೀಗೆ ಹೇಳಿದ ಹಾಗಾಯಿತು: ಬೂರ್ಷ್ವಾ ವರ್ಗ ತನ್ನ ವ್ಯವಸ್ಥೆಯನ್ನು ಯಾವ ತಳಹದಿಯ ಮೇಲೆ ರಚಿಸಿಕೊಂಡಿತೋ ಆ ಉತ್ಪಾದನ ವಿತರಣ ಸಾಧನಗಳು ಊಳಿಗಮಾನ್ಯ ಸಮಾಜದಲ್ಲಿ ಉದ್ಭವಿಸಿದುವು. ಈ ಉತ್ಪಾದನ ವಿತರಣ ಸಾಧನಗಳ ಬೆಳವಣಿಗೆಯ ಒಂದು ಘಟ್ಟದಲ್ಲಿ....ಊಳಿಗಮಾನ್ಯ ಯುಗದ ಆಸ್ತಿಯ ಸಂಬಂಧಗಳು ಆ ವೇಳೆಗಾಗಲೇ ಬೆಳೆದಿದ್ದ ಉತ್ಪಾದನಶಕ್ತಿಗಳೊಡನೆ ಹೊಂದಿಕೊಳ್ಳುವುದು ಸಾಧ್ಯವಾಗಲಿಲ್ಲ. ಇವುಗಳಲ್ಲಿ ಒಂದೊಂದೂ ಬಂಧನವಾಗಿ

ಪರಿಣಮಿಸಿತು. ಈ ಬಂಧನ ಕಿತ್ತೊಗೆಯುವುದು ಅನಿವಾರ್ಯವಾಯಿತು. ಈ ಬಂಧನಗಳು ಕತ್ತರಿಸಿಬಿದ್ದುವು.

"ಇವುಗಳ ಸ್ಥಾನವಲ್ಲಿ ನಿರುಪಾಧಿಕ ಸ್ಪರ್ಧೆ ಕಾಲಿಟ್ಟಿತು. ಇದರೊಡನೆ ಇದಕ್ಕೆ ತಕ್ಕ ಸಾಮಾಜಿಕ ರಾಜಕೀಯ ಸಂವಿಧಾನವೂ ಬಂತು. ಬೂರ್ಷ್ವಾ ವರ್ಗದ ಆರ್ಥಿಕ ರಾಜಕೀಯ ಪ್ರಭಾವವೂ ಉದ್ಭವಿಸಿತು."[1]

ಹೀಗೆ ಹೊಸ ಉತ್ಪಾದನ ಶಕ್ತಿಗಳೂ ಕ್ರಾಂತಿಪರ ವರ್ಗವೂ (ಬೂರ್ಷ್ವಾ ವರ್ಗ)—ಇವೆರಡೂ—ಇದ್ದದ್ದರಿಂದ ಊಳಿಗ ಮಾನ್ಯ ವ್ಯವಸ್ಥೆಯಿಂದ ಬಂಡವಾಳ ವ್ಯವಸ್ಥೆಗೆ ಪರಿವರ್ತನೆಯಾಯಿತು. ಪರಿವರ್ತನೆಯ ವಿಚಾರದಲ್ಲಿ ಇದು ಯಾವಾಗಲೂ ಸತ್ಯ. ಮನುಷ್ಯರು ಬಯಸಿದರೆಂಬ ಮಾತ್ರಕ್ಕೇ ಹಳೆಯ ವ್ಯವಸ್ಥೆ ಹೋಗಿ ಹೊಸ ವ್ಯವಸ್ಥೆ ಬಾರದು. ಖಂಡಿತ ಇದು ಸಾಧ್ಯವಿಲ್ಲ. ಹೊಸ ಉತ್ಪಾದನ ಶಕ್ತಿಗಳು ಅಲ್ಲಿ ಜನ್ಮ ತಾಳಿರಬೇಕು. ಇವುಗಳೊಡನೆ, ಇವನ್ನು ಅರಿತು ನಿರ್ದೇಶಿಸಬಲ್ಲ ಒಂದು ಕ್ರಾಂತಿಕಾರಿ ವರ್ಗವೂ ಉದಿಸಬೇಕು.

ಊಳಿಗಮಾನ್ಯ ಪದ್ಧತಿಯಿಂದ ಬಂಡವಾಳ ವ್ಯವಸ್ಥೆಗೆ ಆದ ಬದಲಾವಣೆ ಹೀಗಾಯಿತು. ಬಂಡವಾಳ ವ್ಯವಸ್ಥೆಯಿಂದ ಸಮತಾವಾದಿ ಸಮಾಜಕ್ಕೆ ಆಗುವ ಬದಲಾವಣೆಯೂ ಹೀಗೆಯೇ ಆದೀತು—ಎಂದರು ಮಾರ್ಕ್ಸ್ ಮತ್ತು ಎಂಗೆಲ್ಸ್.

ಗತಕಾಲದ ಸಮಾಜವನ್ನು ಕಂಡು, ಆಗ ಏನಾಯಿತೆಂಬುದನ್ನು ವರ್ಣಿಸುವುದು ಒಂದು ವಿಚಾರ. ಆದರೆ ಇಂದಿನ ಸಮಾಜವನ್ನು ಕಂಡು ಮುಂದೆ ಏನಾಗುವುದೆಂಬುದನ್ನು ಬಣ್ಣಿಸುವುದು ಬೇರೆ ವಿಚಾರ. ಊಳಿಗಮಾನ್ಯ ವ್ಯವಸ್ಥೆಯಂತೆಯೇ ಬಂಡವಾಳ ವ್ಯವಸ್ಥೆಯೂ ಇತಿಹಾಸದ ರಂಗಸ್ಥಳವನ್ನು ಬಿಟ್ಟು ತೆರಳಬೇಕಾದೀತೆಂಬುದಾಗಿ ಹೇಳಲು ಮಾರ್ಕ್ಸ್ ಎಂಗೆಲ್ಸ್ ಇವರಿಗೆ ಇದ್ದ ಸಾಕ್ಷಿ ಯಾವುದು? ಬಂಡವಾಳ ವ್ಯವಸ್ಥೆ ಆಂತರಿಕವಾಗಿ ಕುಸಿದು ಬೀಳುವುದೆಂದು, ಉತ್ಪಾದನ ಶಕ್ತಿಗಳು ಒಳಗೆ ಬಿಗಿಯಲ್ಪಟ್ಟಿವೆಯೆಂದು, ಪ್ರಸಕ್ತ ಉತ್ಪಾದನ ಸಂಬಂಧಗಳ ಫಲವಾಗಿ ಇವು ಮುಂದೆ ಸ್ವತಂತ್ರವಾಗಿ ಬೆಳೆದು ವಿಸ್ತಾರಗೊಳ್ಳದಂತೆ ಅಡ್ಡಿಯಾಗಿದೆಯೆಂದು ಹೇಳಲು ಇವರಿಗೆ ಇದ್ದ ಸಾಕ್ಷಿ ಯಾವುದು?

ಮಾರ್ಕ್ಸ್ ಎಂಗೆಲ್ಸರು ೧೮೪೮ರಲ್ಲಿ ಬಂಡವಾಳ ಸಮಾಜದ ವಿಶ್ಲೇಷಣೆ ನಡಸಿ, ಉತ್ಪಾದನ ವ್ಯವಸ್ಥೆಯ ಒಳಗೆ ಕಂಡು ಬಂದ ಕೆಲವು ಲಕ್ಷಣಗಳನ್ನು ತೋರಿಸಿದರು. ಬಂಡವಾಳ ವ್ಯವಸ್ಥೆಯ ಅವಸಾನವನ್ನು ಈ ಲಕ್ಷಣಗಳೇ ಸಾರುತ್ತಿವೆಯೆಂದು ಹೇಳಿದರು. ಅವರು ಎತ್ತಿ ತೋರಿಸಿದ ಲಕ್ಷಣಗಳು ಇವು:

ಕೆಲವರ ಕೈಯಲ್ಲಿ ಸಂಪತ್ತಿನ ಅಧಿಕಾಧಿಕ ಕೇಂದ್ರೀಕರಣ.

ಕೆಲವು ದೊಡ್ಡ ಉತ್ಪಾದಕರಿಂದ ಹಲವು ಸಣ್ಣ ಉತ್ಪಾದಕರ ನಿರ್ಮೂಲ.

ಹೆಚ್ಚು ಹೆಚ್ಚು ಕಾರ್ಮಿಕರನ್ನು ಉಚ್ಚಾಟಿಸುವ ಯಂತ್ರದ ಅಧಿಕಾಧಿಕ ಬಳಕೆ, "ಕೈಗಾರಿಕೆಯ ಮುಡಿಪು ತಂಡ"ದ ನಿರ್ಮಾಣ.

---

[1] *Communist Manifesto*, p. 19.

ಜನಸಮೂಹದಲ್ಲಿ ಹೆಚ್ಚುತ್ತಿರುವ ಸಂಕಟ.

ವ್ಯವಸ್ಥೆಯಲ್ಲಿ ಪದೇ ಪದೇ ಸಂಭವಿಸುವ, ಒಂದಕ್ಕಿಂತ ಒಂದು ಹೆಚ್ಚು ಅನಾಹುತ ಕಾರಿಯಾಗಿರುವ, ಕುಸಿತ—ಬಿಕ್ಕಟ್ಟು.

ಎಲ್ಲಕ್ಕಿಂತ ಬಹುಮುಖ್ಯವಾದದ್ದು ಒಂದಿದೆ. ಬಂಡವಾಳ ವ್ಯವಸ್ಥೆಯ ಮೂಲಭೂತ ವಿರೋಧಾಭಾಸವಿದು: ಉತ್ಪಾದನೆ ಮಾತ್ರ ಹೆಚ್ಚು-ಹೆಚ್ಚು ಸಾಮಾಜಿಕವಾಗುತ್ತಿದೆ, ಸಮಷ್ಟಿಪ್ರಯತ್ನ ಹಾಗೂ ಶ್ರಮಗಳ ಪರಿಣಾಮವಾಗುತ್ತಿದೆ. ಆದರೆ ಇದರ ಬಳಕೆ, ಇದನ್ನು ವಶಪಡಿಸಿಕೊಳ್ಳುವ ಕಾರ್ಯ, ಖಾಸಗಿಯಾಗುತ್ತಿದೆ, ವೈಯಕ್ತಿಕವಾಗುತ್ತಿದೆ. ದುಡಿಮೆ ಸೃಷ್ಟಿಸುತ್ತದೆ, ಬಂಡವಾಳ ಬಳಸುತ್ತದೆ. ಬಂಡವಾಳ ವ್ಯವಸ್ಥೆಯಲ್ಲಿ ದುಡಿಮೆಯು ಸೃಷ್ಟಿಕಾರ್ಯ ಕೂಡಿ ಮಾಡುವ ಕಾರ್ಯವಾಗಿದೆ, ಸಹಯೋಗವಾಗಿದೆ; ಸಹಸ್ರಾರು ಕಾರ್ಮಿಕರು ಸೇರಿ ದುಡಿಯುವ ಸಹಕಾರ ಪ್ರಕ್ರಿಯೆಯಾಗಿದೆ. (ಈ ಹಲವರು ಸೇರಿ ದುಡಿಯುವುದು ಬಹುಶಃ ಒಂದೇ ಪದಾರ್ಥದ—ಉದಾಹರಣೆಗೆ ಮೋಟಾರಿನ—ಸೃಷ್ಟಿಗಾಗಿ). ಆದರೆ ಇದರ ಫಲದ—ಸಾಮಾಜಿಕವಾಗಿ ಉತ್ಪಾದಿಸಿದ ಪದಾರ್ಥದ—ಸ್ವಾಮ್ಯ, ವಶೀಕರಣ, ಉತ್ಪಾದಕರದಾಗುವುದಿಲ್ಲ; ಉತ್ಪಾದನ ಸಾಧನಗಳನ್ನು ಹೊಂದಿರುವ ಬಂಡವಾಳಿಗರದಾಗುತ್ತದೆ. ಇಲ್ಲೇ ಇರುವುದು ತಿಕ್ಕಾಟ—ತೊಂದರೆಯ ಮೂಲ. ಉತ್ಪಾದನೆ ಸಮಷ್ಟಿಯಿಂದ; ಇದರ ವಿರುದ್ಧವಾಗಿ, ವಶೀಕರಣ ಬಂಡವಾಳದಿಂದ.

ಇದೆಲ್ಲವನ್ನೂ ಮಾರ್ಕ್ಸ್ ತನ್ನ 'ಕ್ಯಾಪಿಟಲ್' ಎಂಬ ಪುಸ್ತಕದಲ್ಲಿ, ಬಹು ಪರಿಣಾಮ ಕಾರಿಯಾಗಿ ಸಂಗ್ರಹಿಸಿದ್ದಾನೆ. "ಒಬ್ಬ ಬಂಡವಾಳಗಾರ ಯಾವಾಗಲೂ ಹಲವು ಬಂಡವಾಳಿಗರನ್ನು ಕೊಲ್ಲುತ್ತಾನೆ. ಈ ಕೇಂದ್ರೀಕರಣದ ಜತೆಜತೆಗೇ ಅಥವಾ ಕೆಲವು ಬಂಡವಾಳಿಗರು ಕೈಕೊಳ್ಳುವ ಹಲವು ಬಂಡವಾಳಿಗರ ನಿರ್ಮೂಲ ಕಾರ್ಯದ ಜತೆ ಜತೆಗೇ ಸದಾ ಹೆಚ್ಚು ಹೆಚ್ಚು ವ್ಯಾಪಕವಾಗುತ್ತಿರುವ ಸಹಕಾರಪೂರಿತ ದುಡಿಮೆಯ ಪ್ರಕ್ರಿಯೆ ಬೆಳೆಯುತ್ತಲೇ ಇರುತ್ತದೆ....ದುಡಿಮೆಯ ಉಪಕರಣಗಳು ಸಮಷ್ಟಿಯಿಂದಲೇ ಬಳಸಬಹುದಾದ ಉಪಕರಣಗಳಾಗಿ ಪರಿವರ್ತನೆಗೊಳ್ಳುತ್ತವೆ....ಬಂಡವಾಳ ಪ್ರಭೃತಿಗಳ ಸಂಖ್ಯೆ ಸದಾ ಕಡಮೆಯಾಗುತ್ತಿರುತ್ತದೆ....ಇದರೊಡನೆಯೇ ಸಂಕಟದ, ದಬ್ಬಾಳಿಕೆಯ, ದಾಸ್ಯದ, ಅವನತಿಯ, ಶೋಷಣೆಯ ಮೊತ್ತ ಬೆಳೆಯುತ್ತದೆ; ಆದರೆ ಇದರೊಡನೆಯೇ ಶಿಸ್ತಿನ, ಒಗ್ಗಟ್ಟಿನಿಂದ ಕೂಡಿದ, ಕಾರ್ಮಿಕವರ್ಗದ ಪ್ರತಿಭಟನೆಯೂ ಬೆಳೆಯುತ್ತದೆ.... ಬಂಡವಾಳ ರೀತಿಯ ಉತ್ಪಾದನ ಕಾರ್ಯವೇ ಇವರ ಸಂಘಟನೆಗೂ ಅವಕಾಶ ಮಾಡಿ ಕೊಡುತ್ತದೆ. ಉತ್ಪಾದನ ಸಾಧನಗಳ ಕೇಂದ್ರೀಕರಣ, ಹಾಗೂ ದುಡಿಮೆಯ ಸಾಮಾಜಿಕ ಕರಣ ಹೀಗೆಯೇ ಮುಂದುವರಿದು ಪರಮಾವಧಿಯ ಘಟ್ಟ ಮುಟ್ಟುತ್ತದೆ. ಇವುಗಳಿಗೂ ಇವುಗಳನ್ನು ಸುತ್ತಿರುವ ಬಂಡವಾಳ ಪದ್ಧತಿಯ ಆವರಣಕ್ಕೂ ಹೊಂದಾಣಿಕೆ ಇಲ್ಲ ದಂತಾಗುತ್ತದೆ. ಈ ಆವರಣ ಸಿಡಿಯುತ್ತದೆ. ಬಂಡವಾಳ ಪದ್ಧತಿಯ ಖಾಸಗಿ ಆಸ್ತಿಯ ಅಂತ್ಯವಾಗುತ್ತದೆ. ಆಸ್ತಿ ಕಸಿದುಕೊಳ್ಳುವವರ ಆಸ್ತಿ ಕಸಿದು ಹೋಗುತ್ತದೆ."[1]

---

[1] *Capital*, vol. I, pp. 788, 789.

ಖಾಸಗಿ ಹಾಗೂ ವೈಯಕ್ತಿಕ ಸಂಪತ್ತು, ಗಳಿಕೆ ಇವುಗಳು ವಿಧಿಸುವ ಪರಿಮಿತಿಗಳೊಳಗೆ ಉತ್ಪಾದನೆಯ ಸಾಮಾಜಿಕ ಶಕ್ತಿಗಳನ್ನು ಅಡಗಿಸಿಡುವುದು ಅಸಾಧ್ಯವೆನಿಸುವ ಕಾಲ ಬಂದೀತೆಂದು ಮಾರ್ಕ್ಸ್, ಎಂಗೆಲ್ಸ್ ಇವರು ನಂಬಿದ್ದರು. ತತ್ಫಲವಾದ ಘರ್ಷಣೆಯಿಂದ ನವ ಸಮರಸಪೂರ್ಣ ಸಮಾಜ ಸ್ಥಾಪನೆಯಾಗುವುದೆಂದು, ಉತ್ಪಾದನ ಸಾಧನಗಳ ಒಡೆತನ ಹಾಗೂ ಹತೋಟಿಗಳು ಬಹು ಅಲ್ಪ ಸಂಖ್ಯಾತರಾದ ಬಂಡವಾಳವಾದಿ ವಶೀಕರಣಿಗಳಿಂದ ಬಹು ಸಂಖ್ಯಾತ ಕಾರ್ಮಿಕೋತ್ಪಾದಕರ ಕೈಗೆ ಬರುತ್ತವೆಯೆಂದು ಇವರು ಭಾವಿಸಿದ್ದರು.

ಆದರೆ ಈ ಬದಲಾವಣೆ ಆಗುವ ಪರಿ ಎಂತು? ಜನರು ಕೈಕೊಳ್ಳುವ ಕ್ರಮದಿಂದ. ಈ ಬದಲಾವಣೆ ಏರ್ಪಡಿಸುವ ಜನರಾರು? ಕಾರ್ಮಿಕರು. ಏಕೆ? ಬಂಡವಾಳ ವ್ಯವಸ್ಥೆಯ ವಿರೋಧಾಭಾಸಗಳಿಂದ ತುಂಬಾ ತೊಂದರೆಗೀಡಾಗುವವರು ಇವರೇ ಆದುದರಿಂದ, ಖಾಸಗಿ ಆಸ್ತಿಯ ಆಧಾರದ ಮೇಲೆ ರಚಿತವಾದ ವ್ಯವಸ್ಥೆಯಲ್ಲಿ ಇವರಿಗೆ ನ್ಯಾಯವಾದ ಭಾಗ ಸಲ್ಲದಿರುವುದರಿಂದ, ಈ ವ್ಯವಸ್ಥೆಯನ್ನು ಉಳಿಸಬೇಕೆಂಬ ಆಸಕ್ತಿ ಇವರಿಗೆ ಇಲ್ಲದಿರುವುದ ರಿಂದ. ಬಂಡವಾಳ ವ್ಯವಸ್ಥೆಯಿಂದ ಸಾಮ್ಯವಾದಕ್ಕೆ ಆಗುವ ಆ ಬೆಳವಣಿಗೆ ಬಂಡವಾಳ ವ್ಯವಸ್ಥೆಯಲ್ಲೇ ಅಂತರ್ಗತವಾಗಿದೆ. ಈ ಪರಿವರ್ತನೆಯ ಕಾರಣಪುರುಷರು ಕಾರ್ಮಿಕರು.

ಮಾರ್ಕ್ಸ್ ಆರಾಮ ಕುರ್ಚಿಯ ಕ್ರಾಂತಿವಾದಿಯಾಗಿರಲಿಲ್ಲ. ಇನ್ನೊಬ್ಬರು ಏನು ಮಾಡಬೇಕು? ಏಕೆ ಹಾಗೆ ಮಾಡಬೇಕು?—ಎಂದು ಹೇಳಿಕೊಡುವುದರಲ್ಲಿ ಆತ ತೃಪ್ತನಾಗುತ್ತಿರಲಿಲ್ಲ. ಇಲ್ಲ, ಆತ ತನ್ನ ದರ್ಶನದಂತೆ ನಡೆದು ತೋರಿಸಿದ. ಅವನ ದರ್ಶನ, ಪ್ರಪಂಚದ ವಿವರಣೆ ಮಾತ್ರವಾಗಿರಲಿಲ್ಲ; ಪ್ರಪಂಚವನ್ನು ಪರಿವರ್ತನೆಗೊಳಿಸುವ ಸಾಧನವೂ ಆಗಿತ್ತು. ಆದ್ದರಿಂದ ಪ್ರಾಮಾಣಿಕ ಕ್ರಾಂತಿವಾದಿಯಾದ ಅವನು ಈ ಘರ್ಷಣೆಗೆ ಅತೀತನಾಗಿರುವುದು—ಹೊರಗಿರುವುದು—ಸಾಧ್ಯವಿರಲಿಲ್ಲ. ಇದರಲ್ಲಿ ಹೋರಾಟ ನಡಸುವ ಒಂದು ಅಂಗವಾಗಬೇಕಿತ್ತು ಅವನು. ಆತ ಹಾಗೆಯೇ ಆಗಿದ್ದ.

ಬಂಡವಾಳ ವ್ಯವಸ್ಥೆಯ ನಿರ್ಮೂಲ ಕಾರ್ಯದ ಸಾಧನವೇ ದುಡಿಮೆಗಾರರೆಂಬು ದನ್ನು ಆತ ಅರಿತಾಗ, ಆತ ಈ ವರ್ಗವನ್ನು ಆರ್ಥಿಕ ರಾಜಕೀಯ ಘರ್ಷಣೆಗಳಿಗಾಗಿ ತರಬೇತು ಮಾಡುವ ಕಾರ್ಯಕ್ಕೆ ಸಹಜವಾಗಿ ಗಮನ ನೀಡಿದ. ಅಂತರರಾಷ್ಟ್ರೀಯ ದುಡಿಮೆಗಾರರ ಸಂಘದ (ಪ್ರಥಮ ಅಂತರ ರಾಷ್ಟ್ರೀಯ—First International) ಪ್ರಭಾವಶಾಲಿ ಸದಸ್ಯನಾಗಿದ್ದನೀತ. ಈ ಸಂಘ ೧೮೬೪ರ ಸೆಪ್ಟೆಂಬರ್ ೨೮ ರಂದು ಸ್ಥಾಪಿತವಾಗಿತ್ತು. ಈ ಸಂಘ ಸ್ಥಾಪನೆಯಾದ ಎರಡು ತಿಂಗಳ ಅನಂತರ, ೧೮೬೪ರ ನವೆಂಬರ್ ೨೯ರಂದು, ಮಾರ್ಕ್ಸ್ ತನ್ನ ಜರ್ಮನ್ ಗೆಳೆಯನಾದ ಡಾ|| ಕ್ಯುಗೆಲ್‌ಮನ್ನನಿಗೆ ಈ ರೀತಿ ಬರೆದ: "ಈ ಸಂಘ, ಅಥವಾ ಈ ಸಂಘದ ಸಮಿತಿ, ಬಹು ಪ್ರಧಾನವಾದದ್ದು. ಏತಕ್ಕೆಂದರೆ ಲಂಡನ್ನಿನ ಕಾರ್ಮಿಕ ಸಂಘಗಳ ನಾಯಕರು ಇದರಲ್ಲಿದ್ದಾರೆ....ಪ್ಯಾರಿಸಿನ ಕಾರ್ಮಿಕ ನಾಯಕರೂ ಕೂಡ ಇದರೊಡನೆ ಸಂಬಂಧ ಹೊಂದಿದ್ದಾರೆ."[1]

[1] K. Marx, *Letters to Dr. Kugelmann*, Marx-Engels-Lenin Institute translation, p. 26. Martin Lawrence, London.

ಮಾರ್ಕ್ಸ್ ಎಂಗೆಲ್ಸರು ಕಾರ್ಮಿಕ ಸಂಘಗಳಿಗೆ ತುಂಬಾ ಪ್ರಾಮುಖ್ಯ ನೀಡಿದ್ದರು. "ಕಾರ್ಮಿಕರನ್ನು ಕಾರ್ಮಿಕ ಸಂಘಗಳ ಮೂಲಕ ಒಂದು ವರ್ಗವಾಗಿ ಸಂಘಟಿಸುವ ಕಾರ್ಯ ನಿಜವಾದ ಸಂಘಟನ ಕಾರ್ಯ....ಈ ಸಂಘಟನೆಯ ಆಶ್ರಯದಲ್ಲಿ, ಕಾರ್ಮಿಕವರ್ಗ ಬಂಡವಾಳದೊಡನೆ ಹೋರಾಟ ನಡಸುತ್ತದೆ. ಇದರ ಆಶ್ರಯದಲ್ಲೇ ಅದು ಪರಿಶ್ರಮವನ್ನು ಪಡೆಯುತ್ತದೆ...."[1]

ಪರಿಶ್ರಮ ಏತಕ್ಕಾಗಿ? ಹೆಚ್ಚು ಕೂಲಿಗಾಗಿ ಹೋರಾಟಕ್ಕಾಗಿಯೇ? ಕೆಲಸದ ಕಾಲ ಕಡಮೆಗಾಗಿಯೇ? ಉತ್ತಮ ಸ್ಥಿತಿಗಾಗಿಯೇ? ಹೌದು, ಸಹಜವಾಗಿ. ಆದರೆ ಇದರೊಡನೆ ಇನ್ನೂ ಬಹು ಮುಖ್ಯವಾದ ಹೋರಾಟಕ್ಕಾಗಿ ಕೂಡ—ಖಾಸಗಿ ಆಸ್ತಿಯನ್ನು ವಿಸರ್ಜನೆ ಗೊಳಿಸಿ, ದುಡಿಮೆಗಾರ ವರ್ಗದ ಸಂಪೂರ್ಣ ಬಂಧವಿಮೋಚನೆ ಮಾಡುವುದಕ್ಕಾಗಿ. ಉತ್ಪಾದನ ಸಾಧನಗಳ ಖಾಸಗಿ ಒಡೆತನದಿಂದಲೇ ಬಂಡವಾಳ ಷಾಹಿಯು ಎಲ್ಲ ಅನರ್ಥ ಗಳೂ ಉದಿಸುವುದರಿಂದ, ಮಾರ್ಕ್ಸ್ ಎಂಗೆಲ್ಸ್‌ಗಳ ಕಾರ್ಯಕ್ರಮದಲ್ಲಿ ಪ್ರಧಾನಾಂಶ ವೆಂದರೆ ಶೋಷಣೆಯ ಮೂಲವಾದ ಖಾಸಗಿ ಆಸ್ತಿಯ ವಿಸರ್ಜನೆ. "ಕೂಲಿಗಾರರನ್ನೂ ಒಂದು ವರ್ಗವಾಗಿ ರೂಪಿಸುವುದು, ಬೂರ್ಷ್ವಾ ಪರಮಾಧಿಕಾರವನ್ನು ಕಿತ್ತೊಗೆಯುವುದು, ದುಡಿಮೆಗಾರರು ರಾಜಕೀಯಾಧಿಕಾರವನ್ನು ಗೆಲ್ಲುವುದು—ಇದೇ ಕಮ್ಯೂನಿಸ್ಟರ ತಕ್ಷಣದ ಗುರಿ. ಆದರೆ ವರ್ಗ ದ್ವೇಷದ ಆಧಾರದ ಮೇಲೆ, ಕೆಲವರಿಂದ ಹಲವರ ಶೋಷಣೆಯ ಮೂಲಕ ರಚಿತವಾಗಿ ಮಹೋನ್ನತಿಯನ್ನೇರಿದ ಉತ್ಪಾದನೆ, ಉತ್ಪನ್ನ ವಶೀಕರಣ—ಈ ವ್ಯವಸ್ಥೆಯ ಸಂಪೂರ್ಣ ರೂಪವೇ ಆಧುನಿಕ ಬೂರ್ಷ್ವಾ ಖಾಸಗಿ ಆಸ್ತಿ.

"ಈ ಅರ್ಥದಲ್ಲಿ, ಕಮ್ಯೂನಿಸ್ಟರ ಸೂತ್ರವನ್ನು ಒಂದೇ ಒಂದು ವಾಕ್ಯದಲ್ಲಿ, ಸಂಗ್ರಹವಾಗಿ ಹೇಳಬಹುದು—ಖಾಸಗಿ ಆಸ್ತಿಯ ವಿಸರ್ಜನೆ....

"ನೀವು [ಬೂರ್ಷ್ವಾ ವರ್ಗ] ಖಾಸಗಿ ಆಸ್ತಿಯನ್ನು ವಿಸರ್ಜಿಸಬೇಕೆಂಬ ನಮ್ಮ ಉದ್ದೇಶದಿಂದ ಗಾಬರಿಗೊಂಡಿದ್ದೀರಿ. ಆದರೆ ನಿಮ್ಮ ಪ್ರಸಕ್ತ ಸಮಾಜದಲ್ಲಿ ಜನಸಂಖ್ಯೆಯ ಹತ್ತನೆಯ ಒಂಬತ್ತು ಪಾಲಿಗೆ ಖಾಸಗಿ ಆಸ್ತಿ ಈಗಲೇ ಇಲ್ಲದಂತಾಗಿದೆ. ಕೆಲವರ ಕೈಯಲ್ಲಿ ಇದು ಇರುವುದಕ್ಕೆ ಹತ್ತನೆಯ ಒಂಬತ್ತು ಭಾಗದ ಕೈಯಲ್ಲಿ ಇದು ಇಲ್ಲದಿರುವುದೇ ಕಾರಣ. ಆದ್ದರಿಂದ ನೀವು ಆಸ್ತಿಯ ಒಂದು ಬಗೆಯ ಒಡೆತನ ಇಲ್ಲದಂತೆ ಮಾಡುತ್ತಿರುವೆವೆಂದು ನಮ್ಮನ್ನು ಹಳಿಯುವಿರಿ. ಈ ಒಡೆತನ ಮುಂದುವರಿಯುತ್ತಿರುವುದಕ್ಕೆ ಅಗತ್ಯವಾದ ಕಾರಣವಾದರೂ ಯಾವುದು? ಸಮಾಜದ ಅತ್ಯಂತ ಬಹು ಸಂಖ್ಯಾತರ ಕೈಯಲ್ಲಿ ಯಾವ ಆಸ್ತಿಯೂ ಇಲ್ಲದಿರುವುದೇ ಕಾರಣ.

"ನಿಮ್ಮ ಆಸ್ತಿ ಕಿತ್ತುಕೊಳ್ಳುವ ಉದ್ದೇಶ ಹೊಂದಿದ್ದೇವೆಂದು ನೀವು ಒಂದೇ ಮಾತಿನಲ್ಲಿ ಹಳಿಯುತ್ತೀರಿ. ಇದು ಖಂಡಿತ ನಿಜ. ಇದೇ ನಮ್ಮ ಉದ್ದೇಶ....

"ಆಸ್ತಿಯ ಖಾಸಗಿ ಒಡೆತನದಿಂದ ಎಲ್ಲ ದುಡಿಮೆಯೂ ಅಂತ್ಯಗೊಳ್ಳುವುದೆಂದು, ಸಾರ್ವಜನಿಕ ಸೋಮಾರಿತನ ನಮ್ಮನ್ನಾವರಿಸುವುದೆಂದು ಆಕ್ಷೇಪಣೆ.

---

[1] *K. M. and F. E. Correspondence*, p. 336.

"ಆದರೆ, ಈ ವಾದವನ್ನು ಅನ್ವಯಿಸುವುದಾದರೆ, ಬೂರ್ಷ್ವಾ ಸಮಾಜ ತನ್ನ ಶುದ್ಧ ಸೋಮಾರಿತನದ ಕಾರಣದಿಂದ ಎಂದೋ ಕಾಡುಪಾಲಾಗಬೇಕಿತ್ತು. ಏಕೆಂದರೆ ದುಡಿಯು ವವರು ಏನನ್ನೂ ಸಂಗ್ರಹಿಸುವುದಿಲ್ಲ, ಸಂಗ್ರಹಿಸುವವರು ದುಡಿಯುವುದಿಲ್ಲ."[1]

ಆದ್ದರಿಂದ ಈ ಬಗೆಯ ಖಾಸಗಿ ಒಡೆತನವನ್ನು, ಆಸ್ತಿ ಹೊಂದಿರುವವರು ಇಲ್ಲದವ ರನ್ನು ಶೋಷಿಸುವ ಅಧಿಕಾರ ಕೊಡುವ ಬಗೆಯ ಖಾಸಗಿ ಒಡೆತನವನ್ನು ವಿಸರ್ಜಿಸಬೇಕು. ಆದರೆ ಹೇಗೆ ? ಆಸ್ತಿ ಹೊಂದಿರುವವರು ಇದನ್ನು ಬಿಟ್ಟುಕೊಡಬೇಕೆಂದು ಕೇಳುವುದರಿಂದಲೆ ? ಮಸೂದೆ ತಂದು, ಮತ ನೀಡಿ, ನಿರ್ಣಯ ಮಾಡಿ, ಇವರಿಗೆ ಒಡೆತನದ ಹಕ್ಕಿಲ್ಲವೆಂದು ಹೇಳುವುದರ ಮೂಲಕವೆ ? ಖಂಡಿತ ಅಲ್ಲ—ಎಂದರು ಮಾರ್ಕ್ಸ್ ಎಂಗೆಲ್ಸ್.

ಹಾಗಾದರೆ ಹೇಗೆ ? ಅವರು ಪ್ರತಿಪಾದಿಸಿದ ವಿಧಾನ ಯಾವುದು ?

ಕ್ರಾಂತಿ.

"ಕಮ್ಯೂನಿಸ್ಟರು ತಮ್ಮ ಅಭಿಪ್ರಾಯಗಳನ್ನೂ ಉದ್ದೇಶಗಳನ್ನೂ ಮರೆಮಾಚಲು ಹೇಸುತ್ತಾರೆ. ಎಲ್ಲ ಪ್ರಸಕ್ತ ಸಾಮಾಜಿಕ ವ್ಯವಸ್ಥೆಗಳನ್ನೂ ಬಲಾತ್ಕಾರವಾಗಿ ಕಿತ್ತೊಗೆಯು ವುದರಿಂದಲೇ ತಮ್ಮ ಗುರಿಗಳನ್ನು ಪಡೆಯುವುದು ಸಾಧ್ಯವಾಗುವುದೆಂದು ಅವರು ಬಹಿರಂಗ ವಾಗಿ ಘೋಷಿಸುವರು. ಕಮ್ಯೂನಿಸ್ಟ್ ಕ್ರಾಂತಿಯನ್ನು ಕಂಡು ಆಳುವ ವರ್ಗ ಭೀತಿಯಿಂದ ನಡುಗಲಿ. ದುಡಿಮೆಗಾರರು ಕಳೆದುಕೊಳ್ಳುವಂಥದು ಯಾವುದೂ ಇಲ್ಲ—ತಮ್ಮನ್ನು ಬಿಗಿದಿರುವ ಸರಪಣಿ ಒಂದು ವಿನಾ. ಆದರೆ ಇಡೀ ಜಗತ್ತನ್ನೇ ಇವರು ಗೆಲ್ಲಬೇಕಾಗಿದೆ."[2]

"ಎಲ್ಲ ದೇಶಗಳ ದುಡಿಮೆಗಾರರೇ, ಒಂದಾಗಿರಿ !"

ಆಳುವ ವರ್ಗಕ್ಕೆ ನೀಡಿದ ಈ ರಣ ಸವಾಲು, ಪ್ರಚಂಡ ಉದ್ಘೋಷ, ಕ್ರಾಂತಿಗೆ ಕೊಟ್ಟ ಈ ಕರೆ, ಮೊಟ್ಟಮೊದಲು ಪ್ರಕಟವಾದದ್ದು ೧೮೪೮ರ ಫೆಬ್ರವರಿಯಲ್ಲಿ. ಇದು ಪ್ರಕಟವಾಗಲು ಒಂದು ತಿಂಗಳ ಹಿಂದೆ, ೧೮೪೮ರ ಜನವರಿ ೧೨ರಂದು, ಅಮೆರಿಕದ ಆ ಮಹಾವ್ಯಕ್ತಿ ಅಬ್ರಹಾಂ ಲಿಂಕನ್, ಶಾಸನ ಸಭೆಯಲ್ಲಿ ಮಾಡಿದ ಭಾಷಣದಲ್ಲಿ, ಕ್ರಾಂತಿಗೆ ಸಂಪೂರ್ಣ ಒಪ್ಪಿಗೆ ನೀಡಿದ್ದ : "ಯಾವ ಜನತೆಯಾಗಲಿ, ಎಲ್ಲಿಯೇ ಆಗಲಿ, ಇಚ್ಛೆ ಶಕ್ತಿಗಳೆರಡೂ ಅದಕ್ಕಿದ್ದರೆ, ಎದ್ದು ನಿಂತು, ಪ್ರಸಕ್ತ ಸರಕಾರವನ್ನುರುಳಿಸಿ ಹೊಸ ಸರಕಾರ ರಚಿಸಲು ಅದಕ್ಕೆ ಹಕ್ಕಿದೆ. ಇದು ಅತ್ಯಂತ ಅಮೂಲ್ಯವಾದ, ಪವಿತ್ರವಾದ ಹಕ್ಕು —ಜಗತ್ತನ್ನು ಬಿಡುಗಡೆಗೊಳಿಸುವ ಹಕ್ಕು ಇದು—ಎಂದು ನಮ್ಮ ಆಸೆ, ನಮ್ಮ ನಂಬಿಕೆ."[3]

"ಎದ್ದು ನಿಂತು ಪ್ರಸಕ್ತ ಸರಕಾರವನ್ನುರುಳಿಸುವ" ಹಕ್ಕಿನ ವಿಚಾರ ಲಿಂಕನ್ ಹೇಳಿದುದೇಕೆ ? ಹಳೆಯ ಸರಕಾರದ ಚೌಕಟ್ಟಿನಲ್ಲೇ ಅಗತ್ಯವೆನಿಸಿದ ಬದಲಾವಣೆ ತರಬಾರದೇಕೆ ?

ಇದು ಸಾಧ್ಯವಾಗದೆಂದು ಅವನು ಬಹುಶಃ ತಿಳಿದಿದ್ದ. "ಆಧುನಿಕ ಸರಕಾರದ ಆಡಳಿತ

---

[1] *Communist Manifesto*, pp. 30-35.
[2] *Ibid*, p. 58.
[3] *Abraham Lincoln, Complete Works*, Vol. I, p. 105.

ನಡೆದ ಶಾಸನ ಸಭಾ ಚುನಾವಣೆಗಳಿಂದೀಚೆಗೆ ಕಮ್ಯೂನಿಸ್ಟರ ಸ್ಥಾನಗಳ ಸಂಖ್ಯೆ ಇಮ್ಮಡಿಗಿಂತ ಹೆಚ್ಚಾಗಿದೆ. ಸರಕಾರಿ ಗುಂಪು ಶೇಕಡ ೫೦ರಷ್ಟು ಸ್ಥಾನ ಕಳೆದುಕೊಂಡಿದೆ.

ರಷ್ಯದಿಂದ ಹೊರಗಡೆ ಕಮ್ಯೂನಿಸ್ಟ್ ಆಗಿ ಪರಿವರ್ತನೆಗೊಂಡ ಪ್ರಥಮ ಐರೋಪ್ಯ ರಾಜಧಾನಿಯೆಂದರೆ ಸೋಫಿಯಾ. ಬಲ್ಗೇರಿಯಾ ಒಂದು ರಾಜಪ್ರಭುತ್ವವೆಂಬುದನ್ನು ನೆನಪಿನಲ್ಲಿಟ್ಟರೆ ಈ ವಿರೋಧಾಭಾಸ ಇನ್ನೂ ಸ್ಪಷ್ಟವಾಗುತ್ತದೆ. **ದೊರೆ ಬೋರಿಸನ ಅರಮನೆ ನಗರಭವನದಿಂದ ಕೆಲವು ನಿಮಿಷಗಳ ನಡಿಗೆಯ ದೂರ.**

**ಈ ಮತ್ತು ಇತರ ಕಾರಣಗಳಿಂದ** ಕಮ್ಯೂನಿಸ್ಟರ ನಗರಾಡಳಿತ **ಅಸಹನೀಯ** ಚುನಾವಣೆಯ ಫಲಿತಾಂಶ ಗೊತ್ತಾದ ತಕ್ಷಣವೇ, ಪ್ರಧಾನಿ ನಿಕೋಲಾಸ್ ಸುಷಾನಾಫ್ ನಗರ ಸಭೆ ಸೇರುವ ಮುನ್ನವೇ ಅದನ್ನು ವಿಸರ್ಜಿಸುವುದಾಗಿ ಹೇಳಿದ. ಕಮ್ಯೂನಿಸ್ಟ್ ಪಕ್ಷ ಇಡೀ ಬಲ್ಗೇರಿಯವಲ್ಲಿ ಶಾಸನ ಬಾಹಿರವೆಂದು ನಿಷೇಧಿಸಲ್ಪಡುವ ಸಂಭವವೂ ಇದೆ.

ನಿರಾಶಾದಾಯಕ ಆರ್ಥಿಕ ಪರಿಸ್ಥಿತಿಯೇ ಕಮ್ಯೂನಿಸ್ಟ್ ವಿಜಯಕ್ಕೆ ಕಾರಣ. ತತ್ಫಲವಾಗಿ ಬೋಲ್ಷೆವಿಸಂನೊಡನೆ ಏನೂ ಸಂಬಂಧವಿಲ್ಲದವರೂ ಹಲವರು ಈ ಬಗ್ಗೆ ತಮ್ಮ ಪ್ರತಿಭಟನೆ ತೋರಲೋಸುಗ ಕಮ್ಯೂನಿಸ್ಟ್ ಪಕ್ಷಕ್ಕೆ ಮತ ನೀಡಿದರು.[1]

ಈ ಸಂದರ್ಭದಲ್ಲಿ ಕಮ್ಯೂನಿಸ್ಟರು ವಿಜಯ ಗಳಿಸಿದರೆಂದು ಈ ಸಂಪ್ರದಾಯವಾದಿ ರಿಪಬ್ಲಿಕನ್ ವೃತ್ತಪತ್ರಿಕೆ ಹೇಳಿತು. ಆದರೆ ಅಧಿಕಾರ ವಹಿಸಿಕೊಳ್ಳುವ ಹಕ್ಕನ್ನು, ಮುಂದೆ ಉಳಿದುಕೊಂಡು ಹೋಗುವ ಹಕ್ಕನ್ನೂ ಕೂಡ, ಇವರು ಕಳೆದುಕೊಳ್ಳಲಿದ್ದರು. "ಈ ಮತ್ತು ಇತರ ಕಾರಣಗಳಿಂದ" ಎಂದು ಈ ವೃತ್ತಪತ್ರಿಕಾ ವರದಿಗಾರ ಬರೆದಾಗ ಈತನ ಮನಸ್ಸಿನಲ್ಲಿದ್ದ ವಿಚಾರವೇನು? ಕಮ್ಯೂನಿಸ್ಟರ ವಿಜಯವೆಂದರೆ ಆಳುವ ವರ್ಗದ ಖಾಸಗಿ ಒಡೆತನಕ್ಕೆ ಅಪಾಯವೆಂಬುದೇ ಅರ್ಥವಲ್ಲವೇ?

ಮಾರ್ಕ್ಸ್, ಎಂಗೆಲ್ಸ್ ಇವರು ಮುಂದೆ ಬರಲಿದ್ದ ಘಟನೆಗಳಿಗಾಗಿ ಕಾರ್ಮಿಕ

[1] *New York Herald Tribune*, Sept. 27, 1932 (my italics).

ವರ್ಗವನ್ನು ತಯಾರು ಮಾಡಲು ಯತ್ನಿಸಿದರು. ಇದಕ್ಕೆ ಸಿದ್ಧವಾಗಬೇಕಾದರೆ ಕಾರ್ಮಿಕರು ತಮ್ಮದು ಒಂದು ವರ್ಗವೆಂಬುದನ್ನು ಅರಿತಿರಬೇಕು. ಇತಿಹಾಸದ ಬೆಳವಣಿಗೆಯಲ್ಲಿ ತಮ್ಮ ಪಾತ್ರವೇನೆಂಬುದನ್ನು ತಿಳಿಯಬೇಕು. ವಶೀಕರಣಿಗಳಿಂದ ವಶೀಕರಣ ಕಾರ್ಯಕ್ಕಾಗಿ, ಖಾಸಗಿ ಆಸ್ತಿ ಒಡೆತನದ ವಿಸರ್ಜನೆಗಾಗಿ, ಅದರೊಡನೆ ವರ್ಗದ ಆಡಳಿತದ ವಿಸರ್ಜನೆಗಾಗಿ ಕೂಡ, ಇವರು ಸಿದ್ಧವಾಗಿರಬೇಕು.

ಬಂಡವಾಳ ವ್ಯವಸ್ಥೆಯ ಕುಸಿತದ ಕಾಲ ಸನ್ನಿಹಿತವಾಗಿದೆಯೆಂದು ಮಾರ್ಕ್ಸ್ ಎಂಗೆಲ್ಸ್ ನಂಬಿದ್ದರು. ಕಾರ್ಮಿಕರು ಇದಕ್ಕಾಗಿ ಸಿದ್ಧರಾಗಿಲ್ಲದಿದ್ದರೆ ಈ ಕುಸಿತದಿಂದ ಅನಾಯಕತ್ವವುಂಟಾದೀತು. ಕಾರ್ಮಿಕರು ಈ ಸುಸಮಯ ಒದಗಿದಾಗ ಇದಕ್ಕೆ ಸಿದ್ಧರಾಗಿದ್ದರೆ ಆಗ ಸಮಾಜವಾದ ಪ್ರಾಪ್ತಿ. "ಆಗ, ಮೊದಲ ಬಾರಿಗೆ, ಮನುಷ್ಯ, ಒಂದು ದೃಷ್ಟಿಯಲ್ಲಿ, ಪ್ರಾಣಿಲೋಕದ ಇತರ ಜಂತುಗಳಿಂದ ಪ್ರತ್ಯೇಕನಾದಂತೆ. ಕೇವಲ ಮೃಗೀಯ ಸ್ಥಿತಿಯಿಂದ ಆತ ಆಗ ಮಾತ್ರ ಮನುಷ್ಯನಾಗಿ ಚಿಪ್ಪೊಡೆದು ಬರುತ್ತಾನೆ....ಆಗಿನಿಂದ ಮಾತ್ರವೇ ಮನುಷ್ಯ ಹೆಚ್ಚು ಹೆಚ್ಚು ಸ್ವಪ್ರಜ್ಞೆಯಿಂದ ತನ್ನದೇ ಆದ ಇತಿಹಾಸವನ್ನು ರೂಪಿಸಬಲ್ಲ—ಆಗಿನಿಂದ ಮಾತ್ರವೇ, ಆತ ಮುಂದಿಟ್ಟುಕೊಂಡ ಸಾಮಾಜಿಕ ಲಕ್ಷ್ಯ ಸಾಧನೆಯ ಹಾದಿಯಲ್ಲಿ ಆತ ಅನುಸರಿಸುವ ಕ್ರಮಗಳು ಮುಖ್ಯವಾಗಿ, ಅಧಿಕಾಧಿಕವಾಗಿ, ಅವನ ಇಚ್ಛೆಯಂತೆಯೇ ಫಲಪ್ರದವಾದಾವು. ಅಭಾವದ ಜಗತ್ತಿನಿಂದ ಸ್ವಾತಂತ್ರ್ಯದ ಜಗತ್ತಿಗೆ ಮನುಷ್ಯ ಅಡರುವುದು ಆಗ ಮಾತ್ರ."[1]

---

[1] *Socialism, Utopian and Scientific, op. cit.*, pp. 134, 135.

## ೧೯. "ಗ್ರಹಗಳನ್ನೇ ಆಕ್ರಮಿಸೇನು....ಆಗುವುದಾದರೆ!"

ಇದೆಲ್ಲಾ ಅಪಾಯಕಾರಿ ಮಾತು ಎಂಬುದರಲ್ಲಿ ಸಂದೇಹವಿಲ್ಲ.

ಪ್ರೌಢಪ್ರಾಚೀನ ಅರ್ಥಶಾಸ್ತ್ರಜ್ಞರು ಕೈಗಾರಿಕಾ ಕ್ರಾಂತಿಯ ಆದಿಯಲ್ಲಿ ಪ್ರತಿಪಾದಿಸಿದ ಮೌಲ್ಯದ ಶ್ರಮಸಿದ್ಧಾಂತ ಒಂದು ಉಪಯುಕ್ತೋದ್ದೇಶವನ್ನು ಪೂರೈಸಿತ್ತು. ಆಗ ಪ್ರಗತಿಪರ ವರ್ಗವಾದ ಬೂರ್ಷ್ವಾಸೀ ಇದನ್ನು ರಾಜಕೀಯಾಧಿಕಾರ ಹೊಂದಿದ್ದ ಪ್ರತಿಗಾಮಿ ಜಮೀನ್ದಾರ ವರ್ಗದ ವಿರುದ್ಧವಾಗಿ ಪ್ರಯೋಗಿಸಿತ್ತು. ಈ ಜಮೀನ್ದಾರ ವರ್ಗ ಆಗ ಸ್ವತಃ ದುಡಿಯುತ್ತಿರಲಿಲ್ಲ; ಇದು ಇತರರ ದುಡಿಮೆಯ ಫಲ ಭೋಗಿಸುತ್ತಿದೆಯೆಂಬುದು ಬಯಲಾಯಿತು. ತನ್ನ ಗೇಣಿಸಿದ್ಧಾಂತದ ಜತೆಗೆ ರಿಕಾರ್ಡೋ ಇದನ್ನೂ ಉಪಯೋಗಿಸಿ ಕೊಂಡ—ಜಮೀನ್ದಾರರಿಗೆ ಆಘಾತ ಕೊಡಲು ಬಳಸಿಕೊಂಡ. ಇವನ ಕೈಯಲ್ಲಿ ಈ ಮೌಲ್ಯದ ಶ್ರಮಸಿದ್ಧಾಂತ ಸರಿಯೆನಿಸಿತು.

ಆದರೆ ಮಾರ್ಕ್ಸನ ದೃಷ್ಟಿಯಲ್ಲಿ ಇದು ಖಂಡಿತ ಸರಿಯೆನಿಸಲಿಲ್ಲ. ಮಾರ್ಕ್ಸನೂ ಶ್ರಮ ಸಿದ್ಧಾಂತವನ್ನೊಪ್ಪಿ, ಅದನ್ನು ಇನ್ನಷ್ಟು ದೂರ ಕೊಂಡೊಯ್ದಿದ್ದ, ಅದನ್ನು ಅದರ ತರ್ಕಬದ್ಧ ನೆಲೆಗೆ ಮುಟ್ಟಿಸಿದ್ದ. ಬೂರ್ಷ್ವಾಸೀಯ ಕಣ್ಣಲ್ಲಿ ಇದರ ಪರಿಣಾಮ ಭೀಕರ ವೆನಿಸಿತ್ತು. ಈಗ ಮೇಲು ಕೆಳಗಾಯಿತು. ಅತ್ತೆಯ ಕಾಲ ಹೋಗಿ ಸೊಸೆಯ ಕಾಲ ಬಂತು. ತಮ್ಮ ಶತ್ರುಗಳ ವಿರುದ್ಧ ಹೋರಾಟದಲ್ಲಿ ಬೂರ್ಷ್ವಾಗಳ ಅಸ್ತ್ರವೆನಿಸಿದ್ದು, ಈಗ ಅವರ ವಿರುದ್ಧವಾಗಿಯೇ ಕಾರ್ಮಿಕರಿಂದ ಪ್ರಯೋಗಿಸಲ್ಪಡುವ ಅಸ್ತ್ರವಾಗಿ ಮಾರ್ಪಾ ಟಾಗಿತ್ತು!

ಆದರೆ ಬಿಡುಗಡೆಯ ಕಾಲ ದೂರವಿರಲಿಲ್ಲ. 'ಕ್ಯಾಪಿಟಲ್' ಗ್ರಂಥ ಪ್ರಕಟವಾದ ಅನಂತರದ ಕೆಲವು ವರ್ಷ ಅರ್ಥಶಾಸ್ತ್ರಜ್ಞರು ಸಂಪೂರ್ಣವಾಗಿ ಹೊಸ ಮೌಲ್ಯ ಸಿದ್ಧಾಂತ ದೊಡನೆ ಮುಂದೆ ಬಂದರು. ಮೂರು ಬೇರೆ ಬೇರೆ ರಾಷ್ಟ್ರಗಳಿಂದ ಮೂವರು ಅರ್ಥ ಶಾಸ್ತ್ರಜ್ಞರು ಬಂದರು. ಇಂಗ್ಲೆಂಡಿನ ಸ್ಟಾನ್ಲೆ ಜೇವನ್ಸ್ (೧೮೭೧), ಆಸ್ಟ್ರಿಯದ ಕಾರ್ಲ್ ಮೆಂಗರ್ (೧೮೭೯) ಮತ್ತು ಸ್ವಿಟ್ಜರ್ಲೆಂಡಿನ ಲಿಯಾನ್ ವಾಲ್ರಾಸ್ (೧೮೭೪). ಒಬ್ಬೊಬ್ಬನೂ ಪ್ರತ್ಯೇಕವಾಗಿ ಕೆಲಸ ಮಾಡಿದ. ಎಲ್ಲರೂ ಹೆಚ್ಚು ಕಡಮೆ ಒಂದೇ ಕಾಲಕ್ಕೆ ಈ ಹೊಸ ವಿಚಾರಕ್ಕೆ ಬಂದರು. ಪ್ರೌಢಪ್ರಾಚೀನ ಅರ್ಥಶಾಸ್ತ್ರಜ್ಞರಂತೆ, ಮಾರ್ಕ್ಸ್ ಎಂಗೆಲ್ಸ್‌ಗಳಂತೆ, ಇವರಿಗೂ ಬೆಂಬಲಿಗರು ಬಂದರು. ಇವರು ಈ ಸಿದ್ಧಾಂತ ಗಳನ್ನು ವಿವರಿಸಿದರು, ವಿಸ್ತರಿಸಿದರು. ಪರಿಷ್ಕರಣ ಪರಿಶೀಲನಗಳಾದುವು. ಹೊಸ ಅಂಶಗಳು ಸೇರಿದುವು. ಆದರೆ ಇವರ ಸಿದ್ಧಾಂತದ ತಿರುಳು ಹಾಗೆಯೇ ಉಳಿದಿದೆ. ಸಂಪ್ರದಾಯವಾದಿ ಅರ್ಥಶಾಸ್ತ್ರ ಪರಿಭ್ರಮಣೆಯ ಕೇಂದ್ರವಾಯಿತು.

ಈ ಅರ್ಥಶಾಸ್ತ್ರಜ್ಞರು ನೀಡಿದ ಮೌಲ್ಯವಿವರಣೆಗೆ ಪರಿಸರದ ಉಪಯುಕ್ತತೆಯ ಸಿದ್ಧಾಂತವೆಂದು (Marginal Utility Theory) ಹೆಸರು. ತನ್ನ 'ಅರ್ಥನೀತಿ ಸೂತ್ರ'

ಎಂಬ ಪುಸ್ತಕದಲ್ಲಿ ಜೇವನ್ಸ್ ರೂಢಿಗತ ಮಾರ್ಗದಿಂದ ಭಿನ್ನಮಾರ್ಗ ಅನುಸರಿಸುತ್ತಾನೆ. "ಸಂತತ ಚಿಂತನ ಅನ್ವೇಷಣಗಳಿಂದ ನನ್ನಲ್ಲಿ ಒಂದು ಹೊಸ ವಿಚಾರ ಮೂಡಿದೆ: ಮೌಲ್ಯ ಸಂಪೂರ್ಣವಾಗಿ ಉಪಯುಕ್ತತೆಯನ್ನು ಅವಲಂಬಿಸಿದೆ, ಎಂಬುದೇ ಆ ವಿಚಾರ."[1] ಉಪಯುಕ್ತತೆಯೆಂದರೇನು? ಒಂದು ಪದಾರ್ಥ ಕೊಳ್ಳಲು ಉದ್ಯುಕ್ತನಾಗಿರುವವನು ಆ ಪದಾರ್ಥದ ಬಗ್ಗೆ ಯಾವ ಭಾವನೆ ಹೊಂದಿರುವನೆಂಬುದನ್ನು ಸೂಚಿಸುವುದೇ ಉಪಯುಕ್ತತೆ. ಅದು ಆತನಿಗೆ ತೀರಾ ಅಗತ್ಯವೆನಿಸಿದರೆ ಅದರ ಉಪಯುಕ್ತತೆ ಆತನಿಗೆ ತುಂಬಾ ಹೆಚ್ಚು. ಅದರ ಅಪೇಕ್ಷೆ ಆತನಲ್ಲಿ ತೀವ್ರವಾಗಿದ್ದಷ್ಟೂ ಅದರ ಉಪಯುಕ್ತತೆಯೂ ಹೆಚ್ಚು, ಅದರ ಅಪೇಕ್ಷೆ ಕಡಮೆಯಾಗಿದ್ದಷ್ಟೂ ಉಪಯುಕ್ತತೆ ಕಡಮೆ. ಅವನಿಗೆ ಅದರ ಉಪಯುಕ್ತತೆ ಎಷ್ಟೋ ಅದಕ್ಕೆ ತಕ್ಕಂತೆ ಆತನ ದೃಷ್ಟಿಯಲ್ಲಿ ಅದರ ಮೌಲ್ಯ. ಆದ್ದರಿಂದ ಆತ ಅದಕ್ಕಾಗಿ ಕೊಡಲು ಬಯಸುವ ಬೆಲೆಯ ಅಳತೆ ಈ ಮೂಲಕ.

ಹಿಂದಣ ಸಿದ್ಧಾಂತಗಳಿಗಿಂತ ಇದು ಎಷ್ಟೊಂದು ಭಿನ್ನ—ಎಂಬುದು ಸ್ಪಷ್ಟ. ಮಾರ್ಕ್ಸ್‌ವಾದದಿಂದಲೇ ಅಲ್ಲ, ಪ್ರೌಢಪ್ರಾಚೀನ ಸಂಪ್ರದಾಯದಿಂದಲೂ ಇದು ಭಿನ್ನ. ಒಂದು ಪದಾರ್ಥದ ಮೌಲ್ಯ ಅದನ್ನು ತಯಾರಿಸಲು ಅಗತ್ಯವಾದ ಶ್ರಮವನ್ನವಲಂಬಿಸಿದೆ ಯೆಂಬುದು ಅವರ ಭಾವನೆ. ಆದರೆ ಜೇವನ್ಸ್ ಹೀಗೆ ಹೇಳಿದ: "ಒಮ್ಮೆ ವಿನಿಯೋಗವಾಗಿ ಹೋದ ದುಡಿಮೆ, ಒಂದು ಪದಾರ್ಥದ ಭಾವೀ ಮೌಲ್ಯದ ಮೇಲೆ ಯಾವ ಪರಿಣಾಮ ವನ್ನೂ ಉಂಟು ಮಾಡಲಾರದು." ಇದರಿಂದ ಅರ್ಥಮೀಮಾಂಸೆಯಲ್ಲಿ ಉತ್ಪಾದನೆಯಿಂದ ಉಪಭೋಗಕ್ಕೆ, ಮೌಲ್ಯಮಾಪನ ವಿಭಾಗದಿಂದ ಮಾರುಕಟ್ಟೆಗೆ, ಪ್ರಾಧಾನ್ಯ ಸಲ್ಲುತ್ತದೆ. ಈ ಸಿದ್ಧಾಂತ ಇನ್ನೂ ಕ್ಲಿಷ್ಟಕರ—ಸುಲಭವಾಗಿ ಅರ್ಥವಾಗುವಂಥದಲ್ಲ. ಒಂದು ಪದಾರ್ಥ ತಯಾರಿಸಲು ಎಷ್ಟು ದುಡಿಮೆ ಬೇಕಾಗುತ್ತದೆಯೆಂದು ಭಾವಿಸುವುದು ತಕ್ಕಮಟ್ಟಿಗೆ ಸುಲಭ. ಆದರೆ ಅದಕ್ಕೆ ಎಷ್ಟೊಂದು ಉಪಯುಕ್ತತೆ ಇದೆಯೆಂಬುದನ್ನು ಊಹಿಸುವುದು ಅಷ್ಟೇ ಸುಲಭವಲ್ಲ. ದುಡಿಮೆಯ ಮೌಲ್ಯ ಅಳೆಯಬಹುದಾದ್ದು—ಎಂದರೆ ಅದೊಂದು ಜ್ಞೇಯ ಪ್ರಮಾಣ, ವಾಸ್ತವಿಕ, ಸುಲಭಗ್ರಾಹ್ಯ. ಆದರೆ ಉಪಯುಕ್ತತೆ ಮನುಷ್ಯನಿಂದ ಮನುಷ್ಯನಿಗೆ ವ್ಯತ್ಯಾಸವಾಗುತ್ತ ಹೋಗುತ್ತದೆ. ಒಮ್ಮೆ ಒಂದು ಪದಾರ್ಥವನ್ನು ಕೊಂಡರೆ ಅದನ್ನು ಕೊಂಡಾಗ ಪಡೆಯುವುದಾಗಿ ನಿರೀಕ್ಷಿಸುವ ತೃಪ್ತಿಗೆ ಅನುಸಾರವಾಗಿ ಅದು ವ್ಯತ್ಯಾಸವಾಗುತ್ತ ಹೋಗುತ್ತದೆ. ಎಂದರೆ ಅದು ವ್ಯಕ್ತಿಮನೋಗತ, ಸ್ವನಿಷ್ಠ, ಕಾಲ್ಪನಿಕ, ಭಾವನಾಮಯ.

ಒಂದೇ ಪದಾರ್ಥದಿಂದ ಹಲವರು ವಿವಿಧ ಪ್ರಮಾಣಗಳಲ್ಲಿ ತೃಪ್ತಿಪಡೆಯುವರೆಂಬುದನ್ನು ಅರಿಯುವುದು ಬಲು ಸುಲಭ. ಅಥವಾ, ಇದನ್ನೇ ಹೀಗೆ ಹೇಳಬಹುದು. ಒಂದೇ ಪದಾರ್ಥ ಬೇರೆ ಬೇರೆ ಜನಕ್ಕೆ ಬೇರೆ ಬೇರೆ ಉಪಯುಕ್ತತೆ ಹೊಂದಿರುತ್ತದೆ. ಆದರೆ ಒಂದೇ ಪದಾರ್ಥ ಒಂದೇ ಬೆಲೆಗೆ ಮಾರಾಟವಾಗುತ್ತದೆ—ಎಂದರೆ ಅದಕ್ಕೆ ಒಂದೇ ಮೌಲ್ಯ. (ಹಲವು

[1] W. S. Jevons, *Theory of Political Economy*, p. 2. Macmillan & Company, Ltd., London, 1871.

ಆಧುನಿಕ ಅರ್ಥಶಾಸ್ತ್ರಜ್ಞರ ದೃಷ್ಟಿಯಲ್ಲಿ ಬೆಲೆಯೆಂದರೆ ಹಣದ ರೂಪದಲ್ಲಿ ನಿರೂಪಿಸಿದ ನ್ಯಾಯಬೆಲೆ. ಆದರೆ ಮಾರ್ಕ್ಸ್‌ನ ದೃಷ್ಟಿಯಲ್ಲಿ ಇದು ನಿಜವಲ್ಲ.) ಉಪಯುಕ್ತತೆಯೇ ಮೌಲ್ಯವನ್ನು ನಿರ್ಣಯಿಸುವುದಾದರೆ, ಒಂದೇ ಬೆಲೆಗೆ ಬೇರೆಬೇರೆ ಉಪಯುಕ್ತತೆಗಳ ಪ್ರಮಾಣಗಳನ್ನು ಮಾರುವುದು ಹೇಗೆ? ಇಲ್ಲಿಯೇ "ಪರಿಸರದ" ಕಲ್ಪನೆ ಬರತಕ್ಕದ್ದು. ಇದನ್ನು ಅರಿಯುವುದು ಮುಖ್ಯ. ಏಕೆಂದರೆ ಅರ್ಥಮೀಮಾಂಸೆಯನ್ನರಿತ ಯಾವುದಾದರೂ ಆಧುನಿಕ ಪಠ್ಯಪುಸ್ತಕವನ್ನು ನೀವು ಓದಿದ್ದೇ ಆದರೆ, "ಪರಿಸರದ ಉಪಯುಕ್ತತೆ," "ಪರಿಸರದ ಉತ್ಪಾದಕತೆ", "ಪರಿಸರದ ಮೌಲ್ಯ (Cost)" ಮುಂತಾದುವುಗಳ ಬಗ್ಗೆ ನೂರಾರು ವಿಚಾರಗಳು ಬರುತ್ತವೆ.

ಯಾವುದಾದರೂ ಕಾರಣದಿಂದ ಪೇಟೆಯಲ್ಲಿ ಒಂದು ಲಕ್ಷ ಮೋಟಾರು ಕಾರುಗಳು ಮಾತ್ರ ಇವೆಯೆಂದು ಭಾವಿಸೋಣ. ಬೆಲೆ ಎಷ್ಟಾದರೂ ಇರಲಿ, ಕೊಟ್ಟು ಅದನ್ನು ಕೊಳ್ಳೋಣ ಎಂಬಷ್ಟು ಮಟ್ಟಿಗೆ ಇದನ್ನು ಅಪೇಕ್ಷಿಸುವ, ಅಷ್ಟೊಂದು ಧನಿಕರಾಗಿರುವ, ಕೆಲವು ಭಾವೀ ಗಿರಾಕಿಗಳು ಇದ್ದಾರೆಂದು ಭಾವಿಸೋಣ. ಮೋಟಾರು ಕಾರನ್ನು ಬಯಸುವ ಇತರರೂ ಇದ್ದಾರೆ. ಆದರೆ ಬಹುಶಃ ಇವರು ಅಷ್ಟೊಂದು ಐಶ್ವರ್ಯವಂತರಾಗಿಲ್ಲದಿರಬಹುದು. ಅಥವಾ, ಈ ಕಾರಿಗೆ ತುಂಬಾ ಬೆಲೆಯಾಗುವುದಾದರೆ, ಇದರ ಬದಲು ಬೇರೆ ಏನಾದರೂ ಕೊಳ್ಳೋಣ—ಎನ್ನುವವರೂ ಇರಬಹುದು. ಇವರ ಅನಂತರ ಇನ್ನೊಂದು ತೆರನಾದ ಜನ ಇರುತ್ತಾರೆ. ಕಾರಿಗಾಗಿ ತಕ್ಕಮಟ್ಟಿನ ಹಣ ಕೊಡಲು ಇವರಿಗೆ ಇಷ್ಟವಿರುತ್ತದೆ. ಆದರೆ ಇವರು ಸ್ವಲ್ಪ ಎಚ್ಚರ ವಹಿಸಬೇಕು. ಏಕೆಂದರೆ ವೆಚ್ಚ ಮಾಡಲು ಇವರ ಬಳಿ ತುಂಬಾ ಹಣವಿಲ್ಲ. ತಮ್ಮಲ್ಲಿರುವ ಮಿತವಾದ ಹಣದಿಂದ ಕೊಳ್ಳಬಹುದಾದ ಪದಾರ್ಥಗಳು ಅನೇಕ ಇವೆ. ಇವುಗಳಿಂದಲೂ ಇವರಿಗೆ ಕಾರಿನಷ್ಟೇ ತೃಪ್ತಿ ದೊರಕುತ್ತದೆ. ಇಷ್ಟೇ ತೃಪ್ತಿಕೊಡುವ ಬೇರೊಂದು ಪದಾರ್ಥಕ್ಕಿಂತ ಕಾರಿಗೆ ಹೆಚ್ಚು ಬೆಲೆ ಕೊಡಬೇಕಾದರೆ ಇವರು ಕಾರನ್ನು ಕೊಳ್ಳುವುದೇ ಇಲ್ಲ. "ನಾವು ಕೊಡಬೇಕಾದ ಬೆಲೆಗೆ ಎಷ್ಟು ಕೊಳ್ಳಬಹುದೆಂದು ನಾವು ಭಾವಿಸುವೆವೋ ಅಷ್ಟೇ ಟೀಯನ್ನೋ ಅಥವಾ ಬೇರಾವ ಪದಾರ್ಥವನ್ನೋ ನಾವು ಕೊಳ್ಳುತ್ತೇವೆ. ಅಲ್ಲಿಗೇ ನಿಲ್ಲಿಸುತ್ತೇವೆ. ಬೆಲೆ ಕಡಮೆ ಇದ್ದರೆ ನಾವು ಹೆಚ್ಚು ಕೊಳ್ಳುತ್ತೇವೆ. ಇದಕ್ಕೆ ಜೇವನ್ಸ್ ತೋರಿಸಿರುವ ಉಪಯುಕ್ತತೆಯ ವ್ಯತ್ಯಾಸವೇ ಕಾರಣ. ಆದ್ದರಿಂದ ನಾವು ಕೊನೆಯಲ್ಲಿ ಕೊಳ್ಳುವ ಪ್ರಮಾಣದ ಉಪಯುಕ್ತತೆ ಅದರ ಬೆಲೆಗೆ ಸಮನಾಗಿರುತ್ತದೆ...."[1] ಇದು ಹೀಗೆಯೇ, ಎರಡು ಪಕ್ಷಗಳೂ ಸಮವಾಗುವ ವರೆಗೆ, ನಡೆಯುತ್ತದೆ. ಎಲ್ಲೋ ಒಂದೆಡೆಯಲ್ಲಿ, ಬಹುಶಃ ಒಂದು ಲಕ್ಷದನೆಯ ಕೊಳ್ಳುವವ, ಕಾರು ತಯಾರಕ ಯಾವ ಬೆಲೆಗೆ ಮಾರಲು ಸಿದ್ಧನಿದ್ದಾನೋ ಆ ಬೆಲೆ ಕೊಡಲು ಒಪ್ಪುತ್ತಾನೆ. ಕೆಲವು ಕೊಳ್ಳುವವರು ಹೆಚ್ಚು ಬೆಲೆ ಕೊಡಲು ಸಿದ್ಧ. ಇನ್ನು ಸ್ವಲ್ಪ ಕಡಮೆ ಬೆಲೆ ಇದ್ದರೆ ಕೊಳ್ಳಲು ಸಿದ್ಧವಿರುವ ಸಾವಿರಾರು ಮಂದಿ ಇರಬಹುದು. ಆದರೆ ಮಾರಾಟಕ್ಕಿರುವ ಕಾರುಗಳ ಸಂಖ್ಯೆ ಒಂದು ಲಕ್ಷ ಮಾತ್ರ.

[1] E. Cannan, *op. cit.*, p. 201.

ತಯಾರಕ ಈ ಎಲ್ಲ ಕಾರುಗಳನ್ನೂ ಮಾರಬಯಸಿದರೆ, ಆತ ಈ ಒಂದು ಲಕ್ಷದನೆಯ ಗಿರಾಕಿ ಯಾವ ಬೆಲೆ ಕೊಡಲು ಸಿದ್ಧವೋ ಆ ಬೆಲೆಗೇ ಇದನ್ನು ಮಾರಬೇಕು. ಇದಕ್ಕಿಂತ ಕಡಮೆ ಸಂಖ್ಯೆಯ ಕಾರುಗಳನ್ನು ಆತ ಮಾರಬಯಸಿದರೆ, ಅವನು ಹೆಚ್ಚು ಬೆಲೆ ಪಡೆಯ ಬಹುದಾಗಿತ್ತು. ಇದಕ್ಕಿಂತ ಕಡಮೆ ಬೆಲೆಗೆ ಮಾರಲೊಪ್ಪುವುದಾದರೆ ಇನ್ನೂ ಹೆಚ್ಚು ಕಾರುಗಳನ್ನು ಮಾರಬಹುದು. ಆದರೆ ಅವನ ಬಳಿ ಒಂದು ಲಕ್ಷ ಕಾರುಗಳು ಮಾತ್ರ ಮಾರಲು ಇದ್ದು, ಇವನ್ನೆಲ್ಲ ಅವನು ಮಾರ ಬಯಸಿದರೆ, ಎಷ್ಟೋ ಅಷ್ಟೇ ಹಣ ಕೊಟ್ಟು ಕೊಳ್ಳಲು ಶಕ್ತಿ ಇರುವ ಗಿರಾಕಿಯ ಹಣದ ಚೀಲಕ್ಕೆ ತಕ್ಕಂತೆ ಅವನು ಬೆಲೆಯನ್ನು ನಿರ್ಧರಿಸಬೇಕು. ಅವನು ಕೇಳಿದ ಬೆಲೆ ಕೊಟ್ಟು ಕೊಳ್ಳಲು ಸಿದ್ಧವಿರುವ ಒಂದು ಲಕ್ಷ ಮಂದಿ ಗಿರಾಕಿಗಳು ಇಲ್ಲವೆಂಬುದು ಗೊತ್ತಾದರೆ, ಆತ ಕೆಲವು ಕಾರುಗಳನ್ನು ಪೇಟೆಯಿಂದ ಹಿಂತೆಗೆದುಕೊಂಡು, ಕಡಮೆ ಕಾರುಗಳನ್ನಷ್ಟೇ ಮಾರಬೇಕು. ಅಥವಾ ಆ ಕಾರುಗಳನ್ನೆಲ್ಲಾ ಮಾರಬೇಕಾದರೆ ಅವನು ಅವುಗಳ ಬೆಲೆ ಇಳಿಸಬೇಕು—ಕಡಮೆ ಹಣ ಇರುವ ಅಥವಾ ಬೇರೆ ಬಗೆಯ ಅಪೇಕ್ಷೆ ಇರುವ ಗಿರಾಕಿಗಳನ್ನು ಸೆಳೆಯಲು ಅವನು ಹೀಗೆ ಮಾಡಬೇಕು. ನಿರುಪಾಧಿಕ ಪೇಟೆಯಲ್ಲಿ ಒಂದೇ ಬಗೆಯ ಕಾರನ್ನು ಒಬ್ಬನಿಗೆ ಒಂದು ಬೆಲೆಗೂ ಇನ್ನೊಬ್ಬನಿಗೆ ಇನ್ನೊಂದು ಬೆಲೆಗೂ ಆತ ಮಾರಲಾರ.

ಈ ಒಂದು ಲಕ್ಷದನೆಯ ಗಿರಾಕಿ, ಅಥವಾ ಪರಿಸರದ ಗಿರಾಕಿ, ಯಾವೊಬ್ಬ ವಿಶಿಷ್ಟ ವ್ಯಕ್ತಿಯಲ್ಲ. ಒಟ್ಟು ಒಂದು ಲಕ್ಷದಲ್ಲಿ ಯಾವನಾದರೊಬ್ಬ ಅವನು—ಅವನು ಕೊಳ್ಳುವ ಕಾರೂ ಕೂಡ ಒಟ್ಟು ಒಂದು ಲಕ್ಷದಲ್ಲಿ ಯಾವುದೋ ಒಂದು; ಅಂತೆಯೇ ಅವನೂ ಲಕ್ಷದಲ್ಲೊಬ್ಬ, ಅಷ್ಟೇ. ಪೇಟೆಯ ಕ್ರಿಯೆ ನಡೆಯುವ ವಿಧಾನದ, ಪೇಟೆಯ ಬೆಲೆ ನಿರ್ಣಯ ವಾಗುವ ವಿಧಾನದ, ತಾತ್ವಿಕ ವಿವೇಚನೆಯಲ್ಲಿ, ಈತನೇ ಪರಿಸರದ ಬೇಡಿಕೆಯನ್ನು (Marginal demand) ಪ್ರತಿನಿಧಿಸುವ ಮನುಷ್ಯ. ಬೆಲೆ ಏನಾದರೂ ಹೆಚ್ಚಿದ್ದರೆ, ಇದೇ ಹಣದಿಂದ ಅವನಿಗೆ ಹೆಚ್ಚು ತೃಪ್ತಿ ನೀಡುವ ಇತರ ಪದಾರ್ಥಗಳನ್ನು ಅವನು ಕೊಳ್ಳ ಬಹುದು. ಬೆಲೆ ಕಡಮೆಯಿದ್ದರೆ, ಹೆಚ್ಚುಮಂದಿ ಕೊಳ್ಳುವವರು ಪೇಟೆಗೆ ಬರುವರು. ಇವರಿಗೆ ಈ ಸರಬರಾಯಿ ಸಾಲದಾಗುವುದು. ಆಗ, ಕಡಮೆ ಬೆಲೆಯನ್ನು ಮಾತ್ರ ಕೊಡಲು ಸಿದ್ಧವಿದ್ದವರು ಪೇಟೆಯಿಂದ ನಿರ್ಗಮಿಸುವ ವರೆಗೂ ಉತ್ಪಾದಕ ಬೆಲೆಯನ್ನು ಹೆಚ್ಚಿಸು ತ್ತಾನೆ.

ಈಗ ಇದನ್ನು ಬೇರೊಂದು ದೃಷ್ಟಿಯಿಂದ ನೋಡೋಣ. ಬೇಡಿಕೆಯ (Demand) ಕಡೆಯ ತುದಿಯಿಂದ—ಆ ಕಡೆಯಿಂದ—ನಮ್ಮ ವಿವರಣೆ ಆರಂಭಿಸೋಣ. ಒಂದು ಶೀತಕಕ್ಕೆ (ರೆಫ್ರಿಜಿರೇಟರ್) ಒಂದು ಸಾವಿರ ಡಾಲರು ಕೊಡಲು ಸಿದ್ಧವಿರುವ ಒಂದು ಸಾವಿರ ಮಂದಿ ಇದ್ದಾರೆನ್ನೋಣ. ೭೫೦ ಡಾಲರ್ ಕೊಡಲು ಸಿದ್ಧವಿರುವ ಇನ್ನೊಂದು ಸಾವಿರ ಮಂದಿ ಇದ್ದಾರೆ; ಇದಕ್ಕಿಂತ ಹೆಚ್ಚು ಕೊಡಲು ಇವರು ಸಿದ್ಧರಿಲ್ಲ. ಇದೇ ರೀತಿ ಏಣಿಯಲ್ಲಿ ಇಳಿಯುತ್ತಾ ಹೋಗಬಹುದು. (ಇನ್ನೂ ಕಡಮೆ ಹಣ ಇರುವವರು ಈ ಶ್ರೇಣಿಗಳಲ್ಲಿ ಸೇರುತ್ತಾ ಬರುವರು.) ಕೊನೆಗೆ ಕನಿಷ್ಠಪಕ್ಷ ೫೦ ಡಾಲರ್ ಕೊಡಲು

ಸಿದ್ಧವಿರುವ ೫೦ ಲಕ್ಷ ಮಂದಿ ಬರುತ್ತಾರೆ. ಈಗ ಉದ್ಭವಿಸುವ ಪ್ರಶ್ನೆ ಇದು : ಇವರಲ್ಲಿ ಎಷ್ಟು ಮಂದಿ ಶೀತಕವನ್ನು ಕೊಳ್ಳಬಲ್ಲರು ? ಅಲ್ಲದೆ ಅದಕ್ಕೆ ಕೊಡಬೇಕಾದ ಬೆಲೆಯೆಷ್ಟು ? (ಈ ವಿಷಯವನ್ನು ಸುಲಭಗೊಳಿಸುವುದಕ್ಕಾಗಿ ಒಂದೇ ಒಂದು ಬಗೆಯ ಶೀತಕ ಇದೆಯೆಂದು ನಾವು ಭಾವಿಸೋಣ.) ಶೀತಕ ತಯಾರಿಸುವವನು ಈ ಬೆಲೆಯಲ್ಲಿ ೫೦ ಲಕ್ಷ ಶೀತಕಗಳನ್ನು ತಯಾರಿಸುವುದು ಉಚಿತವೆಂದು ಭಾವಿಸುವನೆ ?—ಎಂಬುದನ್ನೇ ಇದು ಅವಲಂಬಿಸಿದೆ. ದೊಡ್ಡ ಪ್ರಮಾಣದ ಉತ್ಪಾದನೆಯಿಂದಲೂ ಒಂದು ಶೀತಕಕ್ಕೆ ೫೦ ಡಾಲರಿಗಿಂತ ಹೆಚ್ಚು ವೆಚ್ಚ ತಗುಲುವುದಾದರೆ, ಅವನು ಇಷ್ಟೊಂದು ಶೀತಕ ತಯಾರಿಸುವುದೇ ಇಲ್ಲ. ಅಥವಾ ಇದರಿಂದ ಬಹು ಕಡಮೆ ಲಾಭ ಬರುವಂತಿದ್ದು, ಇಷ್ಟು ಅಲ್ಪ ಲಾಭಕ್ಕಾಗಿ ಇಷ್ಟು ಅಧಿಕ ಶ್ರಮ ಅನುಚಿತವೆಂದು ಅವನಿಗೆ ತೋರಿದರೆ, ಹೆಚ್ಚು ಲಾಭ ತರುವ ಬೇರಾವುದಾದರೂ ಉದ್ಯಮದಲ್ಲಿ ತನ್ನ ಬಂಡವಾಳ ಹಾಕಲು ಅವನು ಯತ್ನಿಸುತ್ತಾನೆ. ಆಗ ಐವತ್ತು ಲಕ್ಷ ಶೀತಕಗಳ ಉತ್ಪಾದನೆ ಆಗುವುದಿಲ್ಲ. ಉಪಭೋಕ್ತೃವಿನ (Consumer) ಹಣಕ್ಕೆ ಒಂದು ಪರಿಸರದ ಉಪಯುಕ್ತತೆ ಇರುವಂತೆ ಉತ್ಪಾದಕನ ಬಂಡವಾಳಕ್ಕೂ ಒಂದು ಪರಿಸರದ ಉಪಯುಕ್ತತೆ ಇದೆ. ಬೇರೆ ಯಾವುದರಲ್ಲಾದರೂ ಬಂಡವಾಳ ವಿನಿಯೋಗಿಸುವುದರಿಂದ ಅವನಿಗೆ ಹೆಚ್ಚು ಲಾಭ ಬರುವುದಾದರೆ ಅವನು ಅದನ್ನು ಶೀತಕ ತಯಾರಿಕೆಯಲ್ಲಿ ಹೂಡುವುದಿಲ್ಲ. ಶೀತಕ ತಯಾರಿಕೆಯಲ್ಲಿ ಎಷ್ಟು ಬಂಡವಾಳ ಹಾಕಿದರೆ ಉಚಿತವೆನಿಸೀತೋ ಅಷ್ಟನ್ನೇ ಅವನು ಹಾಕುತ್ತಾನೆ. ಕಡಮೆ ಬಂಡವಾಳ ಹಾಕಿದರೆ, ಅಷ್ಟು ಅವಕಾಶ ಅವನಿಗೆ ಕಳೆದು ಹೋದಂತೆ. (ಈ ಅವಕಾಶ ಇದ್ದರೆ ಲಾಭವನ್ನೇ ಅನ್ವೇಷಿಸುತ್ತಿರುವ ಹೆಚ್ಚು ಬಂಡವಾಳ ಇಲ್ಲಿಗೆ ಹರಿದು ಬರುತ್ತದೆ.) ಉಚಿತವಾದದ್ದಕ್ಕಿಂತ ಹೆಚ್ಚು ಬಂಡವಾಳ ಹಾಕಿದರೆ, ಈ ಕೈಗಾರಿಕೆಗೆ 'ಬಂಡವಾಳದ ಭಾರ' ಹೆಚ್ಚುತ್ತದೆ ; ಹೆಚ್ಚು ಲಾಭ ಬಾರದು. ೧೫೦ ಡಾಲರ್ ಬೆಲೆ ಕೊಡಲು ಸಿದ್ಧವಿರುವ ೩೦ ಲಕ್ಷ ಜನ ಇದ್ದಾರೆಂಬುದನ್ನು ಅವನು ಅರಿಯುತ್ತಾನೆ. ಇದರಿಂದ ಅವನಿಗೆ ಸರಿಯಾದಷ್ಟು ಲಾಭ ದೊರಕುತ್ತದೆ. ಬೇರೆ ಎಲ್ಲಾದರೂ ಬಂಡವಾಳ ಹೂಡುವುದರಿಂದ ಇದಕ್ಕೂ ಹೆಚ್ಚು ಲಾಭವನ್ನು ಅವನು ಸಂಪಾದಿಸಲಾರ. ಇದಕ್ಕಿಂತ ಹೆಚ್ಚು ತಯಾರಿಸಿದರೂ ಪದಾರ್ಥದ ಬೆಲೆ ಇಳಿದು ಲಾಭ ಕಡಮೆಯಾಗುತ್ತದೆ. ಬಂಡವಾಳ ಈ ಕೈಗಾರಿಕೆಯಿಂದ ಬೇರೆ ಕಡೆಗೆ ಪ್ರವಹಿಸುತ್ತದೆ.

ಇದೆಲ್ಲಾ ಬಹು ತೊಡಕಿನದಾಗಿ ಕಾಣುತ್ತದೆ. ಹೌದು, ಇದು ಬಹು ತೊಡಕು ! ಆದರೆ ಪರಿಸರದ ಉಪಯುಕ್ತತೆಯ ಹಿಂದಿರುವ ಸಾಮಾನ್ಯ ಅರ್ಥ ಬಲು ಸುಲಭ. ನಿಮ್ಮ ಸುತ್ತಲೂ ಇದಕ್ಕೆ ಹಲವಾರು ದೃಷ್ಟಾಂತಗಳನ್ನು ನೀವು ಪ್ರತಿದಿನವೂ ಕಾಣಬಹುದು. ಒಂದು ಪದಾರ್ಥ ಎಷ್ಟೊಂದು ನಿಮ್ಮಲ್ಲಿದೆಯೆಂಬುದರ ಮೇಲೆ ಆ ಪದಾರ್ಥದಿಂದ ನೀವು ಎಷ್ಟು ತೃಪ್ತಿ ಪಡೆಯಬಹುದೆಂಬುದು ನಿರ್ಣಯವಾಗುತ್ತದೆ. ಆ ಪದಾರ್ಥದ ಹೆಚ್ಚು ಹೆಚ್ಚು ಮೊತ್ತ ನಿಮ್ಮಲ್ಲಿದ್ದಷ್ಟೂ, ಅದನ್ನು ಇನ್ನಷ್ಟು ಪಡೆಯುವುದರಿಂದ ನಿಮಗೆ ಇನ್ನೂ ಕಡಮೆ ತೃಪ್ತಿ ಲಭಿಸುತ್ತದೆ. ಒಬ್ಬ ಹುಡುಗನ ಚೆಂಡಾಟದ ಟೀಮಿನವರು ಆಟ ಆರಂಭಿಸಲು ಸಿದ್ಧರಾಗಿ ನಿಂತಿದ್ದಾರೆ. ಆದರೆ ಅವರಲ್ಲಿ ದಾಂಡಿಲ್ಲ. ಆಗ ಒಂದು ದಾಂಡು ಪಡೆಯಲು

ಅವಕಾಶ ಒದಗುತ್ತದೆ. ಅದಕ್ಕೆ ಬೆಲೆ ಕೊಡಲು ಅವರು ಹಿಂದೆ ಮುಂದೆ ನೋಡುವರೆ? ಇಲ್ಲ. ಒಂದು ಪಕ್ಷ ಅವರ ಬಳಿ ಆರಂಭದಲ್ಲೇ ನಾಲ್ಕು ದಾಂಡುಗಳಿವೆಯೆನ್ನಿ. ಇನ್ನೊಂದು ದಾಂಡು ಪಡೆಯಲು ಅವಕಾಶ ಒದಗಿತೆನ್ನಿ. ಅದಕ್ಕೆ ಬೆಲೆ ಕೊಟ್ಟು ಕೊಳ್ಳಲು ಹಿಂದಿನಷ್ಟೇ ಕಾತರದಿಂದ, ಅಷ್ಟೇ ಬೇಗ, ಅವರು ಓಡುವರೆ? ಖಂಡಿತ ಇಲ್ಲ. ಅವರಿಗೆ ದಾಂಡಿನ ಪರಿಸರದ ಉಪಯುಕ್ತತೆ ಎಷ್ಟೊಂದು ಕೆಳಮಟ್ಟಕ್ಕೆ ಇಳಿದಿದೆಯೆಂದರೆ, ಅವರು ಆ ಐದನೆಯ ದಾಂಡು ಕೊಳ್ಳುವ ವಿಚಾರ ಚಿಂತಿಸುವುದೂ ಇಲ್ಲ.

ಒಂದು ಪದಾರ್ಥ ಹೆಚ್ಚಾಗಿದ್ದಷ್ಟೂ ಆ ಪದಾರ್ಥವನ್ನು ಇನ್ನಷ್ಟು ಪಡೆಯಲು ನಿಮ್ಮ ಅಪೇಕ್ಷೆ ಕಡಮೆಯಾಗುತ್ತಾ ಹೋಗುತ್ತದೆ. ನಿಮ್ಮಲ್ಲಿ ಹತ್ತು ಉಡುಪುಗಳಿದ್ದರೆ, ಇನ್ನೊಬ್ಬನ ಬಳಿ ಒಂದೇ ಉಡುಪು ಇದ್ದರೆ, ಇನ್ನೊಂದು ಉಡುಪು ಆ ಇನ್ನೊಬ್ಬನಿಗೆ ಮುಖ್ಯವೆನಿಸುವಷ್ಟು ನಿಮಗೆ ಎನಿಸುವುದಿಲ್ಲ. ಜೇವನ್ಸ್ ಇದನ್ನೇ ನೀರಿನ ಉದಾಹರಣೆ ಕೊಟ್ಟು ಹೇಳಿದ. "ಉದಾಹರಣೆಗೆ ನೀರು ಬಹುಶಃ ಅತ್ಯಂತ ಉಪಯುಕ್ತ ವಸ್ತುವೆಂದು ಹೇಳಬಹುದು. ದಿನಕ್ಕೆ ಒಂದು ಕ್ವಾರ್ಟ್ (ಕಾಲು ಗ್ಯಾಲನ್) ನೀರಿಗೆ ಬಹು ಹೆಚ್ಚಿನ ಪ್ರಾಮುಖ್ಯ. ಒಬ್ಬ ಮನುಷ್ಯ ಬಹು ಸಂಕಟದಿಂದ ಸಾಯುವುದನ್ನು ತಪ್ಪಿಸುವಷ್ಟು" ಉಪಯುಕ್ತತೆ ಇದಕ್ಕಿದೆ. ಹಲವು ಕೊಡಗಳಷ್ಟು ನೀರಿಗೂ ಹೆಚ್ಚು ಉಪಯುಕ್ತತೆ ಇದೆ —ಅಡಿಗೆ ಮಾಡುವ, ತೊಳೆಯುವ ಕೆಲಸಗಳಿಗಾಗಿ. ಈ ಎಲ್ಲ ಉಪಯೋಗಗಳಿಗಾಗಿ ಸಾಕಷ್ಟು ನೀರು ಒದಗಿದ ಮೇಲೆ ದೊರಕುವ ಹೆಚ್ಚು ನೀರಿನ ಬಗ್ಗೆ ಅಲಕ್ಷ್ಯ, ಉದಾಸೀನ, ಉಪೇಕ್ಷೆ. ಇದರಿಂದ ನಾವು ಹೇಳಬಹುದಾದ್ದಿಷ್ಟು: ನೀರು, ಒಂದು ಗೊತ್ತಾದ ಪ್ರಮಾಣದ ವರೆಗೆ, ತುಂಬಾ ಅವಶ್ಯ, ಅನಿವಾರ್ಯ. ಅಲ್ಲಿಂದ ಮುಂದಕ್ಕೆ, ಹೆಚ್ಚಿನ ಪ್ರಮಾಣಕ್ಕೂ ಬೇರೆ ಬೇರೆ ದರ್ಜೆಯ ಉಪಯುಕ್ತತೆಯುಂಟು. ಆದರೆ ಒಂದು ಹಂತ ಮುಟ್ಟಿದ ಮೇಲೆ, ಅಲ್ಲಿಂದಾಚೆಗೆ ಅದರ ಉಪಯುಕ್ತತೆ ಮರೆಯಾಗುತ್ತದೆ....ಒಂದು ಪದಾರ್ಥವನ್ನು ನಾವು ಹೆಚ್ಚಿನ ಅಥವಾ ಕಡಮೆಯ ಪ್ರಮಾಣದಲ್ಲಿ ಹೊಂದಿದ್ದೇವೆಯೆ? —ಎಂಬುದರ ಮೇಲಿಂದ ಅದರ ಉಪಯುಕ್ತತೆ ಹೆಚ್ಚು ಅಥವಾ ಕಡಮೆಯಾಗಿರುತ್ತದೆ."[1]

ಪರಿಸರದ ಉಪಯುಕ್ತತೆಯ ಈ ತತ್ವವನ್ನು, ಉದಾಹರಣೆಗೆ ಹೇಳುವುದಾದರೆ, ರೊಟ್ಟಿಗೂ ವಜ್ರಕ್ಕೂ ಮೌಲ್ಯದಲ್ಲಿ ಇರುವ ವ್ಯತ್ಯಾಸವನ್ನು ವಿವರಿಸಲು ಉಪಯೋಗಿಸೋಣವೆನ್ನಿ. ತಕ್ಷಣ ನಿಮಗೆ ಸ್ಫುರಿಸುವ ವಿಚಾರವೆಂದರೆ, ವಜ್ರಕ್ಕಿಂತ ರೊಟ್ಟಿಗೆ ಹೆಚ್ಚು ಬೆಲೆ ಇರಬೇಕು; ಏಕೆಂದರೆ ವಜ್ರಕ್ಕಿಂತ ರೊಟ್ಟಿಗೆ ಹೆಚ್ಚಿನ ಉಪಯುಕ್ತತೆ. ಆದರೆ ರೊಟ್ಟಿಯ ಸರಬರಾಯಿ ಎಷ್ಟು ಅಗಾಧವೆಂದರೆ, ಒಂದೆರಡು ಚೂರು ಹೆಚ್ಚಾಗಿ ಒದಗಿದರೆ ಅದರಿಂದ ಪರಿಸ್ಥಿತಿಯಲ್ಲಿ ಏನೂ ವ್ಯತ್ಯಾಸವಿಲ್ಲ. ಆದರೆ ವಜ್ರದ ಸರಬರಾಯಿ, ಐಶ್ವರ್ಯವಂತರ ಸಂಖ್ಯೆಯ ದೃಷ್ಟಿಯಿಂದ ಗಮನಿಸುವುದಾದರೆ, ತುಂಬಾ ಕಡಮೆ. ಇವರು ಇದಕ್ಕಾಗಿ ಅಗಾಧ ಹಣ ಕೊಡಲು ಸಿದ್ಧ. ಆದ್ದರಿಂದ ವಜ್ರಕ್ಕೆ ಅತಿ ಬೆಲೆ.

ಉಪಯುಕ್ತತೆಯೂ ಮೌಲ್ಯವೂ ಒಂದೇ ಆಗಿರಲಾರದೆಂಬ, ಹಾಗಿದ್ದರೆ ಚಿನ್ನಕ್ಕಿಂತ

---

[1] Jevons, *op. cit.*, p. 52.

ಕಬ್ಬಿಣಕ್ಕೆ ಹೆಚ್ಚು ಬೆಲೆ ಇರುತ್ತಿತ್ತೆಂಬ, ವಾದ, "ಮೌಲ್ಯವನ್ನು ಕುರಿತ ಸಾಮಾನ್ಯ ವಿಚಾರವನ್ನೇ ಅಸ್ತವ್ಯಸ್ತಗೊಳಿಸುತ್ತದೆ; ಒಂದು ಪದಾರ್ಥವನ್ನು ಬಿಡಿಯಾಗಿ, ಪ್ರತ್ಯೇಕ ವಾಗಿ, ಕೊಳ್ಳುವುದಕ್ಕೂ ಮಾರುವುದಕ್ಕೂ ಸಂಬಂಧಿಸಿದ ವಿಚಾರವನ್ನು ಇಡೀ ಪದಾರ್ಥದ ಪ್ರಾಮುಖ್ಯಕ್ಕೆ ಗಂಟು ಹಾಕುತ್ತದೆ. ಇದು ಸರಿಯಾದ ವಾದವಲ್ಲ. ಒಂದು ಉಪಯುಕ್ತ ಪದಾರ್ಥ ಕೆಲವು ಉದ್ದೇಶಗಳನ್ನು ಪೂರೈಸುತ್ತದೆ. ಆದರೆ ಆ ಪದಾರ್ಥವನ್ನೆಲ್ಲ ಒಟ್ಟಾಗಿ ಪರಿಗಣಿಸಿ, ಬಿಡಿಯಾಗಿ ಅದು ಪೂರೈಸುವ ಉದ್ದೇಶಗಳಷ್ಟೇ ಅದರ ಇಡೀ ಮೊತ್ತಕ್ಕೂ ಇದೆಯೆಂದು ಭಾವಿಸುವುದು ತಪ್ಪಾಗುವುದು. ಚಿನ್ನ ಇಲ್ಲದಿದ್ದರೆ ಜಗತ್ತಿಗೆ ಆಗುವ ತೊಂದರೆಗಿಂತ ಕಬ್ಬಿಣ ಇಲ್ಲದಿದ್ದರೆ ಜಗತ್ತಿಗೆ ಹೆಚ್ಚು ತೊಂದರೆ. ಹೀಗೆ, ಒಟ್ಟಾರೆ, ಉಪಯುಕ್ತತೆಯನ್ನು ಪರಿಗಣಿಸುವುದಾದರೆ, ಆಗ ನಾವು ಪದಾರ್ಥಗಳ ಮೌಲ್ಯವನ್ನು ಇದೇ ರೀತಿ ಪರಿಗಣಿಸಬೇಕು. ನಾವು ಹೀಗೆ ಮಾಡಿದ್ದೇ ಆದರೆ, ಉಪಯುಕ್ತತೆಗೂ ಮೌಲ್ಯಕ್ಕೂ ಇರುವ ವಿರೋಧದ ಮಾಯೆಯ ಪರೆ ಮಾಯವಾಗುತ್ತದೆ. ಏಕೆಂದರೆ, ಇಡೀ ಜಗತ್ತು ಎಲ್ಲ ಕಬ್ಬಿಣವನ್ನೂ ಒಟ್ಟಿಗೆ ಕೊಳ್ಳಬೇಕು, ಇಲ್ಲವೇ ಒಟ್ಟಿಗೆ ಬಿಡಬೇಕು—ಎಂದರೆ, ಎಲ್ಲ ಚಿನ್ನವನ್ನೂ ಒಟ್ಟಿಗೆ ಕೊಳ್ಳಬೇಕು, ಇಲ್ಲವೇ ಬಿಡಬೇಕು—ಎಂದು ಹೇಳಿದರೆ, ಆಗ ಚಿನ್ನ ಬೇಡ, ಕಬ್ಬಿಣ ಬೇಕು—ಎಂಬ ಇಚ್ಛೆ ಹೆಚ್ಚಾಗಿ ವ್ಯಕ್ತವಾಗುತ್ತದೆ. ಆಗ (ಎಲ್ಲ) ಕಬ್ಬಿಣದ ಮೌಲ್ಯ, (ಎಲ್ಲ) ಚಿನ್ನದ ಮೌಲ್ಯಕ್ಕಿಂತ ಹೆಚ್ಚಾಗುತ್ತದೆ." ಇದು ಕೇರ್ನ್ಸ್ ಎಂಬುವನ ವಾದ.

"ಇಡೀ ಪದಾರ್ಥದ ಒಟ್ಟು ಮೊತ್ತಕ್ಕೂ, ಮಾರಿದ ಅಥವಾ ಕೊಂಡ ಒಂದು ಪದಾರ್ಥದ ಬಿಡಿಗೂ ನಡುವೆ ಇರುವ ಭ್ರಾಂತಿ, **ಒಂದು** ವಜ್ರದ ಚೂರನ್ನು ಕಲ್ಲಿದ್ದಲಿನೊಡನೆ ಹೋಲಿಸಿದುದಾದರೆ ಆಗ ವ್ಯಕ್ತವಾಗುತ್ತದೆ. ಹೋಲಿಕೆ ಮಾಡುವಾಗ, ಹೋಲಿಕೆಯ ಎರಡು ವಸ್ತುಗಳೂ ಒಂದೇ ತೆರನಾಗಿರಬೇಕಲ್ಲವೆ? ಒಟ್ಟನಲ್ಲಿ ಕಲ್ಲಿದ್ದಲು ವಜ್ರಕ್ಕಿಂತ ಹೆಚ್ಚು ಉಪಯುಕ್ತವಾಗಿಯೇ ಇರಬೇಕೆಂಬುದು, ಅಮೂಲ್ಯವಾಗಿಯೇ ಇರಬೇಕೆಂಬುದು, ನಿರ್ವಿವಾದ."[1]

ಅರ್ಥಶಾಸ್ತ್ರಜ್ಞರ ನಡುವಣ ಈ ವಾದ-ಪ್ರತಿವಾದ ಇತರ ವಾದ-ವಿವಾದಗಳಂತೆಯೇ ಕೊನೆಯಿಲ್ಲದ್ದಾಗಿತ್ತು. ಅರ್ಥಶಾಸ್ತ್ರಜ್ಞರು ಏನೇ ಹೇಳಲಿ, ತಾತ್ಕಾಲಿಕವಾಗಿ ಯಾವ ಸಿದ್ಧಾಂತಕ್ಕೇ ಜಯ ಲಭಿಸಲಿ, ಬಂಡವಾಳಿಗರು ಮಾತ್ರ ಒಂದು ವಿಚಾರ ಕಂಡುಕೊಂಡರು. ಕಾರಣ ಏನಾದರೂ ಇರಲಿ, ಒಂದು ಪದಾರ್ಥದ ಸರಬರಾಯಿಯನ್ನು ತಾವು ಮಿತಿಗೆ ಒಳ ಪಡಿಸುವುದು ಸಾಧ್ಯವಾದರೆ, ಆಗ ಅದರ ಬೆಲೆಯನ್ನು ತಮ್ಮ ಕೈಯಲ್ಲೇ ಇಟ್ಟುಕೊಳ್ಳುವುದು ಸಾಧ್ಯವೆಂಬ ವಿಚಾರ ಅವರಿಗೆ ಅರಿವಾಯಿತು. ಅಲ್ಪ ಕಾಲದಲ್ಲೇ ಒಂದು ಪದಾರ್ಥ ತಯಾರಿಸಲು ಸಾಧ್ಯವಾದದ್ದರಿಂದ ಅದರ ಮೌಲ್ಯ ಕಡಿಮೆಯಾಗಬಹುದು; ಅಥವಾ ಒಂದು ಪದಾರ್ಥದ ಪ್ರಮಾಣ ಹೆಚ್ಚಾಗಿ ಅದರ ಪರಿಸರದ ಉಪಯುಕ್ತತೆ ಕಡಿಮೆಯಾಗ ಬಹುದು. ಆದರೆ ಸರಬರಾಯಿಯ ಮೇಲೆ ಹತೋಟಿ ಹೊಂದುವುದರಿಂದ, ಅದರ ಮೇಲೆ

[1] Cannan, *Review of Economic Theory*, pp. 203-204.

ಕೈವಾಡ ತೋರಿಸುವುದರಿಂದ, ಬೆಲೆ ನಿಷ್ಕರ್ಷಿಸುವ ಶಕ್ತಿಯೂ ಅದರೊಡನೆ ಬರುವುದೆಂಬ ವಿಚಾರವನ್ನು ಇವರು ಕಂಡುಕೊಂಡರು. ಬೆಲೆ ನಿಷ್ಕರ್ಷೆಯ ಅಧಿಕಾರದಿಂದ ಲಾಭದ ಮೇಲೂ ಪ್ರಭಾವ ಬೀರುವುದು ಸಾಧ್ಯ.

೫೦೦೦ ಪದಾರ್ಥಗಳನ್ನು ತಲಾ ೧೦ ಡಾಲರಿನ ವೆಚ್ಚದಲ್ಲಿ ತಯಾರಿಸಬಹುದೆಂದೂ, ತಲಾ ೧೧ ಡಾಲರಿನಂತೆ ಮಾರಬಹುದೆಂದೂ ಇಟ್ಟುಕೊಳ್ಳಿ. ಇದರಿಂದ ಒಟ್ಟು ೫೦೦೦ ಡಾಲರ್, ಅಥವಾ ಶೇಕಡ ಹತ್ತರಷ್ಟು, ಲಾಭ ಬಂದಂತಾಯಿತು. ೪೦೦೦ ಪದಾರ್ಥ ಗಳನ್ನು ತಯಾರಿಸಿದರೆ, ಆಗ ಉತ್ಪಾದನ ವೆಚ್ಚ ೧೦.೫೦ ಡಾಲರ್ ಆಗಬಹುದು. ಆದರೆ ಬೆಲೆ ೧೨.೫೦ ಡಾಲರಿಗೆ ಏರಿ, ಒಟ್ಟು ೮೦೦೦ ಡಾಲರ್ ಲಾಭ ಬರಬಹುದು—ಎಂದರೆ ಶೇಕಡಾ ಹತ್ತೊಂಬತ್ತರಷ್ಟು ಲಾಭ. ಆದ್ದರಿಂದ ಸರಬರಾಯಿಯನ್ನು ಹತೋಟಿಗೆ ಒಳಪಡಿಸುವ ಶಕ್ತಿಯುಳ್ಳ ಸಂಸ್ಥೆ ಪರಮಾವಧಿ ಲಾಭ ದೊರಕುವಂತೆ ಅದನ್ನು ನಿಯಂತ್ರಿಸು ವುದು ಸಾಧ್ಯ. ಹೆಚ್ಚು ಪದಾರ್ಥ ತಯಾರಿಸಿ ಕಡಿಮೆ ಬೆಲೆಯಲ್ಲಿ ಹೆಚ್ಚು ವ್ಯಾಪಕವಾದ ಬೇಡಿಕೆ ಪೂರೈಸುವುದರಲ್ಲಿ—ಹೀಗೆ ಮಾಡುವುದರಿಂದ ಅದಕ್ಕೆ ಹೆಚ್ಚು ಲಾಭ ಬರುವುದಾ ಗಿದ್ದರೆ ವಿನಾ—ಅದಕ್ಕೆ ಆಸಕ್ತಿಯಿರುವುದಿಲ್ಲ. ರಾಶಿಗಟ್ಟಲೆ ತಯಾರಿಕೆಯ ಅರ್ಥಶಾಸ್ತ್ರ ಕ್ಕನುಸಾರವಾಗಿ ಒಂದು ಲಕ್ಷ ಪದಾರ್ಥ ತಯಾರಿಸುವುದಾದರೆ ಆದರ ವೆಚ್ಚ ಏಳು ಡಾಲರಿಗೆ ಇಳಿಯಬಹುದು. ಪೇಟೆಯಲ್ಲಿ ಅವನ್ನು ತಲಾ ಎಂಟು ಡಾಲರಿನಂತೆ ಕೊಳ್ಳಲು ಗಿರಾಕಿಯೂ ಇದೆಯೆನ್ನಿ. ಆದರೆ ಆಗ ಸಂಸ್ಥೆಗೆ ಬರುವ ಲಾಭವೆಷ್ಟು? ಕೇವಲ ಶೇಕಡಾ ಹದಿನಾಲ್ಕು !

ಹದಿನಾರನೆಯ ಶತಮಾನದಲ್ಲಿ ಡಚ್ ವ್ಯಾಪಾರಿಗಳು ಸಂಬಾರದ ಬೆಲೆ ಏರಿಸಲಿಕ್ಕಾಗಿ ಅದರ ಉತ್ಪಾದನೆಯನ್ನು ಕಡಮೆ ಮಾಡುತ್ತಿದ್ದುದನ್ನು ನೀವು ನೆನಪಿನಲ್ಲಿಟ್ಟಿರಬಹುದು. ಆ ಹಳೆಯ ಏಕಸ್ವಾಮ್ಯಗಳು ಮುರಿದು ಬಿದ್ದುವು. ಆದರೆ ಆಧುನಿಕ ಪ್ರಪಂಚದಲ್ಲಿ ಪದಾರ್ಥೋತ್ಪಾದನೆ ಅತಿಯಾಗಿ ಹೆಚ್ಚಿ, ಲಾಭ ದೃಷ್ಟಿಯಿಂದ ಅವುಗಳ ಬೆಲೆ ತುಂಬಾ ಕೆಳಮಟ್ಟಕ್ಕೆ ಇಳಿಯುವ ಅಪಾಯವುಂಟಾದಾಗ, ವ್ಯಾಪಕಾಧಿಕಾರ ಹೊಂದಿದ ಹೊಸ ಏಕ ಸ್ವಾಮ್ಯಗಳು ಹುಟ್ಟಿಕೊಂಡದ್ದನ್ನು ನಾವು ಕಾಣುವೆವು.

ಮೊದಲು ಸಂಭವಿಸಿದ ಕೈಗಾರಿಕಾ ಕ್ರಾಂತಿಯ ಫಲವಾಗಿ ಇತರರಿಗಿಂತ ಹೆಚ್ಚು ಮುನ್ನಡೆದಿದ್ದ ಇಂಗ್ಲೆಂಡಿನ ಉತ್ಪಾದಕರು ಇತರರಿಗಿಂತ ಹೆಚ್ಚು ಅನುಕೂಲ ಗಳಿಸಿದ್ದರು. ಹತ್ತೊಂಬತ್ತನೆಯ ಶತಮಾನದ ಪ್ರಥಮಾರ್ಧದಲ್ಲಿ, ತಮ್ಮ ಪದಾರ್ಥವನ್ನು ಎಲ್ಲಿ ಮಾರು ವುದೆಂಬುದು ಇಂಗ್ಲೆಂಡಿನ ಸಮಸ್ಯೆಯಾಗಿರಲಿಲ್ಲ; ಆಗ ಗೊತ್ತಿದ್ದ ಪ್ರಪಂಚದ ಎಲ್ಲೆಡೆ ಯಿಂದಲೂ ಬಂದು ತುಂಬುತ್ತಿದ್ದ ಪದಾರ್ಥದ ಬೇಡಿಕೆಯ ಆದೇಶಕ್ಕೆ ತಕ್ಕಂತೆ ವೇಗವಾಗಿ ಪದಾರ್ಥ ತಯಾರಿಸುವುದು ಹೇಗೆಂಬುದೇ ಅದರ ಸಮಸ್ಯೆಯಾಗಿತ್ತು. ಆದರೆ ಹತ್ತೊಂಬ ತ್ತನೆಯ ಶತಮಾನದ ಕೊನೆಯ ಪಾದದ ವೇಳೆಗೆ ಇನ್ನೊಂದು ಮುಖ್ಯ ವ್ಯತ್ಯಾಸ ವಾಯಿತು. ಇಂಗ್ಲೆಂಡು ಸಮರ್ಥಿಸುತ್ತಿದ್ದ ನಿರುಪಾಧಿಕ ವ್ಯಾಪಾರವನ್ನು ಅಮೆರಿಕಾ ಎಂದೂ ಸ್ವೀಕರಿಸಿಯೇ ಇರಲಿಲ್ಲ. ಅಲ್ಲಿ ಹೆಚ್ಚು ಕಡಮೆ ಆ ದೇಶದ ಆರಂಭ ದೆಸೆಯಿಂದಲೇ

ರಕ್ಷಣಾಸುಂಕದ ವ್ಯವಸ್ಥೆ ಜಾರಿಯಲ್ಲಿತ್ತೆಂಬುದು ನಿಮ್ಮ ನೆನಪಿನಲ್ಲಿರಬಹುದು. ಅಲ್ಲಿನ ಅಂತರ್ಯುದ್ಧದ ಅನಂತರ ಅಮೆರಿಕದ ಸುಂಕದ ಕೋಟೆ ಇನ್ನೂ ಎತ್ತರವಾಯಿತು. ರಷ್ಯದಲ್ಲಿ ಒಂದು ಸಾರ್ವತ್ರಿಕ ರಕ್ಷಣಾಸುಂಕದ ವ್ಯವಸ್ಥೆ ೧೮೭೭ರಲ್ಲೂ, ಜರ್ಮನಿಯಲ್ಲಿ ೧೮೭೯ರಲ್ಲೂ, ಫ್ರಾನ್ಸಿನಲ್ಲಿ ೧೮೮೧ರಲ್ಲೂ ಜಾರಿಗೆ ಬಂತು. ಆಗ ಆಂಗ್ಲ ಉತ್ಪಾದಕರಿಗೆ ಕ್ಷೇತ್ರ ಸುಲಭವಾಗಿರಲಿಲ್ಲ. ಅವರ ಪದಾರ್ಥಗಳು ಸುಂಕದ ಕೋಟೆಯನ್ನು ನೆಗೆದು ಬರುವುದು ದುಸ್ಸಾಧ್ಯವಾಯಿತು. ಇಂಗ್ಲೆಂಡಿನ ಬಹು ಮುಖ್ಯ ಗಿರಾಕಿಗಳು ಆ ದೇಶದ ಪದಾರ್ಥವನ್ನೇ ಕೊಳ್ಳಬೇಕಾದ ಅಗತ್ಯ ತಪ್ಪಿಹೋಯಿತು. ಅವರು ತಮ್ಮ ಪದಾರ್ಥ ಗಳನ್ನು ತಾವೇ ತಯಾರಿಸಬಲ್ಲವರಾಗಿದ್ದರು. ಸುಂಕದ ಕೋಟೆಗಳ ಹಿಂದೆ "ಶೈಶವ" ಕೈಗಾರಿಕೆಗಳು ಶೀಘ್ರವಾಗಿ "ದೈತ್ಯ" ಕೈಗಾರಿಕೆಗಳಾಗಿ ಬೆಳೆಯುತ್ತಿದ್ದುವು.

ಈ ಮಾತು ಕೇವಲ ಆಲಂಕಾರಿಕವಲ್ಲ, ವಾಸ್ತವಿಕ. ೧೮೭೦ರಿಂದ ಮುಂದಣ ಕಾಲ, ಸಂಯುಕ್ತ ಸಂಸ್ಥಾನದಲ್ಲಿ "ಟ್ರಸ್ಟು"ಗಳೆಂಬ, ಜರ್ಮನಿಯಲ್ಲಿ "ಕಾರ್ಟೆಲು"ಗಳೆಂಬ, ದೈತ್ಯ ಕೂಟಗಳ ಕಾಲ. ಹಲವು ಸಂಸ್ಥೆಗಳು ಒಂದಾಗಿ ಈ ದೈತ್ಯ ಕೂಟಗಳು ಬೆಳೆದುವು. ಸ್ಪರ್ಧೆ—ಮೇಲಾಟ—ಹೋಗಿ ಅದರ ಸ್ಥಾನದಲ್ಲಿ ಏಕಸ್ವಾಮ್ಯ ಬಂತು. ಸಣ್ಣ ವ್ಯಾಪಾರಿ ಗಳು ದೊಡ್ಡ ವ್ಯಾಪಾರಿಗಳಿಂದ ಉಚ್ಚಾಟನೆಗೊಂಡರು. ಸಣ್ಣ ವ್ಯಾಪಾರ ಸಂಸ್ಥೆಗಳು ದೊಡ್ಡ ವ್ಯಾಪಾರ ಸಂಸ್ಥೆಯಿಂದ ನಾಶಹೊಂದಿದುವು; ಅಥವಾ ದೊಡ್ಡ ಸಂಸ್ಥೆಯಲ್ಲಿ ಲೀನವಾಗಿ, ಅದನ್ನು ಇನ್ನೂ ಹೆಚ್ಚು ದೊಡ್ಡದಾಗಿ ಮಾಡಿದುವು. ಎಲ್ಲೆಲ್ಲೂ ಬೆಳವಣಿಗೆ, ಸಂಸ್ಥೆಗಳ ಸಂಯೋಗ, ಕೇಂದ್ರೀಕರಣ ಸಾಗಿತು. ದೈತ್ಯ ಕೈಗಾರಿಕೆಗಳು ಏಕಸ್ವಾಮ್ಯದ ಗುರಿಯತ್ತ ಸಾಗಿದುವು.

ಮೇಲಾಟ ಹೋಗಿ ಏಕಸ್ವಾಮ್ಯ ಬಂದದ್ದು ಹೊರಗಣಿಂದ ನಡೆದ ಆಕ್ರಮಣವಲ್ಲ. ಮೇಲಾಟದ ಬೆಳವಣಿಗೆಯ ಅಂತಿಮ ಪರಿಣಾಮ ಇದು. ಮೇಲಾಟದ ಒಳಗಿನಿಂದಲೇ ಏಕಸ್ವಾಮ್ಯದ ಉದ್ಭವವಾಯಿತು. ಪ್ರತಿಯೊಂದು ವ್ಯವಸ್ಥೆಯಲ್ಲೂ, ಘಟನೆಯಲ್ಲೂ ಅದರ ಪರಿವರ್ತನೆಯ ಬೀಜವೂ **ಅಂತರ್ಗತ**ವಾಗಿರುವುದೆಂಬುದರ ಉದಾಹರಣೆ ಇದು. ಏಕ ಸ್ವಾಮ್ಯವೆಂಬುದು ಹೊರಗಣಿಂದ ಬಂದು, ಮೇಲಾಟವನ್ನು ಗೆದ್ದು ನಿಂತ ಆಕ್ರಮಣಕಾರಿ ಯಲ್ಲ. ಮೇಲಾಟದ ಬೆಳವಣಿಗೆಯ ಸಹಜ ಫಲವೇ ಇದು.

ಅಮೆರಿಕದ ಅಂತರ್ಯುದ್ಧದ ಅನಂತರದ ಕಾಲದಲ್ಲಿ ಸಂಚಾರ ಸಾರಿಗೆ ಸಂಪರ್ಕ ಸಾಧನಗಳಲ್ಲಾದ ಕ್ರಾಂತಿಯ ಕತೆಯನ್ನು ನೀವು ಬಲ್ಲಿರಿ. ಉತ್ತಮಗೊಂಡ ಹೆಚ್ಚು ಸಂಖ್ಯೆಯ ರೈಲುಗಳ ನಿರ್ಮಾಣವಾಯಿತು. ದೊಡ್ಡ ಪರಿಷ್ಕೃತ ಹಬೆ ಜಹಜುಗಳು ನದಿಯ ಉದ್ದಕ್ಕೂ, ಸಾಗರಗಳ ಆಚೀಚೆಗೂ ಸಂಚಾರ ಮಾಡಿದುವು. ಟೆಲಿಗ್ರಾಫ್ (ತಂತಿ) ಸಂಪರ್ಕ ಉತ್ತಮಗೊಂಡಿತು. ಅದರ ಉಪಯೋಗ ಹಬ್ಬಿತು. ಶೀಘ್ರವಾದ, ನಿಯತ ಕಾಲಿಕವಾದ, ಅಗ್ಗವಾದ ಸಂಪರ್ಕ ಸಾರಿಗೆ ಸಾಧನಗಳ ಬೆಳವಣಿಗೆಯಾದುದರಿಂದ, ಉತ್ಪಾದನೆಯ ಅಗತ್ಯಗಳನ್ನೆಲ್ಲಾ ಒಂದುಗೂಡಿಸಿ, ಉತ್ಪಾದನ ಕಾರ್ಯವನ್ನು ಒಂದು ಪ್ರದೇಶದಲ್ಲಿ ಕೇಂದ್ರೀಕರಿಸುವುದು ಹೆಚ್ಚು ಲಾಭಪ್ರದವಾಯಿತು. ಅದ್ಭುತ ಯಾಂತ್ರಿಕ

ಪ್ರಗತಿಯಾಯಿತು. ಸಮರ್ಪಕ ಯಂತ್ರಸಾಧನದ ವಿಶಿಷ್ಟ ಹಕ್ಕುಗಳು—ಸ್ವಾಮ್ಯದ ಸನ್ನದುಗಳು—ಬಂದುವು. ರಾಶಿಗಟ್ಟಲೆ ತಯಾರಿಕೆ, ಅಧಿಕಾಧಿಕ ಶ್ರಮವಿಭಾಗ—ಇವು ಸಾಧ್ಯವಾದುವು. ಹೆಚ್ಚು ಪ್ರಮಾಣದ ಉತ್ಪಾದನ ಕಾರ್ಯಕ್ಕೆ ಕಾಲ ಪಕ್ವವಾಗಿತ್ತು. ಉತ್ಪಾದನೆ ಹೆಚ್ಚುತ್ತಿದ್ದಂತೆಯೇ ಪದಾರ್ಥದ ತಲಾ ವೆಚ್ಚ ಕಡಮೆಯಾಗುವುದು ಇದರಿಂದ ಸಾಧ್ಯವಿತ್ತು. ವ್ಯಾಪಾರ ಕೂಟಗಳು ಯುದ್ಧ ಭೂಮಿಗೆ ಬಂದು ಹೋರಾಟ ನಡಸಿ, ಗೆಲವು ಸಾಧಿಸಲು ಕೊನೆಗೂ ಸಾಧ್ಯವಾಯಿತು.

ಸಾಧ್ಯವಾದದ್ದು ಆಗಿಹೋಯಿತು.

ವ್ಯಾಪಾರವೆಂದರೆ ಅದೊಂದು ಹೋರಾಟ. ಇದರಲ್ಲಿ ನಿರತನಾಗಿರುವ ಯಾರನ್ನಾದರೂ ಕೇಳಿ—ಇದೇ ಉತ್ತರ ಹೇಳಿಯಾನು. ಮುಷ್ಟಿಯುದ್ಧದ ಆಟದಲ್ಲಿ ಒಂದು ವಾಡಿಕೆಯ ಮಾತುಂಟು. "ಭಾರಿ ಆಸಾಮಿ ಪುಟ್ಟ ಆಸಾಮಿಯನ್ನು ಹೊಸಕಿ ಹಾಕುತ್ತಾನೆ" ಎಂಬುದು ಆ ಮಾತು. ವ್ಯಾಪಾರದ ಆಟದಲ್ಲಿ ಇದು ನಿಜವಾಗಿ ಪರಿಣಮಿಸಿತು. ಒಂದು ವ್ಯಾಪಾರ ದಲ್ಲಿ ಎರಡು ಕಂಪೆನಿಗಳು ಮೇಲಾಟ ನಡಸುತ್ತಿವೆ. ಒಂದು ಸಂಸ್ಥೆ ತನ್ನ ಪದಾರ್ಥಗಳ ಬೆಲೆ ಇಳಿಸಿ, ತನ್ಮೂಲಕ ಇನ್ನೊಂದರ ಮೇಲೆ ಆಘಾತ ಕೊಡುತ್ತದೆ. ಇನ್ನೊಂದು ಕಂಪೆನಿ ಬೆಲೆಯನ್ನು ಇನ್ನೂ ಇಳಿಸಿ, ಆ ಮೊದಲ ಕಂಪೆನಿಗೆ ಮರು ಏಟು ಕೊಡುತ್ತದೆ. ಈ ಆಟ ಹೀಗೆಯೇ ಸಾಗುತ್ತದೆ. ಇನ್ನೂ ಇನ್ನೂ ಕಡಮೆ ಬೆಲೆಗಳ ರೂಪದಲ್ಲಿ ಪರಸ್ಪರ ಗುದ್ದಾಟ ಸಾಗುತ್ತದೆ. ಈ ಗುದ್ದಾಟದಲ್ಲಿ ಗೆಲ್ಲುವವರು ಯಾರು ? ಅತ್ಯಂತ ಕಡಮೆ ವೆಚ್ಚ ದಲ್ಲಿ ತಯಾರಿಸಬಲ್ಲ ಸಂಸ್ಥೆಗೆ ಹೆಚ್ಚು ಅನುಕೂಲವೆಂಬುದು ಸ್ವಯಂಸಿದ್ಧ. ಉತ್ಪಾದನೆಯ ಪ್ರಮಾಣ ಹೆಚ್ಚಿದಷ್ಟೂ ಉತ್ಪಾದನೆಯ ವೆಚ್ಚವೂ ಕೂಡ ಕಡಮೆಯಾಗುತ್ತದೆ. ಇದರಿಂದ ದೊಡ್ಡ ಸಂಸ್ಥೆಗೆ ಪ್ರಾರಂಭದಲ್ಲೇ ಹೆಚ್ಚು ಅನುಕೂಲ—ಪ್ರಾರಂಭಾನುಕೂಲ—ಉಂಟೆಂಬುದು ಸ್ಪಷ್ಟ. ಆದರೆ ಇದರಲ್ಲಿ ಮುಖ್ಯವಾದದ್ದು ಸಹನಾ ಸಾಮರ್ಥ್ಯ. ಮೀಸಲು ಬಂಡವಾಳ ಎಷ್ಟಿದೆಯೆಂಬುದರಿಂದ ಹೋರಾಟದಲ್ಲಿನ ಸಹನಾಸಾಮರ್ಥ್ಯವನ್ನು ಅಳೆಯ ಬಹುದು. ಈ ಮೀಸಲು ಹೆಚ್ಚಿದಷ್ಟೂ, ಹೆಚ್ಚು ಕಾಲ ಹೋರಾಟದಲ್ಲಿ ಮುಂದುವರಿಯ ಬಹುದು. ಹೆಚ್ಚು ಬಂಡವಾಳ ಇರುವ ಸಂಸ್ಥೆಯೇ ಬೃಹತ್ತಾದದ್ದು. ಬೆಲೆ ಇಳಿಸುವುದರಿಂದ ಇದಕ್ಕೆ ಚುರುಗುಟ್ಟುತ್ತದೆ. ಆದರೆ ಸಣ್ಣ ಸಂಸ್ಥೆಯ ತಲೆ ಇದರಿಂದ ಗಿರಕಿ ಹೊಡೆಯುತ್ತದೆ. ಶೀಘ್ರದಲ್ಲೇ ಅದು ನಿರ್ಗಮಿಸುತ್ತದೆ. ಮುಷ್ಟಿಯ ಕಾಳಗವನ್ನು ಮಾರ್ಕ್ಸ್ ಬಹುಶಃ ಎಂದೂ ನೋಡಿರಲಿಲ್ಲ. ಆದರೆ ವ್ಯಾಪಾರ ವ್ಯಾಪಾರಗಳ ನಡುವಣ ಬಿಟ್ಟೂ ಬಿಡದ ಗುದ್ದಾಟದಲ್ಲಿ ಅಖಾಡದ ಮಗ್ಗುಲ ಸ್ಥಳ ಅವನಿಗೆ ಮೀಸಲಾಗಿತ್ತು. ಇದನ್ನು ಅವನು ಹೀಗೆ ಬಣ್ಣಿಸಿದ: "ಪದಾರ್ಥಗಳ ಬೆಲೆ ಕಡಮೆ ಮಾಡುವುದರ ಮೂಲಕ ಮೇಲಾಟದ ಯುದ್ಧ ನಡೆಯುತ್ತದೆ. ಬೆಲೆಯ ಅಗ್ಗ ದುಡಿಮೆಯ ಫಲಶಕ್ತಿಯನ್ನೇ ಅವಲಂಬಿಸಿದೆ. ಪದಾರ್ಥೋತ್ಪಾದನೆಯ ಪ್ರಮಾಣವನ್ನು ಇದು ಅವಲಂಬಿಸಿದೆ. ಆದ್ದರಿಂದ ದೊಡ್ಡ ಬಂಡವಾಳ ಸಂಸ್ಥೆಗಳು ಸಣ್ಣ ಬಂಡವಾಳ ಸಂಸ್ಥೆಗಳನ್ನು ಜಯಿಸುತ್ತವೆ...."[1]

---

[1] *Capital*, vol. I, pp. 640, 641.

ಸಾಮಾನ್ಯ ಮುಷ್ಟಿಯ ಕಾಳಗಕ್ಕೂ ವ್ಯಾಪಾರ ವ್ಯಾಪಾರಗಳ ನಡುವಣ ಯುದ್ಧಕ್ಕೂ ಇರುವ ವ್ಯತ್ಯಾಸ ಮೇಲಣ ಕೊನೆಯ ವಾಕ್ಯದಿಂದ ವ್ಯಕ್ತವಾಗುತ್ತದೆ. ಮುಷ್ಟಿಯ ಕಾಳಗದ ಪಂದ್ಯದಲ್ಲಿ ಸೋತವನು ಉರುಳುತ್ತಾನೆ; ಗೆದ್ದವನು ಹೊಸ ಹೆಚ್ಚು ಲಾಭಪ್ರದ ವಿಜಯಗಳನ್ನರಸುತ್ತಾ ಅಖಾಡ ಬಿಟ್ಟು ತೆರಳುತ್ತಾನೆ. ವ್ಯಾಪಾರಗಳ ನಡುವಣ ಯುದ್ಧದಲ್ಲೂ ಜಯಶಾಲಿ ಹೀಗೆಯೇ ಆಚರಿಸುತ್ತಾನೆ; ಆದರೆ ಅಖಾಡ ಬಿಟ್ಟು ತೆರಳುವ ಮುನ್ನ ನರಭಕ್ಷಕನಂತೆ ವರ್ತಿಸುತ್ತಾನೆ; ಸೋತವನನ್ನು ನುಂಗಿ, ಹಿಂದಿಗಿಂತ ದೊಡ್ಡವನಾಗಿ ಬೆಳೆದು, ಇದಿರು ಬಂದವರನ್ನೆಲ್ಲ ಎದುರಿಸಲು ಸಿದ್ಧನಾಗಿ ಮುಂದೆ ಸಾಗುತ್ತಾನೆ.

ಆತ ದೊಡ್ಡವನಾಗಿ ಬೆಳೆದಷ್ಟೂ ಅವನನ್ನು ಸೋಲಿಸುವುದು ಹೆಚ್ಚು ಕಷ್ಟ. ಇತರ ಹೋರಾಟಗಾರರೂ ಪ್ರಯತ್ನಿಸಿ ಸೋಲುವರು. ದೊಡ್ಡ ಆಸಾಮಿ ಮಲ್ಲಾಗ್ರಣಿಯೇ ಆಗುತ್ತಾನೆ. ಛಾಂಪಿಯನ್ನನೇ ಆಗುತ್ತಾನೆ. ಇವನ ಎದುರು ಸೆಣಸುವವರೇ ಇಲ್ಲದಂತಾಗುತ್ತದೆ—ತಾತ್ಕಾಲಿಕವಾಗಿಯಾದರೂ ಹೀಗಾಗುತ್ತದೆ.

ನಿರುಪಾಧಿಕ ಮೇಲಾಟದಿಂದ ಟ್ರಸ್ಟುಗಳೆಂಬ ಕೂಟಗಳು ಸ್ಥಾಪಿತವಾದುವು. ಕೆಲವು ಸಾರಿ ಹೋರಾಟ ನ್ಯಾಯವಾಗಿತ್ತು. ಆದರೆ ಭಂಡಾಟವಾಗುತ್ತಿದ್ದುದೇ ಹೆಚ್ಚು. (ನಡುವಿನಿಂದ ಕೆಳಗೆ ಏಟು ಕೊಡುವ ತಿನ್ನುವ ಅಧರ್ಮ ಯುದ್ಧವನ್ನು ಕಲಿತಿದ್ದ ವ್ಯಾಪಾರಜಗತ್ತಿನ ದೃಷ್ಟಿಯಲ್ಲೂ ಕೂಡ ಇದು ಅನ್ಯಾಯವೆನಿಸಿತ್ತು.) ಆದರೆ ನ್ಯಾಯವೋ ಅನ್ಯಾಯವೋ, ಹೋರಾಟವಂತೂ ಬಹು ಭೀಕರವಾಗಿತ್ತು. ಪರಾಜಯ ಹೊಂದಿದ ವ್ಯಾಪಾರಸಂಸ್ಥೆಗಳನ್ನು ನಡಸುತ್ತಿದ್ದವರ ಸರ್ವನಾಶವಾಯಿತು. ಅವರು ಮತ್ತೆ ಹೋರಾಟ ನಡಸುವಂತಿರಲಿಲ್ಲ. ಕೆಲವು ಸಾರಿ ಅವರು ಹುಚ್ಚರಾದರು. ಒಮ್ಮೊಮ್ಮೆ ಇಂಥವರು ಆತ್ಮಹತ್ಯ ಮಾಡಿಕೊಳ್ಳುತ್ತಿದ್ದುದೂ ಉಂಟು.

ಆದರೆ ಈ ವಿಚಾರದಲ್ಲಿ ಮಹಾ ಪಂಡಿತನಾಗಿದ್ದವನೊಬ್ಬ, ಜಾನ್ ಡಿ. ರಾಕ್‌ಫೆಲ್ಲರ್ (ಕಿರಿಯ), ಮಹಾಕೂಟ ನಿರ್ಮಾಪಕನ ಮಗ. ಪರಿಣಾಮ ದೃಷ್ಟಿಯಿಂದ ಈ ಮಹಾನಷ್ಟವೂ ಉಚಿತವೇ–ಎಂದು ಈತ ಹೇಳಿದ. ಬ್ರೌನ್ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳಿಗೆ ವ್ಯಾಪಾರ ಕೂಟ (Trust)ಗಳ ವಿಚಾರವಾಗಿ ಮಾತಾಡುತ್ತಾ ಈತ ಹೀಗೆ ಹೇಳಿದ: "ಅಮೆರಿಕದ ಸುಂದರ ಗುಲಾಬಿ ತನ್ನ ಎಲ್ಲ ಅಟ್ಟಹಾಸದಿಂದ ಅರಳಿ ಮೆರೆಯಬೇಕಾದರೆ ಅದರ ಸುತ್ತ ಬೆಳೆಯುವ ಹೀಚು ಮೊಗ್ಗುಗಳನ್ನು ತರಿದು ಹಾಕುವ ತ್ಯಾಗ ಮಾಡಲೇಬೇಕು."[1]

ವ್ಯಾಪಾರ ಕೂಟದ ಮೊಟ್ಟಮೊದಲ "ಅಮೆರಿಕನ್ ಸುಂದರಿ" ತೈಲ ಕ್ಷೇತ್ರದಲ್ಲಿ ಜನಿಸಿದಳು. ೧೮೮೦ರ ವೇಳೆಗೆ ಸ್ಟಾಂಡರ್ಡ್ ಆಯಿಲ್ ಕಂಪೆನಿ ಪರಿಷ್ಕೃತ ದೀಪದೆಣ್ಣೆಯ ಶೇಕಡ ಎಂಬತ್ತಾರಕ್ಕೂ ಹೆಚ್ಚು ವ್ಯವಹಾರವನ್ನು ತನ್ನ ಹತೋಟಿಗೆ ಒಳಪಡಿಸಿಕೊಂಡಿತು. ತೈಲ ಕ್ಷೇತ್ರದಲ್ಲಾದದ್ದೇ ಉಕ್ಕು, ಸಕ್ಕರೆ, ವ್ಹಿಸ್ಕಿ, ಕಲ್ಲಿದ್ದಲು ಮುಂತಾದ ಪದಾರ್ಥಗಳಲ್ಲೂ

---

[1] Ida M. Tarbell, *The History of the Standard Oil Company*, 2 vols. The Macmillan Company, 1925.

ಸಂಭವಿಸಿತು. ಎಲ್ಲೆಲ್ಲೂ ವ್ಯಾಪಾರ ಕೂಟಗಳು (ಟ್ರಸ್ಟು) ಸ್ಥಾಪಿತವಾದುವು. ಮೇಲಾಟದ ಅವ್ಯವಸ್ಥೆಯಿಂದ ಏಕಸ್ವಾಮ್ಯದ ವ್ಯವಸ್ಥೆಯನ್ನು ರೂಪಿಸಲು ಇವು ಯತ್ನಿಸಿದುವು.

ಇವುಗಳದು ದೈತ್ಯಾಕಾರ. ಇವು ದಕ್ಷವಾಗಿದ್ದುವು. ಇವು ಶಕ್ತವಾಗಿದ್ದುವು. ಆದ್ದರಿಂದಲೇ ಇವು ಉತ್ಪಾದನ, ಮಾರಾಟ, ಆಡಳಿತ ಮುಂತಾದುವುಗಳಲ್ಲಿ ಮಿತವ್ಯಯ ಸಾಧಿಸಿ, ಉತ್ಪಾದನ ವೆಚ್ಚ ತಗ್ಗಿಸಲು ಶಕ್ತವಾಗಿದ್ದುವು. ವ್ಯರ್ಥಕರ ಮೇಲಾಟವನ್ನು ಕೊನೆಗೊಳಿಸಲು ಇವು ಮಾಡಬಹುದಾದ್ದನ್ನು ಮಾಡಿದವು. ಉತ್ಪನ್ನ ಬೆಲೆಗಳನ್ನು ಗೊತ್ತುಪಡಿಸಲು ಸಾಧ್ಯವಾಗುವಂತೆ ಇವು ಪದಾರ್ಥೋತ್ಪಾದನೆಯ ಮೇಲೆ ಹತೋಟಿ ಹೊಂದಲು ಯತ್ನಿಸಿದುವು. ಉತ್ಪನ್ನದ ಪ್ರಮಾಣ ನಿಷ್ಕರ್ಷೆ, ಬೆಲೆಗಳ ನಿಷ್ಕರ್ಷೆ—ಇವೆರಡರಲ್ಲಿ ಯಾವುದಾದರೊಂದನ್ನೋ—ಅಥವಾ ಎರಡನ್ನೂವೋ—ಯಾವುದು ಹೆಚ್ಚು ಲಾಭ ತರುವುದೋ ಅದನ್ನು—ಮಾಡಿದುವು. ಹೆಚ್ಚು ಲಾಭದಲ್ಲೇ ಅವಕ್ಕೆ ಆಸಕ್ತಿಯಿತ್ತೆಂಬುದನ್ನು ಈ ಕೂಟ ಚಳವಳಿಯ ಯಾವ ವಿದ್ಯಾರ್ಥಿಯಾದರೂ ಹೇಳುವನು. ಅದರ ಲಕ್ಷಣ ವಿವರಣೆಯನ್ನೇ ಓದಿ: "ಯಾವುದಾದರೂ ಒಂದು ಪದಾರ್ಥದ ಸರಬರಾಯಿಯಲ್ಲಿ ಸಾಕಷ್ಟು ಹತೋಟಿ ಹೊಂದಿದ್ದು, ಅದರ ಬೆಲೆಯನ್ನು ತನ್ನ ಸ್ವಂತ ಅನುಕೂಲಕ್ಕಾಗಿ ಬದಲಾಯಿಸಬಲ್ಲ ಸಾಮರ್ಥ್ಯ ಹೊಂದುವ ಸಲುವಾಗಿ, ಆ ಪದಾರ್ಥದ ಉತ್ಪಾದನೆ ವಿತರಣೆಗಳಿಗೆ ಸಂಬಂಧಿಸಿದ ಕೈಗಾರಿಕಾ ಸಂಘಟನೆಯ ರೂಪವೇ ಕೈಗಾರಿಕಾ ಕೂಟ."[1]

ಈ ಕೂಟ "ತನ್ನ ಸ್ವಂತ ಅನುಕೂಲಕ್ಕಾಗಿ ಬೆಲೆ ಬದಲಾಯಿಸ" ಬಲ್ಲುದಾಗಿತ್ತು. ಇತರ ಬೃಹತ್ ಸಂಸ್ಥೆಗಳೂ ಈ ಶಕ್ತಿ ಹೊಂದಿದ್ದವು. ಟ್ರಸ್ಟ್ ಎಂಬ ಕೈಗಾರಿಕಾ ಕೂಟ ಅಮೆರಿಕದ್ದು. ಪೂಲ್ (ಹಂಚಿಕೆ ವ್ಯಾಪಾರ ಕೂಟ), ಕಂಬೈನ್ (ಒಕ್ಕೂಟ), ಅಸೋಸಿಯೇಷನ್ (ಸಂಘ), ಕಾರ್ಟೆಲ್ (ಕಾರ್ಖಾನೆಗಾರರ ಸಂಘ) ಇವು ಇತರ ಬಗೆಯ ಕೂಟಗಳು. ಇವೂ ಕೂಡ ಅಮೆರಿಕಾದಲ್ಲೂ, ಇತರ ದೇಶಗಳಲ್ಲೂ, ಸಾಮಾನ್ಯವಾದುವು. ಜರ್ಮನಿಯಲ್ಲಿ ಕಾರ್ಟೆಲ್ಲು ಬಹು ಸಾಮಾನ್ಯವಾಯಿತು. "ಒಂದೇ ವ್ಯಾಪಾರ ಕ್ಷೇತ್ರದಲ್ಲಿರುವ ಸಂಸ್ಥೆಗಳು, ತಮ್ಮ ದತ್ತ ಸ್ವಾತಂತ್ರ್ಯ ಕಳೆದುಕೊಳ್ಳದೆ, ಪೇಟೆಯ ಮೇಲೆ ಏಕಸ್ವಾಮ್ಯಾಧಿಕಾರ ಚಲಾಯಿಸುವ ಉದ್ದೇಶದಿಂದ ಸಂಸ್ಥೆಗಳ ನಡುವಣ ಕಾನೂನುಬದ್ಧ ಕರಾರಿನ ಆಧಾರದ ಮೇಲೆ ರಚಿತವಾದ ಸಂಘವೇ ಕಾರ್ಟೆಲ್."[2]

ಇದರಿಂದ ವೇದ್ಯವಾಗುವ ವಿಚಾರವೆಂದರೆ, ನಾನಾ ದೊಡ್ಡ ಉತ್ಪಾದಕರು ಬೆಲೆ ಇಳಿಸಿ ಕೊನೆಯುವರೆಗೂ ಯುದ್ಧಸಾಗಿಸುವುದನ್ನು ಬಿಟ್ಟು, ಎಲ್ಲಾ ಒಂದಾಗಿ ಸೇರಿ ಒಂದು ವ್ಯವಸ್ಥೆ ರಚಿಸಿಕೊಳ್ಳುವರು. ಆದರೂ ಅವರು ತಮ್ಮ ಪ್ರತ್ಯೇಕತೆ ಉಳಿಸಿಕೊಳ್ಳುವರು. ತಂತಮ್ಮಲ್ಲೇ ಪೈಪೋಟಿ ನಿಲ್ಲಿಸುವರು. ಪೇಟೆಯನ್ನು ಪಾಲು ಮಾಡಿಕೊಳ್ಳುವ

---

[1] J. W. Jenks, W. E. Clark, *The Trust Problem*, 5th ed., p. 29. Doubleday, Doran & Company, Inc., 1929.

[2] *The Encyclopaedia of Social Sciences*, vol. 3, p. 234, article by R. Liefmann, The Macmillan Company, N. Y.

ವಿಚಾರದಲ್ಲೂ ಬೆಲೆಗಳ ವಿಚಾರದಲ್ಲೂ ಅವರು ಒಪ್ಪಂದ ಮಾಡಿಕೊಳ್ಳುವರು.

ರ್ಹ್ಯೂರ್ ಕಲ್ಲಿದ್ದಲು ಕಾರ್ಟೆಲಿನ ವಿಶಿಷ್ಟ ಉದಾಹರಣೆ ತೆಗೆದುಕೊಂಡರೆ ಇದು ಹೇಗಾಯಿತೆಂಬುದು ಸ್ಪಷ್ಟವಾಗುತ್ತದೆ. "ಒಂದು ಕೇಂದ್ರ ಮಾರಾಟ ಸಿಂಡಿಕೇಟು ಅಥವಾ ಕಂಪೆನಿಯ ಸ್ಥಾಪನೆಯಾಯಿತು....ಇದರ ಷೇರುಗಳನ್ನು ಈ ಪ್ರತ್ಯೇಕ ಕಂಪೆನಿಗಳೇ ಪಡೆದುವು. ಈ ಸಿಂಡಿಕೇಟು ಕಲ್ಲಿದ್ದಲ ಮಾರಾಟದ ಸಂಪೂರ್ಣ ಸ್ವಾಮ್ಯ ಪಡೆಯಿತು. ಇದು ಪ್ರತ್ಯೇಕ ಕಲ್ಲಿದ್ದಲು ಕಂಪೆನಿಗಳಿಂದ ಅಂಕಿ ಅಂಶ ಪಡೆಯಿತು. ಒಂದೇ ಸಮನಾದ ಬೆಲೆ ಹಾಗೂ ಹಣ ಪಾವತಿಯ ಏರ್ಪಾಟು ಮಾಡುವ ಒಂದು ಆಡಳಿತ ಸಮಿತಿಯನ್ನು ಇದು ನೇಮಕ ಮಾಡಿತು. ಗಣಿ ಒಡೆಯರು ತಮ್ಮ ಎಲ್ಲ ಕಲ್ಲಿದ್ದಲು ಕಿಟ್ಟವನ್ನು ಈ ಸಿಂಡಿಕೇಟಿಗೇ ಮಾರಿದರು....ಒಪ್ಪಂದ ಮುರಿದಾಗ ಅದು ದಂಡ ವಿಧಿಸಿತು; ಎಲ್ಲ ಸಂಸ್ಥೆ ಗಳಿಗೂ ಸಾಮಾನ್ಯ ನೀತಿ ವಿಧಿಸಿತು. ಪ್ರತಿ ಗಣಿಯೂ ತೆಗೆಯಬಹುದಾದ ಉತ್ಪನ್ನದ ಪ್ರಮಾಣ ನಿಷ್ಕರ್ಷಿಸಲು ಸಿಂಡಿಕೇಟು ಒಂದು ಸಮಿತಿ ನೇಮಿಸುತ್ತಿತ್ತು.

"ಮಾರಾಟದ ಕನಿಷ್ಟ ಬೆಲೆಯನ್ನು ಅದು ನಿಷ್ಕರ್ಷಿಸುತ್ತಿತ್ತು; ಮೇಲಾಟವಿದ್ದ ಜಿಲ್ಲೆ ಗಳಲ್ಲಿ ಈ ಬೆಲೆಗೆ ಮಾರುತ್ತಿತ್ತು. ಮೇಲಾಟವಿಲ್ಲದಿದ್ದ ಜಿಲ್ಲೆಗಳಲ್ಲಿ ಅದು ಇದಕ್ಕಿಂತ ಹೆಚ್ಚು ಬೆಲೆಗೋ ಕಡಮೆ ಬೆಲೆಗೋ—ಬೇಡಿಕೆ ಹಾಗೂ ಉತ್ಪನ್ನಗಳಿಗೆ ಅನುಗುಣವಾಗಿ —ಮಾರಾಟ ಮಾಡುತ್ತಿತ್ತು."[1]

ಇಂಗ್ಲೆಂಡಿನಲ್ಲೂ ಕೂಡ ಈ ಸ್ಪರ್ಧಾನಿರತ ಗುಂಪುಗಳು ತಂತಮ್ಮಲ್ಲೇ ಸ್ಪರ್ಧೆ ಕೊನೆಗೊಳಿಸುವ ಉದ್ದೇಶದಿಂದ ಸಂಘ ರಚಿಸಿಕೊಳ್ಳುವ ಪ್ರವೃತ್ತಿ ಕಂಡು ಬಂತು. ಕೂಟ ಪರಿಶೀಲನಾ ಸಮಿತಿಯ ಮುಂದೆ ಸಾಕ್ಷ್ಯ ನೀಡಿದ ನಾನಾ ಪ್ರತಿನಿಧಿಗಳೇ ತಮ್ಮ ಕತೆ ಹೇಳಿಕೊಳ್ಳಲಿ.

"ವ್ಯಾಪಾರವನ್ನು ನಿಯಂತ್ರಣಗೊಳಿಸಿ ಅನವಶ್ಯಕ ಸ್ಪರ್ಧೆ ನಿವಾರಿಸುವ ಉದ್ದೇಶದಿಂದ ನಮ್ಮ ಸಂಘ ಸ್ಥಾಪಿತವಾಯಿತು....

"ಬೆಲೆಗಳ ವಿಚಾರದಲ್ಲಿ ಒಡಂಬಡಿಕೆ ಏರ್ಪಡಿಸಿ, ಬೆಲೆ ಇಳಿಕೆಯ ನಿವಾರಣೆಯ ಸಾಧನವಾಗಲು ನಮ್ಮ ಸಂಘ ಸ್ಥಾಪಿತವಾಯಿತು. ನಮ್ಮ ಸಂಘ ಸ್ಥಾಪನೆಯಾಗುವ ಮುನ್ನ, ಬೆಲೆ ಇಳಿಸುವ ಕ್ರಮಗಳು ತಕ್ಕಮಟ್ಟಿಗೆ ಜರುಗುತ್ತಿದ್ದುವು. ತತ್ಫಲವಾಗಿ ಹಲವು ಸಂಸ್ಥೆಗಳು ಲಾಭವನ್ನೇ ಗಳಿಸುತ್ತಿರಲಿಲ್ಲ. ಗಳಿಸಿದರೂ ಅದು ಬಹು ಅಲ್ಪ.

"ಪೈಪೋಟಿ ಬಹು ಬಿರುಸಾಗಿತ್ತು....ಇದರ ಫಲವಾಗಿ ವ್ಯಾಪಾರದಿಂದ ಯಾರೂ ಲಾಭ ಗಳಿಸುವಂತಿರಲಿಲ್ಲ. ಉತ್ಪಾದಕರು ಅಗತ್ಯವಾದ್ದಕ್ಕಿಂತ ಹೆಚ್ಚು ತಯಾರಿಸುತ್ತಿದ್ದರು. ಒಬ್ಬರೊಬ್ಬರ ಕತ್ತು ಹಿಸುಕುವುದರಲ್ಲೇ ಇವರು ಉದ್ಯುಕ್ತರಾಗಿದ್ದರು."

ಸಾಕ್ಷಿಗಳ ಹೇಳಿಕೆಗಳನ್ನೆಲ್ಲಾ ಕೇಳಿಯಾದ ಮೇಲೆ ಈ ಸಮಿತಿ ಈ ಮುಖ್ಯ ತೀರ್ಮಾನಕ್ಕೆ ಬಂತು: ಪ್ರಸಕ್ತ ಸಮಯದಲ್ಲಿ (೧೯೧೯) ಇಂಗ್ಲೆಂಡಿನ ಕೈಗಾರಿಕೆಯ

---

[1] J. Morgan Rees. *Trusts in British Industry, 1914-1921*, p. 12: King & Son London, 1923.

ಪ್ರತಿಯೊಂದು ಶಾಖೆಯಲ್ಲೂ ವ್ಯಾಪಾರ ಸಂಘಗಳನ್ನೂ ಕೂಟಗಳನ್ನೂ ಸ್ಥಾಪಿಸಿಕೊಳ್ಳುವ ಪ್ರವೃತ್ತಿ ಹೆಚ್ಚು ಹೆಚ್ಚಾಗಿ ಕಾಣಬರುತ್ತಿದೆ. ಪೈಪೋಟಿಯ ಪರಿಮಿತಿ ಕಲ್ಪನೆ, ಬೆಲೆಗಳ ನಿಯಂತ್ರಣ—ಇವೇ ಇವುಗಳ ಉದ್ದೇಶ."

ಮೇಲಣ ಮಾತುಗಳ ಕೊನೆಯ ಸಾಲಿನಿಂದ ನಿಜ ಚಿತ್ರದ ಅರಿವಾಗುತ್ತದೆ—"ಪೈಪೋಟಿಯ ಪರಿಮಿತಿ ಕಲ್ಪನೆ, ಬೆಲೆಗಳ ನಿಯಂತ್ರಣ." ಪ್ರೌಢ ಪ್ರಾಚೀನ ಅರ್ಥ ಶಾಸ್ತ್ರಜ್ಞರ ಸಂಪ್ರದಾಯಬದ್ಧ ಸಿದ್ಧಾಂತಕ್ಕೂ—ಪದಾರ್ಥದ ಉತ್ಪಾದಕರ ಹಾಗೂ ಮಾರಾಟಗಾರರ ನಡುವಣ ಮೇಲಾಟದಿಂದ ಉತ್ಪಾದನೆಯ ವೆಚ್ಚದ ಮಟ್ಟದಲ್ಲೇ (ನ್ಯಾಯವಾದ ಲಾಭದ ದರವೂ ಸೇರಿ) ಬೆಲೆಗಳು ಇರುವಂತಾಗುತ್ತದೆಯೆಂಬ ಸಿದ್ಧಾಂತಕ್ಕೂ—ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಸ್ವಂತ ಹಿತ ಬೆಳಸಿಕೊಳ್ಳುವ ಯತ್ನದ ಫಲವಾಗಿ, ಒಂದು ಪದಾರ್ಥದ ಸರಬರಾಯಿ ಅದರ ಬೆಲೆಗೆ ತಕ್ಕ ಬೇಡಿಕೆಗೆ ಅನುಗುಣವಾಗಿ ಹೊಂದಿಕೊಳ್ಳುವುದೆಂಬ ಸಿದ್ಧಾಂತಕ್ಕೂ—ಈ ಹೊಸ ಅಭ್ಯಾಸಕ್ಕೂ ಅಜಗಜಾಂತರ.

ಏಕಸ್ವಾಮ್ಯದ ಬೆಳವಣಿಗೆಯ ಫಲವಾಗಿ ಸರಬರಾಯಿ, ಹಾಗೂ ಬೇಡಿಕೆ ಇವು ತಾವಾಗಿಯೇ ಒಂದಕ್ಕೊಂದು ಹೊಂದಿಕೊಳ್ಳುವುದು ಸಾಧ್ಯವಾಗಲಿಲ್ಲ—ಬದಲಾಗಿ ಇವು ಹೊಂದಿಕೊಳ್ಳುವಂತೆ ಮಾಡಲಾಯಿತು. ಏಕಸ್ವಾಮ್ಯ ಬೆಳೆದಾಗ ನಿರುಪಾಧಿಕ ಪೇಟೆಯಲ್ಲಿನ ಸ್ಪರ್ಧೆಯ ಮೂಲಕ ಬೆಲೆಗಳು ನಿಷ್ಕರ್ಷಿತವಾಗಲಿಲ್ಲ. ಪೇಟೆಯ ನಿರುಪಾಧಿಕತೆ, ಸ್ವಾತಂತ್ರ್ಯ, ಎಂದೋ ಮಾಯವಾಗಿತ್ತು. ಬೆಲೆಗಳು ಏಕಸ್ವಾಮ್ಯಗಳಿಂದ ಖಚಿತಗೊಳಿಸಲ್ಪಡುತ್ತಿದ್ದುವು.

ಕೈಗಾರಿಕೆಗೆ ಬಂದ ಏಕಸ್ವಾಮ್ಯವಷ್ಟೇ ಅಲ್ಲ. ಇನ್ನೂ ಒಂದು ಪರಿಸ್ಥಿತಿ ತಲೆದೋರಿತು. ಕೈಗಾರಿಕೆಯ ಏಕಸ್ವಾಮ್ಯಕ್ಕಿಂತ ಹೆಚ್ಚಲ್ಲದಿದ್ದರೂ ಅಷ್ಟೇ ಮುಖ್ಯವಾದದ್ದು ಇದು—ಬ್ಯಾಂಕು ವ್ಯವಹಾರದ ಏಕಸ್ವಾಮ್ಯ. ದೊಡ್ಡ ಪ್ರಮಾಣದ, "ಬಂಡವಾಳ ರೀತಿಯ ಉತ್ಪಾದನೆಯೊಂದಿಗೆ ಇನ್ನೊಂದು ಪೂರಾ ನವೀನ ಶಕ್ತಿಯೊಂದರ ಆವಿರ್ಭಾವವಾಗುತ್ತದೆ. ಅದು ಉದ್ದರಿ ವ್ಯವಸ್ಥೆ, ಪತ್ತಿನ ವ್ಯವಸ್ಥೆ. ಸ್ಪರ್ಧೆಯ ಯುದ್ಧದಲ್ಲಿ ಇದು ಒಂದು ನವೀನವಾದ ಮಹಾಸ್ತ್ರ. ಅಷ್ಟೇ ಅಲ್ಲ. ಕಾಣದ ಸೂತ್ರಗಳ ಸಹಾಯದಿಂದ, ಸಣ್ಣ ದೊಡ್ಡ ಪ್ರಮಾಣಗಳಲ್ಲಿ ಸಮಾಜದ ಮೇಲ್ಮೈಯಲ್ಲಿ ಹರಡಿ ಹೋಗಿರುವ ವಿನಿಯೋಗಾರ್ಹ ಹಣವನ್ನೆಲ್ಲ ಸೆಳೆದು ಬಂಡವಾಳಿಗ ವ್ಯಕ್ತಿಗಳ ಕೈಯಲ್ಲೋ ಸಂಸ್ಥೆಗಳ ಕೈಯಲ್ಲೋ ಇಕ್ಕುತ್ತದೆ. ಬಂಡವಾಳಗಳ ಕೇಂದ್ರೀಕರಣಕ್ಕಾಗಿ ಏರ್ಪಟ್ಟ ವಿಶಿಷ್ಟ ಯಂತ್ರವಿದು."[1]

ಕೈಗಾರಿಕೆ ಬಹುವಾಗಿ ಪತ್ತಿನ ಮೂಲಕವೇ (Credit)—ಉದ್ದರಿಯ ಮೂಲಕವೇ—ನಡೆಯುತ್ತಿತ್ತು. ಈ ಉದ್ದರಿಯ ವ್ಯವಸ್ಥೆಯ ಹತೋಟಿ ಹೊಂದಿದ್ದ ಹಣದ ವಹಿವಾಟುದಾರರೇ ಅಧಿಕಾರದ ಸ್ಥಾನಗಳಲ್ಲಿದ್ದರು. ಸಣ್ಣ-ದೊಡ್ಡ, ಏಕಸ್ವಾಮ್ಯ ಪಡೆದ ಅಥವಾ ಪಡೆಯದ, ಕೈಗಾರಿಕೋದ್ಯಮಿಗಳು ತಮ್ಮ ವ್ಯಾಪಾರ ವಿಸ್ತರಿಸುವ ಸಲುವಾಗಿ ಹಣ

---

[1] *Capital*, vol. I, p. 641.

ಬಯಸಿದಾಗ, ಅವರು ಟೊಪ್ಪಿಗೆ ಕೈಯಲ್ಲಿ ಹಿಡಿದು, ಬ್ಯಾಂಕರುಗಳ ಬಳಿಗೆ ಹೋಗ ಬೇಕಿತ್ತು. ಒಂದು ಗುಂಪು ಜನ ವ್ಯಾಪಾರ ಆರಂಭಿಸುವ ಉದ್ದೇಶ ಹೊಂದಿ, ಹಣ ಪಡೆಯಲಿಕ್ಕಾಗಿ ಷೇರು-ಸ್ಟಾಕುಗಳ ಮಾರಾಟ ಮಾಡ ಬಯಸಿದರೆ, ಅವರು ಬ್ಯಾಂಕುಗಳ ಬಳಿಗೆ ಹೋಗಿ ಕೇಳಿಕೊಳ್ಳಬೇಕಿತ್ತು. ಏಕೆಂದರೆ, ಸ್ಟಾಕು ಷೇರುಗಳ ನೀಡಿಕೆಯನ್ನು ಜನರಲ್ಲಿ ಹೂಡುವ ಕೆಲಸ ಬ್ಯಾಂಕರುಗಳದಾಗಿತ್ತು. ಎಲ್ಲೆಲ್ಲೂ ಹಣ ಬೇಕು. ರಾಷ್ಟ್ರದ ಹಣ ಬ್ಯಾಂಕರುಗಳ ಖಜಾನೆಗಳಲ್ಲಿ—ಅಥವಾ ಅವರುಗಳಿಗೆ ಮಾತ್ರ ಪ್ರವೇಶವಿದ್ದ ಯಾವುದೋ ಒಂದು ಎಡೆಯಲ್ಲಿ.

ಬ್ಯಾಂಕರುಗಳು ಹೆಚ್ಚು ಹೆಚ್ಚು ಹಣದ ಹತೋಟಿ ಹೊಂದಿದಷ್ಟೂ ಅವರ ಅಧಿಕಾರ ಹೆಚ್ಚಿತು. ಪ್ರತಿಯೊಂದು ಮಹಾ ಕೈಗಾರಿಕಾ ರಾಷ್ಟ್ರದಲ್ಲೂ ಒಂದು ಹಣದ ಕೂಟ (**Money Trust**) ಏರ್ಪಟ್ಟಿತು. ಕೈಗಾರಿಕೆಯಲ್ಲಿ ಏಕಸ್ವಾಮ್ಯದ ಯುಗದೊಂದಿಗೆ ಬ್ಯಾಂಕ್ ಉದ್ಯಮದ ಏಕಸ್ವಾಮ್ಯದ ಯುಗದ ಆರಂಭವೂ ಆಯಿತು. ಇದು ನಿಜವೆಂಬುದು, ೧೯೧೧ರಲ್ಲಂತೂ ಬಹು ನಿಜವೆಂಬುದು, ವುಡ್‌ರೋ ವಿಲ್ಸನ್ನನ ಈ ಮಾತುಗಳಿಂದ ಸ್ಪಷ್ಟ ಪಡುತ್ತದೆ. ಆ ಕಾಲಕ್ಕೆ ಇವನು ನ್ಯೂಜರ್ಸಿಯ ಗೌರ್ನರಾಗಿದ್ದ : "ನಮ್ಮ ದೇಶದ ಮಹಾ ಏಕಸ್ವಾಮ್ಯವೆಂದರೆ ಹಣದ ಏಕಸ್ವಾಮ್ಯ. ಇದು ಇರುವ ವರೆಗೂ ನಮ್ಮ ಪುರಾತನ ವೈವಿಧ್ಯ, ಸ್ವಾತಂತ್ರ್ಯ, ಪುರೋಗಮನ, ವೈಯಕ್ತಿಕ ಚೇತನ ಇವು ಸಾಧ್ಯವಿಲ್ಲ. ಒಂದು ದೊಡ್ಡ ಕೈಗಾರಿಕಾ ರಾಷ್ಟ್ರ, ಅದರ ಉದ್ದರಿ ವ್ಯವಸ್ಥೆಯ ಹತೋಟಿಯಲ್ಲಿರುತ್ತದೆ. ನಮ್ಮ ಉದ್ದರಿ ವ್ಯವಸ್ಥೆ ಕೇಂದ್ರೀಕೃತ. ಆದ್ದರಿಂದ ರಾಷ್ಟ್ರದ ಬೆಳವಣಿಗೆಯೂ ನಮ್ಮ ಎಲ್ಲ ಚಟುವಟಿಕೆಗಳೂ ಕೆಲವು ಜನರ ಕೈಯಲ್ಲಿರುತ್ತವೆ."[1]

ಈ "ಕೆಲವು ಜನ" ಹಣದ ವಹಿವಾಟುದಾರರೂ ಕೈಗಾರಿಕಾ ಏಕಸ್ವಾಮ್ಯಗಳ ನಾಯಕರಾಗಿದ್ದವರೂ ಒಂದೇ ಆಗಿರುತ್ತಿದ್ದುದೂ ಸಾಮಾನ್ಯ. "ಡೈರೆಕ್ಟರುಗಳ (ನಿರ್ವಾಹಕರ) ಹೆಣಿಕೆ"ಯೂ ಸಂಭವಿಸಿತು. ಎಂದರೆ ಬ್ಯಾಂಕಿಂಗ್ ಪ್ರಪಂಚದ ಮುಖ್ಯ ವ್ಯಕ್ತಿಗಳೇ ಮಹಾಕೂಟಗಳ ಅಥವಾ ದೈತ್ಯ ಸಂಸ್ಥೆಗಳ ನಿರ್ವಾಹಕ ಮಂಡಲಿಯಲ್ಲೂ ಇದ್ದರು. ಈ ಸಂಸ್ಥೆಗಳಲ್ಲಿ ಇವರು ಆಸಕ್ತಿ ಹೊಂದಿದ್ದರು. ಎಂದರೆ ಇವರ ಬ್ಯಾಂಕುಗಳು ಈ ಸಂಸ್ಥೆಗಳಲ್ಲಿ ಹೆಚ್ಚು ಹಣ ಹಾಕಿದ್ದುವು.

ಆದರೆ ಇವು ಇಷ್ಟೊಂದು ಸಮೀಪ ಸಂಬಂಧ ಹೊಂದಿರಬೇಕಾದ ಅಗತ್ಯವಿರಲಿಲ್ಲ. ಬ್ಯಾಂಕರುಗಳು ಹಣದ ಚೀಲದ ಬಾಯಿ ಹುರಿ ಹಿಡಿದಿದ್ದೇ ಸಾಕಿತ್ತು. ಕೈಗಾರಿಕಾ ಸಂಸ್ಥೆಗಳ ನೀತಿ ನಿರ್ದೇಶನ ಮಾಡಲು ಇದರಿಂದಲೇ ಅವರಿಗೆ ಸಾಕಷ್ಟು ಅಧಿಕಾರ ದೊರಕಿತ್ತು. ೧೯೦೧ರಲ್ಲಿ ಬರ್ಲಿನ್ನಿನ "ಚತುರ್ ಮಹಾ"ಬ್ಯಾಂಕುಗಳ ಪೈಕಿ ಒಂದು, ಜರ್ಮನಿಯ ಸಿಮೆಂಟ್ ಸಿಂಡಿಕೇಟ್ ಒಂದರ ನಿರ್ವಾಹಕ ಮಂಡಲಿಗೆ ಬರೆದ ಪತ್ರವೊಂದರಿಂದ ಈ ಮಾತಿನ ಸತ್ಯ ಸ್ಪಷ್ಟವಾಗುತ್ತದೆ. "ನಿಮ್ಮ ಕಂಪೆನಿಯ ಉದ್ಯಮಗಳಲ್ಲಿ ಮಾರ್ಪಾಟು ಮಾಡುವ

---

[1] Quoted in *Other People's Money* (1914), by L. D. Brandeis, p. 1. National Home Library Assn., Washington, D. C., 1933.

ವಿಚಾರವಾಗಿ ನಿಮ್ಮ ಕಂಪೆನಿಯ ಮುಂದಣ ಸಾಮಾನ್ಯ ಸಭೆಯನ್ನು ಕೇಳಲಿರುವಿರೆಂಬ ವಿಷಯ ನಮ್ಮ ಗಮನಕ್ಕೆ ಬಂದಿದೆ. ಈ ಬದಲಾವಣೆಗಳನ್ನು ನಾವು ಒಪ್ಪುವುದಿಲ್ಲ. ಈ ಕಾರಣದಿಂದಾಗಿ ನಿಮಗೆ ಕೊಡಲಾಗಿದ್ದ ಉದ್ದರಿಯ ಸೌಲಭ್ಯವನ್ನು ನಾವು ಹಿಂತೆಗೆದು ಕೊಳ್ಳಲೇ ಬೇಕಾಗಿದೆಯೆಂದು ತಿಳಿಸಲು ತುಂಬಾ ವಿಷಾದಿಸುತ್ತೇನೆ. ನಮಗೆ ಒಪ್ಪಿಗೆಯಾಗದ ಯಾವ ತೀರ್ಮಾನಕ್ಕೂ ಮೇಲ್ಕಂಡ ಸಾಮಾನ್ಯ ಸಭೆ ಬಾರದಿದ್ದರೆ, ಮುಂದೆಯೂ ಈ ರೀತಿ ಆಗದೆಂಬುದಾಗಿ ಸೂಕ್ತ ಭರವಸೆ ನಮಗೆ ಬಂದರೆ, ಹೊಸ ಉದ್ದರಿ ಲೆಕ್ಕ ತೆರೆಯುವ ವಿಚಾರವಾಗಿ ನಿಮ್ಮೊಡನೆ ಸಂಧಾನ ನಡಸಲು ನಮ್ಮ ಅಭ್ಯಂತರವಿರುವುದಿಲ್ಲ."[1]

ಒಂದು ದೊಡ್ಡ ಸಿಂಡಿಕೇಟನ್ನು ಈ ರೀತಿ ತಮ್ಮ ತಾಳಕ್ಕೆ ತಕ್ಕಂತೆ ಕುಣಿಯಬೇಕೆಂದು ಹೇಳುವ ಧಾರ್ಷ್ಟ್ಯ ಹಣದ ವಹಿವಾಟುದಾರರಿಗೆ ಇದ್ದರೆ, ಕೈಗಾರಿಕಾ ಪ್ರಪಂಚದ ಸಣ್ಣ ಪುಟ್ಟ ಸಂಸ್ಥೆಗಳ ಮೇಲೆ ಇವರು ಎಷ್ಟು ಅಗಾಧ ಹತೋಟಿ ಹೊಂದಬಹುದೆಂಬುದನ್ನು, ಹೊಂದಿದ್ದಾರೆಂಬುದನ್ನು, ಊಹಿಸಿಕೊಳ್ಳಿ.

ಪರಮೋನ್ನತ ನ್ಯಾಯಾಲಯದ ನ್ಯಾಯಾಧಿಪತಿ ಲೂಯಿ ಡಿ. ಬ್ರ್ಯಾಂಡೀಸ್ ಎಂಬುವನು ೧೯೧೪ರಲ್ಲಿ ಬರೆದ "ಇತರ ಜನರ ಹಣ" ಎಂಬ ಒಂದು ಪುಸ್ತಕದಲ್ಲಿ ಈ ಪರಿಸ್ಥಿತಿಯನ್ನು ಬಹು ಚೆನ್ನಾಗಿ ವರ್ಣಿಸಿದ್ದಾನೆ: "ನಮ್ಮ ಹಣಕಾಸಿನ ಸ್ವಲ್ಪಜನಾಧಿಕಾರದಲ್ಲಿ (Oligarchy) ಇರುವ ಪ್ರಬಲಾಂಶವೆಂದರೆ ಹಣದ ಹೂಟದ ಬ್ಯಾಂಕರು. ಸಹಭಾಗಿ ಬ್ಯಾಂಕುಗಳು, ಟ್ರಸ್ಟ್ ಕಂಪೆನಿಗಳು, ಜೀವವಿಮಾ ಸಂಸ್ಥೆಗಳು ಇವು ಈತನ ಕೈದುಗಳು. ಹತೋಟಿಗೊಳಪಟ್ಟ ರೈಲು ರಸ್ತೆಗಳೂ, ಸಾರ್ವಜನಿಕ ಸೇವೆಯ ಹಾಗೂ ಕೈಗಾರಿಕಾ ಕಾರ್ಪೊರೇಷನ್ನುಗಳೂ, ಇವನ ಅಧೀನ. ವಾಸ್ತವವಾಗಿ ಕೇವಲ ಮಧ್ಯವರ್ತಿಗಳಾದ ಈ ಬ್ಯಾಂಕರುಗಳು ಯಜಮಾನರಂತೆ ಅಮೆರಿಕದ ವ್ಯವಹಾರ ಪ್ರಪಂಚದ ಮೇಲೆ ಸವಾರಿ ಮಾಡುತ್ತಾರೆ. ಇವರು ಭಾಗವಹಿಸದ, ಅಥವಾ ಇವರ ಒಪ್ಪಿಗೆಯಿಲ್ಲದ ಯಾವ ದೊಡ್ಡ ಉದ್ಯಮವನ್ನೂ ಯಶಸ್ವಿಯಾಗಿ ಆರಂಭಿಸುವಂತೆಯೇ ಇಲ್ಲ. ಈ ಬ್ಯಾಂಕರುಗಳು ಹೆಚ್ಚು ಹಣ ಹೊಂದಿರುವ ಸಮರ್ಥ ಜನರೆಂಬುದೇನೋ ನಿಜ. ಆದರೆ ವ್ಯಾಪಾರ ಹತೋಟಿಯಲ್ಲಿಟ್ಟುಕೊಳ್ಳುವ ಈ ಕಾರ್ಯದಲ್ಲಿ ಮುಖ್ಯವಾದದ್ದು ಅಸಾಧಾರಣ ಸಾಮರ್ಥ್ಯ ಅಥವಾ ಅಗಾಧ ಸಂಪತ್ತಲ್ಲ. ಇವರ ಅಗಾಧ ಅಧಿಕಾರಕ್ಕೆ ಮುಖ್ಯ ಕಾರಣ ಒಕ್ಕೂಟ—ತೀವ್ರವಾದ, ವ್ಯಾಪಕವಾದ ಕೇಂದ್ರೀಕರಣ."[2]

೧೮೭೦ರ ಅನಂತರ ಹಳೆಯ ಮಾದರಿಯ ಬಂಡವಾಳಷಾಹಿ ಹೋಗಿ ಹೊಸ ಮಾದರಿಯ ಬಂಡವಾಳಷಾಹಿ ಬಂತು; ಸ್ವತಂತ್ರ ಮೇಲಾಟದ, ನಿರುಪಾಧಿಕ ಮೇಲಾಟದ ಬಂಡವಾಳ ವ್ಯವಸ್ಥೆ ಹೋಗಿ ಏಕಸ್ವಾಮ್ಯಗಳ ಬಂಡವಾಳ ವ್ಯವಸ್ಥೆ ಬಂತು. ಇದು ಪ್ರಚಂಡವಾದ ಪ್ರಾಮುಖ್ಯ ಹೊಂದಿದ ವ್ಯತ್ಯಾಸ.

---

[1] V. I. Lenin, *Imperialism* (1916), revised translation, 2nd ed., p. 42. Martin Lawrence, London, 1934.

[2] *Other People's Money*, p. 3.

ದೊಡ್ಡ ಪ್ರಮಾಣದ ಏಕಸ್ವಾಮ್ಯದ ಕೈಗಾರಿಕೆಯೊಡನೆ ಹಿಂದೆಂದೂ ಇಲ್ಲದಷ್ಟು ಅಗಾಧವಾಗಿ ಉತ್ಪಾದನ ಶಕ್ತಿಗಳ ಬೆಳವಣಿಗೆಯೂ ಆಯಿತು. ಕೈಗಾರಿಕೋದ್ಯಮಿಗಳ ಪದಾರ್ಥೋತ್ಪಾದನ ಶಕ್ತಿ ತಮ್ಮ ದೇಶದ ಜನ ಈ ಪದಾರ್ಥಗಳನ್ನು ಬಳಸು ವುದಕ್ಕಿಂತ ಹೆಚ್ಚಿನ ವೇಗದಲ್ಲಿ ಬೆಳೆಯಿತು. (ಹೀಗೆಂದರೆ, ಲಾಭದಾಯಕವಾದ ಬಳಕೆ ಜನ ಯಾವಾಗಲೂ ಇನ್ನೂ ಹೆಚ್ಚು ಪದಾರ್ಥ ಬಳಸಬಹುದಿತ್ತು. ಆದರೆ ಆ ಪದಾರ್ಥಕ್ಕೆ ಹಣ ಕೊಡುವ ಶಕ್ತಿ ಅವರಲ್ಲಿರಲಿಲ್ಲ.)

ಏಕಸ್ವಾಮ್ಯ ಪಡೆದವರು ತಮ್ಮ ದೇಶದಲ್ಲಿ ಪದಾರ್ಥದ ಬೇಡಿಕೆಗೆ ತಕ್ಕಂತೆ ಅದರ ಸರಬರಾಯಿಯನ್ನು ನಿಯಂತ್ರಿಸಲು ಶಕ್ತರಾಗಿದ್ದರು. ಅವರು ಹಾಗೆಯೇ ಮಾಡಿದರು. ಇದು ವಿವೇಕದ ವ್ಯಾಪಾರ ಪದ್ಧತಿಯೆನಿಸಿತ್ತು. ತತ್ಫಲವಾಗಿ ಅವರಿಗೆ ಹೆಚ್ಚು ಲಾಭ ಬಂತು. ಆದರೆ ಇದರಿಂದ ಅವರ ಉತ್ಪಾದನ ಯಂತ್ರಸ್ಥಾವರದ (Plant) ಹೆಚ್ಚು ಭಾಗ ಕೆಲಸವಿಲ್ಲದೆ ನಿಲ್ಲಬೇಕಾಯಿತು. ಇಂಥ ಪರಿಸ್ಥಿತಿಯಿಂದ ಕೈಗಾರಿಕಾ ನಾಯಕರಿಗೆ ಯಾವಾಗಲೂ ತಲೆನೋವೇ. ಸ್ವದೇಶದಲ್ಲಿ ಮಾರಲು ಸಾಕಷ್ಟೇ ಪದಾರ್ಥ ತಯಾರಿಸು ವುದು ಅವರ ಇಚ್ಛೆಯಾಗಿರಲಿಲ್ಲ. ತಮ್ಮ ಯಂತ್ರಸ್ಥಾವರಗಳನ್ನು ಅವರು ಸದಾ ಬಳಸಿ ಆದಷ್ಟು ಹೆಚ್ಚು ಪದಾರ್ಥ ತಯಾರಿಸಬೇಕೆಂದು ಇಚ್ಛಿಸಿದರು. ಎಂದರೆ ಅವರು ತಮ್ಮ ದೇಶದಿಂದ ಹೊರಗೂ ಇವನ್ನು ಮಾರುವುದು ಅವಶ್ಯವಾಯಿತು. ತಮ್ಮ ಹೆಚ್ಚುವರಿ ಉತ್ಪಾದನೆಯನ್ನು ಸ್ವೀಕರಿಸುವ ವಿದೇಶೀ ಪೇಟೆಗಳನ್ನು ಅವರು ಅರಸುವುದು ಅವಶ್ಯ ವಾಯಿತು.

ಇದನ್ನು ಅವರು ಪತ್ತೆ ಹಚ್ಚುವುದಾದರೂ ಎಲ್ಲಿ? ಇತರ ಐಶ್ವರ್ಯವಂತ ರಾಷ್ಟ್ರಗಳಲ್ಲಿ ತಮ್ಮ ಅಗ್ಗದ ಪದಾರ್ಥ ತುಂಬಲು ಯತ್ನಿಸಬಹುದಿತ್ತು. ಆದರೆ ಈ ಕಾರ್ಯದಲ್ಲಿ ಅವರು ಹೆಚ್ಚು ಹೆಚ್ಚು ಎತ್ತರದ ಸುಂಕದ ಕೋಟೆಗಳನ್ನೆದುರಿಸಬೇಕಾಗಿ ಬಂತು. ಇವುಗಳ ಹಿಂದೆ ಅವರ ಸ್ಪರ್ಧಿಗಳು ಆ ದೇಶದ ಪೇಟೆ ವಶಪಡಿಸಿಕೊಳ್ಳಲು ಶಕ್ತರಾಗಿದ್ದರು. ಫ್ರಾನ್ಸಿನ ಮುಖ್ಯಮಂತ್ರಿಯಾಗಿದ್ದ ಜೂಲ್ಸ್‌ಫೆರ್ರಿ ಎಂಬವನು ೧೮೮೫ರಲ್ಲಿ ಮಾಡಿದ ಈ ಆಕ್ಷೇಪಣೆ ಯನ್ನು ಓದಿ: "ನಮ್ಮ ಮಹಾ ಕೈಗಾರಿಕೆಗಳ ಕೊರತೆಯೆಂದರೆ....ಅವುಗಳ ಅಧಿಕಾಧಿಕ ಕೊರತೆಯೆಂದರೆ, ಪೇಟೆ. ಏಕೆ? ಏಕೆಂದರೆ ಜರ್ಮನಿ ತನ್ನ ಸುತ್ತ ಕಂದಕ ರಚಿಸಿಕೊಂಡಿದೆ, ಕೋಟೆ ಕಟ್ಟಿಕೊಂಡಿದೆ. ಏಕೆಂದರೆ, ಸಾಗರದಾಚೆ, ಅಮೆರಿಕಾ ಸಂಯುಕ್ತ ಸಂಸ್ಥಾನ ರಕ್ಷಣಾ ನೀತಿಯನ್ನು ಅನುಸರಿಸುತ್ತಿದೆ. ಇದರದು ರಕ್ಷಣಾನೀತಿಯ ಪರಮಾವಧಿ."[1]

ಜರ್ಮನಿ ಸಂಯುಕ್ತಸಂಸ್ಥಾನಗಳಂಥ ರಾಷ್ಟ್ರಗಳು ಇತರ ರಾಷ್ಟ್ರಗಳ ಸರಕುಗಳಿಗೆ ನಿರುಪಾಧಿಕ ಪೇಟೆಯಾಗಿ ಮುಂದುವರಿಯಲಿಲ್ಲ. ಇದೊಂದು ಬಹು ಚಿಂತಾಜನಕ ಪರಿಸ್ಥಿತಿ. ಮಹಾ ಕೈಗಾರಿಕೋದ್ಯಮ ರಾಷ್ಟ್ರಗಳೊಳಗೆ ಅವುಗಳ ಉತ್ಪಾದನಸಾಮರ್ಥ್ಯ ಉಪಭೋಗ ಸಾಮರ್ಥ್ಯಕ್ಕಿಂತ ಬಹುವಾಗಿ ಹೆಚ್ಚಿತ್ತು. ಇಲ್ಲೆಲ್ಲಾ ಉತ್ಪಾದಿತ ಪದಾರ್ಥಗಳ

---

[1] Quoted in *Imperialism and World Politics*, by P. T. Moon, p. 27. The Macmillan Company, N. Y., 1932.

ಹೆಚ್ಚುವರಿಯಿತ್ತು. ಇದಕ್ಕಾಗಿ ಇವು ಹೊರಗಣ ಪೇಟೆಗಳನ್ನು ಅರಸುವುದು ಅನಿವಾರ್ಯ ವಾಗಿತ್ತು.

ಆದರೆ ಇವನ್ನು ಪತ್ತೆ ಹಚ್ಚುವುದೆಲ್ಲಿ?

ಈ ಪ್ರಶ್ನೆಗೆ ಒಂದು ಉತ್ತರ—ವಸಾಹತುಗಳು.

ಆಫ್ರಿಕದ ಇಡೀ ನಕ್ಷೆಯ ಮೇಲೆ ನಾನಾ ಬಣ್ಣಗಳನ್ನು ನೋಡಿ ನಮಗೆ ಅಭ್ಯಾಸ ವಾಗಿದೆ. ಹಲವು ಐರೋಪ್ಯ ರಾಷ್ಟ್ರಗಳಿಗೆ ನಾನಾ ಪ್ರದೇಶಗಳು ಅಧೀನವೆಂಬುದನ್ನು ತೋರಿಸಲು ಈ ನಾನಾ ಬಣ್ಣ. ಆದರೆ ಯಾವಾಗಲೂ ಹೀಗಿರಲಿಲ್ಲವೆಂಬುದನ್ನು ನಾವು ಮರೆತಿದ್ದರೂ ಆಶ್ಚರ್ಯವಿಲ್ಲ. ಎಪ್ಪತ್ತು ವರ್ಷಗಳ ಹಿಂದೆ ಹೆಚ್ಚು ಕಡಮೆ ಇಡೀ ಆಫ್ರಿಕ ಅಲ್ಲಿ ವಾಸಿಸುತ್ತಿದ್ದ ಜನಕ್ಕೇ ಸೇರಿತ್ತು. ಏಕಸ್ವಾಮ್ಯವಾದಿ ಬಂಡವಾಳ ವ್ಯವಸ್ಥೆಯ ಯುಗದಲ್ಲಿ ಹೆಚ್ಚುವರಿ ಉತ್ಪಾದನೆಯ ಪ್ರಶ್ನೆ ಎಲ್ಲೆಲ್ಲೂ ಕೈಗಾರಿಕಾ ನಾಯಕರಿಗೆ ಬೃಹತ್ ಸಮಸ್ಯೆಯಾಗಿ ಪರಿಣಮಿಸಿತು. ಈ ಸಮಸ್ಯೆಗೆ ಉತ್ತರ ವಸಾಹತು—ಹೀಗೆಂದು ಅವರು ಭಾವಿಸಿದರು. ಆಗಲೇ ಆಫ್ರಿಕದ ನಕ್ಷೆ ಬದಲಾದದ್ದು.

ಪ್ರಸಿದ್ಧ ಧರ್ಮಪ್ರಚಾರಕ ಡೇವಿಡ್ ಲಿವಿಂಗ್‌ಸ್ಟನ್ ಆಫ್ರಿಕದ ನಟ್ಟನಡುವೆ ಕಣ್ಮರೆಯಾದ. "ನ್ಯೂಯಾರ್ಕ್ ಹೆರಾಲ್ಡ್"ನ ಒಡೆಯ ಜೇಮ್ಸ್ ಗೋರ್ಡನ್ ಬೆನ್ನೆಟ್, ಲಿವಿಂಗ್‌ಸ್ಟನ್ನನನ್ನು ಪತ್ತೆ ಹಚ್ಚಲು ಹೆನ್ರಿ ಮಾರ್ಟನ್ ಸ್ಟಾನ್ಲೇಯನ್ನು ಆಫ್ರಿಕಕ್ಕೆ ಕಳಿಸಿದ. ಎಂಥ ಕೆಲಸದ ನೇಮಕ! ಆದರೆ, ಪವಾಡಕ್ಕಿಂತ ಪವಾಡದ ಸಂಗತಿಯೆಂದರೆ, ಸ್ಟಾನ್ಲೆ ಜಯಶೀಲನಾದ. ಅವನು ಲಿವಿಂಗ್‌ಸ್ಟನ್ನನನ್ನು ಪತ್ತೆ ಹಚ್ಚಿದನಷ್ಟೇ ಅಲ್ಲ. ಅವನು ಇನ್ನಷ್ಟು ಪರಿಶೋಧನ ಪ್ರವಾಸ ಮಾಡಿದ. ಅನಂತರ ಆತ ತನ್ನ ಸಾಹಸಗಳ ಬಗ್ಗೆ ಭಾಷಣ ಮಾಲೆಯನ್ನೇ ನೀಡಿದ. ಅವನ ಶ್ರೋತೃಗಳಿಗೆ ಇದು ಬಹು ರಂಜಕವಾಗಿತ್ತೆಂಬುದರಲ್ಲಿ ಸಂದೇಹವಿಲ್ಲ. ಮ್ಯಾಂಚೆಸ್ಟರಿನ ಹತ್ತಿ ಗಿರಣಿಯ ಉತ್ಪಾದಕರಿಗಿಂತ, ಬರ್ಮಿಂಗ್ ಹ್ಯಾಮಿನ ಕಬ್ಬಿಣದ ತಯಾರಕರಿಗಿಂತ, ಹೆಚ್ಚು ಆಸಕ್ತ ಶ್ರೋತೃಗಳು ಇರಲಿಲ್ಲವೆಂಬುದೂ ನಿಸ್ಸಂದೇಹ. ಅವರಿಗೆ ಈತ ಹೇಳಿದ ಮಾತು ಓದಿ: "ಕಾಂಗೋವಿನ ಹೆಬ್ಬಾಗಿಲಿಂದಾಚೆಗೆ ನಾನೂರು ಲಕ್ಷ ಜನ ಇದ್ದಾರೆ. ಇವರಿಗೆ ಉಡುಪು ತೊಡಿಸಲು ಮ್ಯಾಂಚೆಸ್ಟರಿನ ಹತ್ತಿ ಬಟ್ಟೆ ತಯಾರಕರು ಕಾದು ಕುಳಿತಿದ್ದಾರೆ. ಇವರಿಗಾಗಿ ಕಬ್ಬಿಣದ ಸಾಮಾನು ಮಾಡಲು ಬರ್ಮಿಂಗ್ ಹ್ಯಾಮಿನ ಎರಕದ ಮನೆಗಳಲ್ಲಿ ಕೆಂಪು ಲೋಹ ಹೊಳೆಯುತ್ತಿದೆ. ಇವರ ಕಪ್ಪು ಎದೆ ಬೆಳಗಲು ತಳುಕಿನ ಒಡವೆಗಳು ಬೆಳಗುತ್ತಿವೆ. ಈ ಬಡ ಅಜ್ಞಾನಿ ವಿಧರ್ಮಿಗಳನ್ನು ಕ್ರೈಸ್ತ ಸಮಾಜದೊಳಕ್ಕೆ ಸೇರಿಸಲು ಕ್ರಿಸ್ತ ಪಾದ್ರಿಗಳು ಹುರುಪಿನಿಂದ ಕೂಡಿದ್ದಾರೆ."[1]

ಚಿಂತಾಕ್ರಾಂತ ಕೈಗಾರಿಕಾ ನಾಯಕರಿಗೆ, ತಮ್ಮ ಹೆಚ್ಚುವರಿ ಉತ್ಪನ್ನವನ್ನೇನು ಮಾಡಬೇಕೆಂಬ ಉಭಯ ಸಂಕಟದಿಂದ ಅವರು ಪಾರಾಗಲು, ಸ್ಟಾನ್ಲೆ ಈ ರೀತಿ ಸಲಹೆ ನೀಡಿದ. ಅವರ ಸಮಸ್ಯೆಗೆ ಇವನು ನೀಡಿದ ಉತ್ತರ—ವಸಾಹತುಗಳು.

---

[1] *Ibid.*, p. 66.

ಇತರ ಕೈಗಾರಿಕಾ ದೇಶಗಳಲ್ಲಿನ ಕೈಗಾರಿಕಾ ನಾಯಕರೂ ಇದೇ ಸಮಸ್ಯೆಗೆ ಇದೇ ಕಾಲದಲ್ಲಿ ಇದೇ ಉತ್ತರ ಕಂಡು ಹಿಡಿದರು. ೧೮೭೦ರಿಂದ ಈಚೆಗೆ ಇಂಗ್ಲೆಂಡು, ಫ್ರಾನ್ಸು, ಬೆಲ್ಜಿಯಂ, ಇಟಲಿ, ಜರ್ಮನಿ ಇವು ತಮ್ಮ ಹೆಚ್ಚುವರಿ ಪದಾರ್ಥಗಳ ಮಾರಾಟಕ್ಕೆ ವಸಾಹತುಗಳಿಗಾಗಿ ಕಚ್ಚಾಟ ಆರಂಭಿಸಿದುವು. ಅಮೆರಿಕದ ಸರದಿ ೧೮೯೮ರಲ್ಲಿ ಬಂತು. ಆ ವರ್ಷ ಅಲ್ಲಿನ ಸೆನೇಟಿನ ರಿಪಬ್ಲಿಕನ್ ಪಕ್ಷ ಸದಸ್ಯನಾದ ಆಲ್ಬರ್ಟ್ ಜೆ. ಬೆವರಿಜ್ ಬೋಸ್ಟನಿನ ಆಸಕ್ತ ವ್ಯಾಪಾರ ನಾಯಕರನ್ನು ಸಂಬೋಧಿಸಿ ಹೀಗೆ ಹೇಳಿದ : "ಅಮೆರಿಕದ ಕಾರ್ಖಾನೆಗಳು ಅಮೆರಿಕದ ಜನಕ್ಕೆ ಬೇಕಾದ್ದಕ್ಕಿಂತ ಹೆಚ್ಚು ಪದಾರ್ಥ ಉತ್ಪತ್ತಿ ಮಾಡುತ್ತಿವೆ. ಇವರು ಉಪಯೋಗಿಸುವುದಕ್ಕಿಂತ ಹೆಚ್ಚಾಗಿ ಅಮೆರಿಕದ ನೆಲ ಬೆಳೆಯುತ್ತಿದೆ. ಅದೃಷ್ಟ ನಮ್ಮ ನೀತಿಯನ್ನು ನಿರ್ಧರಿಸಿದೆ. ಪ್ರಪಂಚದ ವ್ಯಾಪಾರ ನಮ್ಮದಾಗಬೇಕು ; ನಮ್ಮದೇ ಆಗುತ್ತದೆ. ಇದನ್ನು ಹೇಗೆ ಪಡೆಯಬೇಕೆಂದು ನಮ್ಮ ತಾಯಿನಾಡು [ಇಂಗ್ಲೆಂಡು] ಹೇಳಿತ್ತೋ ಅದೇ ಬಗೆಯಲ್ಲಿ ನಾವು ಇದನ್ನು ಸ್ಥಾಪಿಸೇವು. ಅಮೆರಿಕದ ಸರಕುಗಳ ಹಂಚಿಕೆ ಕೇಂದ್ರಗಳಾದ ವ್ಯಾಪಾರ ನೆಲೆಗಳನ್ನು ಪ್ರಪಂಚದಾದ್ಯಂತ ಸ್ಥಾಪಿಸುವೆವು. ನಮ್ಮ ವ್ಯಾಪಾರದ ಹಡಗುಗಳಿಂದ ಸಾಗರವನ್ನೇ ಆವರಿಸುವೆವು. ದೊಡ್ಡ ವಸಾಹತುಗಳು ತಮ್ಮನ್ನು ತಾವೇ ಆಳಿಕೊಳ್ಳುತ್ತ, ನಮ್ಮ ಧ್ವಜ ಹಾರಿಸುತ್ತ, ನಮ್ಮೊಡನೆ ವ್ಯಾಪಾರ ಮಾಡುತ್ತ, ನಮ್ಮ ವ್ಯಾಪಾರ ನೆಲೆಗಳ ಸುತ್ತ ಬೆಳೆಯುವುವು."[1]

ಹೆಚ್ಚುವರಿ ಪದಾರ್ಥಗಳಿಗೆ ಗಿರಾಕಿಯಾಗುವುದರ ಜತೆಗೆ ಈ ವಸಾಹತುಗಳು ಇನ್ನೊಂದು ಉಪಯುಕ್ತ ಉದ್ದೇಶ ಸಾಧಿಸಬಹುದಾಗಿತ್ತು. ದೊಡ್ಡ ಪ್ರಮಾಣದ ರಾಶಿಗಟ್ಟಲೆ ಉತ್ಪಾದನೆಗೆ ಕಚ್ಚಾವಸ್ತುವಿನ ಅಗಾಧ ಸರಬರಾಯಿ ಅಗತ್ಯ. ರಬ್ಬರ್, ತೈಲ, ನೈಟ್ರೇಟುಗಳು, ಸಕ್ಕರೆ, ಹತ್ತಿ, ಉಷ್ಣವಲಯದ ಆಹಾರ ಪದಾರ್ಥಗಳು, ಇವೂ ಇಂಥ ಇನ್ನೂ ನಾನಾ ಕಚ್ಚಾವಸ್ತುಗಳೂ ಏಕಸ್ವಾಮ್ಯ ಪಡೆದ ಬಂಡವಾಳಿಗರಿಗೆ ಎಲ್ಲೆಲ್ಲೂ ಅಗತ್ಯವಾಗಿದ್ದುವು. ಕೈಗಾರಿಕಾ ನಾಯಕರು ತಮಗೆ ಅಗತ್ಯವಾದ ಕಚ್ಚಾವಸ್ತುಗಳಿಗಾಗಿ ಇತರ ದೇಶಗಳನ್ನವಲಂಬಿಸಲಿಚ್ಛಿಸಲಿಲ್ಲ. ಈ ಅಗತ್ಯ ಕಚ್ಚಾವಸ್ತುಗಳ ಮೂಲಗಳ ಸ್ವಾಮ್ಯವನ್ನೇ ಪಡೆಯಲು, ಅಥವಾ ಹತೋಟಿ ಹೊಂದಲು ಅವರು ಬಯಸಿದರು. ಇಟಲಿ ನಡಸಿದ ಇಥಿಯೋಪಿಯದ ಆಕ್ರಮಣ ಇತ್ತೀಚಿನ ಸಾಮ್ರಾಜ್ಯವಾದಿ ಸಾಹಸಗಳಲ್ಲೊಂದು. ನ್ಯೂಯಾರ್ಕ್ ಟೈಂಸ್ ಪತ್ರಿಕೆ ೧೯೩೫ರ ಆಗಸ್ಟ್ ೮ರಂದು ಪ್ರಕಟಿಸಿದ ಸುದ್ದಿಯೊಂದರಲ್ಲಿ ಈ ಸಾಹಸಕಾರ್ಯದ ಉದ್ದೇಶ ಈ ರೀತಿ ವರ್ಣಿತವಾಗಿದೆ :

[1] Quoted in *The American Observer*, March 16, 1936.

## ಇಥಿಯೋಪಿಯದಲ್ಲಿ ಇಟಲಿಯಿಂದ ಹತ್ತಿ ಬೇಸಾಯ

### ಹತ್ತಿ ಕಾಫಿ ಬೆಳೆಗಳಿಂದ ವೆಚ್ಚ ಭರ್ತಿಯ ನಿರೀಕ್ಷೆ ಹೆಚ್ಚು ಆಮದಿನ ಅವಕಾಶ

ರೋಮ್, ಆಗಸ್ಟ್ ೭—ಉತ್ತರ ದಕ್ಷಿಣ ಅಮೆರಿಕ ಜೊಡನೆ ಇಟಲಿ ನಡಸುತ್ತಿರುವ ವ್ಯಾಪಾರದ ಮೇಲೆ ಪರಿಣಾಮ ಉಂಟು ಮಾಡುವಂಥ ಬೆಳೆಗಳನ್ನು ಇಥಿಯೋಪಿಯದಲ್ಲಿ ಬೆಳಸಬೇಕೆಂಬುದೇ ಇಟಲಿಯ ಮುಖ್ಯೋದ್ದೇಶವಾಗಿದೆ. ಹತ್ತಿ ಕಾಫಿ ಈ ಬೆಳೆಗಳು.

ಚಿನ್ನ, ಕಬ್ಬಿಣದ ಅದಿರು, ಪ್ಲಾಟಿನಂ, ತಾಮ್ರ ಮತ್ತಿತರ ಲೋಹಗಳನ್ನು ಪಡೆಯಬೇಕೆಂಬ ಇಟಲಿಯ ನಿರೀಕ್ಷೆಯ ಫಲಿತಾಂಶ ಏನೇ ಆಗಲಿ, ಅದು ಪೂರ್ವ ಆಫ್ರಿಕದಲ್ಲಿ ಮಾಡಿರುವ ಕೋಟ್ಯಂತರ ಲೀರೇ ವೆಚ್ಚವನ್ನು ಅಲ್ಲಿ ದೊರಕುವ ಹತ್ತಿ ಕಾಫಿ ಬೆಳೆಗಳಿಂದ ಸರಿದೂಗಿಸಬಹುದೆಂದು ನಂಬಬಹುದಾಗಿದೆ.

ಇಟಲಿಯ ಹತ್ತಿಯ ಆಮದಿನ ಮೊತ್ತ ವರ್ಷಕ್ಕೆ ೭೪ ಕೋಟಿ ಲೀರೇ ಆಗುತ್ತದೆ. ಈ ಹಣ ಮುಖ್ಯವಾಗಿ ಅಮೆರಿಕಾ ಸಂಯುಕ್ತ ಸಂಸ್ಥಾನಕ್ಕೆ ಸಲ್ಲುತ್ತದೆ. ಕಾಫಿಗಾಗಿ ೧೮,೫೦,೦೦,೦೦೦ ಲೀರೇ ತೆರಬೇಕಾಗಿದೆ; ಎಂದರೆ ಒಟ್ಟು ಸುಮಾರು ನೂರು ಕೋಟಿ ಲೀರೇ—ಇಟಲಿಯ ಒಟ್ಟು ಆಮದಿನ ಶೇಕಡ ೧೩.೫ ರಷ್ಟು.

ಕಚ್ಚಾವಸ್ತುಗಳ ಉತ್ಪತ್ತಿ ಸ್ಥಾನಗಳನ್ನಾಕ್ರಮಿಸುವುದೇ ಸಾಮ್ರಾಜ್ಯಷಾಹಿಯ ದ್ವಿತೀಯ ಉದ್ದೇಶವಾಗಿತ್ತು. ಹೆಚ್ಚುವರಿ ಪದಾರ್ಥಗಳಿಗೆ ಪೇಟೆ ಪಡೆಯುವುದು ಪ್ರಥಮೋದ್ದೇಶ. ಇವೆರಡಲ್ಲದೆ ಇನ್ನೂ ಒಂದು ಕಾರಣವಿತ್ತು. ಇದು ಬಹು ಮುಖ್ಯ ಕಾರಣ. ಇನ್ನೂ ಒಂದು ಬಗೆಯ ಹೆಚ್ಚುವರಿಗೆ ತಕ್ಕ ಕ್ಷೇತ್ರ—ಪೇಟೆ—ಬೇಕಾಗಿತ್ತು. ಇದು ಬಂಡವಾಳದ ಹೆಚ್ಚುವರಿ.

ಏಕಸ್ವಾಮ್ಯ ಕೈಗಾರಿಕೆ ಅದರ ಒಡೆಯರಿಗೆ ಅಗಾಧ ಲಾಭವನ್ನು—ಅತೀತ ಲಾಭ ವನ್ನು—ಉಪರಿಷ್ಠ ಲಾಭವನ್ನು—ತಂದು ಕೊಟ್ಟಿತು. ಈ ಹಣವನ್ನೇನು ಮಾಡ ಬೇಕೆಂಬುದು ತೋಚದಷ್ಟು ಹಣ ಬಂತು. ಇದು ನಂಬಲು ಸಾಧ್ಯವಿಲ್ಲವೆನಿಸುವುದಲ್ಲವೆ? ಆದರೆ ಕೆಲವು ಸಂದರ್ಭಗಳಲ್ಲಿ ಲಾಭ ಎಷ್ಟೊಂದು ಅಗಾಧವಾಗಿ ಬಂತೆಂದರೆ, ಈ ಕೂಟ

ನಿರ್ಮಾಪಕರು ಪ್ರಯತ್ನ ಪಟ್ಟಿದ್ದರೂ ತಮ್ಮ ಹಣವನ್ನೆಲ್ಲ ವೆಚ್ಚಮಾಡಲಾರದಷ್ಟು ಬಂತು.

ಅವರು ಅದನ್ನು ವೆಚ್ಚ ಮಾಡಲು ಯತ್ನಿಸಲಿಲ್ಲ. ಅವರು ತಮ್ಮ ಹಣ ಉಳಿಸಿದರು. ಇತರರೂ—ಲಕ್ಷಾಂತರ ಮಂದಿ ಸಣ್ಣ ಉಳಿತಾಯಗಾರರೂ—ಹೀಗೇ ಮಾಡಿದರು; ತಮ್ಮ ಹಣವನ್ನು ಬ್ಯಾಂಕುಗಳಲ್ಲಿ, ವಿಮಾಸಂಸ್ಥೆಗಳಲ್ಲಿ, ಹಣ ಹೂಡಿಕೆಸಂಸ್ಥೆಗಳಲ್ಲಿ, ಇಂಥ ಹಲವು ಎಡೆಗಳಲ್ಲಿ, ಹಾಕಿದರು. ಫಲಿತಾಂಶ: ಬಂಡವಾಳದ ಅತಿಯಾದ ಶೇಖರಣೆ.

ಇದು ವಿಚಿತ್ರವೆನಿಸಬಹುದು. ಅತಿಯಾದ ಹಣ ಸೇರುವುದು ಹೇಗೆ? ಬಂಡವಾಳವನ್ನು ಉಪಯುಕ್ತ ರೀತಿಯಲ್ಲಿ ಬಳಸುವ ಮಾರ್ಗಗಳು ಇರಲಿಲ್ಲವೆ? ನಿಜ, ಇದ್ದುವು: ರಸ್ತೆ ನಿರ್ಮಿಸಬಹುದಾಗಿತ್ತು; ಆಸ್ಪತ್ರೆ ಕಟ್ಟಬಹುದಿತ್ತು, ಗುಡಿಸಲುಗಳನ್ನು ತಳ್ಳಿ ಒಳ್ಳೆಯ ಮನೆ ಕಟ್ಟಬಹುದಿತ್ತು. ಸಾವಿರ ಬಗೆಯಲ್ಲಿ ಹಣ ವಿನಿಯೋಗಿಸಬಹುದಾದ ಉದ್ಯಮಗಳು ಸ್ವದೇಶದಲ್ಲೇ ಇದ್ದುವು.

ಇದ್ದುವು. ಗ್ರಾಮಾಂತರ ಪ್ರದೇಶದಲ್ಲಿ ಒಳ್ಳೆಯ ರಸ್ತೆಗಳ ಆವಶ್ಯಕತೆ ಇತ್ತು. ಕಾರ್ಮಿಕರಿಗೆ ಒಳ್ಳೆಯ ಮನೆಗಳು ಬೇಕಿದ್ದುವು. ಸಣ್ಣ ವ್ಯಾಪಾರ ಸಂಸ್ಥೆಗಳನ್ನು ವಿಸ್ತರಿಸುವ ಅಗತ್ಯವಿತ್ತು. ಆದರೂ ಅರ್ಥಶಾಸ್ತ್ರಜ್ಞರು ಹೆಚ್ಚುವರಿ ಬಂಡವಾಳದ ಸಮಸ್ಯೆಯನ್ನು ಕುರಿತಾಡುತ್ತಿದ್ದರು. ಆ ಬಗ್ಗೆ ಸಂಶಯವಿರಲಿಲ್ಲ—ಲಕ್ಷಾಂತರ ಡಾಲರು (ಫ್ರಾಂಕು, ಪೌಂಡು, ಮಾರ್ಕು) ಇತರ ದೇಶಗಳಿಗೆ ರಫ್ತಾಗುತ್ತಿತ್ತು.

ಏಕೆ?

ಏಕೆಂದರೆ—"ಏನಾಗಬೇಕು?" ಎಂಬ ಪ್ರಶ್ನೆ ಬಂಡವಾಳಕ್ಕೆ ಬೇಕಿಲ್ಲ. ಖಂಡಿತ ಇಲ್ಲ. ಅದು ಕೇಳುವ ಪ್ರಶ್ನೆ ಇದು: "ನನ್ನ ಹಣಕ್ಕೆ ಎಷ್ಟು ಲಾಭ ಬರುತ್ತದೆ?" ಹೆಚ್ಚುವರಿ ಬಂಡವಾಳದ ವಿನಿಯೋಗ ಎಲ್ಲಿ ಆಗುತ್ತದೆ ಎಂಬುದರ ಮೇಲಿಂದ ಎರಡನೆಯ ಪ್ರಶ್ನೆಗೆ ಉತ್ತರ ದೊರಕುತ್ತದೆ. ಮಾರ್ಕ್ಸ್‌ನ ಶಿಷ್ಯನೂ ರಷ್ಯದ ಕ್ರಾಂತಿಯ ನಾಯಕನೂ ಆದ ಲೆನಿನ್ ೧೯೧೫ರಲ್ಲಿ ಬರೆದ "ಸಾಮ್ರಾಜ್ಯ ವಾದ"ವೆಂಬ ತನ್ನ ಪುಸ್ತಕದಲ್ಲಿ ಈ ವಿಚಾರವನ್ನು ವಿವರಿಸಿದ್ದಾನೆ: "ಇಂದು ಎಲ್ಲೆಲ್ಲೂ ಕೈಗಾರಿಕೆಗಿಂತ ಹಿಂದೆ ಬಿದ್ದಿರುವ ವ್ಯವಸಾಯವನ್ನು ಬಂಡವಾಳ ವ್ಯವಸ್ಥೆ ಬೆಳಸುವುದಾದರೆ, ಜನಜಂಗುಳಿಯ ಜೀವನ ಮಟ್ಟವನ್ನು ಏರಿಸುವುದಾದರೆ....ಹೆಚ್ಚು ಬಂಡವಾಳದ ಮಾತೇ ಬರುವುದಿಲ್ಲ....ಆದರೆ ಆಗ ಬಂಡವಾಳ ವ್ಯವಸ್ಥೆ ಬಂಡವಾಳ ವ್ಯವಸ್ಥೆಯೇ ಆಗಿರುವುದಿಲ್ಲ....ಬಂಡವಾಳ ವ್ಯವಸ್ಥೆ ಬಂಡವಾಳ ವ್ಯವಸ್ಥೆಯಾಗಿ ಉಳಿದಿರುವ ವರೆಗೂ, ಜನಜಂಗುಳಿಯ ಜೀವನ ಮಟ್ಟವನ್ನೇರಿಸಲು ಹೆಚ್ಚುವರಿ ಬಂಡವಾಳ ಬಳಕೆಗೆ ಬರುವುದೇ ಇಲ್ಲ. ಏಕೆಂದರೆ ಇದರಿಂದ ಬಂಡವಾಳಿಗರ ಲಾಭ ಕಡಮೆಯಾಗುತ್ತದೆ. ಇದರ ಬದಲು ಬಂಡವಾಳವನ್ನು ದೇಶದಿಂದ ಹೊರಕ್ಕೆ, ಹಿಂದುಳಿದ ದೇಶಗಳಿಗೆ, ರಫ್ತುಮಾಡಿ ಲಾಭ ಹೆಚ್ಚಿಸಿಕೊಳ್ಳುವುದಕ್ಕಾಗಿ ಇದು ಉಪಯೋಗಿಸಲ್ಪಡುತ್ತದೆ. ಈ ಹಿಂದುಳಿದ ದೇಶಗಳಲ್ಲಿ ಲಾಭ ಸಾಮಾನ್ಯವಾಗಿ ಹೆಚ್ಚು. "ಏಕೆಂದರೆ ಬಂಡವಾಳಕ್ಕೆ

ಇಲ್ಲಿ ಅಭಾವ. ನೆಲದ ಬೆಲೆ ಬೇರೆಡೆಗಳಿಗಿಂತ ಕಡಮೆ. ಕೂಲಿಯೂ ಕಡಮೆ. ಕಚ್ಚಾವಸ್ತು ಅಗ್ಗ."[1]

ಆದದ್ದೂ ಹೀಗೆಯೇ. ಹೆಚ್ಚುವರಿ ಬಂಡವಾಳಕ್ಕೆ ಹೊರಗಡೆ ಸ್ಥಳ ಬೇಕಿತ್ತು. ಹಿಂದುಳಿದ ದೇಶಗಳಲ್ಲಿ—ವಸಾಹತುಗಳಲ್ಲಿ—ಇದು ದೊರಕಿತು. ರೈಲ್ವೆ, ವಿದ್ಯುಚ್ಛಕ್ತಿ, ರಸ್ತೆ ಮುಂತಾದುವುಗಳು ಅವಶ್ಯವಾಗಿದ್ದ ಪ್ರದೇಶಗಳಿದ್ದವು. ಇಲ್ಲಿ ಗಣಿ ತೋಟಗಳ ಉದ್ಯಮ ನಡಸಲು ಸವಲತ್ತುಗಳೂ ದೊರಕಿದ್ದುವು. ಈ ವಸಾಹತು ಪ್ರದೇಶಗಳಲ್ಲೇ ಲಾಭದಾಯಕ ಹೂಟಕ್ಕಾಗಿ ಹೆಚ್ಚುವರಿ ಬಂಡವಾಳಕ್ಕೆ ಸದವಕಾಶ ಲಭಿಸಿತು.

ಇಷ್ಟೇ ಅಲ್ಲ. ಹಣ ಹೂಡಿದ್ದರಿಂದ ನೇರವಾಗಿ ಬಂದ ಲಾಭದ ಜತೆಗೆ ಸಾಲವನ್ನೂ ಕೊಡಲಾಗುತ್ತಿತ್ತು. ಈ ಸಾಲದಲ್ಲಿ ಬಹು ಭಾಗವನ್ನು ಸಾಲ ಕೊಟ್ಟ ದೇಶದಲ್ಲೇ ವೆಚ್ಚ ಮಾಡಬೇಕೆಂಬುದು ಶರತ್ತು. ಉದಾಹರಣೆಗೆ ಇಂಗ್ಲೆಂಡು ಅರ್ಜೆಂಟೈನಕ್ಕೆ ರೈಲ್ವೆ ನಿರ್ಮಾಣಕ್ಕಾಗಿ ಸಾಲ ನೀಡಿದಾಗ, ರೈಲುಕಂಬಿ, ಎಂಜಿನ್, ಗಾಡಿ ಮುಂತಾದ ಪದಾರ್ಥಗಳಲ್ಲಿ ಬಹುಭಾಗವನ್ನು ಇಂಗ್ಲೆಂಡಿನಲ್ಲಿ, ಇಂಗ್ಲಿಷ್ ಉತ್ಪಾದಕರಿಗೆ ಲಾಭ ದೊರಕುವಂತೆ, ಕೊಳ್ಳಬೇಕಾಗಿತ್ತು. ಹೆಚ್ಚುವರಿ ಬಂಡವಾಳದ ನಿರ್ಯಾತದಿಂದ ಹೆಚ್ಚುವರಿ ವಸ್ತುಗಳ ನಿರ್ಯಾತಕ್ಕೂ ಎಡೆ ಮಾಡಿಕೊಟ್ಟಿತು. ಆದ್ದರಿಂದ ಹಣ ಹೂಡುವವನು, ಉತ್ಪಾದಕ—ಇಬ್ಬರೂ ಕೂಡಿ ವಸಾಹತು ಪ್ರದೇಶಗಳ ಹತೋಟಿ ಪಡೆಯುವ ಅಥವಾ ಅವುಗಳನ್ನು ವಶಪಡಿಸಿಕೊಳ್ಳುವ ನೀತಿ ಪಾಲಿಸುವುದು ಅವರ ಹಿತಕ್ಕೆ ಅನುಗುಣವಾಗಿತ್ತು. ಆಧುನಿಕ ಆರ್ಥಿಕ ವ್ಯವಸ್ಥೆಯ ಮುಖ್ಯ ಲಕ್ಷಣವಾದ, ಹಣಕಾಸು ಹಾಗೂ ಕೈಗಾರಿಕೆಯ ನಡುವಣ ಸ್ನೇಹದ ಒಂದು ಸ್ವರೂಪ ಇದು. ಇದು ಹಣಕಾಸಿನ ಬಂಡವಾಳದ ಯುಗ, ಎಂದು ಕರೆದಿರುವುದು ಸಹಜವಾಗಿಯೇ ಇದೆ. ಹಣಕಾಸು—ಎಂದರೆ ಅಗಾಧ ಬಂಡವಾಳದ ಹಣದ ಹತೋಟಿ ; ಇದರ ಜತೆಗೆ, ಈ ಬಂಡವಾಳವನ್ನು ಲಾಭ ಮಡಿಯುವ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳುವ ಕೈಗಾರಿಕೆ. ಇವೆರಡರ ಸಂಯೋಗವೇ ಆಧುನಿಕ ಜಗತ್ತಿನ ಪ್ರಬಲ ಶಕ್ತಿ.

ಪದಾರ್ಥ-ಬಂಡವಾಳಗಳ ಪೇಟೆಗಳಲ್ಲಿ ಲಾಭಾನ್ವೇಷಣೆ ಮಾಡುವ ಕೈಗಾರಿಕೆ-ಹಣ ಕಾಸುಗಳ ಸಹಯೋಗವೇ ಸಾಮ್ರಾಜ್ಯಶಾಹಿಯ ಪ್ರೇರಕ ಶಕ್ತಿ. ೧೯೦೨ರಷ್ಟು ಹಿಂದೆಯೇ ಜೆ. ಎ. ಹಾಬ್ಸನ್ ಹೀಗೆ ಭಾವಿಸಿದ್ದ. ಈ ವಿಷಯವಾಗಿ ಆಲೋಚನೆ ನಡಸಿ ಪುಸ್ತಕ ಬರೆದ ಮೊದಲಿಗ ಇವನು. "ಕೈಗಾರಿಕೆಯ ಸೂತ್ರ ಹಿಡಿದಿರುವ ಮಹಾ ಪ್ರಭೃತಿಗಳು ತಮ್ಮ ದೇಶದಲ್ಲೇ ಮಾರಲಾಗದ ಅಥವಾ ಬಳಸಲಾಗದ ಪದಾರ್ಥ ಹಾಗೂ ಬಂಡವಾಳ ವನ್ನು ಸಾಗಿಸಲು ವಿದೇಶಿ ಪೇಟೆಗಳ ಅನ್ವೇಷಣೆ ನಡಸಿ, ಹೆಚ್ಚುವರಿ ಸಂಪತ್ತಿನ ಪ್ರವಾಹಕ್ಕೆ ಪಾತ್ರ ಸುಗಮಗೊಳಿಸಲು ಕೈಕೊಳ್ಳುವ ಪ್ರಯತ್ನವೇ ಸಾಮ್ರಾಜ್ಯಶಾಹಿ."[2]

ಸಾಮ್ರಾಜ್ಯಶಾಹಿ ಏಕೆ?—ಎಂಬುದಕ್ಕೆ ಈ ಮಾತೇ ಉತ್ತರ. "ತಮ್ಮ ಹೆಚ್ಚುವರಿ

[1] Lenin, *op. cit.*, pp. 57, 58.

[2] J. A. Hobson, *Imperialism*, p. 91. J. Pott & Company, N. Y., 1902.

ಸಂಪತ್ತಿನ ಪ್ರವಾಹಕ್ಕೆ ಪಾತ್ರ ಸುಗಮಗೊಳಿಸುವ" ಕಾರ್ಯವನ್ನು ಈ ಕೈಗಾರಿಕೆಯ ಸೂತ್ರಧಾರಿಗಳು ಹೇಗೆ ಕೈಗೊಳ್ಳುತ್ತಾರೆಂಬುದು ಇನ್ನೊಂದು ಕತೆ. ಇದು ನಿಮಗೆ ಬಹುಶಃ ಗೊತ್ತಿದೆ. ಇದಕ್ಕೆ ಹಲವು ದಾರಿಗಳಿವೆ. ಅಬಿಸೀನಿಯದಲ್ಲಿ ಇಟಲಿಯ "ನಾಗರಿಕತೆಯ ಪ್ರಚಾರಕಾರ್ಯ"ವೂ ಚೀಣದಲ್ಲಿ ಜಪಾನಿನ "ಪದಾಕ್ರಮಣ"ವೂ ಈಚಿನ ಉದಾಹರಣೆಗಳು. ಹಿಂದಿನ ದಿನಗಳಲ್ಲಿ, ಹತ್ತೊಂಬತ್ತನೆಯ ಶತಮಾನದ ಕೊನೆಯ ಪಾದದಲ್ಲಿ, ಮುಖ್ಯವಾಗಿ ಆಫ್ರಿಕದಲ್ಲಿ, ಈ ಕಾರ್ಯಕ್ರಮ ಬಹು ಸುಲಭವಾಗಿತ್ತು. "ಆಫ್ರಿಕದ ಪ್ರದೇಶಗಳ ವಿಂಗಡಣೆ ಹಾಗೂ ಸ್ವಾಧೀನಕಾರ್ಯದ ಮೊದಲ ಹೆಜ್ಜೆ ವ್ಯಾಪಾರಿಗಳಿಂದ, ಅಥವಾ ಬಂಡವಾಳ ಕಂಪೆನಿಗಳಿಂದ. ಈ ಕಾರ್ಯದಲ್ಲಿ ಪ್ರವಾಸಿಗಳ ನೆರವು ದೊರಕುತ್ತಿತ್ತು. ಅಥವಾ ಇದಕ್ಕೆ ಪ್ರತ್ಯೇಕ ಪ್ರತಿನಿಧಿಗಳ ನೇಮಕವಾಗುತ್ತಿದ್ದುದೂ ಉಂಟು. ಈ ಪ್ರವಾಸಿಯೋ ಪ್ರತಿನಿಧಿಯೋ ಸಮುದ್ರ ತೀರದಿಂದ ಸ್ವಲ್ಪ ದೂರ ಒಳನಾಡನ್ನು ಪ್ರವೇಶಿಸಿ, ಅಲ್ಲಿನ ನಾಯಕರನ್ನೊ ರಾಜರನ್ನೊ ಕಂಡು, ಅವರಿಗೆ ಬಟ್ಟೆ ಅಥವಾ ಮದ್ಯ ಕೊಟ್ಟು, ಕೂಡು ಬಂಡವಾಳ ಸಂಸ್ಥೆಗಳೊಡನೆ ಒಡಂಬಡಿಕೆಯ ಹೆಸರಿನ ಪತ್ರಕ್ಕೆ ಅವರು ಸಹಿ ಹಾಕುವಂತೆ ಪುಸಲಾಯಿಸುವುದು. ಇದು ಸಾಮಾನ್ಯ ವಿಧಾನ. ಈ ಕರಾರಿನ ಪ್ರಕಾರ, ಈ ಆಫ್ರಿಕದ ಆಳಿಕೆಗಾರರು ಕೆಲವು ಗಜ ಬಟ್ಟೆ ಅಥವಾ ಕೆಲವು ಸೀಸೆ ಜಿನ್ ಮದ್ಯಕ್ಕೆ ಪ್ರತಿಯಾಗಿ ತಮ್ಮ ಇಡೀ ಪ್ರದೇಶವನ್ನೆ ಈ ಕೂಡು ಬಂಡವಾಳ ಸಂಸ್ಥೆಗಳಿಗೆ ಕೊಡುತ್ತಿದ್ದರು. ಈ ಕರಾರಿಗೆ ಅವರು ಹಾಕುತ್ತಿದ್ದ ಸಹಿಯೆಂದರೆ ಒಂದು ಗುರುತು. ಯೂರೋಪಿಯನ್ನರಿಗೆ ಸೇರಿರುವ ಮಧ್ಯ ಆಫ್ರಿಕದ ಪ್ರದೇಶವೆಲ್ಲಾ ಹೆಚ್ಚು ಕಡಿಮೆ ಈ ರೀತಿಯ ಹಕ್ಕಿನ ಮೇಲೆಯೇ ನಿಂತಿವೆ....ಇಪ್ಪತ್ತು ವರ್ಷಗಳೊಳಗೆ ಇಡೀ ಮಧ್ಯ ಆಫ್ರಿಕಾ ವಿಭಜಿತವಾಗಿ, ಬ್ರಿಟನ್ ಫ್ರಾನ್ಸ್ ಜರ್ಮನಿ ಬೆಲ್ಜಿಯಂ ಪೋರ್ಚುಗಲ್ ಇಟಲಿಗಳ ಚಕ್ರಾಧಿಪತ್ಯಗಳಲ್ಲಿ ಸೇರಿಹೋಯಿತು."[1]

ಕೆಲವು ವೇಳೆ ಈ ವ್ಯವಹಾರ ನಿಪುಣ ಪ್ರವಾಸಿಗಳು—ವ್ಯಾಪಾರಿಗಳು—ಬಂಡವಾಳಿಗರು ಹೀಗೆ ದೇಶವನ್ನು ಕದಿಯುವಾಗ ತಾವು ಈ ದೇಶೀಯರ ಒಳ್ಳೆಯದಕ್ಕಾಗಿ ದೇವರಿಂದ ಪ್ರೇರಿತವಾದ ಒಳ್ಳೆಯ ಕಾರ್ಯ ಮಾಡುತ್ತಿರುವುದಾಗಿ ಪ್ರಾಮಾಣಿಕವಾಗಿ ಭಾವಿಸಿದ್ದರು. ಬಹು ಹಿರಿಯ ಸಾಮ್ರಾಜ್ಯ ನಿರ್ಮಾಪಕರಲ್ಲೊಬ್ಬನಾದ ಸೆಸಿಲ್ ರ್ಹೋಡ್ಸ್ ಹೀಗೆ ಭಾವಿಸಿದ್ದ. ಅವನ ಭಾವನೆ ಹೇಗಾದರೂ ಇರಲಿ, ಅವನು ಹೀಗಂತೂ ಹೇಳಿದ: "ಪ್ರಪಂಚದಲ್ಲಿ ನಮ್ಮ ಜನಾಂಗ ಬಹು ಉತ್ತಮವಾದದ್ದೆಂಬುದು ನನ್ನ ಮತ. ಜಗತ್ತಿನಲ್ಲಿ ಹೆಚ್ಚು ಹೆಚ್ಚು ಪ್ರದೇಶದಲ್ಲಿ ನಾವು ವಾಸಿಸಿದಷ್ಟೂ ಮಾನವ ಕುಲಕ್ಕೇ ಇದರಿಂದ ಒಳ್ಳೆಯದು. ದೇವರೇನಾದರೂ ಇದ್ದರೆ, ಆಫ್ರಿಕದಲ್ಲಿ ಆದಷ್ಟು ಹೆಚ್ಚು ಭಾಗದಲ್ಲಿ ನಾವು ಬ್ರಿಟಿಷರ ಕೆಂಪು ಬಣ್ಣ ಬಳಿಯಬೇಕೆಂದು ಅವನು ಬಯಸುವನು."[2]

---

[1] Leonard Woolf, *Imperialism and Civilization*, pp. 73, 74. Hogarth Press, London, 1933.

[2] *The Last Will and Testament of Cecil John Rhodes*, pp. 58, 98. Edited by W. T. Stead, *Review of Reviews* office, London, 1902.

ಆಕ್ರಮಿತ ಪ್ರದೇಶಗಳ ದೇಶೀಯರು ಸಾಮಾನ್ಯವಾಗಿ ಬಹು ವಿಚಿತ್ರ. ಬಿಳಿಯ ಜನ ಮಾಡುತ್ತಿದ್ದುದು ತಮ್ಮ ಒಳ್ಳೆಯದಕ್ಕಾಗೆಂಬುದನ್ನು ಅವರು ಅರಿಯಲಾರದೆ ಹೋದರು. ಬಿಳಿಯ ಜನರ ಒಂದು ಗುಂಪು—ಪಾದ್ರಿಗಳು—ಬೋಧಿಸುತ್ತಿದ್ದುದೊಂದು, ಬಿಳಿಯ ಜನರ ಇನ್ನೊಂದು ಗುಂಪು—ಬಂಡವಾಳಿಗರು—ಮಾಡುತ್ತಿದ್ದದ್ದು ಇನ್ನೊಂದು. ಇವೆರಡನ್ನೂ ಕಂಡು ಅವರಿಗೆ ದಿಕ್ಕು ತೋರದಂತಾಯಿತು. ಕೆಲವು ಸಾರಿ, ಅಜ್ಞಾನ ವಶದಿಂದ, ಅವರು ಪ್ರತಿಭಟಿಸಿದರು. ಆಗ, ದುರದೃಷ್ಟವಶಾತ್, ಅವರಿಗೆ ಬುದ್ಧಿ ಕಲಿಸ ಬೇಕಾಯಿತು. ಶೀಘ್ರವಲ್ಲೇ ದೊಡ್ಡ ಹೊಳೆಯುವ ಹಡಗುಗಳು ತಾಯಿನಾಡಿನಿಂದ ಬಂದು ಅವರ ಬಂದರುಗಳಲ್ಲಿ ನಿಲ್ಲುತ್ತಿದ್ದವು. ಬಂದೂಕು, ಬಾಂಬು, ಮೆಷಿನ್‌ಗನ್ ಹೊತ್ತ ಸಿಪಾಯಿ ಗಳು ಈ ಹಡಗಿನ ತುಂಬಾ. ಇವು ನಾಗರಿಕತೆಯ ಅಸ್ತ್ರಗಳು. ದೇಶೀಯರು ಬುದ್ಧಿ ಕಲಿತರು.

ಆಳುವ ಸರಕಾರದ ಸೈನ್ಯಶಕ್ತಿಯ ನೆರವಿನಿಂದ ಇವರಿಗೆ ಬುದ್ಧಿಕಲಿಸಲು ಸಾಧ್ಯ ವಾಯಿತು. ತಮ್ಮ ಪ್ರಜೆಗಳ "ಪ್ರಾಣ ರಕ್ಷಣೆ, ಆಸ್ತಿ ರಕ್ಷಣೆ" ಮಾಡಲು ಸದಾ ಸಿದ್ಧ ವಾಗಿದ್ದ ಸರಕಾರಗಳು ಬೇರೆ ರೀತಿಯಲ್ಲೂ ಸಹಾಯ ನೀಡಿದವು. ಆಡಳಿತ ವೆಚ್ಚ ವಹಿಸಲು ಸಾಧ್ಯವಾಗುವಂತೆಯೂ ವಸಾಹತುವಿನಲ್ಲಿ ಆಸ್ಪತ್ರೆ, ಶಾಲೆ, ಒಳ್ಳೆಯ ರಸ್ತೆ ಇವುಗಳ ನಿರ್ಮಾಣಕ್ಕಾಗಿಯೂ ಸರಕಾರ ತೆರಿಗೆ ವಿಧಿಸಿತು. ಇದನ್ನು ದೇಶೀಯರು ಹಣದ ರೂಪದಲ್ಲಿ ಕೊಡಬೇಕಿತ್ತು. ಆದರೆ ದೇಶೀಯರಲ್ಲಿ ಹಣವಿಲ್ಲ. ಇದಕ್ಕೆ ಒಂದು ಉಪಾಯ ವುಂಟು. ಈ ತೆರಿಗೆ ಕೊಡಲು ಹಣ ಸಂಪಾದನೆ ಮಾಡಬಹುದಲ್ಲ. ಸಂಬಳವೇನೋ ಕಡಮೆ ನಿಜ. ಗಣಿಯಲ್ಲೋ ತೋಟದಲ್ಲೋ ಕೆಲಸ ಮಾಡದೆಯೇ ಈ ದೇಶೀಯರು ಹೊಟ್ಟೆ ತುಂಬಿಸಿ ಕೊಳ್ಳಬಹುದಿತ್ತು, ಎಂಬುದೂ ನಿಜ. ಆದರೆ ತೆರಿಗೆ ಕೊಡಬೇಕಲ್ಲ ? ಇದಕ್ಕಾಗಿ ಅವರು ಕೆಲಸ ಮಾಡಬೇಕು. ಕೆಲಸ ಮಾಡದಿದ್ದರೆ ಏನು ? ೧೯೩೫ ರಲ್ಲಿ ಫ್ರೆಂಚ್ ಪಶ್ಚಿಮ ಆಫ್ರಿಕದಲ್ಲಿನ ಪರಿಸ್ಥಿತಿಯ ಬಗ್ಗೆ ಪ್ರತ್ಯಕ್ಷ ದರ್ಶಿಯೊಬ್ಬನ ಮಾತು ಓದಿ. ತೆರಿಗೆ ಕೊಡ ದಿದ್ದರೆ ಏನು ಉಪಾಯವೆಂಬುದನ್ನು ಕುರಿತು ಅವನು ಹೀಗೆ ಹೇಳಿದ್ದಾನೆ : "ದಕ್ಷಿಣ ಸುಡಾ ನಿನ ಒಂದು ಹಳ್ಳಿಯ ಜನ ತೆರಿಗೆ ಕೊಡಲು ಅಶಕ್ತರಾಗಿದ್ದರು. ದೇಶೀಯ ಸೈನಿಕರನ್ನು ಕಳಿಸಲಾಯಿತು. ಇವರು ಆ ಹಳ್ಳಿಯ ಎಲ್ಲ ಹೆಂಗಸರು ಮಕ್ಕಳನ್ನೂ ಹಿಡಿದು ಊರ ಮಧ್ಯದ ಗೋಡೆಗಳ ನಡುವೆ ಬಂಧಿಸಿದರು. ಗುಡಿಸಲುಗಳನ್ನು ಭಸ್ಮ ಮಾಡಿದರು. ತೆರಿಗೆ ಕೊಟ್ಟಾಗ ತಮ್ಮ ಸಂಸಾರಗಳನ್ನು ಹಿಂದಕ್ಕೆ ಪಡೆಯಬಹುದೆಂದು ಅಲ್ಲಿನ ಗಂಡಸರಿಗೆ ಹೇಳಿದರು."[1]

ವಸಾಹತು ಜನರ ಬಗ್ಗೆ ಅನುಸರಿಸಿದ ವರ್ತನೆಯನ್ನು ಕುರಿತು ಒಟ್ಟಿನಲ್ಲಿ ಹೇಳುವುದು ಅಸಾಧ್ಯ. ಏಕೆಂದರೆ ಇದು ಕಾಲದಿಂದ ಕಾಲಕ್ಕೆ, ಸ್ಥಳದಿಂದ ಸ್ಥಳಕ್ಕೆ, ಭಿನ್ನವಾಗಿತ್ತು. ಆದರೆ ಸಾಮ್ರಾಜ್ಯಕೋರರು ಎಸಗಿದ ಘೋರ ಕೃತ್ಯಗಳು ಸಾಮಾನ್ಯ. ಯಾವ ಸಾಮ್ರಾಜ್ಯಶಾಹಿ ರಾಷ್ಟ್ರದ ಕೈಯೂ ರಕ್ತಸಿಂಚಿತವಾಗದಿರಲಿಲ್ಲ. ಈ ವಿಚಾರ ಚೆನ್ನಾಗಿ

---

[1]G. Gorer, *Africa Dances*, p. 122. Faber and Faber, London, 1935.

ತಿಳಿದಿದ್ದ ಲಿಯೋನಾರ್ಡ್ ವುಲ್ಫ್ ಹೀಗೆ ಬರೆದಿದ್ದಾನೆ: "ಯೂರೋಪಿನಲ್ಲಿ ರಾಷ್ಟ್ರೀಯ ಸಮಾಜದಲ್ಲಿ ಕಳೆದ ಶತಮಾನದಲ್ಲಿ ಬಂಡವಾಳಿಗ ಕಾರ್ಮಿಕರೆಂಬ ವಿಶಿಷ್ಟವರ್ಗಗಳು ಉದಿಸಿರುವಂತೆ, ಅಂತರರಾಷ್ಟ್ರೀಯ ಸಮಾಜದಲ್ಲೂ ಪಶ್ಚಿಮದ ಸಾಮ್ರಾಜ್ಯಶಾಹಿ ರಾಷ್ಟ್ರಗಳು ಹಾಗೂ ಆಫ್ರಿಕಾ-ಏಷ್ಯಾಗಳ ಆಳಲ್ಪಡುವ ರಾಷ್ಟ್ರಗಳು—ಎಂಬ ವಿಶಿಷ್ಟ ವರ್ಗಗಳು ಉದ್ಭವಿಸಿವೆ. ಇವುಗಳಲ್ಲಿ ಒಂದು ಆಳುವ ವರ್ಗ, ಶೋಷಕರ ವರ್ಗ; ಇನ್ನೊಂದು ಆಳಿಸಿ ಕೊಳ್ಳುವ ವರ್ಗ, ಶೋಷಿತ ವರ್ಗ."[1]

ಒಂದು ದೇಶ "ಆಳಿಸಿಕೊಳ್ಳಲು ಮತ್ತು ಶೋಷಿಸಲ್ಪಡಲು" ಅದು ವಸಾಹತುವೇ ಆಗಬೇಕಿರಲಿಲ್ಲ. ಹಿಂದುಳಿದ ರಾಷ್ಟ್ರಗಳು ಸಾಮ್ರಾಜ್ಯಗಳ ಅಧೀನಕ್ಕೆ ಬಾರದಿದ್ದರೂ ಅವು ವಿಶಿಷ್ಟ "ಪ್ರಭಾವ ವಲಯ"ಗಳಾಗಿ ವಿಂಗಡಿಸಲ್ಪಟ್ಟುವು. ಉದಾಹರಣೆಗೆ ಚೀಣಾ. ಇಲ್ಲಿ ಎಲ್ಲ ಪ್ರಧಾನ ರಾಷ್ಟ್ರಗಳೂ ತಂತಮ್ಮ ಗೊತ್ತಾದ ಹಿತಗಳನ್ನು ಹೊಂದಿದ್ದುವು. ದಕ್ಷಿಣ ಅಮೆರಿಕದಲ್ಲಿ ಇಂಗ್ಲೆಂಡ್ ಹಾಗೂ ಸಂಯುಕ್ತ ಸಂಸ್ಥಾನಗಳು ಸಹಭಾಗಿಗಳು. ಈ ಎರಡು ರಾಷ್ಟ್ರಗಳೂ ದಕ್ಷಿಣ ಅಮೆರಿಕದ ಯಾವ ರಾಜ್ಯಗಳ ಒಡೆತನವನ್ನೂ ಪಡೆಯದೆ ಇದ್ದರೂ ಇವಕ್ಕೆ ಬಂಡವಾಳ ಒದಗಿಸಲು ಸದಾ ಸಿದ್ಧವಾಗಿದ್ದುವು. ಕರಾರಿನ ಮೂಲಕವೋ, ಸವಲತ್ತುಗಳನ್ನು ಪಡೆದೋ ಇವು ಲಾಭ ಗಳಿಸುವ ಹಕ್ಕು ಪಡೆದವು. ತಮ್ಮ ಹಕ್ಕನ್ನೋ ಸವಲತ್ತನ್ನೋ ವಿಶಿಷ್ಟ ವ್ಯಾಪಾರ ಸ್ವಾಮ್ಯವನ್ನೋ ಜಾರಿಗೆ ತರಲು ಯುದ್ಧ ನೌಕೆಗಳೂ, ವಿಮಾನಗಳೂ, ಸೇನೆಗಳೂ ಯಾವಾಗಲೂ ಸಿದ್ಧವಿದ್ದವೆಂಬುದು ಸ್ಪಷ್ಟವಾಗಿರುತ್ತಿತ್ತು.

ಉತ್ಪಾದಕರು ಹಾಗೂ ಬ್ಯಾಂಕರುಗಳು ತಮ್ಮ ಸರಕುಗಳಿಗೆ ಹಾಗೂ ಬಂಡವಾಳಕ್ಕೆ ಪೇಟೆಗಾಗಿ ನಡಸುತ್ತಿದ್ದ ಅನ್ವೇಷಣೆಯಲ್ಲಿ ಸರಕಾರಗಳು ಇವರ ಸಹಾಯಕ್ಕೆ ಬಂದದ್ದು ಕೇವಲ ಆಕಸ್ಮಿಕವಲ್ಲ. ೧೯೨೧ ರಲ್ಲಿ ಬ್ರಿಟಿಷ್ ವ್ಯವಹಾರಗಳ ವೀಕ್ಷಕನೊಬ್ಬನಿಗೆ ಇದು ಅನಿವಾರ್ಯವೆಂದೇ ತೋರಿತು. "೧೯೨೧ರ ಶತಕಾಲದಲ್ಲಿ ಬ್ರಿಟಿಷ್ ವ್ಯಾಪಾರ ದೊಡ್ಡ ವ್ಯಾಪಾರಕೂಟಗಳ ಸಂಪೂರ್ಣ ಹತೋಟಿಯಲ್ಲಿವೆ. ಈ ಕೂಟಗಳು ಹಣ ಹಾಗೂ ಬ್ಯಾಂಕಿಂಗಿನ ದೊಡ್ಡ ಟ್ರಸ್ಟುಗಳ ನಿರ್ದೇಶನ-ಆಡಳಿತಗಳಿಗೆ ಒಳಪಟ್ಟಿವೆ. ವ್ಯಾಪಾರ ಧಮನಿಗಳೆಲ್ಲ ಇವುಗಳ ಕೈಯ್ಯಲ್ಲಿವೆ. ಇವುಗಳ ಪ್ರಭಾವ ಇಷ್ಟೊಂದು. ಇಷ್ಟೇ ಅಲ್ಲ. (ಹಣವಂತ ವರ್ಗದಿಂದ ಕೂಡಿರುವ) ಸರಕಾರ ಈ ಹಣದ ಹಾಗೂ ವ್ಯಾಪಾರ ಕೂಟಗಳ ಸಲಹೆ ಪಡೆಯದೆ ಏನೂ ಮಾಡಲಾರದೆಂಬಷ್ಟು ಮಟ್ಟಿಗೆ ಇವು ಸರಕಾರಕ್ಕೆ ಸಲಹೆ ನೀಡುವ ಅಧಿಕಾರ ಹೊಂದಿವೆ."[2]

ಇದು ಇಂಗ್ಲೆಂಡ್ ಕುರಿತದ್ದು. ಸಂಯುಕ್ತ ಸಂಸ್ಥಾನದಲ್ಲಿ ಅಧ್ಯಕ್ಷ ಟಾಫ್ಟನಿಗೆ ನ್ಯಾಯದ ಹಾದಿ ನೇರವಾಗಿತ್ತು, ಆದರೆ ಕಿರಿದಾಗಿರಲಿಲ್ಲ. "ನಮ್ಮ ಬಂಡವಾಳಗಾರರ" ಪರವಾಗಿ ನಡುವೆ ಪ್ರವೇಶಿಸಲು ಅಲ್ಲಿ ಅವಕಾಶವಿತ್ತು. "ನಮ್ಮ ವಿದೇಶಾಂಗ ನೀತಿಯು

---

[1] L.Woolf, *Economic Imperialism*, p.102. Swarthmore Press, London,1920.
[2] J. Morgan Rees, *op. cit.*, p. 245.

ನ್ಯಾಯದ ನೇರ ಹಾದಿಯ ಆಚೀಚೆ ಕೂದಲೆಳೆಯಷ್ಟೂ ಅಲುಗಬಾರದೆಂಬುದು ನಿಜವಾದರೂ, ನಮ್ಮ ಸರಕಿಗೂ ನಮ್ಮ ಬಂಡವಾಳಿಗರಿಗೂ ಲಾಭ ತರುವ ರೀತಿಯ ಅವಕಾಶ ದೊರಕುವಂತೆ ಸರಕಾರ ನಡುವೆ ಪ್ರವೇಶಿಸಿ ಸೂಕ್ತ ಕ್ರಮ ಕೈಕೊಳ್ಳುವಂತೆಯೂ ಇರಬೇಕು."[1]

"ನಮ್ಮ ಬಂಡವಾಳಿಗರ" ಪರವಾಗಿ ಸರಕಾರ ನಡುವೆ ಪ್ರವೇಶಿಸುವ ನೀತಿಯನ್ನು ಸರಕಾರಗಳು ಒಮ್ಮೆ ಅನುಸರಿಸಲಾರಂಭಿಸಿದ್ದರಿಂದ ಅವುಗಳು ಬಹು ದೂರವೇ ಹೋದುವು. ಬಂಡವಾಳ ಸರ್ಕಸ್ಸಿನ ಜೋಕಾಲೆಯ ಮೇಲಣ ಮನುಷ್ಯನಂತೆ. ಅದು "ಬಹು ಸರಳವಾಗಿ ಗಾಳಿಯಲ್ಲಿ ತೇಲಾಡುತ್ತದೆ." ಅದು ಸುರಕ್ಷಿತವಾಗಿರುವಂತೆ ನೋಡಿಕೊಳ್ಳುವುದು, ಅದರೊಡನೆ ಸಾಗುವುದು, ಬಹು ಕಷ್ಟದ ಕೆಲಸ. ಮೇಜರ್ ಜನರಲ್ ಸ್ಮೆಡ್ಲೆ ಡಿ. ಬಟ್ಲರ್ ಸ್ವಲ್ಪ ಮಟ್ಟಿಗೆ ಈ ಕೆಲಸ ಮಾಡಬೇಕಾಗಿತ್ತು. ಆತ ಇದನ್ನು ಬಹು ಚಿತ್ರವತ್ತಾಗಿ ಬಣ್ಣಿಸಿದ್ದಾನೆ. ಬೃಹತ್ ವ್ಯಾಪಾರ ಸಂಸ್ಥೆಗಳಿಗಾಗಿ ನಡುವೆ ಪ್ರವೇಶಿಸಬೇಕಾಗಿ ಬಂದಾಗ ನ್ಯಾಯ ಬಿಟ್ಟುಕೊಡಬಾರದೆಂಬ ಅಧ್ಯಕ್ಷ ಟಾಫ್ಟನ ಅಭಿಪ್ರಾಯವನ್ನು ಈತ ಒಪ್ಪುವುದಿಲ್ಲ. "ನಮ್ಮ ದೇಶದ ಬಹು ಚುರುಕಿನ ಸೇನಾವಿಭಾಗವಾದ ನೌಕಾಪಡೆಯ ಸದಸ್ಯನಾಗಿ ನಾನು ಮೂವತ್ತುಮೂರು ವರ್ಷ ನಾಲ್ಕು ತಿಂಗಳ ಕಾಲ ಯೋಧನಂತೆ ಸೇವೆ ಸಲ್ಲಿಸಿದ್ದೇನೆ. ಎರಡನೆ ಲೆಫ್ಟಿನೆಂಟ್‌ನಿಂದ ಮೇಜರ್ ಜನರಲ್ ವರೆಗಿನ ಎಲ್ಲ ಕಮೀಷನ್ ದರ್ಜೆಯ ಅಧಿಕಾರದಲ್ಲೂ ನಾನು ಸೇವೆ ಸಲ್ಲಿಸಿದೆ. "ಈ ಕಾಲದಲ್ಲಿ ಬಹು ಭಾಗವನ್ನು ನಾನು ಬೃಹತ್ ವ್ಯಾಪಾರಕ್ಕಾಗಿ, ವಾಲ್‌ಸ್ಟ್ರೀಟ್ ಪ್ರಭೃತಿಗಳಿಗಾಗಿ, ಬ್ಯಾಂಕರುಗಳಿಗಾಗಿ ಹೋರಾಟ ನಡಸುವ ಮೇಲ್ದರ್ಜೆಯ ಕಾಳಗಪಟುವಾಗಿ ಕಳೆದೆ. ಒಟ್ಟಿನಲ್ಲಿ ನಾನು ಬಂಡವಾಳ ವ್ಯವಸ್ಥೆಗಾಗಿ ಗುದ್ದಾಡುವ, ಪಿತೂರಿ ನಡಸುವ ಕೆಲಸ ಮಾಡಬೇಕಾಗಿತ್ತು....

"ಹೀಗೆ ನಾನು ಮೆಕ್ಸಿಕೋವನ್ನು—ಮುಖ್ಯವಾಗಿ ಟ್ಯಾಂಪಿಕೋವನ್ನು—೧೯೧೪ ರಲ್ಲಿ ಅಮೆರಿಕದ ತೈಲ ಹಿತಗಳಿಗೆ ಅಪಾಯರಹಿತವಾದದ್ದನ್ನಾಗಿ ಮಾಡಿದೆ. ನ್ಯಾಷನಲ್ ಸಿಟಿ ಬ್ಯಾಂಕಿನ ಜನ ವರಮಾನ ಗಳಿಸಲು ಹೈಟಿ ಹಾಗೂ ಕ್ಯೂಬಾಗಳು ಒಳ್ಳೆಯ ಜಾಗಗಳಾಗುವಂತೆ ಮಾಡಿದೆ....೧೯೦೦-೧೯೧೨ ರಲ್ಲಿ ಬ್ರೌನ್ ಸಹೋದರರ ಅಂತರರಾಷ್ಟ್ರೀಯ ಬ್ಯಾಂಕಿಂಗ್ ಸಂಸ್ಥೆಗಾಗಿ ನಿಕಾರಗುವಾವನ್ನು ಚೊಕ್ಕಟಗೊಳಿಸಿದೆ. ಅಮೆರಿಕದ ಸಕ್ಕರೆ ಹಿತಗಳಿಗಾಗಿ ೧೯೧೬ ರಲ್ಲಿ ಡಾಮಿನಿಕನ್ ಲೋಕರಾಜ್ಯಕ್ಕೆ ಬೆಳಕು ತಂದೆ. ೧೯೦೩ ರಲ್ಲಿ ಹಾಂಡುರಾಸು ಅಮೆರಿಕದ ಫಲ ಸಂಸ್ಥೆಗಳಿಗೆ 'ಚೆಲೋ' ಆಗುವಂತೆ ಮಾಡಿದೆ. ೧೯೨೭ ರಲ್ಲಿ ಸ್ಟ್ಯಾಂಡರ್ಡ್ ಆಯಿಲ್ (ತೈಲಸಂಸ್ಥೆ) ಎದುರಾಳಿಯ ಭೀತಿಯಿಲ್ಲದೆ ಮುಂದುವರಿಯಲು ಸಹಾಯ ಮಾಡಿದೆ.

"ಆಗ ನಾನು ಖುಷಿಯಾಗಿದ್ದೆ. ಆಗ ಗೌರವ, ಪದಕ, ಮೇಲಣ ಅಧಿಕಾರ ಮುಂತಾದ ನಾನಾ ರೀತಿಯಲ್ಲಿ ನನಗೆ ಬಹುಮಾನ ಬಂತು. ಈ ವಿಚಾರ ಈಗ ನೆನಸಿಕೊಂಡರೆ,

---

[1] Quoted in *Economic Imperialism and International Relations during the Last Fifty Years*, by A. Viallate, p. 62. The Macmillan Company, N.Y., 1923.

ನಾನು ಮಹಾ ಮೋಸಗಾರನಾದ ಆಲ್ ಕೆಪೋನನಿಗೇ ಕುತಂತ್ರದ ಮೋಸದ ವಿದ್ಯೆ ಹೇಳಿಕೊಡಬಹುದಿತ್ತು. ಆತನ ಮೋಸದ ಕಲಾಪ ನಡೆಯುತ್ತಿದ್ದದ್ದು ಮೂರು ಜಿಲ್ಲೆಗಳಲ್ಲಿ ಮಾತ್ರ. ನಾವು, ನೌಕಾಪಡೆಯ ಜನ, ಮೂರು ಖಂಡಗಳಲ್ಲಿ ನಮ್ಮ ಕೃತ್ಯ ಎಸಗಿದೆವು."[1]

ಮೇಜರ್ ಜನರಲ್ ಬಟ್ಲರನ ಅನುಭವದಿಂದ ನಾವು ತಿಳಿಯುವುದೇನೆಂದರೆ, ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲಿ ಆರಂಭವಾದ ಸಾಮ್ರಾಜ್ಯಶಾಹಿ ಇನ್ನೂ ನಮ್ಮೊಡನೆ ಇದೆ. ನಮ್ಮೊಡನೆಯೇ ಇದೆ—ಇನ್ನೂ ತೀವ್ರವಾದ ರೂಪದಲ್ಲಿದೆ. ಇದು ಹೀಗೇಕಾಗಿರಬೇಕೆಂಬುದನ್ನು ಅರಿಯುವುದು ಸುಲಭ. ಕೈಗಾರಿಕೆಯಲ್ಲಿ ಏಕಸ್ವಾಮ್ಯ ಕಡಮೆಯಾಗುತ್ತಿಲ್ಲ. ಅದು ಬೆಳೆಯುತ್ತಲೇ ಇದೆ. ಅದರೊಡನೆ, ನಾವೇ ನೋಡಿದಂತೆ, ಸಾಮ್ರಾಜ್ಯಶಾಹಿಯೂ ಬಂದೇ ಬರುತ್ತದೆ.

"ಆಧುನಿಕ ಕಾರ್ಪೊರೇಷನ್ ಮತ್ತು ಖಾಸಗಿ ಆಸ್ತಿ" ಎಂಬ ಬಗ್ಗೆ ಅಭ್ಯಾಸ ಮಾಡಿ ಬರೆದಿರುವ ಇಬ್ಬರು ಲೇಖಕರು ಅಮೆರಿಕದ ಆಧುನಿಕ ದೈತ್ಯಸಂಸ್ಥೆಗಳ ಆಕಾರ, ಐಶ್ವರ್ಯ, ಪ್ರಭಾವ ಇವುಗಳನ್ನು ಕುರಿತು ಆಶ್ಚರ್ಯಕರ ಅಂಶಗಳನ್ನು ತಿಳಿಸುತ್ತಾರೆ. ಸಂಯುಕ್ತ ಸಂಸ್ಥಾನದಲ್ಲಿ ಇಂದು ಬ್ಯಾಂಕುವ್ಯವಹಾರ ಸಂಸ್ಥೆಗಳಲ್ಲದೆ ಸುಮಾರು ಮೂರು ಲಕ್ಷ ಸಂಸ್ಥೆಗಳಿವೆ. ಇವುಗಳಲ್ಲಿ ಸುಮಾರು ಇನ್ನೂರು ಸಂಸ್ಥೆಗಳು ಒಟ್ಟು ಎಲ್ಲ ಸಂಸ್ಥೆಗಳ ಸಂಪತ್ತಿನ ಅರ್ಧ ಭಾಗದ ಮೇಲೆ ಸ್ವಾಮ್ಯ ಹೊಂದಿವೆ. ಈ ಇನ್ನೂರರಲ್ಲಿ ಹದಿನೈದು ಸಂಸ್ಥೆಗಳು ತಲಾ ಒಂದು ಲಕ್ಷ ಕೋಟಿ ಡಾಲರಿಗೂ ಹೆಚ್ಚು ಆಸ್ತಿ ಹೊಂದಿದ್ದುವು. ಅಮೆರಿಕನ್ ಟೆಲಿಫೋನ್ ಮತ್ತು ಟೆಲಿಗ್ರಾಫ್ ಕಂಪೆನಿ ಎಂಬುದು ಇವುಗಳ ಪೈಕಿ ಒಂದು. ಈ ಒಂದು ಸಂಸ್ಥೆಯ ಅಧೀನದಲ್ಲಿರುವ ಸಂಪತ್ತೇ ಅಮೆರಿಕಾ ದೇಶದ ಇಪ್ಪತ್ತೊಂದು ಸಂಸ್ಥಾನಗಳಲ್ಲಿರುವ ಒಟ್ಟು ಸಂಪತ್ತಿಗಿಂತ ಅಧಿಕವಾಗಿದೆ."[2]

ಏಕಸ್ವಾಮ್ಯ ಎಷ್ಟರ ಮಟ್ಟಿಗೆ ದೌಲತ್ತು ನಡಸುತ್ತಿದೆಯೆಂಬುದನ್ನು ಚೆನ್ನಾಗಿ ಅರಿಯಬೇಕಾದರೆ ಮೇಲೆ ಹೇಳಿದ ಲೇಖಕರು ಹೇಳಿರುವುದನ್ನೇ ಓದಬೇಕು. ಈ ಇನ್ನೂರು ಸಂಸ್ಥೆಗಳಲ್ಲಿ ಕೆಲವು ಸಂಸ್ಥೆಗಳು ಅಮೆರಿಕದ ಜನರ ದಿನಚರಿಯ ಮೇಲೆ ಏನು ಪ್ರಭಾವ ಬೀರಿವೆಯೆಂಬುದನ್ನು ಕುರಿತು ಅವರು ಬರೆದಿರುವುದನ್ನೋದಬೇಕು. "ಈ ಮಹಾ ಸಂಸ್ಥೆಗಳು ಅಮೆರಿಕದ ಕೈಗಾರಿಕೆಯ ಅಸ್ಥಿಪಂಜರ. ಪ್ರತಿ ವ್ಯಕ್ತಿಯೂ ಸದಾ ಇವುಗಳ ಸಂಪರ್ಕ ಹೊಂದಿರಬೇಕು. ಇವುಗಳ ಸೇವೆಯನ್ನು ಇವನು ಬಿಟ್ಟೂ ಬಿಡದೆ ಪಡೆಯಲೇ ಬೇಕಾಗುವುದು. ಅವನು ಸ್ವಲ್ಪ ದೂರ ಹೋಗಬೇಕಾದರೆ ಅವನು ದೊಡ್ಡ ರೈಲು ವ್ಯವಸ್ಥೆಗಳಲ್ಲೊಂದರಲ್ಲಿ ಪ್ರಯಾಣ ಸಾಗಿಸಬೇಕಾಗುವುದು ಖಂಡಿತ. ಅವನ ರೈಲು ಬಂಡಿ ಎಳೆಯುವ ಎಂಜಿನ್ನು ಬಹುಶಃ ಅಮೆರಿಕನ್ ಲೋಕೋಮೋಟಿವ್ ಕಂಪೆನಿಯಿಂದಲೋ ಬಾಲ್ಡ್ವಿನ್

---

[1] *Common Sense*, Nov., 1935.

[2] A. A. Berle and G. C. Means, *The Modern Corporation and Private Property*, p. 19. The Macmillan Company, N. Y., 1933.

ಲೋಕೋಮೋಟಿವ್ ವರ್ಕ್ಸ್‌ನಿಂದಲೋ ನಿರ್ಮಿತ. ಅವನು ಕುಳಿತಿರುವ ಬಂಡಿಯನ್ನು ನಿರ್ಮಿಸಿದ್ದು ಬಹುಶಃ ಅಮೆರಿಕನ್ ಕಾರ್ ಮತ್ತು ಫೌಂಡ್ರಿ ಕಂಪೆನಿಯೋ ಅಥವಾ ಅದರ ಉಪ ಸಂಸ್ಥೆಗಳಲ್ಲೊಂದೋ ಆಗಿರಬೇಕು....ರೈಲು ಕಂಬಿಯ ವಿಚಾರವೋ ? ಪಟ್ಟಿಗೆ ಸೇರಿರುವ ಹನ್ನೊಂದು ಉಕ್ಕಿನ ಸಂಸ್ಥೆಗಳ ಪೈಕಿ ಯಾವುದಾದರೂ ಒಂದು ತಯಾರಿಸಿದ್ದಿರ ಬೇಕು ಅದು. ಅದಕ್ಕೆ ಬೇಕಾದ ಕಲ್ಲಿದ್ದಲ ಸರಬರಾಯಿ ಆ ರೈಲ್ವೆ ಕಂಪೆನಿಗೆ ಸೇರಿದ ಗಣಿಯಿಂದಲೇ ಬಂದಿರಬಹುದು. ಹಾಗಿಲ್ಲದಿದ್ದರೆ ನಾಲ್ಕು ಕಲ್ಲಿದ್ದಲು ಕಂಪೆನಿಗಳ ಪೈಕಿ ಒಂದರಿಂದ ಬಂದಿರಬೇಕು. ಈತ ರೈಲಿನಲ್ಲಿ ಪ್ರಯಾಣ ಮಾಡದೆ ಮೋಟಾರು ಕಾರಿನಲ್ಲೇ ಪ್ರಯಾಣ ಮಾಡುವನೆನ್ನಿ. ಈತ ಪ್ರಯಾಣ ಮಾಡುತ್ತಿರುವ ಕಾರು ಫೋರ್ಡ್, ಜನರಲ್ ಮೋಟಾರ್ಸ್, ಸ್ಟೂಡೀ ಬೇಕರ್ ಅಥವಾ ಕ್ರಿಸ್ಲರ್ ಕಂಪೆನಿಯಿಂದ ತಯಾರಾಗಿರಬೇಕು. ಅದರ ಚಕ್ರದ ಟೈರು ಫೈರ್‌ಸ್ಟೋನ್, ಗುಡ್ರಿಚ್, ಗುಡ್ ಈಯರ್ ಅಥವಾ ಯುನೈಟೆಡ್ ಸ್ಟೇಟ್ಸ್ ರಬ್ಬರ್ ಕಂಪೆನಿಯಿಂದ ಸರಬರಾಯಿ ಆಗಿರಬೇಕು.....

"ಅಥವಾ ಈ ವ್ಯಕ್ತಿ ತನ್ನ ಮನೆಯಲ್ಲೇ—ತಕ್ಕ ಮಟ್ಟಿಗೆ ಪ್ರತ್ಯೇಕವಾಗಿ—ಏಕಾಂತ ದಲ್ಲಿರುವನೆಂದಿಟ್ಟುಕೊಳ್ಳಿ. ಈ ಇನ್ನೂರು ಬೃಹತ್ ಕಂಪೆನಿಗಳು ಈತನಿಗಾಗಿ ಏನು ಮಾಡುವುವು ? ಈತನಿಗೆ ಬೇಕಾದ ವಿದ್ಯುತ್ತು, ಅನಿಲ ಇವು ಸರ್ವಜನೋಪಯುಕ್ತ ಕಂಪೆನಿಗಳಲ್ಲೊಂದರಿಂದ ಒದಗುವುವು. ಅವನ ಅಡುಗೆ ಮನೆಯ ಅಲ್ಯೂಮಿನಿಯಂ ಪಾತ್ರೆ-ಪರಟ ಅಮೆರಿಕದ ಅಲ್ಯೂಮಿನಿಯಂ ಕಂಪೆನಿಯಿಂದ ಬಂದದ್ದು. ಅವನ ವಿದ್ಯುತ್ ಶೀತಕ ಜನರಲ್ ಮೋಟಾರ್ ಕಂಪೆನಿಯಿಂದ ಬಂದಿರಬಹುದು ; ಅಥವಾ ಜನರಲ್ ಎಲೆಕ್ಟ್ರಿಕ್ ಕಂಪೆನಿಯಿಂದಲೇ ಬಂದಿರಬಹುದು. ಕೊಳಾಯಿ ಮುಂತಾದ ನೆಲೆಗಟ್ಟು ಕ್ರೇನ್ ಕಂಪೆನಿಯಿಂದ ಬಂದಿರಬಹುದು. ಆತನ ಶಾಖೋಪಕರಣವನ್ನು ಅಮೆರಿಕನ್ ರೇಡಿಯೇಟರ್ ಮತ್ತು ಸ್ಟ್ಯಾಂಡರ್ಡ್ ಸ್ಯಾನಿಟರಿ ಕಾರ್ಪೊರೇಷನ್ನು ಒದಗಿಸಿರಬಹುದು. ಆತ ತನ್ನ ಜಿನಸಿಯಲ್ಲಿ ಕೆಲವನ್ನಾದರೂ ಗ್ರೇಟ್ ಅಟ್ಲಾಂಟಿಕ್ ಮತ್ತು ಪೆಸಿಫಿಕ್ ಟೀ ಕಂಪೆನಿಯಿಂದ ಕೊಳ್ಳಬಹುದು....ಆತ ತನಗೆ ಬೇಕಾದ ಔಷಧದಲ್ಲಿ ಸ್ವಲ್ಪವನ್ನು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಯುನೈಟೆಡ್ ಡ್ರಗ್ ಕಂಪೆನಿಯಿಂದ ಪಡೆಯ ಬಹುದು. ಅವನು ಕೊಳ್ಳುವ ಸಂಬಾರ ಜಿನಸಿ ಹಾಕಿರುವ ಡಬ್ಬಗಳು ಅಮೆರಿಕನ್ ಕ್ಯಾನ್ ಕಂಪೆನಿಯವಾಗಿರಬಹುದು. ಅವನು ಕೊಳ್ಳುವ ಸಕ್ಕರೆ ಪರಿಷ್ಕೃತವಾದದ್ದು ಬೃಹತ್ ಕಂಪೆನಿಗಳಲ್ಲೊಂದರಿಂದ. ಅವನು ಕೊಳ್ಳುವ ಮಾಂಸ ಸ್ವಿಫ್ಟ್, ಆರ್ಮರ್ ಅಥವಾ ವಿಲ್ಸನ್ ಕಂಪೆನಿಯದಾಗಿರಬೇಕು. ಅವನು ಕೊಳ್ಳುವ ಬಿಸ್ಕತ್ತು ನ್ಯಾಷನಲ್ ಬಿಸ್ಕತ್ ಕಂಪೆನಿಯ ದಿರಬಹುದು.....

"ರೇಡಿಯೋವಿನಿಂದ ಮನೋರಂಜನೆ ಪಡೆಯಬಯಸುವುದಾದರೆ, ಆತ ಅಮೆರಿಕದ ರೇಡಿಯೋ ಕಾರ್ಪೊರೇಷನ್ನಿನಿಂದ ಲೈಸೆನ್ಸ್ ಪಡೆದು ಮಾಡಿದ ರೇಡಿಯೋವನ್ನೇ ಬಳಸ ಬೇಕಾದೀತು. ಆತ ಹೊರಗೆ ಹೋಗಿ ಚಲನಚಿತ್ರ ನೋಡುವುದಾದರೆ, ಪ್ಯಾರಮೌಂಟ್, ಫಾಕ್ಸ್ ಅಥವಾ ವಾರ್ನರ್ ಬ್ರದರ್ಸ್ ಅವರ ತಯಾರಿಕೆಯೇ (ಈಸ್ಟ್‌ಮನ್ ಕೊಡಕ್

ಫಿಲಂಸಲ್ಲಿ ತಯಾರಿಸಿದ್ದು). ಅವನು ಹೋಗುವ ಚಲನಚಿತ್ರ ಮಂದಿರವೂ ಈ ಚಲನಚಿತ್ರ ನಿರ್ಮಾಪಕ ಸಂಸ್ಥೆಗಳ ಪೈಕಿ ಒಂದರ ಹತೋಟಿಯಲ್ಲಿರುವುದೇ ಆಗಿದೆ. ಅವನು ಯಾವ ಸಿಗರೇಟಿನ ಆಕರ್ಷಕ ಜಾಹಿರಾತಿಗೇ ಬಲಿ ಬೀಳಲಿ, 'ದೊಡ್ಡ ನಾಲ್ಕು' ಹೊಗೆಸೊಪ್ಪಿನ ಕಂಪೆನಿಗಳು ತಯಾರಿಸಿದ ನಾನಾ 'ರಖಂ'ಗಳ ಸಿಗರೇಟುಗಳ ಪೈಕಿ ಒಂದನ್ನೇ ಸೇದಿಯಾನು. ಅವನು ಸಿಗರೇಟು ಕೊಳ್ಳುವ ಬೀದಿಯ ಕೊನೆಯ ಅಂಗಡಿಯಾದರೂ 'ಯುನೈಟೆಡ್ ಸಿಗಾರ್' ಅಂಗಡಿಯೇ ಆಗಿರಬಹುದು."[1]

ಹೀಗೆ, ಎಲ್ಲೆಲ್ಲೂ—ಪ್ರತಿಯೆಡೆಯಲ್ಲೂ—ಇದೇ: ಏಕಸ್ವಾಮ್ಯ. ಇತರ ಮಹಾ ಕೈಗಾರಿಕಾ ರಾಷ್ಟ್ರಗಳ ವಿಚಾರದಲ್ಲೂ ಇದು ನಿಜ. ತಮ್ಮ ರಾಷ್ಟ್ರೀಯ ಪೇಟೆಯನ್ನು ಸ್ವಾಧೀನದಲ್ಲಿರಿಸಿಕೊಂಡ ಈ ದೈತ್ಯ ಸಂಸ್ಥೆಗಳು ಅಂತರ ರಾಷ್ಟ್ರೀಯ ಪೇಟೆಗಳಲ್ಲಿ ಸಂಧಿಸಿದಾಗ ಏನಾಗುವುದು? ಬಾಣ ಬಿರುಸು: ದೀರ್ಘ ದುಷ್ಟ ಕಟು ಸ್ಪರ್ಧೆ. ಅನಂತರ—ಅಂತರರಾಷ್ಟ್ರೀಯ ಒಪ್ಪಂದಗಳು, ಸಂಘಗಳು, ಕೂಟಗಳು. ಈ ಏಕಸ್ವಾಮ್ಯ "ಬಂಡವಾಳಿಗರು ಜಗತ್ತನ್ನು ಹರಿದು ಹಂಚಿಕೊಳ್ಳುವರು—ವೈಯಕ್ತಿಕ ದ್ವೇಷಾಸೂಯೆಯಿಂದಲ್ಲ, ಅವರು ತಲುಪಿರುವ ಕೇಂದ್ರೀಕರಣದ ಪರಮಾವಧಿಯ ದೆಸೆಯಿಂದ ಅವರು ಹೀಗೆ ಮಾಡಲೇಬೇಕು. ಇಲ್ಲದಿದ್ದರೆ ಅವರಿಗೆ ಲಾಭ ದೊರಕದು. ಅವರು ಇದನ್ನು 'ಬಂಡವಾಳಕ್ಕೆ ಅನುಗುಣವಾಗಿ'ಹಂಚಿಕೊಳ್ಳುವರು....ಆದರೆ ಈ ಬಲ ಆರ್ಥಿಕ ರಾಜಕೀಯ ಅಭಿವೃದ್ಧಿಗೆ ಅನುಗುಣವಾಗಿ ವ್ಯತ್ಯಾಸಗೊಳ್ಳುತ್ತಾ ಇರುತ್ತದೆ.[2]

ಅಂತರರಾಷ್ಟ್ರೀಯ ಕೂಟಗಳು ಪ್ರಪಂಚದ ಪೇಟೆಯನ್ನು ವಿಭಾಗ ಮಾಡಿಕೊಂಡ ಮೇಲೆ, ಸ್ಪರ್ಧೆ ಕೊನೆಗೊಂಡು ಶಾಶ್ವತ ಶಾಂತಿಯ ಯುಗ ಆರಂಭವಾಗುವುದು ಸಹಜವೆನಿಸುವುದು. ಆದರೆ ಹೀಗಾಗುವುದಿಲ್ಲ. ಏಕೆಂದರೆ ಪರಸ್ಪರ ಬಲಾಬಲ ಸದಾ ವ್ಯತ್ಯಾಸವಾಗುತ್ತಿರುತ್ತದೆ. ಕೆಲವು ಕಂಪೆನಿಗಳು ದೊಡ್ಡವೂ ಹೆಚ್ಚು ಪ್ರಬಲವೂ ಆಗುತ್ತವೆ. ಇತರ ಕೆಲವು ಕ್ಷೀಣಿಸುತ್ತವೆ. ಆದ್ದರಿಂದ ಒಮ್ಮೆ ನ್ಯಾಯವೆನಿಸಿದ್ದು ಸ್ವಲ್ಪ ಕಾಲಾನಂತರ ಅನ್ಯಾಯವೆನಿಸುವುದು. ಬಲಿಷ್ಠ ಗುಂಪಿನಲ್ಲಿ ಅತೃಪ್ತಿ. ಹಿಂದೆಯೇ, ವ್ಯಾಪಾರದಲ್ಲಿ ಹೆಚ್ಚು ಪಾಲಿಗೆ ಹೋರಾಟ. ಇದು ಹಲವು ಬಾರಿ ಯುದ್ಧಕ್ಕೇ ಆಮಂತ್ರಣ ನೀಡುತ್ತದೆ.

ವಸಾಹತುಗಳ ರಾಜಕೀಯ ಹತೋಟಿಯ ಬಗ್ಗೆಯೂ ಈ ಮಾತು ನಿಜ. ಎಪ್ಪತ್ತು ವರ್ಷಗಳ ಹಿಂದೆ, ಯಾರಿಗೂ ಸೇರದಿದ್ದ 'ಸ್ವತಂತ್ರ' ಪ್ರದೇಶ ಬೇಕಾದಷ್ಟಿತ್ತು. ಆದರೆ ಇಂದು ಇದು ನಿಜವಲ್ಲ. ಪುನರ್ವಿಂಗಡಣೆ ಸಾಧ್ಯವಾಗುವುದಾದರೆ, ಇಲ್ಲದವರು ಉಳ್ಳವರಿಂದ ತಮಗೆ ಬೇಕಾದ್ದನ್ನು ಕಿತ್ತುಕೊಳ್ಳುವರು. ಜರ್ಮನಿ ಇಟಲಿ ಜಪಾನ್ ದೇಶಗಳಿಗೆ ಇಂದು ವಸಾಹತುಗಳು ಬೇಕು. ಇಟಲಿ ಜಪಾನುಗಳು ಸಾಧ್ಯವಾದಷ್ಟು ಕಬಳಿಸುತ್ತಿವೆ. ಬರಲಿರುವ ಕಬಳಿಕೆಗಾಗಿ ಜರ್ಮನಿ ಶಸ್ತ್ರ ಸನ್ನದ್ಧವಾಗುತ್ತಿದೆ. ಸಾಮ್ರಾಜ್ಯವಾದದ ನೇರ ದಾರಿ ಯುದ್ಧಕ್ಕೆ.

---

[1] *Ibid.*, pp. 24, 25.

[2] Lenin, *op. cit.*, p. 68.

ಆದರೆ ಯುದ್ಧ ಯಾವ ಸಮಸ್ಯೆಯನ್ನೂ ಶಾಶ್ವತವಾಗಿ ಪರಿಹರಿಸದು. ಮೇಜಿನ ಸುತ್ತ ಕುಳಿತು ಚೌಕಾಯಿಸಿ ಮಾಡುವುದರಿಂದ ಮನಸ್ತಾಪಗಳ ಪರಿಹಾರ ಸಾಧ್ಯವಾಗದಿದ್ದರೆ, ಆಸ್ಫೋಟಕವಸ್ತು, ವಿಷವಾಯು, ಊನ ಹೊಂದಿದ ಜನ, ಚುಕ್ಕುಚೂರಾದ ಹಣ— ಇವುಗಳ ರೂಪದಲ್ಲಿ ನಡಸಿದ ಚೌಕಾಯಿಸಿಯಿಂದ ಪರಿಹರಿಸಲು ಸಾಧ್ಯವೆ? ಇಲ್ಲ. ಏಕಸ್ವಾಮ್ಯ ಬಂಡವಾಳ ವ್ಯವಸ್ಥೆಯ ಹೆಚ್ಚುವರಿ ಸರಕಿಗೂ ಬಂಡವಾಳಕ್ಕೂ ಹೊರದಾರಿ ಬೇಕು. ಇದು ಉಳಿದಿರುವವರೆಗೂ ದ್ವೇಷಾಸೂಯೆ ಉಳಿದೇ ಉಳಿಯುತ್ತವೆ. ಪೇಟೆಯ ಬೇಟೆ ಸಾಗಿಯೇ ಸಾಗುತ್ತದೆ.

ಪ್ರಮುಖ ಸಾಮ್ರಾಜ್ಯವಾದಿ ಸೆಸಿಲ್ ರ್ಹೋಡ್ಸನಿಗೆ ಇದರ ಅರಿವು ತೀವ್ರವಾಗಿತ್ತು. ಹೊಸ ಪೇಟೆಯ ಸಂಪಾದನೆಯೇ ಅವನ ಸ್ವಭಾವವಾಯಿತು. ಹೊಸ ಪ್ರದೇಶಗಳ ಆಕ್ರಮಣವೆಂಬುದು ಅವನ ರಕ್ತಗುಣವಾಯಿತು. ಆತ ಒಮ್ಮೆ ಸ್ನೇಹಿತನೊಬ್ಬನಿಗೆ ಹೇಳಿದ ಮಾತಿನಲ್ಲಿ ಈ ಸಾಮ್ರಾಜ್ಯವಾದದ ಬೋಧನೆ ಆತನಲ್ಲಿ ಎಷ್ಟಿತ್ತೆಂಬುದರ ಸ್ಪಷ್ಟ ಕಲ್ಪನೆ ಯಾದೀತು. "ಪ್ರಪಂಚವೆಲ್ಲಾ ಹೆಚ್ಚುಕಡಿಮೆ ಹಂಚಿ ಹೋಗಿದೆ. ಇನ್ನೂ ಉಳಿದಿರ ಬಹುದಾದ ಭಾಗದ ಹಂಚಿಕೆಯೂ ಆಗುತ್ತಾ ಇದೆ. ಅದೂ ಗೆಲ್ಲಲ್ಪಡುತ್ತಿದೆ, ವಸಾಹತಾಗಿ ಪರಿವರ್ತನೆ ಹೊಂದುತ್ತಿದೆ. ರಾತ್ರಿಯ ವೇಳೆ ತಲೆಯ ಮೇಲೆ ಆಗಸದಲ್ಲಿ ಕಾಣುವ ಈ ನಕ್ಷತ್ರಗಳು, ನಾವು ತಲುಪಲಾರದ ಈ ವಿಶಾಲ ಪ್ರಪಂಚಗಳು, ನಿಲುಕುವುದಾದರೆ! ಗ್ರಹಗಳನ್ನೇ ಗೆದ್ದೇನು, ಸಾಧ್ಯವಾಗುವುದಾದರೆ! ಇದನ್ನು ಕುರಿತು ನಾನು ಆಗಾಗ್ಗೆ ಚಿಂತಿಸುತ್ತೇನೆ. ಇವು ಇಷ್ಟು ಸ್ಪಷ್ಟವಾಗಿ, ಆದರೆ ಇಷ್ಟೇ ದೂರವಾಗಿ, ಇರುವುದನ್ನು ಕಂಡಾಗ ನನಗೆ ಖೇದವಾಗುತ್ತದೆ."[1]

ರ್ಹೋಡ್ಸ್ ಬಹು ಬೇಗ ಸತ್ತ. ಏನು ಅನ್ಯಾಯ! ಏಕೆಂದರೆ ನ್ಯೂ ಮೆಕ್ಸಿಕೋವಿನ ಮರಳು ಕಾಡೊಂದರಲ್ಲಿ ಪ್ರೊ|| ಆರ್. ಎಚ್. ಗೊಡ್ಡಾರ್ಡ್ ಚಂದ್ರಲೋಕ ಯಾನ ಮಾಡುವ ರಾಕೆಟ್ ಒಂದರ ಪ್ರಯೋಗ ಪರೀಕ್ಷೆ ನಡಸುತ್ತಿದ್ದಾನೆ. ವೇಲ್ಸಿನ ಪರ್ವತ ಪ್ರದೇಶದಲ್ಲಿ ಬ್ರಿಟಿಷ್ ಅಂತರ ಗ್ರಹಯಾನ ಸಂಘ ಗ್ರಹಗಳನ್ನು ತಲುಪಬಲ್ಲ ರಾಕೆಟ್ಟಿನ ಪರಿಷ್ಕರಣ ಕಾರ್ಯದಲ್ಲಿ ತೊಡಗಿದೆ. ರ್ಹೋಡ್ಸ್ ಮಾತ್ರ ಬದುಕಿದ್ದಿದ್ದರೆ!

ಆದರೆ ಆತನ ಮನೋಭಾವ ಎಂದಿಗಿಂತ ಪ್ರಬಲವಾಗಿ ಇನ್ನೂ ಉಳಿದಿದೆಯೆಂಬುದು ಆತನ ಆತ್ಮಕ್ಕೆ ಎಷ್ಟೋ ತೃಪ್ತಿ ನೀಡೀತು. ಪ್ರಥಮ ರಾಕೆಟ್ ನೌಕೆಯ ಪ್ರಥಮ ಯಾತ್ರಿಕನನ್ನು ಚಂದ್ರಲೋಕಮಾನವ ಸ್ವಾಗತಿಸಿದಾಗ, ಆ ಪ್ರಥಮ ಯಾತ್ರಿಕ ಈ ಸ್ವಾಗತಕ್ಕೆ ಉತ್ತರವಾಗಿ ಒಂದು ಪ್ರಶ್ನೆಯನ್ನೇ ತನ್ನ ಆತಿಥೇಯನ ಕಿವಿಯಲ್ಲಿ ಪಿಸುಗುಟ್ಟಿ ಯಾನು. ಆ ಪ್ರಶ್ನೆ ಇದು; "ನಿಮ್ಮ ಹಳೆಯ ಕಾಲುವೆ ದುರಸ್ತು ಮಾಡಿ ಹೊಸ ಕಾಲುವೆ ನಿರ್ಮಿಸಲು ಹಣ ಸಾಲ ತೆಗೆದುಕೊಳ್ಳುವಿರಾ, ಹೇಗೆ? ನೋಡಿ, ಇಲ್ಲಿ ರುಜು ಹಾಕಿ; ಉಳಿದ ವಿಚಾರ ಯೋಚಿಸಬೇಡಿ. ನಮ್ಮ ಬ್ಯಾಂಕು ಉಳಿದದ್ದನ್ನು ನೋಡಿಕೊಳ್ಳುತ್ತದೆ.... ಅಷ್ಟೇ....ವಂದನೆಗಳು."

[1] Rhodes, *op. cit.*, p. 190.

## ೨೦. ಅತ್ಯಂತ ದುರ್ಬಲ ಕೊಂಡಿ

"ಆ ಕಾಲದಲ್ಲಿ ತಯಾರಾದ ವಸ್ತುಗಳೇ ಅಲ್ಲದೆ ಹಿಂದೆ ನಿರ್ಮಾಣವಾದ ಉತ್ಪಾದನ ಶಕ್ತಿಗಳೂ ಕೂಡ ಆಗಿಂದಾಗ್ಗೆ ಸಂಭವಿಸುವ ಈ ಬಿಕ್ಕಟ್ಟುಗಳಲ್ಲಿ ಬಹುತೇಕ ನಾಶಗೊಳ್ಳು ತ್ತವೆ. ಈ ಬಿಕ್ಕಟ್ಟುಗಳಲ್ಲಿ ಒಂದು ಬಗೆಯ ಸಾಂಕ್ರಾಮಿಕ ವ್ಯಾಧಿ ಹಬ್ಬುತ್ತದೆ. ಹಿಂದಣ ಯುಗಗಳಲ್ಲಿ ಕಂಡು ಕೇಳಿಲ್ಲದ, ಆಗ ಆಭಾಸವೆನಿಸಬಹುದಾಗಿದ್ದ, ಸಾಂಕ್ರಾಮಿಕವಿದು— ಮಿತಿಮೀರಿದ ಉತ್ಪತ್ತಿ. ಸಮಾಜ ತಾತ್ಕಾಲಿಕವಾಗಿ ಅನಾಗರಿಕತೆಯ ಸ್ಥಿತಿಯನ್ನಡರುತ್ತದೆ. ಒಂದು ಮಹಾಕ್ಷಾಮದಿಂದ, ಜಾಗತಿಕ ಧ್ವಂಸ ಕಾರ್ಯದಿಂದ, ಸಾಧನವೆಲ್ಲ ಕಡಿದು ಹೋದಂತೆ ತೋರುವುದು ; ಕೈಗಾರಿಕೆ ವಾಣಿಜ್ಯ ನಾಶವಾದಂತೆನಿಸುವುದು. ಹೀಗೇಕೆ? ಏಕೆಂದರೆ, ಅತಿ ನಾಗರಿಕತೆಯಿಂದ, ಅತಿಯಾದ ಜೀವನೋಪಾಯ ಸಾಧನಗಳಿರುವುದ ರಿಂದ, ಅತಿಯಾದ ಕೈಗಾರಿಕೆಯಿಂದ, ಅತಿಯಾದ ವಾಣಿಜ್ಯದಿಂದ."[1]

ಇದು ನಿನ್ನೆ ಬರೆದ ಮಾತಲ್ಲ, ಅಲ್ಲ.

ಸುಮಾರು ನೂರು ವರ್ಷ ಹಿಂದೆ ೧೮೪೮ರಲ್ಲಿ ಮಾರ್ಕ್ಸ್, ಎಂಗೆಲ್ಸ್ 'ಕಮ್ಯೂನಿಸ್ಟ್ ಪ್ರಣಾಳಿಕೆ'ಯಲ್ಲಿ ಬರೆದ ಮಾತು ಇದು. ಇದೇನು ಅದ್ಭುತ ಭವಿಷ್ಯವಾದವಲ್ಲ, ಕಾಲ ಜ್ಞಾನವಲ್ಲ. ಆ ಕಾಲದಲ್ಲಿ, ಕೆಲವು ವರ್ಷಕ್ಕೊಮ್ಮೆ, ಬಂಡವಾಳವಾದಿ ಸಮಾಜಕ್ಕೆ ಸಂಭವಿಸುತ್ತಿದ್ದುದರ ವರ್ಣನೆಯಿದು. ಇದು ಪದೇ ಪದೇ ಹೀಗೆ ಸಂಭವಿಸುತ್ತಲೇ ಇದೆಯೆಂಬುದು ದೊಡ್ಡವರಾದ ನಮಗೆಲ್ಲ ಗೊತ್ತೇ ಇರುವ ಸಂಗತಿ. ಮೇಲೆ ಉದ್ಧರಿಸಿರುವ ಮಾತುಗಳು ನಮ್ಮ ಕಿವಿಗೆ ಪರಿಚಿತ, ಏಕೆಂದರೆ ನೀವೂ ನಾವೂ ಪ್ರಪಂಚವೇ ಹಿಂದೆ ಅರಿಯದಿದ್ದಷ್ಟು ದೊಡ್ಡ ಪ್ರಮಾಣದ ಆರ್ಥಿಕ ಬಿಕ್ಕಟ್ಟುಗಳ ಮೂಲಕ ಸಾಗಿದ್ದೇವೆ.

ಚರಿತ್ರೆಯ ಎಲ್ಲ ಕಾಲಗಳಲ್ಲೂ ಬಿಕ್ಕಟ್ಟುಗಳು ಇದ್ದದ್ದುಂಟು. ಆದರೆ ಬಂಡವಾಳ ವ್ಯವಸ್ಥೆ ಬೆಳೆಯಲು ಹಿಂದೆ ಸಂಭವಿಸುತ್ತಿದ್ದ ಬಿಕ್ಕಟ್ಟುಗಳಿಗೂ ಅನಂತರದ ಬಿಕ್ಕಟ್ಟುಗಳಿಗೂ ಸ್ಪಷ್ಟ ವ್ಯತ್ಯಾಸವುಂಟು. ಹದಿನೆಂಟನೆಯ ಶತಮಾನಕ್ಕೆ ಹಿಂದಣ ಬಿಕ್ಕಟ್ಟುಗಳು ಸಾಮಾನ್ಯವಾಗಿ ಒಳ್ಳೆಯ ಬೆಳೆ ಆಗದಿದ್ದುದರ ಪರಿಣಾಮ. ಆದರೆ ನಾವು ಕಂಡ ಬಿಕ್ಕಟ್ಟು ಗಳು, ಬಂಡವಾಳ ವ್ಯವಸ್ಥೆಯ ಆಗಮನದೊಡನೆ ತಲೆದೋರಿದ ಬಿಕ್ಕಟ್ಟುಗಳು, ಇಂಥ ಅಸಾಮಾನ್ಯ ಘಟನೆಗಳ ಪರಿಣಾಮವಲ್ಲ. ಇವು ನಮ್ಮ ಅರ್ಥವ್ಯವಸ್ಥೆಯ ಒಂದು ಅವಿಭಾಜ್ಯಭಾಗ. ಈ ಬಿಕ್ಕಟ್ಟುಗಳ ಲಕ್ಷಣ ಅಭಾವವಲ್ಲ, ಅತಿ ಸಮೃದ್ಧಿ : ಈ ಬಿಕ್ಕಟ್ಟು ಗಳಲ್ಲಿ ಬೆಲೆಗಳು ಏರುವುದಿಲ್ಲ, ಇಳಿಯುತ್ತವೆ.

ಬಿಕ್ಕಟ್ಟುಗಳ, ಮುಗ್ಗಟ್ಟುಗಳ, ಇತರ ಲಕ್ಷಣಗಳೇನೆಂಬುದು ನಿಮಗೆ ಗೊತ್ತು. ದುಡಿಮೆ ಬಂಡವಾಳಗಳ ನಿರುದ್ಯೋಗ, ಲಾಭದ ಇಳಿಮೆ, ಉದ್ಯಮ ಚಟುವಟಿಕೆಯ—ಎಂದರೆ ಉತ್ಪಾದನೆ, ವ್ಯಾಪಾರ ಇವುಗಳ—ಮಂದಗಮನ ಇವು ಈ ಇತರ ಲಕ್ಷಣಗಳು.

---

[1] *Communist Manifesto, op. cit.*, pp. 20, 21.

ಸಮೃದ್ಧಿಯ ನಡುವೆಯೂ ಬಡತನದ ವಿರೋಧಾಭಾಸ ಎಲ್ಲೆಲ್ಲೂ ತಾಂಡವಾಡುತ್ತದೆ.

ಕಚ್ಚಾ ವಸ್ತುಗಳಿಗೆ ಅಭಾವವೆ? ಖಂಡಿತ ಇಲ್ಲ. ಹತ್ತಿ ಬೆಳೆಗಾರರಿಗೆ ತಾವು ಬೆಳೆದ ಹತ್ತಿ ಮಾರಲು ಕಾತರ. ಬಂಡವಾಳ ಸಾಮಗ್ರಿಯ ಅಭಾವವೆ? ಖಂಡಿತ ಇಲ್ಲ. ತಮ್ಮ ಗಿರಣಿಗಳ ಕದಿರು ಮಗ್ಗಗಳು ಮತ್ತೆ ಚಲಿಸಬೇಕೆಂಬ ತೀವ್ರಾಭಿಲಾಷೆ ಗಿರಣಿಯೊಡೆಯರಿಗೆ. ದುಡಿಮೆಗಾರರ ಅಭಾವವೆ? ಖಂಡಿತ ಇಲ್ಲ. ಕೆಲಸ ಕಳೆದುಕೊಂಡ ಗಿರಣಿ ಕಾರ್ಮಿಕರು ತಮಗೆ ಇಲ್ಲದ ಹತ್ತಿ ಬಟ್ಟೆಯನ್ನೇ ತಯಾರಿಸಲು ಮತ್ತೆ ಗಿರಣಿಗೆ ಬರಲು ಪ್ರಬಲೇಚ್ಛೆ ಹೊಂದಿದ್ದಾರೆ.

ಇಲ್ಲ. ಕಚ್ಚಾ ಸಾಮಗ್ರಿ, ಬಂಡವಾಳ ಸಾಮಗ್ರಿ, ಉತ್ಪಾದನೆಗೆ ಅಗತ್ಯವಾದ ದುಡಿಮೆಗಾರರು—ಎಲ್ಲಾ ಉಂಟು. ಆದರೂ ಉತ್ಪಾದನಕಾರ್ಯ ನಡೆಯುವುದಿಲ್ಲ. ಏಕೆ?

ಇವಕ್ಕೆ ಉತ್ತರದ ಬಗ್ಗೆ ಅರ್ಥಶಾಸ್ತ್ರಜ್ಞರಲ್ಲಿ ಒಮ್ಮತವಿಲ್ಲ.

ಆದರೆ ಒಂದು ವಿಚಾರದಲ್ಲಿ ಅವರಲ್ಲಿ ಒಮ್ಮತವುಂಟು. ಈ ಅಂಶವನ್ನು ನೀವು ಪ್ರಥಮತಃ ಅರಿಯದಿದ್ದರೆ, ಬಿಕ್ಕಟ್ಟುಗಳ ಕಾರಣಗಳು ನಿಮಗೆ ಅಗೋಚರ ರಹಸ್ಯವಾಗಿಯೇ ಉಳಿಯುವುವು.

ಎಲ್ಲಕ್ಕಿಂತ ಬಹು ಮುಖ್ಯವಾದ ಅಂಶ ಇದು: ಬಂಡವಾಳ ವ್ಯವಸ್ಥೆಯಲ್ಲಿ ಪದಾರ್ಥಗಳ ತಯಾಂಕೆ ಬಳಕೆಗಾಗಿ ಅಲ್ಲ, ಲಾಭಪ್ರದ ವಿನಿಮಯಕ್ಕಾಗಿ. ನಮ್ಮ ಸಮಾಜದಲ್ಲಿ, ನೆಲದಿಂದ ಲೋಹ ತೆಗೆಯುವ ಕೆಲಸ, ಬೆಳೆಯ ಕೊಯ್ಲು, ಜನಕ್ಕೆ ಉದ್ಯೋಗ, ಕೈಗಾರಿಕೆಯ ಚಕ್ರದ ಯಂತ್ರದ ತಿರುಗಣೆ, ಪದಾರ್ಥ ಕೊಳ್ಳುವ ಮಾರುವ ಕೆಲಸ—ಇವೆಲ್ಲಾ ಸಾಗುವುದು, ಉತ್ಪಾದನ ಸಾಧನಗಳ ಒಡೆಯರಿಗೆ ಬಂಡವಾಳಿಗರಿಗೆ ಲಾಭ ದೊರಕುವ ಅವಕಾಶವಿದ್ದಾಗಲೇ. ೧೯೩೪ರ ಜುಲೈ ೧೩ ರಂದು ವಾಲ್ಟರ್ ಲಿಪ್‌ಮನ್ ಎಂಬವರು ಹೆರಾಲ್ಡ್ ಟ್ರಿಬ್ಯೂನ್ ಪತ್ರಿಕೆಯಲ್ಲಿ ಈ ರೀತಿ ಸೊಗಸಾಗಿ ಬರೆದಿದ್ದಾರೆ: "ದೊಡ್ಡ ಸಣ್ಣ ಬಂಡವಾಳಿಗರು ಲಾಭಗಳಿಕೆಯ ಉದ್ದೇಶದಿಂದ ಉದ್ಯಮಗಳಲ್ಲಿ ಹಣ ಹೂಡಲಾರಂಭಿಸುವವರೆಗೂ, ಪ್ರಸಕ್ತ ಪರಿಸ್ಥಿತಿಯಲ್ಲಿ ಚೇತರಿಸಿಕೊಳ್ಳುವ ಮಾತಾಡುವುದು ವ್ಯರ್ಥ. ಪ್ರಶಸ್ತಿ ಪಡೆಯುವ ದೃಷ್ಟಿಯಿಂದಲೇ ಅವರು ಹಣ ಹೂಡುವುದಿಲ್ಲ. ಹಣ ಸಂಪಾದಿಸುವ ಅವಕಾಶ ಇದೆಯೆಂದು ತೋರಿದಾಗಲೇ ಅವರು ಹೀಗೆ ಮಾಡುವರು. ಇದು ಬಂಡವಾಳ ವ್ಯವಸ್ಥೆ, ಇದು ಕೆಲಸ ಮಾಡುವ ರೀತಿಯೇ ಹೀಗೆ."

ಪ್ರೊ|| ಎಫ್. ಎ. ವಾನ್ ಹಯೆಕ್‌ರ ದೃಷ್ಟಿಯಿಂದಲೂ ಲಿಪ್‌ಮನ್ನರ ಮಾತು ನಿಜ: "ವಿನಿಮಯದ ಆಧುನಿಕ ಆರ್ಥಿಕ ವ್ಯವಸ್ಥೆಯಲ್ಲಿ ಪದಾರ್ಥಕ್ಕೆ ಬೇಡಿಕೆಯಿದೆಯೆಂಬ ಕಾರಣದಿಂದ, ಬೇಡಿಕೆ ಪೂರೈಸುವ ಉದ್ದೇಶದಿಂದಲೇ, ಒಬ್ಬ ಉದ್ಯಮಿ ಪದಾರ್ಥೋತ್ಪತ್ತಿ ಮಾಡುವುದಿಲ್ಲ—ಎಂಬ ಮಾತನ್ನೇನೋ ಕೆಲವು ಸಾರಿ ಹೇಳುವುದುಂಟು. ಆದರೆ ಆತ ಉತ್ಪಾದನಕಾರ್ಯ ನಡಸುವುದು ಲಾಭದ ಲೆಕ್ಕಾಚಾರದ ಮೇಲೆ."[1]

---

[1] F. A. von Hayek, *Monetary Theory and the Trade Cycle*, p. 68. Jonathan Cape, London, 1933.

ಇಂದಿನ ಪ್ರಮುಖ ಅರ್ಥಶಾಸ್ತ್ರಜ್ಞರ ಪೈಕಿ ಪ್ರೊ|| ಹಯೆಕ್ ಒಬ್ಬರು. ಕಾರ್ಮಿಕ ವರ್ಗದ ಕಣ್ಣಿಂದ ಸಮಾಜವನ್ನು ವೀಕ್ಷಿಸುವ ಅರ್ಥಶಾಸ್ತ್ರಜ್ಞರಿಗೂ ಇವರಿಗೂ ಬಹು ದೂರ. ಆದರೆ, ಅರ್ಥವ್ಯವಸ್ಥೆಯ ಚಕ್ರ ತಿರುಗುವಂತೆ ಮಾಡುವುದು ಲಾಭವೊಂದೇ—ಎಂಬ ಮುಖ್ಯ ವಿಚಾರದ ಬಗ್ಗೆ ಇವರದೂ ಫೆಡರಿಕ್ ಎಂಗೆಲ್ಸನದೂ ಏಕಾಭಿಪ್ರಾಯ. ಎಂಗೆಲ್ಸ್ ಗಲ್ಟಿಚರಲ್ಲಿ ಬರೆದ ಒಂದು ಪತ್ರದ ಭಾಗವಿದು. "ಬಹು ಕಡಮೆ ಉತ್ಪಾದನೆಯಾಗುತ್ತಿದೆ.... ಆದರೆ ಬಹು ಕಡಮೆ ಉತ್ಪಾದನೆಯಾಗುತ್ತಿರುವುದು **ಏಕೆ?** ಸಾಧನಗಳು ಮುಗಿದಿವೆ ಯೆಂದೆ? ಅಲ್ಲ, ಉತ್ಪಾದನೆಯ ಪರಮಾವಧಿಯ ನಿರ್ಣಯವಾಗುವುದು ಎಷ್ಟು ಹಸಿದ ಹೊಟ್ಟೆಗಳಿವೆಯೆಂಬುದರ ಮೇಲಿಂದಲ್ಲ. ಕೊಳ್ಳುವ ಶಕ್ತಿಯಿರುವ ಎಷ್ಟು **ಹಣದ ಚೀಲ**ಗಳಿವೆಯೆಂಬುದರ ಮೇಲಿಂದ. ಹಣವಿಲ್ಲದ ಹೊಟ್ಟೆ, ತಮ್ಮ ದುಡಿಮೆಯನ್ನು ಲಾಭಕ್ಕಾಗಿ ಉಪಯೋಗಿಸಿಕೊಳ್ಳಲಾರದ್ದರಿಂದ ಪದಾರ್ಥಕೊಳ್ಳಲಾರದ ಕಾರ್ಮಿಕರು, ಸಾವಿನ ಬಾಯಿಗೆ ತುತ್ತು."[1]

ಅಮೆರಿಕದ ಬಹು ಸ್ವೋಪಜ್ಞ ಅರ್ಥಶಾಸ್ತ್ರಜ್ಞರ ಪೈಕಿ ಒಬ್ಬರಾದ ಥಾರ್‍ಸ್ಟೀನ್ ವೆಬ್ಲೆನರೂ ಇದೇ ಸತ್ಯವನ್ನು ತಮ್ಮ ಪ್ರಸಿದ್ಧ ಕಟುಶೈಲಿಯಲ್ಲಿ ಹೀಗೆ ಹೇಳಿದ್ದಾರೆ: "ಪ್ರಾಕೃತಿಕ ಅರ್ಥವ್ಯವಸ್ಥೆಯಲ್ಲಿ ವ್ಯಾಪಾರಿಯ ಸ್ಥಾನ ಪದಾರ್ಥೋತ್ಪಾದನೆಯದಲ್ಲ, 'ಹಣ ಸಂಪಾದನೆ'ಯದು....ಏನೂ ಕೊಡದೆ ಏನಾದರೂ ಪಡೆಯಬೇಕು—ಎಂಬ ತತ್ವಕ್ಕೆ ಆದಷ್ಟು ಹತ್ತಿರ ಸಾಗುವುದೇ ವ್ಯಾಪಾರದಲ್ಲಿ ಅತ್ಯಂತ ಮಹತ್ವದ ಸಾಧನೆ. ....ಲಾಭಕರ ಮಾರಾಟವೇ, ಅಥವಾ ಲಾಭಕರ ಮಾರಾಟಕ್ಕೆ ಸಮನಾದ ಲಾಭಕರ ವ್ಯವಹಾರವೇ ಧ್ಯೇಯವಾಗಿಲ್ಲದ ಯಾವ ವ್ಯಾಪಾರೋದ್ಯಮವೂ ಇಲ್ಲ. ಇದ್ದರೂ ಅದು ಗಮನಾರ್ಹವಲ್ಲ. ಕೈಗಾರಿಕೆಯ ಉತ್ಪನ್ನದಿಂದ ವ್ಯಾಪಾರದ ಲಾಭ ದೊರಕುತ್ತದೆ. ಕೈಗಾರಿಕೆಯನ್ನು ಹತೋಟಿಗೆ ಒಳಪಡಿಸುವುದು, ವೇಗವಾಗಿ ನಡಸುವುದು, ಅದು ನಿಧಾನವಾಗಿ ಚಲಿಸುವಂತೆ ಮಾಡುವುದು—ಎಲ್ಲಾ ವ್ಯಾಪಾರಲಾಭ ದೃಷ್ಟಿಯಿಂದಲೇ."[2]

ಬಂಡವಾಳ ವ್ಯವಸ್ಥೆಯಲ್ಲಿ ಪದಾರ್ಥೋತ್ಪಾದನೆಯಾಗುವುದು ಬಳಕೆಗಾಗಿಯಲ್ಲ, ಲಾಭಕ್ಕಾಗಿ—ಎಂಬುದನ್ನು ಸ್ಥಾಪಿಸಲು ಇನ್ನೊಂದು ಸಾಕ್ಷಿ ಕೊಡಬಹುದು. ಪ್ರಮುಖ ಅಮೆರಿಕನ್ ಅರ್ಥಶಾಸ್ತ್ರಜ್ಞ ವೆಸ್ಲಿ ಸಿ. ಮಿಚೆಲ್ಲರ ಮಹಾಕೃತಿಯಾದ "ವ್ಯವಹಾರ ಚಕ್ರ" ಎಂಬ ಪುಸ್ತಕದಿಂದ ಉದ್ಧರಿಸಿದ ಮಾತು ಇದು: "ವ್ಯಾಪಾರದ ಅರ್ಥವ್ಯವಸ್ಥೆ ಇರುವಲ್ಲಿ ತನ್ನಷ್ಟಕ್ಕೇ ಪ್ರಕೃತಿಸಂಪತ್ತು ಬೆಳೆಯುವುದಿಲ್ಲ; ಯಂತ್ರ ಸಾಧನ ಬಳಕೆಗೆ ಬರುವುದಿಲ್ಲ; ಕಾರ್ಮಿಕೋಚಿತ ಕೌಶಲದ ಉಪಯೋಗವಿಲ್ಲ; ವೈಜ್ಞಾನಿಕ ಸಂಶೋಧನೆಗಳ ಅನ್ವಯವಿಲ್ಲ. ಇವೆಲ್ಲ ಆಗಬೇಕಾದರೆ ಉತ್ಪಾದನಕಾರ್ಯದ ನಿರ್ದೇಶನ ಮಾಡುವ ಜನಕ್ಕೆ ಹಣದ

---

[1] K. Marx and F. Engels, *Correspondence*, *op. cit.*, p. 199.

[2] Thorstein Veblen, *The Vested Interests and the Common Man*, pp. 92 ff. B. W. Huebsch, N. Y., 1920.

ಲಾಭ ದೊರಕುವುದೆಂಬ ಭರವಸೆ ನೀಡುವ ಪರಿಸ್ಥಿತಿ ಇದ್ದೇ ಇರಬೇಕಾಗುತ್ತದೆ."[1]

ಅರ್ಥಶಾಸ್ತ್ರದ ವಿವಿಧ ಬಣ್ಣಗಳ ವಿವಿಧ ಮತಗಳ ಪರಿಣತರ ಸಾಮರ್ಥ್ಯಪೂರ್ಣ ಸಾಕ್ಷ್ಯಗಳ ಮೆರವಣಿಗೆಯನ್ನೆ ಇಲ್ಲಿ ಏರ್ಪಡಿಸಿದುದಾಯಿತು. ಇವರೆಲ್ಲ ನುಡಿಯುವ ಸಾಕ್ಷ್ಯ ಒಂದೇ: ಬಂಡವಾಳ ವ್ಯವಸ್ಥೆಯಲ್ಲಿ ಲಾಭದ ಭರವಸೆ ಇಲ್ಲದಿದ್ದರೆ ಉತ್ಪಾದನ ಕಾರ್ಯ ಸಾಗುವುದೇ ಇಲ್ಲ—ಎಂಬುದಾಗಿ ಇವರೆಲ್ಲ ನುಡಿದಿದ್ದಾರೆ. ಆದರೆ ಆಗಿಂದಾಗ್ಗೆ ಈ ಭರವಸೆ ಏಕೆ ಕೈಗೂಡುವುದಿಲ್ಲವೆಂಬ ಪ್ರಶ್ನೆಯನ್ನು ಈ ಸಾಕ್ಷಿಗಳಿಗೆ ಹಾಕಿದರೆ, ಇವರಲ್ಲಿ ಏಕಾಭಿಪ್ರಾಯ ಇರುವುದಿಲ್ಲ. ಈ ವ್ಯವಸ್ಥೆ ಕೆಲಸ ಮಾಡುವಂತೆ ಮಾಡುವುದು ಯಾವುದು?—ಎಂದು ಕೇಳಿದರೆ ಅವರು ಬಹು ತೀವ್ರವಾದ ಭಿನ್ನಾಭಿಪ್ರಾಯಗಳಿಗೆ ಒಳಗಾಗುವರು. ಬಿಕ್ಕಟ್ಟಿನ ಕಾಲದಲ್ಲಿ ವ್ಯವಸ್ಥೆ ಮುರಿದು ಬೀಳುವುದು. ಎಂದರೆ ಲಾಭ ಕುಸಿಯುವುದು. ಈ ಕುಸಿತದ ಕಾರಣಗಳೇನು? ಬಿಕ್ಕಟ್ಟುಗಳ ಕಾರಣಗಳಾವುವು? ಅರ್ಥಶಾಸ್ತ್ರಜ್ಞರು ನೀಡುವ ಕೆಲವು ಉತ್ತರಗಳನ್ನು ಪರಿಶೀಲಿಸೋಣ.

ಒಂದು ಶತಮಾನಕ್ಕೂ ಹೆಚ್ಚುಕಾಲದಿಂದ, ಪದೇ ಪದೇ, ನಿಯತಕಾಲಿಕವೋ ಎಂಬಂತೆ, ಬಿಕ್ಕಟ್ಟುಗಳು ಸಂಭವಿಸುತ್ತಿವೆ. ಆದರೂ ಕೂಡ, ಆರ್ಥಿಕ ವ್ಯವಸ್ಥೆಯಲ್ಲಿನ—ಆಂತರಿಕವಾದ—ಯಾವುದೂ ಇದಕ್ಕೆ ಕಾರಣವಲ್ಲವೆಂದೂ, ಹೊರಗಿನ ಪ್ರಭಾವಗಳೇ ಇದಕ್ಕೆ ಕಾರಣವೆಂದೂ ನಂಬುವ ಕೆಲವು ಅರ್ಥಶಾಸ್ತ್ರಜ್ಞರು ಇಂದಿಗೂ ಇದ್ದಾರೆ. ಈ ಮತ ಹೊಂದಿರುವವರನ್ನು, ಈ ಸಂಪ್ರದಾಯದವರನ್ನು, ಕುರಿತು ಪ್ರೊಫೆಸರ್ ಮಿಚೆಲ್ ಹೀಗೆ ಬರೆಯುತ್ತಾರೆ. "ಎಲ್ಲ ಬಿಕ್ಕಟ್ಟುಗಳಿಗೂ ಒಂದೇ ಬಗೆಯ ಕಾರಣ ಹೇಳುವ ಸೂತ್ರಗಳ ಅನ್ವೇಷಣೆ ಬೇಸರ ಹುಟ್ಟಿಸಿತು. ಇವರ ದೃಷ್ಟಿಯಲ್ಲಿ ಬಿಕ್ಕಟ್ಟು ಒಂದು ಅಸಾಮಾನ್ಯ ಘಟನೆ. ಕ್ರಾಂತಿಕಾರಕವಾದ ನವೀನ ವಿಧಾನ, ಸುಂಕದ ವ್ಯವಸ್ಥೆಯ ಸುಧಾರಣೆ, ಹಣವ್ಯವಸ್ಥೆಯ ಬದಲಾವಣೆ, ಬೆಳೆ ಆಗದ ಪರಿಸ್ಥಿತಿ, ಫ್ಯಾಷನ್ನಿನಲ್ಲಿ ಬದಲಾವಣೆ, ಮುಂತಾದ ಯಾವುದೋ ಆತಂಕಕಾರಿ ಕಾರಣವಿರಬೇಕೆಂದು ಇವರು ಭಾವಿಸಿದರು. ಪ್ರತಿಯೊಂದು ಬಿಕ್ಕಟ್ಟಿಗೂ ಒಂದು ವಿಶಿಷ್ಟ ಕಾರಣವಿದೆ. ಹಿಂದಣ ಒಂದೆರಡು ವರ್ಷಗಳ ಘಟನೆಗಳಲ್ಲಿ ಇದನ್ನು ಹುಡುಕಬೇಕು. ಇದು ಇವರ ಅಭಿಪ್ರಾಯ."[2]

ಇನ್ನೊಂದು ಗುಂಪಿನವರ ದೃಷ್ಟಿಯಲ್ಲಿ ಬಿಕ್ಕಟ್ಟುಗಳ ವಿಶೇಷ ಕಾರಣ ಭೌತಿಕವಾದದ್ದು. ಸೂರ್ಯನ ಮೇಲೆ ಕಲೆಗಳೂ, ಭಾರತದ ಕ್ಷಾಮವೂ, ಇಂಗ್ಲೆಂಡಿನ ಬಿಕ್ಕಟ್ಟೂ ಒಂದೇ ಕಾಲಕ್ಕೆ ಒದಗಿದುವೆಂದು ಡಬ್ಲ್ಯೂ ಸ್ಟಾನ್ಲೆ ಜೇವನ್ಸ್ ೧೮೭೫ ರಲ್ಲಿ ಸಾರಿದ. ಇವುಗಳಲ್ಲಿ ಒಂದಕ್ಕೊಂದಕ್ಕೆ ಏನು ಸಂಬಂಧ? ತೀವ್ರವಾಗಿ ಪರಿಶೀಲಿಸಿ. ಸೂರ್ಯನ ಶಾಖ ಹವಾಗುಣದ ಮೇಲೆ ಪರಿಣಾಮ ಉಂಟುಮಾಡುತ್ತದೆ. ಹವಾಗುಣದ ಪರಿಣಾಮ ಫಸಲಿನ ಮೇಲೆ. ಒಳ್ಳೆಯ ಅಥವಾ ಕೆಟ್ಟ ಫಸಲಿನಿಂದ ರೈತರ ವರಮಾನದ ಮೇಲೆ ಪರಿಣಾಮ

[1] Wesley C. Mitchell, *Business Cycles*, pp. 65, 66. National Bureau of Economic Research, 1927.

[2] *Ibid.*, pp. 9, 10

ಉಂಟಾಗುತ್ತದೆ. ರೈತರ ವರಮಾನ ಹೆಚ್ಚು ಕಡಮೆಯಾದರೆ ತಯಾರಿಸಿದ ವಸ್ತುಗಳ ಬೇಡಿಕೆಯೂ ಹೆಚ್ಚು ಕಡಮೆ ಆಗುತ್ತದೆ. ಆದ್ದರಿಂದ ಇದಕ್ಕೆಲ್ಲಾ ಸೂರ್ಯಭಗವಾನನೇ ಹೊಣೆ !

ಅಥವಾ, ಶುಕ್ರಗ್ರಹದ ಮೇಲೆ ಅಪವಾದದ ಪೀಡೆ ಹೊರಿಸಿದರೆ ಹೇಗೆ? ಹೀಗೆ ಹೇಳುವನು ಹೆನ್ರಿ ಎಲ್. ಮೂರ್. ಅಷ್ಟವಾರ್ಷಿಕ "ಉತ್ಪಾದಕ ಚಕ್ರದ" ಸೂತ್ರದ ಜನಕ ಈತ. ಆದರೆ ಶುಕ್ರಗ್ರಹಕ್ಕೇ ಏಕೆ ಈ ಪ್ರಶಸ್ತಿ? ಏಕೆಂದರೆ ಶುಕ್ರಗ್ರಹ ಪ್ರತಿ ಎಂಟು ವರ್ಷಕ್ಕೊಮ್ಮೆ ಸೂರ್ಯನಿಗೂ ಭೂಮಿಗೂ ನಡುವೆ ಬರುತ್ತದೆ. ಶುಕ್ರಗ್ರಹ ಮಧ್ಯೆ ಬಂದದ್ದರಿಂದ ಸೂರ್ಯನ ಶಾಖದ ಬಹು ಭಾಗ ಭೂಮಿ ತಲುಪಲು ಸಾಧ್ಯವೆ?

ಬಿಕ್ಕಟ್ಟುಗಳ ಭೌತಿಕ ಕಾರಣಗಳ ವಿಚಾರ ಇಷ್ಟು ಸಾಕು. ಪ್ರೊಫೆಸರ್ ಎ. ಸಿ. ಪಿಗೂ ಕೇಂಬ್ರಿಜ್ ಅರ್ಥಶಾಸ್ತ್ರಜ್ಞ. ಉತ್ಕರ್ಷ ಅವನತಿಗಳ ಕಾರಣ ಮಾನಸಿಕವೆಂಬುದಾಗಿ ಹೇಳುವವರ ಪಂಥದ ನಾಯಕ ಈತ. ಕೈಗಾರಿಕಾ ನಾಯಕರ ತಪ್ಪು ಆಶಾವಾದ–ನಿರಾಶಾ ವಾದಗಳೇ ಇದಕ್ಕೆ ಕಾರಣವೆನ್ನುವರು ಇವರು. ಪ್ರೊಫೆಸರ್ ಪಿಗೂ ದೃಷ್ಟಿಯಲ್ಲಿ "ವ್ಯಾಪಾರ ಗಾರರ ನಿರೀಕ್ಷೆಗಳಲ್ಲಾದ ಏರುತಗ್ಗುಗಳೇ" ಕೈಗಾರಿಕೆಯ ಏರಿಳಿತಗಳ ಮೂಲಕಾರಣ. ಎಲ್ಲಾ ಚೆನ್ನಾಗಿ ನಡೆಯುತ್ತಿರುವಾಗ, ತಮ್ಮ ಲಾಭ ಹೆಚ್ಚಿಸಿಕೊಳ್ಳುವ ಅವಕಾಶಗಳ ಬಗ್ಗೆ ವ್ಯಾಪಾರ ಗಾರರು ಬಹು ಆಶಾವಾದಿಗಳಾಗಿರುತ್ತಾರೆ. ಅವರು ಉತ್ಪಾದನೆ ವಿಸ್ತರಿಸಬಯಸುವರು. ಬ್ಯಾಂಕುಗಳಿಂದ ಅವರು ಹೆಚ್ಚು ಸಾಲ ಪಡೆದು, ಅದನ್ನು ಉತ್ಪಾದನ ಸಾಧನಗಳಲ್ಲಿ ಹೂಡುವರು—ತಮ್ಮ ಯಂತ್ರಸ್ಥಾವರದ ವಿಸ್ತರಣೆ, ಹೊಸ ಯಂತ್ರದ ಸ್ಥಾಪನೆ—ಮುಂತಾದವಕ್ಕೆ ಇದನ್ನು ಬಳಸುವರು. "ಇವು [ನಿರೀಕ್ಷೆಗಳು] ಫಲಿಸಿದಾಗ, ವ್ಯಾಪಾರ ಗಾರರು ತಮ್ಮ ಸಾಲಗಳನ್ನು ಬೆಳಸಿಕೊಳ್ಳುವರು. ಈ ಸಾಲದಲ್ಲಿ ಒಂದು ಭಾಗವನ್ನು ಬ್ಯಾಂಕುಗಳಿಂದ ಪಡೆಯುವರು. ಬಡ್ಡಿಯ ದರದ ಏರಿಕೆ ಈ ಸಾಲದ ಪ್ರತ್ಯಕ್ಷ ಫಲ. ಇದರ ಪರೋಕ್ಷ ಫಲವೆಂದರೆ, ಬೆಲೆಗಳ ಏರಿಕೆ. ಹೆಚ್ಚು ಕೊಳ್ಳುವ ಶಕ್ತಿ ಪ್ರಸಾರಕ್ಕೆ ಬಂದದ್ದರ ಫಲ ಇದು"[1] ಆಗ, ಈ ಆಶಾವಾದದ ಉಬ್ಬರದ ಫಲವಾಗಿ, ಉತ್ಪತ್ತಿಯಾದ ಪದಾರ್ಥಗಳು ಪೇಟೆಯ ಅಗ್ನಿಪರೀಕ್ಷೆಯಲ್ಲೂ ಗೆದ್ದು ಬರಬೇಕು. ಹೊಸ ಅಧಿಕ ಬೆಲೆಗಳಲ್ಲಿ ಇವು ಮಾರಾಟವಾಗುವುವೆ? ಆಗುವುದಿಲ್ಲ. ಈ ಆಶಾವಾದ ಉಚಿತವಾದದ್ದಾಗಿರಲಿಲ್ಲವೆಂಬ ಅನುಭವ ಒಂದರ ಮೇಲೊಂದು ಆಗುವುದು. ಆದ್ದರಿಂದ ಆಳವಾದ ಮಾನಸಿಕ ಶಂಕೆ ನಿರಾಶಾವಾದಗಳು ವ್ಯಾಪಾರ ಪ್ರಪಂಚವನ್ನು ಆವರಿಸುವುವು. ಉತ್ಪಾದನೆ ನಿಧಾನ ವಾಗುವುದು. "ಆಶಾವಾದದ ತಪ್ಪಿನ ಪ್ರಭಾವದಿಂದಾಗಿ ಕೈಗಾರಿಕೆಯಲ್ಲಿ ಬೆಳೆದ ಚಟುವಟಿಕೆ ಅಂತಿಮವಾಗಿ ಪೇಟೆಯನ್ನರಸುವ ಪದಾರ್ಥಗಳಲ್ಲಿ ಪರ್ಯವಸಾನವಾಗುತ್ತದೆ. ಈ ಪದಾರ್ಥಗಳು ತಯಾರಿಕೆಯ ಸ್ಥಿತಿಯಲ್ಲೇ ಇರುವ ವರೆಗೂ ಅಸಾಧಾರಣ ಚಟುವಟಿಕೆ ಮುಂದುವರಿಯುತ್ತದೆ. [ಆಶಾವಾದ ತುಂಬಾ ಅತಿಯಾಯಿತೆಂಬುದು ವ್ಯಕ್ತವಾಗುವುದು

[1] A. C. Pigou, *Industrial Fluctuations*, p. 33. Macmillan & Company, Ltd., London. 2nd ed., 1929.

—ಎಂದರೆ ಈ ಆಶಾವಾದ ಪೇಟೆಯ ಅಗ್ನಿ ಪರೀಕ್ಷೆಯಲ್ಲಿ ಗೆದ್ದು ಬರುವುದಿಲ್ಲ.] ಹಲವು ಪದಾರ್ಥಗಳ ಮೇಲೆ ಈ ಪರೀಕ್ಷೆಯ ಪ್ರಯೋಗ ನಡಸಿ, ಇವುಗಳಲ್ಲೂ ಇದೇ ಅನುಭವ ವಾದರೆ, ನಂಬಿಕೆಗೆ ಆಘಾತ ಒದಗುತ್ತದೆ. ಆಶಾವಾದದ ತಪ್ಪುಗಳಾಗಿವೆಯೆಂದೂ, ಬರಲಿದ್ದ ಲಾಭದ ನಿರೀಕ್ಷೆ ಅತ್ಯುತ್ಪ್ರೇಕ್ಷೆಯಿಂದ ಕೂಡಿದ್ದಾಗಿತ್ತೆಂದೂ ಗೊತ್ತಾಗುವುದು. ಇದು ಸಾರ್ವಜನಿಕವಾಗಿ ಮನವರಿಕೆಯಾಗುವುದು. ತತ್ಫಲವಾಗಿ ವ್ಯಾಪಾರ ಚಟುವಟಿಕೆಯ ಪ್ರವಾಹಕ್ಕೆ ತಡೆಯುಂಟಾಗುತ್ತದೆ."[1]

ಈ ಘಟ್ಟದಲ್ಲಿ ಅತಿ ಆಶಾವಾದ ಅತಿ ನಿರಾಶಾವಾದಕ್ಕೆ ಎಡೆಕೊಡುತ್ತದೆ. ಉತ್ಪಾದನೆ ಸಾಕಷ್ಟು ನಿಧಾನವಾಗುತ್ತದೆ. ಕೈಗಾರಿಕೆಯಲ್ಲಿ ಬಂಡವಾಳದ ಹೂಡಿಕೆ ಪ್ರಾಯಿಕವಾಗಿ ನಿಂತೇ ಹೋಗುತ್ತದೆ. ಏನಾದರೂ ಸರಕು ಮಾರಾಟವಾದರೆ ಅದು ಹಿಂದಣಿಂದ ದಾಸ್ತಾನಾಗಿ ಉಳಿದು ಬಂದದ್ದೇ ಆಗಿರುತ್ತದೆ. ಆಮೇಲೆ, ಸ್ವಲ್ಪ ಕಾಲಾನಂತರ ಬೇಡಿಕೆ ಮತ್ತೆ ಏರುತ್ತದೆ. ಲಾಭ ಮತ್ತೆ ಅಧಿಕಗೊಳ್ಳುತ್ತದೆ. ವ್ಯಾಪಾರಗಾರರು ಮತ್ತೆ ಗೆಲುವಾಗುತ್ತಾರೆ. ಮತ್ತೆ ಅತಿ ಆಶಾವಾದ ಜನ್ಮತಾಳುತ್ತದೆ.

ಪಿಗೂ ಹಾಗೂ ಮನೋವೈಜ್ಞಾನಿಕ ಪಂಥದ ಇತರರ ದೃಷ್ಟಿಯಲ್ಲಿ ಉತ್ಕರ್ಷ ಅವನತಿಗಳಿಗೆ ವ್ಯಾಪಾರಗಾರರ ನಿರೀಕ್ಷೆಗಳೇ ಕಾರಣವೆನ್ನಲು ಮುಂದೆ ಉದ್ಧರಿಸಿರುವ ಮಾತುಗಳೇ ಸಾಕ್ಷಿ: "ಪದೇ ಪದೇ ವ್ಯತ್ಯಾಸಗೊಳ್ಳುವ ನಿರೀಕ್ಷೆಗಳು ಹೇಗೆ ಉದ್ಭವಿಸುವ ವೆಂಬುದರ ಪರಿಶೀಲನೆಯನ್ನು ಸದ್ಯಕ್ಕೆ ನಡಸಿಲ್ಲವಾದರೂ, ಕೈಗಾರಿಕೆಯಲ್ಲಿನ ಏರಿಳಿತ ಗಳಿಗೆ ಈ ನಿರೀಕ್ಷೆಗಳೇ ತಕ್ಷಣದ ಕಾರಣ, ಪ್ರತ್ಯಕ್ಷಕಾರಣ, ಅಥವಾ ಮುನ್ಸೂಚನೆ. ಬೇರಾವೂದೂ ಅಲ್ಲ. ಇದು ನಮ್ಮ ತೀರ್ಮಾನ."[2]

"ಹಣವೇ ಎಲ್ಲ ಅನರ್ಥದ ಮೂಲ"—ಎಂಬ ಹಳೆಯ ಗಾದೆ ಅರ್ಥಶಾಸ್ತ್ರಜ್ಞರ ಇನ್ನೊಂದು ಪಂಥದವರ ದೃಷ್ಟಿಯಲ್ಲಿ ನಿಜ. ನಮ್ಮ ವಿನಿಮಯ ವ್ಯವಸ್ಥೆ—ನಮ್ಮ ಹಣದ ವ್ಯವಸ್ಥೆ—ಅಸಮರ್ಪಕವೆಂಬುದು ಇವರ ನಂಬಿಕೆ. ಈ ಅಸಮರ್ಪಕ ವ್ಯವಸ್ಥೆಯನ್ನು ನಿಯಂತ್ರಣಗೊಳಿಸಬೇಕೆಂಬುದಾಗಿ ಇವರು ಭಾವಿಸುವರು. "ಹಣ ನಿಯಂತ್ರಣ ಪಂಥದ ಅಗ್ರ ಪ್ರತಿಪಾದಕರಾದ ಜೆ. ಎಂ. ಕೀನ್ಸ್ ಹೀಗೆ ಬರೆಯುತ್ತಾರೆ: "ನಿರುದ್ಯೋಗ, ಕಾರ್ಮಿಕನ ಅನಿಶ್ಚಿತ ಜೀವನ, ನಿರೀಕ್ಷೆಯ ಭಂಗ, ಉಳಿತಾಯದ ಹಠಾತ್ ನಷ್ಟ, ವ್ಯಕ್ತಿಗಳಿಗೆ—ಸಟ್ಟಾ ವ್ಯಾಪಾರಿಗಳಿಗೆ—ಲಾಭಗುಳಿಗಳಿಗೆ—ಆಕಸ್ಮಿಕ ಲಾಭ ಪ್ರಾಪ್ತಿ, ಇವೆಲ್ಲಾ ಬಹುವಾಗಿ ಮೌಲ್ಯಮಾಪಕದ (ಹಣದ) ಅಸ್ಥಿರತೆಯಿಂದಲೇ ಸಂಭವಿ ಸುತ್ತವೆ."[3]

ಮೇಲೆ ಉದ್ಧರಿಸಿರುವ ಮಾತುಗಳಲ್ಲಿ ಮುಖ್ಯವಾದ ಪದಗಳು ಇವು: "ಮೌಲ್ಯ ಮಾಪಕದ ಅಸ್ಥಿರತೆ." ನಮ್ಮ ಹಣ ಅಸ್ಥಿರವೆಂಬುದನ್ನು ಮನವರಿಕೆ ಮಾಡಿಕೊಡಲು

---

[1] *Ibid.*, pp. 90, 91.
[2] *Ibid.*, p. 34.
[3] J. M. Keynes, *A Tract on Monetary Reform*, *op. cit.*, Preface, p. 5.

ಹೆಚ್ಚು ಸಾಕ್ಷ್ಯ ಅನಗತ್ಯ. ನಮ್ಮ ಅನುಭವವೇ ನಮಗೆ ಸಾಕ್ಷಿ. ಒಂದು ಡಾಲರಿಗೆ ಒಂದು ತಿಂಗಳಲ್ಲಿ ಎಷ್ಟೋ ಪೌಂಡು ಬೆಣ್ಣೆ ದೊರಕುತ್ತದೆ. ಇನ್ನೊಂದು ತಿಂಗಳು ಇದಕ್ಕಿಂತ ಹೆಚ್ಚು (ಅಥವಾ ಕಡಮೆ) ಸಿಕ್ಕುತ್ತದೆ—ಎಂಬುದು ಪದಾರ್ಥ ಕೊಳ್ಳುವ ಎಲ್ಲರಿಗೂ ಗೊತ್ತು. "ನಿಜ, ಒಂದು ಡಾಲರಿಗೆ ಹಿಂದೆ ಇದ್ದದ್ದಕ್ಕಿಂತ ಈಗ ಹೆಚ್ಚು (ಅಥವಾ ಕಡಮೆ) ಬೆಲೆ." ಇಂಥ ಟೀಕೆಯನ್ನು ನಾವು ಎಷ್ಟುಸಾರಿ ಕೇಳಿಲ್ಲ? ಅಥವಾ, "ನಾನು ಪ್ಯಾರಿಸಿಗೆ ಮೊದಲ ಬಾರಿಗೆ ಹೋಗಿದ್ದಾಗ ನನ್ನ ಡಾಲರಿಗೆ ಇಪ್ಪತ್ತೈದು ಫ್ರಾಂಕು ಸಿಕ್ಕಿತು. ಈಗ ಹದಿನೇಳು ಮಾತ್ರ ಸಿಕ್ಕಿತು." ಇಂಥ ಮಾತೂ ಸಾಮಾನ್ಯ.

ನಮ್ಮ ಅರ್ಥಶಾಸ್ತ್ರದ ಪ್ರಥಮ ಪಾಠಗಳ ಪುಸ್ತಕದಲ್ಲಿ, "ಹಣವೆಂಬುದು ಕೇವಲ ವಿನಿಮಯದ ಮಾಧ್ಯಮ" ಎಂಬ ಮಾತನ್ನು ಓದುತ್ತೇವೆ. "ಹಣದ ನಿಯಂತ್ರಣ"ವಾಗ ಬೇಕೆಂಬ ಪ್ರವೀಣರು ವಾದಿಸುತ್ತಾರೆ—"ಹಣ ಅಸ್ಥಿರವಾದದ್ದರಿಂದ ಅದು ಕೆಟ್ಟ ಮಾಧ್ಯಮ, ಅಸಮರ್ಪಕ ಮಾಧ್ಯಮ." ಇತರ ಅಳತೆಯ ಸಾಧನಗಳಂತೆ ಇದು ಸ್ಥಿರವಲ್ಲ. ಒಂದು ಡಜನ್ ಎಂದರೆ ಹನ್ನೆರಡು. ಒಂದು ದಿನ ಇದು ಹದಿನೈದೂ, ಇನ್ನೊಂದು ದಿನ ಹದಿನೆಂಟೂ ಆಗುವುದಿಲ್ಲ; ಆದರೆ ನಮ್ಮ ಹಣದ ಏಕಮಾನದ (unit) ಬೆಲೆ ವ್ಯತ್ಯಾಸ ವಾಗುತ್ತದೆ. ಇದು ಸರಿಯಲ್ಲ. ಇದನ್ನು ಸರಿಪಡಿಸಬೇಕು. ಇದು ಈ ಅರ್ಥಶಾಸ್ತ್ರಜ್ಞರ ವಾದ. ಉತ್ಪತ್ತಿಯಾದ ಪದಾರ್ಥದ ಮೊತ್ತಕ್ಕೂ, ಬಳಕೆದಾರರ—ಅನುಭೋಕ್ತೃಗಳ—ಜೇಬಿನಲ್ಲಿ ರುವ ಹಣದ ಮೊತ್ತಕ್ಕೂ ಸ್ಥಿರವಾದ ಸಂಬಂಧ ಕಲ್ಪಿಸುವಂಥ ನಾಣ್ಯ ಹಾಗೂ ಉದ್ದರಿಯ ನಿಯಂತ್ರಣವಾಗಬೇಕೆಂದು ಅವರ ವಾದ.

ಉದಾಹರಣೆಗೆ, ಕೈಗಾರಿಕೆಯ ಬೆಳವಣಿಗೆ ಹಾಗೂ ಉತ್ಪಾದನೆಯ ವಿಸ್ತರಣೆಯೊಂದಿಗೆ ಪದಾರ್ಥಗಳ ಉತ್ಪನ್ನ ಹೆಚ್ಚುತ್ತದೆ. ಹೆಚ್ಚುತ್ತಿರುವ ಪದಾರ್ಥಗಳ ಪ್ರವಾಹಕ್ಕೆ ತಕ್ಕಂತೆ ಚಲಾವಣೆಯಲ್ಲಿರುವ ಹಣವನ್ನು ಹೆಚ್ಚಿಸದಿದ್ದರೆ, ಬೆಲೆಗಳು ಇಳಿಯುತ್ತವೆ. ಇದು ಏಕೆಂಬು ದನ್ನು ನೀವು ಅರಿಯಬಹುದು. ಪೇಟೆಯಲ್ಲಿ ೫೦೦ ಷರಟುಗಳಿದ್ದು, ಇವಕ್ಕಾಗಿ ಕೊಡಲು ಅನುಭೋಕ್ತೃಗಳ ಬಳಿ ೫೦೦ ಡಾಲರುಗಳಿದ್ದರೆ, ಪ್ರತಿ ಷರಟೂ ಒಂದು ಡಾಲರಿಗೆ ಮಾರಾಟವಾಗುತ್ತದೆ. ಷರಟು ತಯಾರಿಸುವವರು ತಮ್ಮ ಯಂತ್ರ ಉತ್ತಮ ಪಡಿಸಿ ಒಂದು ಸಾವಿರ ಷರಟು ತಯಾರಿಸಿದರೆ, ಆಗ, ಇತರ ಎಲ್ಲ ಪರಿಸ್ಥಿತಿಗಳೂ ವ್ಯತ್ಯಾಸವಾಗದೆ ಹಾಗೆಯೇ ಉಳಿದಿದ್ದರೆ, ಅನುಭೋಕ್ತೃಗಳ ಕೈಗೆ ಇನ್ನು ಐನೂರು ಡಾಲರು ಹಣ ಬಾರದಿದ್ದರೆ, ಷರಟಿನ ಬೆಲೆ ೫೦ ಸೆಂಟಿಗೆ (ಅರ್ಧ ಡಾಲರಿಗೆ) ಇಳಿಯುತ್ತದೆ.

ಸಾಮಾನ್ಯ ಬೆಲೆಗಳ ಮಟ್ಟದಲ್ಲಿ ಆಗುವ ಏರಿಳಿತವೇ ಬಿಕ್ಕಟ್ಟಿಗೆ ಕಾರಣವೆಂದು ಹಣದ ಅರ್ಥಶಾಸ್ತ್ರಜ್ಞರು ಹೇಳುತ್ತಾರೆ. ಚಲಾವಣೆಯಲ್ಲಿರುವ ಹಣದ ಪ್ರಮಾಣದಲ್ಲಿ ಆಗುವ ಏರಿಳಿತಗಳಿಂದ ಹೀಗಾಗುವುದು. ವ್ಯಾಪಾರ ಚೆನ್ನಾಗಿರುವಾಗ, ಹಣ ಹೆಚ್ಚು ಶೀಘ್ರವಾಗಿ ಸುತ್ತುತ್ತದೆ. ಬ್ಯಾಂಕುಗಳು ಹೆಚ್ಚು ಹೆಚ್ಚು ಉದ್ದರಿ ನೀಡುತ್ತವೆ. ಅವು ಹೆಚ್ಚು ಬಡ್ಡಿಯ ದರ ವಿಧಿಸುವುದೇನೋ ನಿಜ. ಆದರೆ ವ್ಯಾಪಾರ ವಿಸ್ತರಿಸುತ್ತಿರುವಾಗ, ಪರಿಸ್ಥಿತಿ ಹೀಗೆ ಅನುಕೂಲಕರವಾಗಿರುವಾಗಲೇ ಆದಷ್ಟು ಲಾಭ ಗಿಟ್ಟಿಸಬೇಕೆಂದು

ಬಯಸುವ ಉತ್ಪಾದಕರು ಹೆಚ್ಚು ಬಡ್ಡಿ ದರದಿಂದ ನಿರುತ್ಸಾಹಗೊಳ್ಳುವುದಿಲ್ಲ. ಈ ಏಳಿಗೆಯಿಂದ ಉತ್ಕರ್ಷ (Boom) ಆಗುವುದು ಹೀಗೆ.

ಹೀಗಾದಾಗ, ಉದ್ದರಿ ನಿಯಂತ್ರಣ ಸಂಸ್ಥೆಗಳು—ಬ್ಯಾಂಕುಗಳು—ಗಾಬರಿಗೊಳ್ಳುವುವು. ಉದ್ದರಿ ವ್ಯವಸ್ಥೆ ತಲೆಭಾರವಾಯಿತೆಂದು ಭಾವಿಸಲಾರಂಭಿಸುವುವು. ಆದ್ದರಿಂದ ಅವು ತಮ್ಮ ಕಲಾಪ ಕಡಮೆಗೊಳಿಸುವುವು. ಹೊಸದಾಗಿ ಸಾಲಕೊಡುವುದನ್ನು ನಿಲ್ಲಿಸುವುವು. ಕೊಟ್ಟ ಸಾಲ ಆಗಲೇ ಹಿಂದಕ್ಕೆ ಬೇಕೆಂದು ಕೇಳುವುವು. ಆದರೆ ಉತ್ಪಾದಕರು—ಅವರಲ್ಲಿ ಹಲವರು—ಸಾಲ ಹಿಂತಿರುಗಿಸಲಾರರು. ಏಕೆಂದರೆ ಅವರು ಈ ಸಾಲದ ಹಣವನ್ನು ತಮ್ಮ ವ್ಯಾಪಾರಗಳಲ್ಲಿ ವಿನಿಯೋಗಿಸಿರುವರು. ಸಾಲ ಹಿಂದಕ್ಕೆ ಕೊಡುವಷ್ಟು ಹಣ ಇನ್ನೂ ಸಂಪಾದಿಸಿರುವುದಿಲ್ಲ. ಹಣ ಹಿಂದೆ ಕೊಡಲಾರದಾದಾಗ ದಿವಾಳಿ ತೆಗೆಯುವರು. ಅವರ ಕಾರ್ಖಾನೆಗಳು ಮುಚ್ಚುವುವು. ಅವರ ಕಾರ್ಮಿಕರು ಕೆಲಸ ಕಳೆದುಕೊಳ್ಳುವರು. ಅನರ್ಥ ಹಬ್ಬುತ್ತಾ ನಡೆಯುವುದು. ಏಕೆಂದರೆ ಕಚ್ಚಾ ಸಾಮಗ್ರಿಯ ಉತ್ಪಾದಕರಿಗೆ ಸರಬರಾಯಿಗಾಗಿ ಆದೇಶ ಹೋಗುವುದಿಲ್ಲ. ಕೆಲಸದಿಂದ ಹೊರದೂಡಲ್ಪಟ್ಟ ಕಾರ್ಮಿಕರು ಪದಾರ್ಥಗಳನ್ನು ಕೊಳ್ಳಲಾರರು. ಉತ್ಪಾದನೆಯ ಮಂದಗಮನ, ಪದಾರ್ಥ ಬೇಡಿಕೆಯ ಅಂತ್ಯ, ಜತೆಗೆ ಬೆಲೆಗಳ ಕುಸಿತ,—ಇವುಗಳಿಂದ ಇಡೀ ರಾಷ್ಟ್ರೀಯ ಆರ್ಥಿಕ ವ್ಯವಸ್ಥೆಯಲ್ಲಿ ಸಾಂಕ್ರಾಮಿಕ ರೋಗದಂತೆ ಮುಗ್ಗಟ್ಟು ಹಬ್ಬುತ್ತದೆ. ಜನ ಹಣ ಹೂಡಲು ಹೆದರುವರು. ಬ್ಯಾಂಕುಗಳು ಸಾಲ ನೀಡಲು ಹೆದರುವುವು. ಬ್ಯಾಂಕುಗಳಲ್ಲಿ ಹಣದ ರಾಶಿ ಏರುವುದು. ಕೈಗಾರಿಕೆ ವ್ಯಾಪಾರಗಳಲ್ಲಿ ಇದು ವಿನಿಯೋಗವಾಗದು.

ಬೆಲೆಗಳು ಇನ್ನೂ ಮೇಲೆ ಮೇಲೆ ಏರುವುವೆಂದು ವ್ಯಾಪಾರಗಾರರು ಭಾವಿಸಿರದಿದ್ದರೆ ಹೀಗೆ ಅತಿಯಾಗಿ ಸಾಲ ಪಡೆಯುವ ಚಟುವಟಿಕೆ ಏರ್ಪಡುತ್ತಿರಲಿಲ್ಲವೆಂದು ಹಣದ ಅರ್ಥಶಾಸ್ತ್ರಜ್ಞರ ವಾದ. ಅವರು ನಿರೀಕ್ಷಿಸಿದಂತೆ ಬೆಲೆ ಏರುವುದರಿಂದ ಬಡ್ಡಿ ಕೊಡುವುದೂ, ಇನ್ನೂ ಹೆಚ್ಚು ಲಾಭ ಗಳಿಸುವುದೂ ಸಾಧ್ಯವೆಂದು ನಂಬಿರುವುದರಿಂದಲೇ ಹೆಚ್ಚು ಬಡ್ಡಿಯ ದರದಲ್ಲಿ ಅವರು ಸಾಲ ಪಡೆಯುವರು. ಬೆಲೆಗಳು ಸ್ಥಿರವಾಗಿದ್ದರೆ ಅವರು ಈ ರೀತಿ ಬಿರುಸಾದ ಹಾಗೂ ಅನುಚಿತವಾದ ವಿಸ್ತರಣಕಾರ್ಯದಲ್ಲಿ ನಿರತರಾಗುತ್ತಿರಲಿಲ್ಲ. ಈ ಅನರ್ಥ ನಿವಾರಿಸಲು ಈ ಅರ್ಥಶಾಸ್ತ್ರಜ್ಞರು ಸೂಚಿಸಿರುವ ಉಪಾಯವೆಂದರೆ, ಉತ್ಪಾದನ ಕಾರ್ಯದ ಏರಿಳಿತಗಳೊಡನೆ ಏರಿಳಿಯುವಂತೆ ಹಣದ ವರಮಾನವನ್ನು ಪ್ರಮಾಣಿತಗೊಳಿಸಬೇಕು—ನಿಖರಗೊಳಿಸಬೇಕು. ಯೇಲ್ ವಿಶ್ವವಿದ್ಯಾಲಯದ ಪ್ರೊ|| ಇರ್ವಿಂಗ್ ಫಿಷರ್ "ಡಾಲರ್ ಸರಿದೂಗಿಸುವ" ಯೋಜನೆಯೊಂದನ್ನು ನಿರ್ಮಿಸಿದ್ದಾರೆ. ಇದು ಈ ಉದ್ದೇಶ ಸಾಧಿಸುವುದೆಂದು ಇವರ ಭಾವನೆ. ನಿನ್ನೆ, ಇಂದು ಮತ್ತು ನಾಳೆ ಇದರಿಂದ ಕೊಳ್ಳಬಹುದಾದ ಪದಾರ್ಥದ ಪ್ರಮಾಣ ಒಂದೇ; ಇದು ವ್ಯತ್ಯಾಸವಾಗುವುದಿಲ್ಲ. ನಿನ್ನೆ ಒಂದು ಬುಟ್ಟಿ ಪದಾರ್ಥಕೊಂಡರೆ, ಇಂದೂ ಅಷ್ಟೆ. ನಾಳೆಯೂ ಅಷ್ಟೆ.

ಸಮರ್ಪಕ ಹಣದ ವ್ಯವಸ್ಥೆಯೊಂದನ್ನು ಕಂಡುಹಿಡಿಯುವುದು ಸಾಧ್ಯವಿರುವಾಗ, ಅಸಮರ್ಪಕ ವ್ಯವಸ್ಥೆಯನ್ನೇ ನಂಬಿ ಅನುಸರಿಸುತ್ತಿರುವುದು ಮೌಢ್ಯ, ಅಪಾಯಕರ—ಎಂಬು

ದಾಗಿ ಫಿಷರ್ ಹಾಗೂ ಕೀನ್ಸ್ ವಾದಿಸುತ್ತಾರೆ. ಪ್ರೊ|| ಕೀನ್ಸ್ ಅವರ ಮಾತು ಓದಿ: "ವ್ಯಕ್ತಿವಾದದ ಈ ಮಾರಕವ್ಯಾಧಿಯನ್ನು [ಉತ್ಕರ್ಷ ಅವನತಿಗಳಲ್ಲಿ ಪರ್ಯವಸಾನವಾಗುವ ಬೆಲೆಗಳ ಏರಿಳಿತವನ್ನು] ಗುಣಪಡಿಸಲು ಅತ್ಯುತ್ತಮ ಮಾರ್ಗವೆಂದರೆ, [ನಾಣ್ಯದ ಮತ್ತು ಉದ್ದರಿಯ ನಿಯಂತ್ರಣದ ಮೂಲಕ] ಬೆಲೆಗಳು ಸಾಮಾನ್ಯವಾಗಿ ಇಳಿಯಲಿರುವುವೆಂಬ ಅಥವಾ ಏರಲಿರುವುವೆಂಬ ಭರವಸೆಯ ನಿರೀಕ್ಷೆಗೆ ಅವಕಾಶವೇ ಇಲ್ಲದಂತೆ ಏರ್ಪಡಿಸಬೇಕು....

"ಹವಾಗುಣ, ಜನನ ಸಂಖ್ಯೆ, ಸಂವಿಧಾನ—ಇವುಗಳಂತೆ ಇದಕ್ಕೂ [ಮೌಲ್ಯಮಾಪಕಕ್ಕೂ] ವಿಶಿಷ್ಟ ಲಕ್ಷಣವಿದೆಯೆಂದು ನಂಬಿ, ಇದು ತನ್ನ ಹಾದಿಯನ್ನೇ ಹಿಡಿಯಲೆಂದು ಬಿಡುವುದು ಸರಿಯಲ್ಲ. ಪ್ರಾಕೃತಿಕ ಕಾರಣ, ಸ್ವತಂತ್ರವಾಗಿ ವರ್ತಿಸುವ ಹಲವು ವ್ಯಕ್ತಿಗಳ ನಡವಳಿಕೆ, ಕ್ರಾಂತಿ ಇವುಗಳಿಂದ ಹವಾಗುಣ, ಜನನ ಸಂಖ್ಯೆ, ಸಂವಿಧಾನ ಇವುಗಳ ಬದಲಾವಣೆ ಸಾಧ್ಯ. ಮೌಲ್ಯಮಾಪಕ ಈ ಗುಂಪಿಗೆ ಸೇರಿದ್ದಲ್ಲ."[1]

ಉತ್ಪಾದನ ಪ್ರಮಾಣಕ್ಕೆ ಅನುಸಾರವಾಗಿ ನಾಣ್ಯದ ಪ್ರಮಾಣವನ್ನು ನಿರ್ಧರಿಸುವುದು ಉಚಿತಮಾರ್ಗವೆಂದು ಇತರ ಅರ್ಥಶಾಸ್ತ್ರಜ್ಞರು ನಂಬುವುದಿಲ್ಲ. ಪ್ರೊ|| ಹಯೆಕರು ಈ ವಿಚಾರದಲ್ಲಿ ಭಿನ್ನಾಭಿಪ್ರಾಯಹೊಂದಿದ್ದಾರೆ. "ಉತ್ಪಾದನೆ ಹೆಚ್ಚು ಕಡಮೆ ಆದಂತೆಲ್ಲ ಚಲಾವಣೆಯಲ್ಲಿರುವ ಮಾಧ್ಯಮದ (ಹಣದ) ಪ್ರಮಾಣವೂ ಬದಲಾವಣೆ ಹೊಂದಬೇಕೆಂಬ ವಾದವನ್ನು ಸಮರ್ಥಿಸಲು ಸಾಮಾನ್ಯವಾಗಿ ನೀಡಲಾಗುವ ಕಾರಣಗಳು ಆಧಾರರಹಿತ. ಹಣದ ಪ್ರಮಾಣ ಒಂದೇ ಸಮನಾಗಿದ್ದು, ಉತ್ಪಾದನೆ ಹೆಚ್ಚಿದಾಗ ಸಹಜವಾಗಿ ಸಂಭವಿಸುವ ಬೆಲೆಯ ಇಳಿತ ಅಪಾಯರಹಿತವಷ್ಟೇ ಅಲ್ಲ, ಉತ್ಪಾದನೆಯ ದಿಕ್ಕು ಬದಲಾಗದಂತೆ ತಡೆಯಲು ಇದೊಂದೇ ಹಾದಿ."[2]

ಬಿಕ್ಕಟ್ಟುಗಳ ಕಾರಣಗಳ ಬಗ್ಗೆ ಜಾನ್ ಎ. ಹಾಬ್ಸನ್ ಪ್ರತಿಪಾದಿಸಿರುವ ಸೂತ್ರಗಳು ಉಳಿದ ಎಲ್ಲ ಸಿದ್ಧಾಂತಗಳಿಗಿಂತ ಹೆಚ್ಚು ಪ್ರಚಾರವಾಗಿದೆ. ಉತ್ಕರ್ಷಕಾಲದಲ್ಲಿ ಬಂಡವಾಳದ ವರಮಾನ ಕಾರ್ಮಿಕರ ಕೂಲಿಗಿಂತ ಹೆಚ್ಚು ವೇಗದಲ್ಲಿ ಏರುತ್ತದೆಯೆಂದು ಅವರು ಹೇಳುತ್ತಾರೆ. ನಂಬಲಸಾಧ್ಯವಾದಷ್ಟು ಶೀಘ್ರವಾಗಿ ಧನಿಕರು ಇನ್ನೂ ಧನಿಕರಾಗುತ್ತಾರೆ. ಅವರ ವರಮಾನ ಹಿಗ್ಗುತ್ತಾ ನಡೆಯುತ್ತದೆ. ಅವರು ತಮಗಾಗಿ ಎಷ್ಟೇ ವೆಚ್ಚಮಾಡಲಿ, ಇನ್ನೂ ಹಣ ಅವರಲ್ಲಿ ಉಳಿಯುತ್ತದೆ. ಖರ್ಚು ಮಾಡಲಾಗದ್ದನ್ನು ಅವರು ಉಳಿತಾಯ ಮಾಡಬೇಕಾಗುವುದು. ಅವರು ತಮ್ಮಲ್ಲಿರುವ ಅಗಾಧ ಹಣವನ್ನು ಕೈಗಾರಿಕೆಯಲ್ಲಿ ಹೂಡುವರು. ಪದಾರ್ಥೋತ್ಪಾದನೆಯ ಸಾಧನಗಳ—ಉತ್ಪಾದನ ಶಕ್ತಿಯ—ಪ್ರಚಂಡ ಆಧಿಕ್ಯವಾಗುತ್ತದೆ. ಹೊಸ ಸುಧಾರಿತ ಸಾಧನಗಳು ತಮ್ಮ ಕೆಲಸ ಮಾಡುವುವು. ಕಾರ್ಖಾನೆ

---

[1] *Ibid.*, pp. 38, 40.

[2] F. A. von Hayek, *Prices and Production*, p. 89. Routledge & Sons, London, 1931.

ಗಳಿಂದ ಪೇಟೆಗೆ ಪದಾರ್ಥಗಳ ಹೊಳೆ ಹರಿಯುವುದು. ಆದರೆ ಹೀಗೆ ಅಧಿಕವಾಗುತ್ತಿರುವ ಪದಾರ್ಥ ಕೊಳ್ಳಲು ಕಾರ್ಮಿಕರಿಗೆ ಸಾಕಷ್ಟು ಕೂಲಿ ದೊರಕುತ್ತಿರುವುದಿಲ್ಲ. ಪದಾರ್ಥಗಳು ಮಾರಾಟವಾಗದೆ ಉಳಿಯುವುವು. ಇವು ಉಗ್ರಾಣಗಳಲ್ಲೂ ಅಂಗಡಿಗಳಲ್ಲೂ ರಾಶಿಯಾಗಿ ಬೀಳುವುವು. ಬೆಲೆಗಳು ವಿನಾಶಕಾರಿ ಮಟ್ಟಕ್ಕೆ ಕುಸಿಯುವುವು. ಉತ್ಪಾದನೆ ಅಲಾಭಕರ ವಾಗುವುದು. ಹೀಗಾದಾಗ, ಉತ್ಪಾದನೆಗೆ ಕಡಿತ ಬೀಳುವುದು. ಪರಿಣಾಮ—ನಿರುದ್ಯೋಗ, ಅವನತಿ, ಧನಿಕರ ವರಮಾನಗಳ ಪ್ರಮಾಣದಲ್ಲಿ ಇಳಿತ. ಅತಿಯಾದ ಉಳಿತಾಯ ಅಂತ್ಯಗೊಳ್ಳುವುದು.

ಬಳಕೆದಾರರು—ಅನುಭೋಕ್ತೃಗಳು—ಶೇಖರವಾದ ಪದಾರ್ಥಗಳನ್ನು ನಿಧಾನವಾಗಿ ಕೊಳ್ಳಲಾರಂಭಿಸುವರು. ಇವಕ್ಕೆ ಬೇಡಿಕೆ ಕ್ರಮವಾಗಿ ಹೆಚ್ಚುವುದು. ಹೊಸ ಸುಧಾರಿತ ಸಾಧನಗಳಿಲ್ಲದೆ ಉತ್ಪಾದನಕಾರ್ಯ ಸಮರ್ಪಕವಾಗಿ ನಡೆಯುವುದಿಲ್ಲವೆಂದು ಕೈಗಾರಿಕೆಗಳು ಕಂಡುಕೊಳ್ಳುವುವು. ಹೀಗೆ ಉತ್ಪಾದನೆ ಮತ್ತೆ ಏರುತ್ತದೆ. ಪುರೋಗಮನದ, ಉತ್ಕರ್ಷೆಯ, ಬಿಕ್ಕಟ್ಟಿನ, ಅವನತಿಯ ಇಡೀ ಚಕ್ರ—ಆವರ್ತ—ಹೀಗೆಯೇ ಸಾಗುತ್ತದೆ.

ಧನಿಕ-ದರಿದ್ರ ವೈಪರೀತ್ಯಗಳಿಂದ ಆತಂಕಗೊಂಡಿರುವ ಜನರ ಮನೋಭಾವಕ್ಕೆ ಉಚಿತವಾದದ್ದು—ಹಾಬ್ಸನ್ನರ ವಿವೇಚನೆ. ಇದು "ಅತಿ ಉಳಿತಾಯ" ಸಿದ್ಧಾಂತವೆಂದೇ ಭಾವಿಸಲಿ, ಅಥವಾ—ಬೇರೊಂದು ದೃಷ್ಟಿಯಿಂದ—ಕಡಮೆ ಅನುಭೋಗದ ಸಿದ್ಧಾಂತ ವೆಂದೇ ಭಾವಿಸಲಿ, ಸಂಪತ್ತಿನ ಅಸಮ ವಿತರಣೆಯೇ ಬಿಕ್ಕಟ್ಟುಗಳಿಗೆ ಮುಖ್ಯ ಕಾರಣ ವೆಂಬುದು ಖಚಿತವಾಗುತ್ತದೆ.

ಹಾಬ್ಸನ್ನರ ಮಾತುಗಳಲ್ಲೇ ಇದನ್ನು ಓದಿ: "ಈ ಹೆಚ್ಚುವರಿಗಳನ್ನು ತೆರಿಗೆಯ ಮೂಲಕ ಪಡೆದುಕೊಳ್ಳದಿದ್ದರೆ, ಇವು ನಮ್ಮ ಅರ್ಥವ್ಯವಸ್ಥೆಯ ಅಯುಕ್ತ ನಿಷ್ಫಲ ಅಂಶಗಳೆನಿಸುವುವು. ನೈತಿಕ ಆರ್ಥಿಕ ದೃಷ್ಟಿಯಲ್ಲಿ ಇವನ್ನು ವರಮಾನವೆಂದು ಕರೆಯುವುದು ಉಚಿತವಲ್ಲ. ಅನುಭೋಗದ ಅಥವಾ ಸುಖ ನೀಡುವ ದೃಷ್ಟಿಯಿಂದ ಇವು ಅಷ್ಟೇನೂ ಉಪಯುಕ್ತವಲ್ಲ. ಆದ್ದರಿಂದ ಇವು ಉಳಿತಾಯಗಳ ರೂಪದಲ್ಲಿ ಶೇಖರವಾಗುತ್ತವೆ. ಇಡೀ ಅರ್ಥವ್ಯವಸ್ಥೆಗೆ ಅಗತ್ಯವೆನಿಸಿದುದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಇವುಗಳು ಬಂಡವಾಳ ರೂಪದಲ್ಲಿ ವಿನಿಯೋಗವಾಗುತ್ತವೆ. ಕೈಗಾರಿಕೆ ಸ್ತಬ್ಧವಾಗಲು, ಬೆಲೆಗಳು ಕುಸಿಯಲು, ನಿರುದ್ಯೋಗ ಬಲಿಯಲು—ಒಟ್ಟಿನಲ್ಲಿ ಉದ್ಯಮದ ಅವನತಿಯಾಗಲು—ಈ ಅನುಪಾರ್ಜಿತ ಹೆಚ್ಚುವರಿಯೇ (Unearned surplus) ಕಾರಣ. ಕಾರ್ಮಿಕರ, ಇಡೀ ಸಮಾಜದ, ವೆಚ್ಚದ ಶಕ್ತಿಯನ್ನೂ ಅನುಭೋಗ ಶಕ್ತಿಯನ್ನೂ ಅಧಿಕಗೊಳಿಸಲು ಈ ಹೆಚ್ಚುವರಿಯನ್ನು ವಿನಿಯೋಗಿಸುವುದರಿಂದ, ಈ ವಿನಾಶಕಾರಿ ಅವ್ಯವಸ್ಥೆಯನ್ನು ಸರಿಪಡಿಸಬಹುದು. ಉತ್ಪಾದನಶಕ್ತಿ ಹೆಚ್ಚಿದಂತೆಲ್ಲಾ ಅನುಭೋಗಶಕ್ತಿಯೂ ಹೆಚ್ಚುವಂತೆ ಮಾಡುವುದರಿಂದ ಇದು ಸಾಧ್ಯ....ಹೆಚ್ಚು ಕೂಲಿಯ ಮೂಲಕವೋ....ಹೆಚ್ಚು ಹೆಚ್ಚು ಸಮಾಜೋಪಯೋಗಿ ಕಾರ್ಯಗಳ ಮೂಲಕವೋ, ಒಟ್ಟು ವರಮಾನದಲ್ಲಿ ಕೂಲಿಗಾರರಿಗೆ ಬರುವ ಮೊತ್ತದ ಪ್ರಮಾಣವನ್ನು ಹೆಚ್ಚಿಸಬೇಕು. ಅವನತಿ ನಿರುದ್ಯೋಗಗಳಿಗೆ ಬಲು ಬೇಗ ಪಕ್ಕಾಗುವ

ಕೈಗಾರಿಕೆಗಳಲ್ಲಿ ಪೂರ್ಣೋದ್ಯೋಗ ಸ್ಥಾಪಿಸಲು ಇದು ಬಹು ಅಗತ್ಯ."[1]

ಹಾಬ್ಸನ್ ತಮ್ಮ ವಾದವನ್ನು ಬಹು ಮನಗಾಣುವಂತೆ ಮಂಡಿಸಿದ್ದಾರೆ. ನಮ್ಮ ಸುತ್ತ ಎಲ್ಲೆಲ್ಲೂ ಯಾತನೆ ಸಂಕಟ ಇರುವುದನ್ನು ಕಂಡು ಆತಂಕಗೊಂಡಿದ್ದೇವೆ. ಆದ್ದರಿಂದ ಹೆಚ್ಚು ಕೂಲಿ ಕೊಡಬೇಕೆಂಬ, ಹೆಚ್ಚು ಸಮಾಜೋಪಯೋಗಿ ಕಾರ್ಯ ಆಗಬೇಕೆಂಬ ಅವರ ವಾದ ಸರಿಯೆಂದು ನಾವು ಒಪ್ಪುತ್ತೇವೆ. ಆದರೆ ನಮ್ಮ ಅಭಿಲಾಷೆಯ ಆತುರದಲ್ಲಿ ನಾವು ಈ ವಾದವನ್ನು ಸಂಪೂರ್ಣವಾಗಿ ಸ್ವೀಕರಿಸುವುದು ಸರಿಯಲ್ಲ. ಬಂಡವಾಳ ವ್ಯವಸ್ಥೆಯಲ್ಲಿ ಲಾಭ ಗಳಿಸುವುದೇ ಉತ್ಪಾದನೆಯ ಉದ್ದೇಶವೆಂಬುದನ್ನು ನಾವು ಮರೆಯಬಾರದು. ಬಂಡವಾಳಿಗರು ಅತಿಯಾಗಿ ಬಂಡವಾಳದ ಹಣ ಹೂಡುವುದರಿಂದ, ಅತಿ ಬಂಡವಾಳ ಭಾರವಾದ ಕೈಗಾರಿಕೆ ಉತ್ಪಾದಿಸಿದ ಪದಾರ್ಥಕೊಳ್ಳಲು ಸಾಕಷ್ಟು ಕೂಲಿ ಕಾರ್ಮಿಕರಿಗೆ ದೊರಕದುದರಿಂದ, ಆದ್ದರಿಂದ ಲಾಭ ಕುಸಿಯುವುದರಿಂದ, ಬಿಕ್ಕಟ್ಟುಗಳು ಬರುವುವೆಂಬುದು ಹಾಬ್ಸನರ ವಾದ.

ಆದರೆ ಇದು ನಿಜವಲ್ಲವೆಂದು ಪ್ರೊ|| ಹಯೆಕ್ ಹೇಳುತ್ತಾರೆ. ಬಂಡವಾಳಿಗರು ಸಾಕಷ್ಟು ಪ್ರಮಾಣದಲ್ಲಿ ಬಂಡವಾಳ ಹೂಡುವುದಿಲ್ಲವಾದ್ದರಿಂದ ಲಾಭ ಕುಸಿಯುವುದೆಂದು ಇವರು ಹೇಳುವರು. ಸಮಾಜೋಪಯೋಗಿ ಕಾರ್ಯಗಳನ್ನು ವಿಸ್ತರಿಸಬಾರದು, ಇಳಿಸಬೇಕು—ಎಂದು ಇವರ ವಾದ. ಕೂಲಿ ಏರಿಸಬಾರದು, ಇಳಿಸಬೇಕು—ಎನ್ನುವರಿವರು. "ಸರ್ಕಾರದ ಕೆಲವು ಬಗೆಯ ಕ್ರಮಗಳ ಫಲವಾಗಿ ಉತ್ಪಾದನ ಸಾಮಗ್ರಿಯ ಬದಲಾಗಿ ಅನುಭೋಗ ಸಾಮಗ್ರಿಗೆ ಬೇಡಿಕೆ ಉಂಟಾಗಿ, ಬಂಡವಾಳ ರೀತಿಯ ಉತ್ಪಾದನ ವ್ಯವಸ್ಥೆ ಕುಗ್ಗಿ, ತತ್ಪರಿಣಾಮವಾಗಿ ದೀರ್ಘ ಜಡತೆಯ ಪರಿಸ್ಥಿತಿ ಉಂಟಾಗುತ್ತದೆ....ಬಳಕೆದಾರರಿಗೆ —ಅನುಭೋಕ್ತೃಗಳಿಗೆ—ಸಾಲ ನೀಡುವುದು ಅಗತ್ಯವೆಂದು ಇದುವರೆಗೂ ಬಿರುಸಾಗಿ ನಡೆದಿರುವ ವಾದ ತಪ್ಪು. ಇದರಿಂದ ಅವನತಿ ತಪ್ಪುವ ಬದಲು ಅದು ಹೆಚ್ಚುತ್ತದೆ. ಅನುಭೋಗ ವಸ್ತುಗಳ ಬೇಡಿಕೆಯ ಏರಿಕೆಯಿಂದ ಪರಿಸ್ಥಿತಿ ಇನ್ನೂ ಹದಗೆಡುತ್ತದೆ."[2]

ಪ್ರೊ|| ಹಯೆಕರ ಕ್ಲಿಷ್ಟ ಸಿದ್ಧಾಂತವನ್ನು ಕೆಲವೇ ಪುಟಗಳಲ್ಲಿ ವಿವರಿಸುವುದು ಸಾಧ್ಯವಿಲ್ಲ. ಆದರೆ ಬಿಕ್ಕಟ್ಟಿಗೆ ಎಡೆ ಕೊಡುವ ಲಾಭಗಳ ಇಳಿಮೆಗೆ ಹಾಬ್ಸನರೂ ಹಯೆಕರೂ ಪರಸ್ಪರ ವಿರುದ್ಧವಾದ ಕಾರಣಗಳನ್ನೆ ನೀಡುವರೆಂಬುದನ್ನು ತೋರಿಸಿದರೆ ನಮ್ಮ ಉದ್ದೇಶ ಪೂರೈಸಿದಂತೆ. ಲಾಭದ ಇಳಿತದ ವ್ಯಾಧಿಯ ಪರಿಹಾರಕ್ಕೆ ಅವರು ಸೂಚಿಸುವ ಉಪಾಯಗಳೂ ಪರಸ್ಪರ ವಿರುದ್ಧ.

ಇದರಲ್ಲಿ ಸ್ವಾರಸ್ಯದ ಸಂಗತಿಯೆಂದರೆ, ಇವರಿಬ್ಬರ ವಾದಗಳೂ ಒಂದು ದೃಷ್ಟಿಯಲ್ಲಿ ಸರಿ, ಇನ್ನೊಂದು ದೃಷ್ಟಿಯಲ್ಲಿ ತಪ್ಪು. ಅಧಿಕಗೊಳ್ಳುತ್ತಿರುವ ಪದಾರ್ಥಗಳಿಗೆ ಅಗತ್ಯ

---

[1] J. A. Hobson, *Poverty in Plenty*, pp. 54, 63, 64, 67. Allen & Unwin, London, 1931.

[2] F. A. von Hayek, *op. cit.*, pp. 85, 86, 111, 112. Routledge & Sons, London, 1931.

ಗಿರಾಕಿ ಕಲ್ಪಿಸಲು ಹೆಚ್ಚು ಕೂಲಿಯೂ ವಿಸ್ತೃತ ಸಮಾಜೋಪಯೋಗಿ ಕಾರ್ಯವೂ ಅಗತ್ಯವೆಂಬ ಹಾಬ್ಸನರ ವಾದ ಸರಿ. ಆದರೆ ಕೂಲಿ ಹೆಚ್ಚಿಸುವುದರಿಂದ ಉತ್ಪಾದನೆಯ ತಕ್ಷಣದ ಲಾಭವನ್ನು ತಗ್ಗಿಸಿದಂತೆ—ಎಂಬ ಅವರ ವಾದ ತಪ್ಪು. ಕೂಲಿ ಇಳಿಸುವುದರಿಂದಲೂ ಸಮಾಜೋಪಯೋಗಿ ಕಾರ್ಯ ಕಡಮೆ ಮಾಡುವುದರಿಂದಲೂ ಉತ್ಪಾದನೆಯ ತಕ್ಷಣದ ಲಾಭ ಹೆಚ್ಚುವುದೆಂಬ ಹಯೆಕರ ವಾದ ಸರಿ. ಕೂಲಿ ಇಳಿಸುವುದರಿಂದ, ಅಧಿಕಗೊಳ್ಳುತ್ತಿರುವ ಪದಾರ್ಥ ಸರಬರಾಯಿಯ ಗಿರಾಕಿ ನಾಶವಾಗುವುದೆಂಬ ಅವರ ವಾದ ತಪ್ಪು. ಜನ ಜಂಗುಳಿಯ ಕೊಳ್ಳುವ ಶಕ್ತಿ ವರ್ಧಿಸುವಂತೆ ಮಾಡಿ, ಕಳೆದ ಗಿರಾಕಿಯನ್ನು (ಅಂತೆಯೇ ಲಾಭವನ್ನು) ಮತ್ತೆ ತೊಡಗಿಸಬೇಕೆಂದು ಹಾಬ್ಸನ್. ಜನ ಜಂಗುಳಿಯ ಕೊಳ್ಳುವ ಶಕ್ತಿ ಇಳಿಸಿ (ಕೂಲಿ ತಗ್ಗಿಸಿ)ಲಾಭವನ್ನು ಮತ್ತೆ ತೊಡಗಿಸಬೇಕೆಂದು ಹಯೆಕ್.

ಕಾರ್ಲ್ ಮಾರ್ಕ್ಸ್‌ನ ಅನುಯಾಯಿಗಳ ದೃಷ್ಟಿಯಲ್ಲಿ ಬಂಡವಾಳ ವ್ಯವಸ್ಥೆಯ ಉಭಯ ಸಂಕಟ ಇರುವುದು ಇಲ್ಲಿ. **ಅದು ಎರಡನ್ನೂ ಮಾಡಲಾರದು.** ಆದ್ದರಿಂದ ಬಂಡವಾಳ ವ್ಯವಸ್ಥೆಯಲ್ಲಿ ಬಿಕ್ಕಟ್ಟುಗಳು ಅನಿವಾರ್ಯವೆಂದು ಅವರ ವಾದ. ಬಿಕ್ಕಟ್ಟಿಗೆ ಇದು ಕಾರಣ, ಅದು ಕಾರಣ, ಇನ್ನೊಂದು ಕಾರಣ—ಎಂದು ಎಲ್ಲ ಅರ್ಥಶಾಸ್ತ್ರಜ್ಞರೂ ಹೇಳುತ್ತಾರೆ; ತಾವು ಸೂಚಿಸುವ ವಿಶಿಷ್ಟ ಉಪಾಯ ಅನುಸರಿಸಿದರೆ ಎಲ್ಲಾ ಸರಿಯಾಗುವುದೆಂದು ಇವರು ಸೂಚಿಸುತ್ತಾರೆ. ಆದರೆ ಬಂಡವಾಳ ವ್ಯವಸ್ಥೆಯನ್ನು ಉಳಿಸಿಕೊಳ್ಳುವುದಾದರೆ—ಆ ವ್ಯವಸ್ಥೆಯ ಅಡಿಯಲ್ಲೇ—ಬಿಕ್ಕಟ್ಟಿನ ನಿವಾರಣೆಗೆ ಯಾವ ಉಪಾಯವೂ ಇಲ್ಲವೆಂಬುದು ಮಾರ್ಕ್ಸ್‌ನ ಮತ. ಬಿಕ್ಕಟ್ಟನ್ನು ನಿವಾರಿಸಬೇಕಾದರೆ ಬಂಡವಾಳ ವ್ಯವಸ್ಥೆಯನ್ನೇ ನಿವಾರಿಸಬೇಕು—ಎಂದು ಮಾರ್ಕ್ಸ್ ಬರೆದ.

ಲಾಭ ಗಳಿಸುವುದೇ ಬಂಡವಾಳ ವ್ಯವಸ್ಥೆಯ ಪ್ರಧಾನೋದ್ದೇಶ. ಲಾಭದ ದರ ಬೀಳುವ ಪ್ರವೃತ್ತಿ ಇರುವುದೆಂಬ ವಿಚಾರವನ್ನು ಮಾರ್ಕ್ಸ್ ಸ್ಪಷ್ಟವಾಗಿ ತೋರಿಸಿ ಕೊಟ್ಟಿದ್ದಾನೆ. ಇದು ಕೇವಲ ಆಕಸ್ಮಿಕವಲ್ಲ. ಇದು ಆಗುವುದೇ ಹೀಗೆ. ಬಂಡವಾಳ ರೀತಿಯ ಉತ್ಪಾದನ ವ್ಯವಸ್ಥೆಯ ರಚನೆಯಲ್ಲೇ ಇದು ಅನಿವಾರ್ಯ. ಇದು ಏಕೆ ಹೀಗೆಂಬುದನ್ನು ನೋಡೋಣ. (೨೪೮ ರಿಂದ ೨೫೬ ನೆಯ ವರೆಗಿನ ಪುಟಗಳಲ್ಲಿ ಕೊಟ್ಟಿರುವ ಮೌಲ್ಯದ ಶ್ರಮಸಿದ್ಧಾಂತವನ್ನು ಈಗ ನೀವು ಮತ್ತೊಮ್ಮೆ ಎಚ್ಚರಿಕೆಯಿಂದ ಓದುವುದು ಒಳ್ಳೆಯದು.)

ಮಾರ್ಕ್ಸ್ ಬಂಡವಾಳವನ್ನು ಸ್ಥಿರ, ಅಸ್ಥಿರ (ಚಂಚಲ) ಎಂದು ಎರಡು ಭಾಗಗಳಾಗಿ ವಿಂಗಡಿಸುತ್ತಾನೆ. ಯಂತ್ರಸ್ಥಾವರ, ಯಂತ್ರ, ಉಪಕರಣ, ಕಚ್ಚಾ ಸಾಮುಗ್ರಿ ಮುಂತಾದವುಗಳ ಮೇಲೆ ವೆಚ್ಚವಾದದ್ದು ಸ್ಥಿರ ಬಂಡವಾಳ. ಶ್ರಮಶಕ್ತಿ ಕೊಳ್ಳಲು—ದುಡಿಮೆ ಕೊಳ್ಳಲು—ವೆಚ್ಚವಾದದ್ದು ಅಸ್ಥಿರ ಬಂಡವಾಳ. ಉತ್ಪಾದನ ಪ್ರಕ್ರಿಯೆಯಲ್ಲಿ ಅದರ ಮೌಲ್ಯ ಸ್ಥಿರವಾಗಿ ಉಳಿಯುವುದರಿಂದ, ಅಂತಿಮವಾಗಿ ತಯಾರಾದ ಪದಾರ್ಥಕ್ಕೆ ಇದರ ಮೂಲ ಮೌಲ್ಯ ಮಾತ್ರ ವರ್ಗವಾಗುವುದರಿಂದ, ಸ್ಥಿರ ಬಂಡವಾಳಕ್ಕೆ ಈ ಹೆಸರು ಬಂದಿದೆ. ಉತ್ಪಾದನ ಪ್ರಕ್ರಿಯೆಯಲ್ಲಿ ಅದರ ಮೌಲ್ಯ ವ್ಯತ್ಯಾಸಗೊಳ್ಳುವುದರಿಂದ—ಅದರ ಮೂಲದಲ್ಲಿದ್ದುದಕ್ಕಿಂತ ಹೆಚ್ಚು ಮೌಲ್ಯ ಅಂತಿಮವಾಗಿ ಉತ್ಪತ್ತಿಯಾಗುವ ಪದಾರ್ಥಕ್ಕೆ ಅದರಿಂದ ವರ್ಗವಾಗುವುದರಿಂದ

—ಅಸ್ಥಿರ ಬಂಡವಾಳಕ್ಕೆ ಈ ಹೆಸರು ಬಂದಿದೆ. ಸ್ಥಿರ ಬಂಡವಾಳ ಬರಡು. ಏಕೆಂದರೆ ಉತ್ಪಾದನ ಪ್ರಕ್ರಿಯೆಯಲ್ಲಿ ಇದು ಹೊಸ ಮೌಲ್ಯವನ್ನೇನೂ ಉತ್ಪಾದಿಸುವುದಿಲ್ಲ. ಅಸ್ಥಿರ ಬಂಡವಾಳ ಕ್ರಿಯಾತ್ಮಕ, ಸೃಷ್ಟ್ಯಾತ್ಮಕ. ಏಕೆಂದರೆ ಅದು (ಅದು ಮಾತ್ರ) ಉತ್ಪಾದನ ಪ್ರಕ್ರಿಯೆಯಲ್ಲಿ ಹೊಸ ಮೌಲ್ಯ ಸೃಷ್ಟಿಸುತ್ತದೆ. ತನ್ನ ಮೌಲ್ಯ ಎಷ್ಟೋ ಅಷ್ಟಕ್ಕಿಂತ ಹೆಚ್ಚು ಮೌಲ್ಯವನ್ನು—ಶೇಷ ಮೌಲ್ಯವನ್ನು—ಅತಿರಿಕ್ತ ಮೌಲ್ಯವನ್ನು— ಸೃಷ್ಟಿಸುವುದು ಈ ಅಸ್ಥಿರ ಬಂಡವಾಳ. ಲಾಭ ದೊರಕಿಸಿಕೊಡುವುದೂ ಕೂಡ ಈ ಅಸ್ಥಿರ ಬಂಡವಾಳ (ಜೀವಂತ ಶ್ರಮಶಕ್ತಿ).

ಆದ್ದರಿಂದ, ಉತ್ಪಾದನ ಕಾರ್ಯದಲ್ಲಿ, ಬಂಡವಾಳವನ್ನು ಈ ರೀತಿ ವಿಂಗಡಿಸಬಹುದು:

ಸ್ಥಿ (ಎಂದರೆ ಸ್ಥಿರ ಬಂಡವಾಳ) ಮತ್ತು ಅ (ಅಸ್ಥಿರ ಬಂಡವಾಳ) ಇವುಗಳ ಮೊತ್ತಕ್ಕೆ ಬ (ಒಟ್ಟು ಬಂಡವಾಳ) ಸಮ.

ಒಟ್ಟು ಬಂಡವಾಳದ (ಬ) ಯಾವ ಭಾಗ ಸ್ಥಿರ ಬಂಡವಾಳವಾಗಿಯೂ (ಸ್ಥಿ), ಯಾವ ಭಾಗ ಅಸ್ಥಿರ ಬಂಡವಾಳವಾಗಿಯೂ (ಅ) ವಿನಿಯೋಗವಾಗುವುದು? ಬಂಡವಾಳದ ಬೆಳವಣಿಗೆಯಾದಂತೆಲ್ಲ, ಒಟ್ಟು ಬಂಡವಾಳದ (ಬ) ಅಧಿಕಾಧಿಕ ಪ್ರಮಾಣ ಸ್ಥಿರ ಬಂಡವಾಳವಾಗಿ (ಸ್ಥಿ) ವಿನಿಯೋಗವಾಗುವುದೆಂಬುದರಲ್ಲಿ ಸಂಶಯವಿಲ್ಲ—ಎನ್ನುತ್ತಾನೆ ಮಾರ್ಕ್ಸ್. ಇದು ಒಪ್ಪಬಹುದಾದ ವಿಚಾರ. ಅಧಿಕಾಧಿಕ ಉತ್ತಮೋತ್ತಮ ಯಂತ್ರ ಆಧುನಿಕ ಕೈಗಾರಿಕೆಯಲ್ಲಿ ಸದಾ ಬಳಕೆಗೆ ಬರುತ್ತಲೇ ಇದೆಯೆಂಬುದು ಎಲ್ಲರಿಗೂ ತಿಳಿದ ವಿಚಾರ. ಈ ಯಂತ್ರ ನಿಜಕ್ಕೂ ಪವಾಡ ಸಾಧಿಸುತ್ತದೆ. ಆದರೆ ಇದನ್ನು ಕೊಳ್ಳಲು ಹಣ ಬೇಕು—ಅಗಾಧ ಹಣಬೇಕು. ಅಲ್ಲದೆ ಇದನ್ನು ಸ್ಥಾಪಿಸಿದಾಗ ಕಾರ್ಮಿಕರು ಉಚ್ಚಾಟನೆಗೊಳ್ಳುವರು. ಎಂದರೆ ಪರಿಣಾಮ ಇದು: ಒಟ್ಟು ಬಂಡವಾಳದಲ್ಲಿ ಅಸ್ಥಿರ ಬಂಡವಾಳದ ಪ್ರಮಾಣ ಕ್ರಮೇಣ ಕಡಮೆಯಾಗುತ್ತಲೇ ಇರುತ್ತದೆ. ಪ್ರತಿಯಾಗಿ, ಒಟ್ಟು ಬಂಡವಾಳದಲ್ಲಿ ಸ್ಥಿರ ಬಂಡವಾಳದ ಪ್ರಮಾಣ ಹೆಚ್ಚುತ್ತಲೇ ಇರುತ್ತದೆ.

ಶೀಘ್ರಲಿಪಿಯಲ್ಲಿ ಇದನ್ನು ಹೀಗೆ ಬರೆಯಬಹುದು:

$$\frac{\text{ಅ}}{\text{ಬ}} \text{ ಇಳಿಯುತ್ತಿರುತ್ತದೆ.}$$

$$\text{ಆದರೆ } \frac{\text{ಸ್ಥಿ}}{\text{ಬ}} \text{ ಏರುತ್ತಿರುತ್ತದೆ.}$$

ಸಾಪೇಕ್ಷವಾಗಿ, ಸ್ಥಿರ ಬಂಡವಾಳ ಏರಿದಂತೆ, ಅಸ್ಥಿರ ಬಂಡವಾಳ ಇಳಿಯುತ್ತಿರುವುದೆಂಬ ಅಂಶ ಬಹು ಮುಖ್ಯವಾದದ್ದು. ಹೆಚ್ಚುವರಿ ಮೌಲ್ಯಕ್ಕೆ—ಶೇಷ ಮೌಲ್ಯಕ್ಕೆ—ಅತಿರಿಕ್ತ ಮೌಲ್ಯಕ್ಕೆ—ಲಾಭಕ್ಕೆ—ಮುಖ್ಯವಾದ ಕಾರಣ ಅಸ್ಥಿರ ಬಂಡವಾಳ, ಅಸ್ಥಿರ ಬಂಡವಾಳ ಮಾತ್ರ. ಇದು ನಿಮಗೆ ನೆನಪಿದೆ. ಒಟ್ಟು ಬಂಡವಾಳದಲ್ಲಿ ಸ್ಥಿರ ಬಂಡವಾಳದ ಪ್ರಮಾಣ ಹೆಚ್ಚಿದಂತೆಲ್ಲಾ, "ಶೇಷಮೌಲ್ಯವೂ ದುಡಿಮೆಯ ಶೋಷಣೆಯೂ ಮೊದಲಿನ ಪ್ರಮಾಣದಲ್ಲೇ ಉಳಿದದ್ದಾದರೆ, ಆಗ ಲಾಭದ ಪ್ರಮಾಣ ಕಡಮೆಯಾಗುತ್ತದೆ," ಎಂದು ಬರೆಯುತ್ತಾನೆ

ಮಾರ್ಕ್ಸ್. "ಬಂಡವಾಳದ ಸಂಯೋಜನೆಯಲ್ಲಿ ಕ್ರಮೇಣ ಆಗುವ ಈ ಬದಲಾವಣೆ ಯಾವುದೋ ಕೆಲವು ಉತ್ಪಾದನ ಕ್ಷೇತ್ರಗಳಿಗೆ ಮಾತ್ರ ಅನ್ವಯಿಸತಕ್ಕದ್ದಲ್ಲ; ಹೆಚ್ಚು ಕಡಮೆ ಎಲ್ಲ ಕ್ಷೇತ್ರಗಳಲ್ಲೂ ಹೀಗಾಗುವುದೆಂಬುದನ್ನು ಅಂಗೀಕರಿಸಿದರೆ,....ಆಗ, ಅಸ್ಥಿರ ಬಂಡವಾಳಕ್ಕಿಂತ ಸ್ಥಿರ ಬಂಡವಾಳ ಹೆಚ್ಚು ಶೀಘ್ರವಾಗಿ—ಕ್ರಮವಾಗಿ ಬೆಳೆಯುತ್ತಾ ಹೋಗುವುದರಿಂದ, **ಲಾಭದ ಸರಾಸರಿ ದರ ಕ್ರಮೇಣ ಇಳಿಯುತ್ತದೆ.** ಶೇಷ ಮೌಲ್ಯದ ಪ್ರಮಾಣ **ಮೊದಲಿನಷ್ಟೇ ಉಳಿದಿರುವ ವರೆಗೂ ಹೀಗಾಗುವುದು ಅನಿವಾರ್ಯ.**"[1]

ಈ ಲಾಭದ ಪ್ರಮಾಣದ ಇಳಿತ ಬಹು ಆತಂಕಕಾರಿ. ಆದಷ್ಟು ಹೆಚ್ಚು ಲಾಭ ಗಳಿಸ ಬೇಕೆಂಬ ಬಂಡವಾಳಿಗರ ಉದ್ದೇಶಕ್ಕೇ ಇದು ಕೊಡಲಿ ಪೆಟ್ಟು ಹಾಕುತ್ತದೆ. ಆದರೆ ಬಂಡವಾಳಿಗರಿಗೆ ತಾತ್ಕಾಲಿಕವಾಗಿ ಒಂದು ಪರಿಹಾರೋಪಾಯವುಂಟು. ಲಾಭದ ದರ ಇಳಿಯುತ್ತಿದ್ದರೂ, ತಮ್ಮ ಲಾಭದ ಮೊತ್ತ ಹೆಚ್ಚಿಸಿಕೊಳ್ಳುವುದು ಸಾಧ್ಯವೆಂಬುದನ್ನು ಅವರು ಅರಿತುಕೊಳ್ಳುವರು. ಮುಂದೆ ಕೊಟ್ಟಿರುವ ಉದಾಹರಣೆಯನ್ನು ನೋಡಿ—

[ಶೇಷಮೌಲ್ಯವನ್ನು "ಶೇ" ಎಂದು ಇಟ್ಟುಕೊಳ್ಳಿ. ಶೇಷಮೌಲ್ಯದ ಪ್ರಮಾಣ ಯಾವಾಗಲೂ ಒಂದೇ ಆಗಿರುವುದೆಂದು—ಎಂದರೆ ಶೇಕಡ ೧೦೦ ಎಂದು—ಭಾವಿಸಿಕೊಳ್ಳಿ.]

| ಬ | ಸ್ಥಿ | ಅ | ಶೇ |
|---|---|---|---|
| ರೂ.೧೫೦೦ | ೧೦೦೦ | ೫೦೦ | ೫೦೦ |
| ರೂ.೪೦೦೦ | ೩೦೦೦ | ೧೦೦೦ | ೧೦೦೦ |

ಶೇಷ ಮೌಲ್ಯ (ಶೇ) ಅಸ್ಥಿರ ಬಂಡವಾಳದಿಂದಲೇ (ಅ) ಸೃಷ್ಟಿಯಾಗುವುದರಿಂದ, ಶೇಷಮೌಲ್ಯದ ದರ ಯಾವಾಗಲೂ "ಶೇ" ಹಾಗೂ "ಅ"ಗಳ ನಡುವಣ ಸಂಬಂಧಕ್ಕೆ ಅನುಸಾರವಾಗಿಯೇ-ಅಥವಾ $\frac{\text{ಶೇ}}{\text{ಅ}}$ ಗೆ ಅನುಗುಣವಾಗಿಯೇ-ಇರುತ್ತದೆ. ಇದನ್ನು ಶೇ ಎಂದು ನಿರೂಪಿಸಬಹುದು. ಲಾಭ ಬರುವುದು ಕೂಲಿಗಾಗಿ (ಅ) ಮಾಡಿದ ವೆಚ್ಚದಿಂದಲೇ. ಆದರೂ ಬಂಡವಾಳಿಗ ಮಾತ್ರ ತನ್ನ ಲಾಭವನ್ನು ತಾನು ಹೂಡಿದ ಒಟ್ಟು ಬಂಡವಾಳದ ಮೇಲೆಯೇ (ಬ) ಲೆಕ್ಕ ಹಾಕುತ್ತಾನೆ. ಆದ್ದರಿಂದ ಒಟ್ಟು ಬಂಡವಾಳಕ್ಕೂ (ಬ) ಶೇಷಮೌಲ್ಯಕ್ಕೂ (ಶೇ) ಇರುವ ಸಂಬಂಧದ ಮೇಲೆ ತನ್ನ ಲಾಭದ ಪ್ರಮಾಣವನ್ನು ಅವನು ಲೆಕ್ಕ ಹಾಕುತ್ತಾನೆ. ಎಂದರೆ ಹೀಗೆ: $\frac{\text{ಶೇ}}{\text{ಬ}}$

ಆದ್ದರಿಂದ, ಮೇಲೆ ಕೊಟ್ಟಿರುವ ಉದಾಹರಣೆಯಲ್ಲಿ, ಮೊದಲನೆಯ ಸಂದರ್ಭದಲ್ಲಿನ ಲೆಕ್ಕಾಚಾರದ ಪ್ರಕಾರ, $\frac{\text{ರೂ. ೫೦೦}}{\text{ರೂ. ೧೫೦೦}}$ ಆತನ ಲಾಭದ ದರ ಎಂದರೆ ಆತನ ಲಾಭ

[1] Karl Marx, *Capital*, edited by F. Engels, vol. III, p. 248. Kerr and Co., Chicago, 1909.

ಶೇಕಡ ೩೩ $\frac{೧}{೩}$. ಎರಡನೆಯ ಸಂದರ್ಭದಲ್ಲಿ ಆತನ ಲಾಭದ ದರ $\frac{\text{ರೂ. ೧೦೦೦}}{\text{ರೂ. ೪೦೦೦}}$ ಅಥವಾ ಶೇಕಡ ೨೫ ಮಾತ್ರ. ಆತನ ಲಾಭದ ದರ ಇಳಿದಿದ್ದರೂ ಕೂಡ, ಆತನ ಲಾಭದ ಮೊತ್ತ ಏರಿದೆ ; ಎಂದರೆ ೫೦೦ ರೂ. ಗಳಿಂದ ಅದು ೧೦೦೦ ರೂ. ಗಳಿಗೆ ಏರಿದೆ.

ಇದನ್ನು ಸಾಧ್ಯಗೊಳಿಸಲು ಯಾವುದು ಅಗತ್ಯವಾಯಿತೆಂಬುದನ್ನು ಗಮನಿಸಿ. ಲಾಭ ಯಾವುದರಿಂದ ಮಾತ್ರ ಬರುವುದು ಸಾಧ್ಯವೋ ಆ ಅಸ್ಥಿರ ಬಂಡವಾಳವನ್ನು ದ್ವಿಗುಣ ಗೊಳಿಸಬೇಕಾಯಿತು. ಉತ್ಪಾದನೆಯ ಆಧುನಿಕ ತಂತ್ರದಲ್ಲಿ ಅಸ್ಥಿರ ಬಂಡವಾಳಕ್ಕಿಂತ ಸ್ಥಿರ ಬಂಡವಾಳ ಹೆಚ್ಚು ವೇಗದಲ್ಲಿ ಅಧಿಕಗೊಳ್ಳುವುದು ಅಗತ್ಯವಾದ್ದರಿಂದ, ಅಸ್ಥಿರ ಬಂಡವಾಳ (ಅ) ಇಮ್ಮಡಿಸಿದಾಗ, ಸ್ಥಿರ ಬಂಡವಾಳ (ಸ್ಥಿ) ಮುಮ್ಮಡಿಸಬೇಕಾಯಿತು. ಅಲ್ಲೇ ಇರುವುದು ಘರ್ಷಣೆ. ಲಾಭ ಹೆಚ್ಚಿಸಲು ಬಂಡವಾಳಿಗರು ಹೆಚ್ಚು ಹೆಚ್ಚು ಬಂಡವಾಳ ಶೇಖರಿಸುವುದು ಅನಿವಾರ್ಯ. ಬಂಡವಾಳ ಶೇಖರಣೆ ನಿಂತಾಗ, ಲಾಭದ ಮೊತ್ತ (ಇದರೊಡನೆ ಲಾಭದ ದರವೂ ಕೂಡ) ಇಳಿಯುತ್ತದೆ.

ಪ್ರತಿಯೊಬ್ಬ ಬಂಡವಾಳಿಗನಿಗೂ ಇದು ಗೊತ್ತು. ತನ್ನ ಹಣದ ಉಳಿತಾಯ ಮಾಡಿ ಅದನ್ನು ಮತ್ತೆ ವ್ಯಾಪಾರದಲ್ಲಿ ಹೆಚ್ಚು ಹೆಚ್ಚು ಪ್ರಮಾಣದಲ್ಲಿ ಹಾಕಬೇಕು, ಇಲ್ಲವೇ ಈ ಹೋರಾಟದಲ್ಲಿ ಸೋಲನ್ನೊಪ್ಪಬೇಕು. ಪೇಟೆಯಲ್ಲಿನ ಮೇಲಾಟದಿಂದ ಆತ ಕಲಿತಿರುವ ಪಾಠ ಇದು. ಆತ ಶೇಖರಿಸಬೇಕು, ಸದಾ ಶೇಖರಿಸಬೇಕು ; ಲಾಭದ ದರದ ಇಳಿತವನ್ನು ಎದುರಿಸಲು, ನಿವಾರಿಸಲು, ಆತನ ಒಟ್ಟು ಬಂಡವಾಳ ಬೆಳೆಯುತ್ತಲೇ ಇರುವುದು ಅಗತ್ಯ.

ಕಾರ್ಮಿಕರಿಗೆ ಹೆಚ್ಚು ಕೂಲಿ ಕೊಡಬೇಕೆಂದು ವಿಧಿಸುವ ಸದುದ್ದೇಶಪೂರಿತ ಜನ ಈ ಅಂಶವನ್ನು ಮರೆಯುತ್ತಾರೆ. ಕಾರ್ಮಿಕರಿಗೆ ಹೆಚ್ಚು ಕೂಲಿ ಕೊಟ್ಟಷ್ಟೂ ತನ್ನ ಲಾಭ ಕಡಮೆ ಎಂಬುದು ಬಂಡವಾಳಿಗನಿಗೆ ಗೊತ್ತು. ಇದರಿಂದ, ಲಾಭ ಗಳಿಸುತ್ತಲೇ ಹೋಗಲು ಅಗತ್ಯವಾದ ಬಂಡವಾಳ ಶೇಖರಣೆ ಶೀಘ್ರಗೊಳ್ಳುವ ಬದಲು ನಿಧಾನವಾಗುತ್ತದೆ. ಆತನ ದೃಷ್ಟಿಯಿಂದ ಹೀಗಾಗಕೂಡದು. ಏಕೆಂದರೆ, ಶೇಖರಣೆ ನಿಂತಾಗ ಲಾಭವೂ ನಿಲ್ಲುತ್ತದೆ.

ಉಭಯ ಸಂಕಟದ ಈ ಒಂದು ಭಾಗವನ್ನು ಆತ ಆದಷ್ಟು ಕೂಲಿ ಕೊಡುವುದರಿಂದ ಪರಿಹರಿಸಿಕೊಳ್ಳುತ್ತಾನೆ. ಹೀಗೆ ಮಾಡಿದಾಗ ಮಾತ್ರ, ಶೇಖರಣೆ ಹೆಚ್ಚಿಸುವ ನೀತಿಯನ್ನು ಅನುಸರಿಸಲು ಆತ ಸ್ವತಂತ್ರ. ಆದರೆ, ಸತತಾಧಿಕಗೊಳ್ಳುತ್ತಿರುವ ಶೇಖರಣೆಯಿಂದ ಸತತಾಧಿಕ ಪದಾರ್ಥ ಪೇಟೆಗೆ ಬರುತ್ತದೆ. ಆಗ ಆತ ಈ ಆರ್ಥಿಕ ಉಭಯ ಸಂಕಟದ ಹೆಗ್ಗತ್ತರಿಯ ಇನ್ನೊಂದು ಅರ್ಧವನ್ನು, ಇನ್ನೊಂದು ಅಲಗನ್ನು ಎದುರಿಸಬೇಕಾಗುತ್ತದೆ. ಆತ ಉತ್ಪಾದಿಸಿದ ಪದಾರ್ಥವನ್ನು ಸ್ವೀಕರಿಸಲು ಕಾರ್ಮಿಕರಿಗೆ ಕೊಳ್ಳುವ ಶಕ್ತಿಯ ಅಭಾವವೇ ಈ ಇನ್ನೊಂದು ಸಮಸ್ಯೆ. ಕಡಮೆ ಕೂಲಿ ಕೊಡುವುದರಿಂದ, ಈತ ತಯಾರಿಸಿದ ಪದಾರ್ಥ ಗಳನ್ನು ಕೊಳ್ಳುವದಾಗಲಿ ಇದಕ್ಕೆ ಹಣ ಕೊಡುವುದಾಗಲಿ ಅಸಾಧ್ಯ.

ಮಾರ್ಕ್ಸ್ ನೀಡಿರುವ ಈ ವಿಶ್ಲೇಷಣೆಯ ಅರ್ಥ ಇಷ್ಟು : ಬಂಡವಾಳಿಗರು ಕೂಲಿಯನ್ನು ಆದಷ್ಟು ಕಡಮೆ ಮಟ್ಟದಲ್ಲಿಟ್ಟು ಲಾಭದ ಮಟ್ಟ ಉಳಿಸಿಕೊಳ್ಳಬೇಕು. ಆದರೆ ಹೀಗೆ

ಮಾಡುವಾಗ, ಲಾಭದ ಗಳಿಕೆ ಯಾವುದರ ಆಧಾರದ ಮೇಲೆ ನಿಂತಿದೆಯೋ ಆ ಆಧಾರವನ್ನು, ಕೊಳ್ಳುವ ಶಕ್ತಿಯನ್ನು, ಆತ ನಾಶಪಡಿಸುವನು. ಕಡಮೆ ಕೂಲಿಯಿಂದ ಹೆಚ್ಚು ಲಾಭ ಸಾಧ್ಯ. ಆದರೆ, ಅದೇ ಕಾಲಕ್ಕೆ, ಪದಾರ್ಥಕ್ಕೆ ಗಿರಾಕಿ ತಗ್ಗುವುದರಿಂದ ಲಾಭ ಗಳಿಸುವುದೂ ಅಸಾಧ್ಯವಾಗುತ್ತದೆ.

ಪರಿಹರಿಸಲಾಗದ ವಿರೋಧಾಭಾಸ ಇದು.

* * *

ಸುಮಾರು ತೊಂಬತ್ತು ವರ್ಷಗಳ ಹಿಂದೆ, ಬಂಡವಾಳ ವ್ಯವಸ್ಥೆಯ ಕಣ್ಣು ಮುಳ್ಳಾದ ಈ ಬಿಕ್ಕಟ್ಟಿನ ಮೇಲೆ ಥಾಮಸ್ ಕಾರ್ಲೈಲ್ ಬೆರಳಿಟ್ಟು ತೋರಿಸಿದ: "ನಿಮ್ಮ ನೂತ ಷರ್ಟಿನಿಂದ ಏನು ಪ್ರಯೋಜನ? ಮಾರಾಟವಾಗದೆ ಲಕ್ಷಾಂತರ ಷರ್ಟುಗಳು ಅಲ್ಲಿ ತೂಗಾಡುತ್ತಿವೆ. ಆದರೆ ಇಲ್ಲಿ, ಈ ಷರ್ಟುಗಳನ್ನು ಪಡೆಯಲಾರದ ಲಕ್ಷಾಂತರ ದುಡಿಮೆಗಾರರ ಬೆತ್ತಲೆ ಬೆನ್ನುಗಳಿವೆ. ಮಾನವರ ಬೆನ್ನು ಮುಚ್ಚಲು ಷರ್ಟು ಉಪಯುಕ್ತ. ಹಾಗಿಲ್ಲದಿದ್ದರೆ ಅದು ನಿರುಪಯುಕ್ತ, ಅಸಹನೀಯ, ಅವಹೇಳನಕರ. ಈ ಸಮಸ್ಯೆಯ ಆ ಮುಖದ ಪರಿಹಾರದಲ್ಲಿ ನೀವು ಅಗಾಧವಾಗಿ ಹಿಂದುಳಿದಿದ್ದೀರಿ."[1]

"ಈ ಸಮಸ್ಯೆಯ ಆ ಮುಖದ ಪರಿಹಾರದಲ್ಲಿ ನೀವು ಅಗಾಧವಾಗಿ ಹಿಂದುಳಿದಿದ್ದೀರಿ." ಎಂದು ಕಾರ್ಲೈಲ್ ಹೇಳಿದ ಮಾತು ಆತ ಹೇಳಿದ ಕಾಲಕ್ಕೇ ನಿಜವೆನಿಸಿದರೆ, ಜಗತ್ತಿನ ಇತಿಹಾಸದಲ್ಲಿ ಅತ್ಯಂತ ಹಿರಿಯ ಬಿಕ್ಕಟ್ಟಿನ ನಡುವೆ ನಾವು ಇರುವಾಗ, ಇಂದು, ಈ ಮಾತು ಇನ್ನೆಷ್ಟು ನಿಜವಿರಬೇಕು?

ಎಲ್ಲೆಲ್ಲೂ ಜನ ಈ ಸಮಸ್ಯೆಯೊಂದಿಗೆ ಹೋರಾಡುತ್ತಿದ್ದಾರೆ. ಸೋವಿಯೆಟ್ ರಾಜ್ಯದಲ್ಲಿ, ಬಂಡವಾಳ ವ್ಯವಸ್ಥೆಯನ್ನು ಪದಚ್ಯುತಿಗೊಳಿಸುವ ಮಾರ್ಕ್ಸ್ ವಿಧಾನದಿಂದ ಈ ಸಮಸ್ಯೆಯನ್ನು ಪರಿಹರಿಸಲು ಯತ್ನ ನಡೆಯುತ್ತಿದೆ. ಜಗತ್ತಿನ ಇತರ ಎಡೆಗಳಲ್ಲಿ ಬಂಡವಾಳ ವ್ಯವಸ್ಥೆಗೆ ತೇಪೆ ಹಾಕಿ, ಅದನ್ನು ನಿಯಂತ್ರಣಗೊಳಿಸುವುದರ ಮೂಲಕ ಈ ಸಮಸ್ಯೆಯನ್ನು ಪರಿಹರಿಸಲು ಯತ್ನ ನಡೆಯುತ್ತಿದೆ.

[1] Thomas Carlyle, *Past and Present*, bk. I, ch. III. Chapman & Hall, London, 1843.

## ೨೧. ರಷ್ಯಕ್ಕೊಂದು ಯೋಜನೆ

ಹತ್ತೊಂಬತ್ತನೆಯ ಶತಮಾನ ಕೊನೆಗೊಳ್ಳಲು ಹದಿನೇಳು ವರ್ಷ ಮುಂಚೆ ಕಾರ್ಲ್ ಮಾರ್ಕ್ಸ್ ಸತ್ತ.

ಇಪ್ಪತ್ತನೆಯ ಶತಮಾನ ಆರಂಭವಾದ ಹದಿನೇಳು ವರ್ಷಗಳ ಅನಂತರ ಕಾರ್ಲ್ ಮಾರ್ಕ್ಸ್ ಮತ್ತೆ ಜೀವಿಸಿದ.

ಮಾರ್ಕ್ಸನಿಗೆ ಕೇವಲ ಸಿದ್ಧಾಂತವಾಗಿದ್ದದ್ದು ಆತನ ಶಿಷ್ಯರಿಂದ—ಲೆನಿನ್ ಹಾಗೂ ಇತರ ರಷ್ಯನ್ ಬಾಲ್ಷೆವಿಕರಿಂದ—ಅವರು ೧೯೧೭ರಲ್ಲಿ ಅಧಿಕಾರ ಕಿತ್ತುಕೊಂಡಾಗ—ಅನುಷ್ಠಾನಕ್ಕೆ ಬಂತು. ಇದಕ್ಕೆ ಮುಂಚೆ ಮಾರ್ಕ್ಸ್‌ನ ಬೋಧನೆಗಳು ನಿಷ್ಠಾವಂತ ಹಿಂಬಾಲಿಗರ ಸಣ್ಣ ಗುಂಪೊಂದಕ್ಕೆ ಪರಿಚಿತವಾಗಿದ್ದುವು. ಇದಾದ ಅನಂತರ ಮಾರ್ಕ್ಸ್‌ನ ಬೋಧನೆಗಳು ಇಡೀ ಜಗತ್ತಿನ ಗಮನ ಸೆಳೆದುವು. ಇದಕ್ಕೆ ಮುಂಚೆ, ತಮ್ಮ ಸಿದ್ಧಾಂತವನ್ನು ಅನುಷ್ಠಾನಕ್ಕೆ ತಂದದ್ದೇ ಆದರೆ, ಹೊಸ ಜಗತ್ತಿನ ಸೃಷ್ಟಿಯಾಗುವುದೆಂದು ಕಮ್ಯೂನಿಸ್ಟರು ಕೇವಲ ವಾಗ್ದಾನ ಮಾತ್ರ ಮಾಡಬಹುದಿತ್ತು. ಅನಂತರವಾದರೋ, ಕಮ್ಯೂನಿಸ್ಟರು ಭೂಮಿಯ ಮೇಲಣ ಆರನೆಯ ಒಂದು ಭಾಗದಷ್ಟು ನೆಲದತ್ತ (ರಷ್ಯದತ್ತ) ಕೈ ತೋರಿ, "ಇಲ್ಲಿದೆ ನೋಡಿ, ಇದು ವ್ಯಾವಹಾರ್ಯವಲ್ಲವೆ?" ಎನ್ನುವರು.

ಮೊಟ್ಟಮೊದಲಾಗಿ, ಬಾಲ್ಷೆವಿಕ್ಕರು ಅಧಿಕಾರ ಕಿತ್ತುಕೊಳ್ಳುವುದು ಹೇಗೆ ಸಾಧ್ಯವಾಯಿತು? ಕ್ರಾಂತಿ ಯಶಸ್ವಿಯಾಗಲು ಇದ್ದ ಪರಿಸ್ಥಿತಿಗಳು ಯಾವುವು? ಕ್ರಾಂತಿಯನ್ನು ಕುರಿತ ಒಂದು ಅಂಶವಂತೂ ನಿಜ: ಯಾರೇ ಆಗಲಿ, ಎಲ್ಲೇ ಆಗಲಿ, ಎಂದೇ ಆಗಲಿ, ಕ್ರಾಂತಿಯನ್ನು ಯಶಸ್ವಿಯಾಗಿ ನಿರ್ವಹಿಸುವುದು ಬಹು ಕಷ್ಟ. ಇಲ್ಲ, ಕ್ರಾಂತಿಯೂ ಒಂದು ಕಲೆ. ಬಾಲ್ಷೆವಿಕರ ನಾಯಕ ಲೆನಿನ್ ಈ ಮುಖ್ಯ ಸತ್ಯವನ್ನು ಒತ್ತಿ ಹೇಳಿದ.

"ಬಂಡಾಯ ಯಶಸ್ವಿಯಾಗಲು ಅದು ಒಂದು ಪಿತೂರಿಯನ್ನೇ ಅವಲಂಬಿಸಬಾರದು, ಒಂದು ಪಕ್ಷವನ್ನೇ ಅವಲಂಬಿಸಬಾರದು. ಪ್ರಗತಿಪರ ವರ್ಗವನ್ನೇ ಅದು ಅವಲಂಬಿಸಬೇಕು. ಇದು ಪ್ರಥಮ ಅಂಶ. ಪಕ್ವವಾಗುತ್ತಿರುವ ಕ್ರಾಂತಿಯ ಚರಿತ್ರೆಯ ನಿರ್ಣಾಯಕ ಘಟ್ಟದಲ್ಲಿ, ಜನರ ಮುಂಪಡೆಯ ಚಟುವಟಿಕೆ ಪರಮಾವಧಿ ಮುಟ್ಟಿದಾಗ, ಶತ್ರುಪಕ್ಷಗಳಲ್ಲೂ, ಕ್ರಾಂತಿಯ ದುರ್ಬಲ ಅರೆಮನಸ್ಸಿನ ಅನಿಶ್ಚಿತ ಮಿತ್ರರ ಪಕ್ಷಗಳಲ್ಲೂ ಹೊಯ್ದಾಟ ಅತಿಯಾದಾಗ, ಏರ್ಪಟ್ಟ ಬಂಡಾಯ ಯಶಸ್ವಿಯಾಗುತ್ತದೆ. ಇದು ಮೂರನೆಯ ಅಂಶ....ಆದರೆ, ಈ ಪರಿಸ್ಥಿತಿಗಳು ಇದ್ದಾಗ, ಮೇಲೆದ್ದ ಬಂಡಾಯವನ್ನು ಒಂದು ಕಲೆಯೆಂದು ಪರಿಗಣಿಸಲು ಒಪ್ಪದಿದ್ದರೆ, ಆಗ ಮಾರ್ಕ್ಸ್‌ವಾದಕ್ಕೆ ಹಾಗೂ ಕ್ರಾಂತಿಗೆ ದ್ರೋಹ ಬಗೆದಂತೆ."[1]

ಬಾಲ್ಷೆವಿಕರು ಅಧಿಕಾರ ಕಸಿದುಕೊಳ್ಳಲು ಒಂದು ತಿಂಗಳ ಹಿಂದೆ ಬರೆದದ್ದು ಇದು.

---

[1] V. I. Lenin, *Toward the Seizure of Power*, vol. I, pp. 224, 225. International Publishers, N. Y., 1932.

ಕ್ರಾಂತಿ ಯಶಸ್ವಿಯಾಗಬೇಕಾದರೆ ಇರಬೇಕಾದ ಪರಿಸ್ಥಿತಿಗಳನ್ನು ಕುರಿತು ಲೆನಿನ್ ಆಡಿದ ಮಾತನ್ನು ಅವನ ಹಿಂಬಾಲಕರಲ್ಲಿ ಹಲವರು ಒಪ್ಪಿದರು. ಈ ಅಗತ್ಯ ಪರಿಸ್ಥಿತಿಗಳು ತಲೆದೋರುವ **ನಿಷ್ಕೃಷ್ಟ** ಸಮಯ ಯಾವುದು?—ಎಂಬ ಬಗ್ಗೆ ಒಮ್ಮತವಿರಲಿಲ್ಲ. ಲೆನಿನ್ನನ ಅಸಾಧಾರಣ ಪ್ರತಿಭೆ ವ್ಯಕ್ತವಾದದ್ದು ಈ ವಿಚಾರದಲ್ಲಿ. ಪರಿಸ್ಥಿತಿ ನಿಜವಾಗಿಯೂ ಹದವಾಗಿದ್ದುದು ಯಾವಾಗ? ಎಂಬುದನ್ನು, ಯಾವಾಗ ಯತ್ನ ನಡಸಿದರೆ ಯಶಸ್ಸು ಸಿದ್ಧವೆಂಬುದನ್ನು, ಯಾವಾಗ ತಳುವಿದರೆ ಪ್ರಮಾದ ಎಂಬುದನ್ನು, ಗುರುತಿಸಿದ ಪ್ರತಿಭಾಶಾಲಿ ಈತ.

ಅಧಿಕಾರ ಕಸಿದುಕೊಳ್ಳುವ ಸಮಯಕ್ಕೆ ಸ್ವಲ್ಪ ಹಿಂದೆ, ಪೂರ್ವಭಾವಿಯಾಗಿ, ಕಾರ್ಯಾಚರಣೆಯ ಕಾಲ ಸನ್ನಿಹಿತವಾಗಿದೆಯೆಂಬುದಾಗಿ ತನ್ನ ಹಿಂಬಾಲಕರಿಗೆ ಮನವರಿಕೆ ಮಾಡಲು ತನ್ನ ಎಲ್ಲ ಶಕ್ತಿಯನ್ನೂ ವಿನಿಯೋಗಿಸಬೇಕಾಯಿತು. ಅಕ್ಟೋಬರ್ ಏಳರಿಂದ ಹದಿನಾಲ್ಕರ ವರೆಗೆ ಅವನು ಒಂದು ಲೇಖನ ಬರೆದು ಮುಗಿಸಿದ. 'ಬಾಲ್ಷೆವಿಕರು ರಾಜ್ಯಾಧಿಕಾರ ಉಳಿಸಿಕೊಳ್ಳುವರೆ?' ಎಂಬುದು ಅದರ ಶೀರ್ಷಿಕೆ. ಆಗ, ಅಲ್ಲಿ, ಕ್ರಾಂತಿ ಕಾರ್ಯಕ್ರಮದ ವಿರುದ್ಧ ಎದ್ದಿದ್ದ ನಾನಾ ವಾದಗಳನ್ನು ಅದರಲ್ಲಿ ವಿವೇಚಿಸಿದ್ದ. ಇಂಥ ಆಕ್ಷೇಪಣೆಗಳಲ್ಲಿ ಒಂದಕ್ಕೆ ಆತ ಕೊಟ್ಟ ಉತ್ತರ ಇದು; "'ಪರಿಸ್ಥಿತಿ ವಿಶೇಷ ಜಟಿಲವಾಗಿರುವುದರಿಂದ' ಬಾಲ್ಷೆವಿಕರು ಅಧಿಕಾರ ಉಳಿಸಿಕೊಳ್ಳುವುದಿಲ್ಲವೆಂಬುದು ಐದನೆಯ ವಾದ.

"ಅಯ್ಯೋ, ದಡ್ಡ ಪಂಡಿತರೆ, ಪಂಡಿತಂಮನ್ಯರೆ! ಇವರು ಕ್ರಾಂತಿಯನ್ನು ಸಹಿಸಲೇನೋ ಸಿದ್ಧ—ಆದರೆ, 'ವಿಶೇಷ ಜಟಿಲ ಪರಿಸ್ಥಿತಿ' ಇಲ್ಲದಿದ್ದರೆ ಮಾತ್ರ.

"ಇಂಥ ಕ್ರಾಂತಿಗಳು ಎಂದೂ ಸಂಭವಿಸುವುದಿಲ್ಲ. ಮತ್ತು ಇಂಥ ಕ್ರಾಂತಿಗಳ ಅನಂತರದ ಬೊಬ್ಬೆಯೆಂದರೆ ಬೂರ್ಷ್ವಾ ಬುದ್ಧಿಜೀವಿಗಳ ಪ್ರತಿಗಾಮಿ ರೋದನ. ಅಷ್ಟೇನೂ ಜಟಿಲವೆನಿಸದ ಪರಿಸ್ಥಿತಿಯಲ್ಲಿ ಒಂದು ಕ್ರಾಂತಿ ಆರಂಭವಾದರೂ ಕೂಡ, ಕ್ರಾಂತಿಯ ಬೆಳೆವಣಿಗೆಯ ಕಾಲದಲ್ಲಿ ಅದು ಯಾವಾಗಲೂ ಅತ್ಯಂತ ಜಟಿಲ ಪರಿಸ್ಥಿತಿಗಳಿಗೆ ಎಡೆ ಕೊಟ್ಟೇ ಕೊಡುತ್ತದೆ. ಏಕೆಂದರೆ, ಒಂದು ಕ್ರಾಂತಿ, ಒಂದು ನಿಜವಾದ ಆಳವಾದ 'ಜನಕ್ರಾಂತಿ'—ಇದು ಮಾರ್ಕ್ಸ್‌ನೇ ಹೇಳಿದ ಮಾತು—ಹಳೆಯದರ ಅವಸಾನವಾಗಿ ಹೊಸ ಸಮಾಜ ವ್ಯವಸ್ಥೆಯ ಉದಯಕ್ಕೆ, ಲಕ್ಷಾಂತರ ಜನರ ಹೊಂದಾಣಿಕೆಗೆ, ಸಂಬಂಧಿಸಿದ ಜಟಿಲತರ ದಾರುಣಕ್ರಿಯೆ. ಅತ್ಯಂತ ತೀವ್ರವಾದ, ಉಗ್ರವಾದ, ದುರ್ಘಟ ವರ್ಗ ಘರ್ಷಣೆ ಹಾಗೂ ಅಂತರ್ಯುದ್ಧವೇ ಕ್ರಾಂತಿ. ಅಂತರ್ಯುದ್ಧವನ್ನು ತಪ್ಪಿಸಿಕೊಂಡ ಮಹಾಕ್ರಾಂತಿ ಒಂದಾದರೂ ಜಗತ್ತಿನ ಚರಿತ್ರೆಯಲ್ಲಿಲ್ಲ. ನಿಜಸ್ಥಿತಿಗಿಂತ ದೂರವಾಗಿ ಚಿಪ್ಪಿನಲ್ಲಿ ಅಡಗಿರುವವರು ಮಾತ್ರ ವಿಶೇಷ ಜಟಿಲ ಪರಿಸ್ಥಿತಿಯಲ್ಲದೆ ಬೇರೆಯ ಸಾಮಾನ್ಯ ಪರಿಸ್ಥಿತಿಯಲ್ಲಿ ಸಂಭವಿಸಬಹುದಾದ ಅಂತರ್ಯುದ್ಧವನ್ನು ಊಹಿಸಿಕೊಳ್ಳಬಲ್ಲರು.

"ವಿಶೇಷ ಜಟಿಲ ಪರಿಸ್ಥಿತಿ ಇಲ್ಲದಿದ್ದರೆ ಆಗ ಕ್ರಾಂತಿ ಸಂಭವಿಸುವುದೇ ಇಲ್ಲ. ನಿಮಗೆ ತೋಳವೆಂದರೆ ಭಯವಾದರೆ ಕಾಡಿಗೆ ಹೋಗಲೇಬೇಡಿ."[1]

---

[1] *Ibid.*, vol. II, pp. 40-41.

ಭವಿಷ್ಯದಲ್ಲಿ ಏನು ಅಡಗಿದೆಯೆಂಬುದನ್ನು ಅರಿತಿದ್ದ, ಇದಕ್ಕೆ ತೆರಬೇಕಾದ ಬೆಲೆ ಎಷ್ಟೆಂಬುದನ್ನು ಅರಿತಿದ್ದೂ ಹೆದರದಿದ್ದ, ಕಾರ್ಮಿಕರ ವರ್ಗದಿಂದ ಕಾರ್ಮಿಕರ ವರ್ಗಕ್ಕಾಗಿ ನಿಯಂತ್ರಿತವಾದ ಸಮಾಜವಾದಿ ರಾಜ್ಯಸ್ಥಾಪನೆಯ ಗುರಿಗಾಗಿ ತೆರಬೇಕಾಗಿದ್ದ ಭಯಂಕರ ಬೆಲೆ ಹೆಚ್ಚಲ್ಲವೆಂದು ಅರಿತಿದ್ದ ಕ್ರಾಂತಿವಾದಿ ಹೀಗೆ ಬರೆದ. ಕ್ರಾಂತಿಯ ಕಲೆಯನ್ನು ಲೆನಿನ್ ತಿಳಿದಿದ್ದರಿಂದಲೇ ಆತ ಗೆದ್ದ.

ಕಮ್ಯೂನಿಸ್ಟರು ಹೊಸ ನಾಗರಿಕತೆಯೆಂದು ಕರೆಯುವ ವ್ಯವಸ್ಥೆಗೆ ಎಡೆ ಮಾಡಿಕೊಟ್ಟ ಘಟನೆಗಳಲ್ಲಿ ಹಲವನ್ನು ಪ್ರತ್ಯಕ್ಷವಾಗಿ ಕಂಡು ವರದಿ ಮಾಡಲು ಜಾನ್ ರೀಡ್‌ನಂಥ ಅದ್ಭುತ ವರದಿಗಾರನಿದ್ದುದು ಅದೃಷ್ಟಕರ. "ಜಗತ್ತನ್ನು ನಡುಗಿಸಿದ ಹತ್ತು ದಿವಸ" ಎಂಬ ಪುಸ್ತಕದಲ್ಲಿ ಆ ಉತ್ಸಾಹಕರ ಕಾಲದ ಮರೆಯಲಾಗದ ಚಿತ್ರ ನೀಡುತ್ತಾನೆ. ೧೯೧೭ರ ನವೆಂಬರಿನಲ್ಲಿ ಪೆಟ್ರೋಗ್ರಾಡ್‌ನಲ್ಲಿ ಸೇರಿದ್ದ ಸೋವಿಯೆಟ್ ಕಾಂಗ್ರೆಸಿನ ಸಭೆಯ ವರ್ಣನೆಯ ಒಂದು ಭಾಗವಿದು: "ಆಗ ಲೆನಿನ್ ವಾಚನ ಪೀಠದ ತುದಿಯನ್ನು ಹಿಡಿದು ನಿಂತ; ತನ್ನ ಚಿಕ್ಕ ಕಣ್ಣು ಮಿಟುಕಿಸುತ್ತ ಆ ಗುಂಪಿನ ಮೇಲೆ ದೃಷ್ಟಿ ಹಾಯಿಸಿ, ಕಾಯ್ದು ನಿಂತ; ಗುಂಪಿನ ಹಲವು ನಿಮಿಷಗಳ ಗಂಭೀರ ಉದ್ಘೋಷ ತನಗೆ ಕೇಳಿಸಲಿಲ್ಲವೇನೋ—ಎಂಬಂತೆ ನಿಂತ. ಆ ಘೋಷ ನಿಂತಾಗ, ಆತ ಸರಳವಾಗಿ ಹೀಗೆ ಹೇಳಿದ: "ಸಮಾಜವಾದಿ ವ್ಯವಸ್ಥೆಯ ನಿರ್ಮಾಣ ಕಾರ್ಯದಲ್ಲಿ ನಾವು ಈಗ ಮುಂದುವರಿಯೋಣ!"[1]

ಅದು ೧೯೧೭. 'ಸಮಾಜವಾದಿ ವ್ಯವಸ್ಥೆ'ಯ ನಿರ್ಮಾಣದ ಆರಂಭವನ್ನು ಲೆನಿನ್ ಹೀಗೆ ನಾಟಕೀಯವಾಗಿ ಘೋಷಿಸಿದ ಹದಿನೈದು ವರ್ಷಗಳ ಅನಂತರ, ಇದರ ಚೌಕಟ್ಟಿನ ರಚನಾಕಾರ್ಯ ಮುಗಿದಿದೆಯೆಂದು 'ನ್ಯೂಯಾರ್ಕ್ ಟೈಮ್ಸ್' ಪತ್ರಿಕೆಯ ವರದಿಗಾರ ವಾಲ್ಟರ್ ಡ್ಯುರಾಂಟಿ ಬರೆದರು: "ಕ್ರಾಂತಿಯ ಗುರಿಯಾಗಿದ್ದ ಸಮಾಜವಾದಿ ವ್ಯವಸ್ಥೆಯ ಚೌಕಟ್ಟಿನ ರಚನಾಕಾರ್ಯ ೧೯೩೨ರಲ್ಲಿ ಮುಗಿಯಿತೆನ್ನಬಹುದು.

"ಭವನದ ಸಂಪೂರ್ಣ ನಿರ್ಮಾಣವಾಗುವುದಂತೂ ಇನ್ನೂ ಬಹು ದೂರವಿದೆ. ಆದರೆ ಸಮಾಜವಾದ ಭವನದ ಭಾರ ಹೊತ್ತು ನಿಲ್ಲುವ ಉಕ್ಕಿನ ಚೌಕಟ್ಟಿನ ಪೂರ್ಣ ರೂಪ ರೇಖೆಯನ್ನು ನಾವು ಈಗ ಪೂರ್ವಾಕಾಶದ ಇದಿರು ನಿಂತಿರುವುದನ್ನು ಕಾಣಬಹುದು. ಹಣಕಾಸು, ಕೈಗಾರಿಕೆ, ಸಾರಿಗೆ, ಸಾರ್ವಜನಿಕ ಆರೋಗ್ಯ ಮತ್ತು ಮನೋರಂಜನೆ, ಕಲೆ, ವಿಜ್ಞಾನ, ವಾಣಿಜ್ಯ, ವ್ಯವಸಾಯ—ರಾಷ್ಟ್ರೀಯ ಜೀವನದ ಪ್ರತಿಯೊಂದು ಶಾಖೆಯೂ, ವೈಯಕ್ತಿಕ ಲಾಭಪ್ರೇರಿತ ವೈಯಕ್ತಿಕ ಪ್ರಯತ್ನದ ಬದಲು ಸಮಷ್ಟಿ ಯತ್ನದ ಸ್ವೇಚ್ಛಾರೂಪಿಕೆಗೆ ಅಳವಡಿಸಲ್ಪಟ್ಟಿದೆ."[2]

---

[1] John Reed, *Ten Days That Shook the World* (1919), p. 126. International Publishers, N. Y., 1926.

[2] *New York Times Magazine*, Nov. 6, 1932.

ಡಾ॥ ಡ್ಯುರಾಂಟಿ ಅವರು ಕೊನೆಯ ವಾಕ್ಯದಲ್ಲಿ ಸೋವಿಯೆಟ್ ಕಾರ್ಯಕ್ರಮದ ಮುಖ್ಯಾಂಶದ ಮೇಲೆ ಬೆರಳಿಟ್ಟಿದ್ದಾರೆ. 'ವೈಯಕ್ತಿಕ'ದ ಬದಲು 'ಸಮಷ್ಟಿ' ಎಂಬವು ಮುಖ್ಯ ಪದಗಳು. ಉತ್ಪಾದನ ಸಾಧನಗಳ ಖಾಸಗಿ ಒಡೆತನದ ನಿರ್ಮೂಲವೇ ಸಮಾಜ ವಾದಿ ವ್ಯವಸ್ಥೆಯ ನಿರ್ಮಾಣದಲ್ಲಿ ಕಾರ್ಲ್ ಮಾರ್ಕ್ಸನ ಅನುಯಾಯಿಗಳು ಅನುಸರಿಸುವ ಪ್ರಥಮ ಕ್ರಮಗಳಲ್ಲಿ ಒಂದು—ಎಂಬುದನ್ನು ನಿರೀಕ್ಷಿಸಿಯೇ ಇರುತ್ತೀರಿ. ನಿಜವಾಗಿಯೂ ಹಾಗೆಯೇ ಆಯಿತು. ಸೋವಿಯೆಟ್ ರಾಜ್ಯದಲ್ಲಿ ನೆಲ, ಕಾರ್ಖಾನೆ, ಗಣಿ, ಗಿರಣಿ, ಯಂತ್ರ, ಬ್ಯಾಂಕು, ರೈಲ್ವೆ ಮುಂತಾದವು ಖಾಸಗಿ ವ್ಯಕ್ತಿಗಳ ಆಸ್ತಿಗಳಾಗಿಲ್ಲ. ಈ ಎಲ್ಲ ಉತ್ಪಾದನ ವಿತರಣ ಸಾಧನಗಳೂ ಸರ್ಕಾರದ ವಶದಲ್ಲೋ, ಸರಕಾರದಿಂದ ನೇಮಕ ವಾಗಿರುವ, ಅಥವಾ ಸರ್ಕಾರದ ಒಪ್ಪಿಗೆ ಪಡೆದ, ಸರ್ಕಾರದ ಹತೋಟಿಯಲ್ಲಿರುವ ಸಂಸ್ಥೆಗಳ ಅಧೀನದಲ್ಲೋ ಇವೆ.

ಇದು ಮೂಲಭೂತವಾದದ್ದು. ಇದರ ನಿಜವಾದ ಪ್ರಾಮುಖ್ಯವನ್ನರಿಯಲು ಇದನ್ನು ಬಂಡವಾಳವಾದಿ ವ್ಯವಸ್ಥೆಯೊಡನೆ ಹೋಲಿಸಬೇಕು. ರಷ್ಯನರ ವ್ಯವಸ್ಥೆಯಲ್ಲಿ ಒಬ್ಬ ಇನ್ನೊಬ್ಬನನ್ನು ಶೋಷಿಸುವುದು ಸಾಧ್ಯವಿಲ್ಲ. 'ಎ'ಯು 'ಬಿ'ಯ ದುಡಿಮೆಯಿಂದ ಲಾಭ ಹೊಂದುವಂತಿಲ್ಲ. ಒಬ್ಬ, 'ತನ್ನ' ಕಾರ್ಮಿಕರ ಬೆನ್ನ ಮೇಲೆ, ಹಣ ಶೇಖರಣೆಯ ಏಣಿಯನ್ನೇರುವುದು ಇನ್ನು ಮುಂದೆ ಸಾಧ್ಯವಿಲ್ಲವೆಂದು ಇದರ ಅರ್ಥ. ನಿಜವಾಗಿಯೂ ಕೆಲಸ ಬೇಕಾದವನಿಗೆ ಕೆಲಸ ದೊರಕುವುದೆಂದು ಒಬ್ಬ ಮೋಟಾರು ಕಾರು ತಯಾರಕ ಪತ್ರಿಕೆಗಳಲ್ಲಿ ಒಂದು ದಿನ ಜಾಹೀರಾತು ನೀಡಿ, ಮರುದಿನ ತನ್ನ ಕಾರ್ಖಾನೆ ಮುಚ್ಚಿ ೧೫೦೦೦ ಕಾರ್ಮಿಕರನ್ನು ವಜಾ ಮಾಡುವುದು ಸಾಧ್ಯವಿಲ್ಲವೆಂದು ಇದರ ಅರ್ಥ. ಅವನು ಹೀಗೆ ಮಾಡಲಾರ. ಏಕೆಂದರೆ ಅದು ಅವನ ಕಾರ್ಖಾನೆಯಲ್ಲ. ಅದು ಎಲ್ಲ ಜನರಿಗೂ, ಒಟ್ಟಾಗಿ, ಸೇರಿದ್ದು. ವರ್ಗ ವ್ಯತ್ಯಾಸಗಳನ್ನು—ಒಡೆಯ ಕೆಲಸಗಾರ, ಬಂಡವಾಳಿಗ ಶ್ರಮಜೀವಿ, ಧನಿಕ ಬಡವ ಎಂಬ ವೈಪರೀತ್ಯಗಳ ವರ್ಗ ವಿಭಾಗಗಳನ್ನು ತೊಡೆದು ಹಾಕಿದೆಯೆಂದು ಅರ್ಥ. ಹೀಗೆನ್ನುತ್ತಾರೆ ರಷ್ಯನರು. "ಕಸಿದುಕೊಳ್ಳುವವರೇ ಕಸಿಯಲ್ಪಟ್ಟಿದ್ದಾರೆ."

೧೯೩೬ರ ಏಪ್ರಿಲ್ ೨೨ರಂದು 'ನ್ಯೂಯಾರ್ಕ್ ಟೈಮ್ಸ್' ಪತ್ರಿಕೆಗೆ ಕಳುಹಿಸಿದ ವಿಶೇಷ ಸುದ್ದಿಯಲ್ಲಿ, ಅದರ ಮಾಸ್ಕೋ ಸುದ್ದಿಗಾರ ಹೆರಾಲ್ಡ್ ಡೆನ್ನಿ ಕಮ್ಯೂನಿಸ್ಟರ ಈ ಜಂಭದ ಬಡಾಯಿಯ ವರದಿ ಮಾಡಿದರು :

## ರಷ್ಯನರಿಂದ ಸಾಮಾಜಿಕ ವರ್ಗಗಳ ಅಂತ್ಯಕ್ಕೆ ಸ್ವಾಗತ

### ಸೋವಿಯಟ್ಟರ ಗುರಿಗಳಲ್ಲಿ ಮೊದಲನೆಯುದರ ಸಾಧನೆಯೆಂದು

### ಆಂಡ್ರೀಫರ ಹೇಳಿಕೆ: ಕಮ್ಯುನಿಸ್ಟ್ ಯುವಕರಿಗೆ ಉತ್ಪಾದನೆಯ ಗುರಿ ಸಮೀಪ

### ಸೋವಿಯಟ್ ಒಕ್ಕೂಟದ ವಸ್ತುಗಳಲ್ಲಿ ಶೇ. ೧.೫ರಷ್ಟು ಮಾತ್ರ ಈ ವರ್ಷ ಖಾಸಗಿ ಉದ್ಯಮದಿಂದ ಉತ್ಪಾದನೆ

ಹೆರಾಲ್ಡ್ ಡೆನ್ನಿಯಿಂದ
'ನ್ಯೂಯಾರ್ಕ್ ಟೈಮ್ಸ್'ಗೆ ವಿಶೇಷ ಸುದ್ದಿ

ಮಾಸ್ಕೋ, ಏಪ್ರಿಲ್ ೨೧—ಸೋವಿಯೆಟ್ ರಾಜ್ಯ ಕಮ್ಯೂನಿಸಮ್ಮಿನತ್ತ ಕ್ರಮಿಸುತ್ತಿರುವ ಹಾದಿಯಲ್ಲಿ ಮೊದಲನೆಯ ಗುರಿಯನ್ನು ಮುಟ್ಟಿದೆ. ಹೀಗೆಂದು ಸೋವಿಯೆಟ್ ಸಮಾಜವಾದಿ ಗಣರಾಜ್ಯ ಒಕ್ಕೂಟದ ಕಮ್ಯೂನಿಸ್ಟ್ ಪಕ್ಷದ ಕೇಂದ್ರ ಸಮಿತಿಯ ಕಾರ್ಯದರ್ಶಿ ಆಂಡ್ರೀ ಆಂಡ್ರೀಫ್ ಅವರು ಯುವ ಕಮ್ಯೂನಿಸ್ಟ್ ಸಂಸ್ಥೆಯ (ಕಾಮ್ಸೊಮೊಲ್) ಸಮ್ಮೇಳನವನ್ನುದ್ದೇಶಿಸಿ ಇಂದು ನುಡಿದರು. ದೇಶದ ಉತ್ಪಾದನ ಸಾಧನಗಳು ಈಗ ಹೆಚ್ಚು ಕಡಮೆ ಸಂಪೂರ್ಣವಾಗಿ ಸಮಾಜೀಕರಣಗೊಳಿಸಲ್ಪಟ್ಟವೆ; ವರ್ಗ ವಿಭೇದಗಳನ್ನು ಅಳಿಸಿ ಹಾಕಿದೆ—ಎಂದು ಅವರು ಒತ್ತಿ ಹೇಳಿಧರು.

ಸೋವಿಯೆಟ್ ಒಕ್ಕೂಟದಲ್ಲಿ ಈ ವರ್ಷ ತಯಾರಾಗುವ ಎಲ್ಲ ಪದಾರ್ಥಗಳ ಪೈಕಿ ಶೇಕಡ ೯೮.೫ರಷ್ಟು ಸರ್ಕಾರದಿಂದ ಉತ್ಪಾದಿಸಲ್ಪಡುತ್ತದೆ. ಉಳಿದ ಶೇಕಡ ೧.೫ರಷ್ಟು ಮಾತ್ರ ಸಣ್ಣ ಕೈಕೆಲಸ, ಉಡುಪು ತಲೆಯುಡಿಗೆ ಪಾದರಕ್ಷೆ ಇವುಗಳ ತಯಾರಿಕೆಯ ಕ್ಷೇತ್ರದಲ್ಲಿ, ಸಮಾಜ ಸ್ವಾಮ್ಯಕರಣವಾಗದ ಕೈಗಾರಿಕೆಗಳ ಉತ್ಪಾದನೆ. ಹೀಗೆಂದು ಮಿ॥ ಆಂಡ್ರೀಫ್ ಒತ್ತಿ ಹೇಳಿದರು. ಈ ಕೈಗಾರಿಕೆಗಾರರ ಮೇಲೆ ವಿಧಿಸಿರುವ ನಿರೋಧಾತ್ಮಕ ತೆರಿಗೆಗಳಿಂದ ಇವರೂ ಕೂಡ ಬಹು ಶೀಘ್ರವಾಗಿ ಉಚ್ಚಾಟನೆಗೊಳ್ಳುತ್ತಿದ್ದಾರೆಂಬುದನ್ನು ಮಿ॥ ಆಂಡ್ರೀಫ್ ಹೇಳಲಿಲ್ಲ. ಆದರೆ ಇದು ನಿಜ.

> ಕೈಗಾರಿಕೆಯ ಸಮಾಜ ಸ್ವಾಮ್ಯಕರಣದಿಂದಲೂ, ಹೆಚ್ಚು ಕಡಮೆ ಸಂಪೂರ್ಣವಾಗಿ ವ್ಯವಸಾಯದ ಸಮಾಜ ಸ್ವಾಮ್ಯಕರಣದಿಂದಲೂ ಈಗ ಇರುವುದು ಒಂದೇ ವರ್ಗ—ಅದು ಕಾರ್ಮಿಕರದು, ಎಂದು ಸಾರಿದರು ಮಿ॥ ಆಂಡ್ರೀಫ್.[1]

ಸೋವಿಯೆಟ್ ಒಕ್ಕೂಟದಲ್ಲಿ ಸಮಾಜ ಸ್ವಾಮ್ಯಕರಣವಾಗದೆ ಉಳಿದಿರುವ ಕೈಗಾರಿಕೆ ಕೇವಲ ಶೇಕಡ ೧.೫ ಮಾತ್ರ ! ಅದೂ ಕೂಡ, ನಾವು ಸಾಮಾನ್ಯವಾಗಿ ಹೇಳುವ ಬಗೆಯ ಬಂಡವಾಳವಾದಿ ಕೈಗಾರಿಕೆಯಲ್ಲ. ಏಕೆಂದರೆ ಇದರಲ್ಲಿ ಉತ್ಪಾದಕರೇ ತಮಗಾಗಿ ಕೆಲಸ ಮಾಡುವರು; ಕೆಲಸ ಮಾಡಲು ಇತರರ ನೇಮಕವಿಲ್ಲ. ದೇಶದ ಉತ್ಪಾದನ ವ್ಯವಸ್ಥೆಯ ಉಳಿದ ಎಲ್ಲ ಭಾಗದ ಸ್ವಾಮ್ಯ ಸಮಷ್ಟಿಯದು, ನಿರ್ವಹಣೆ ಸರಕಾರದ್ದು.

ಉತ್ಪಾದನ ಸಾಧನಗಳ ಒಡೆತನ ಪಡೆದ ಸೋವಿಯೆಟ್ ಒಕ್ಕೂಟ ಎದುರಿಸ ಬೇಕಾದ ಮಹಾ ಆರ್ಥಿಕ ಪ್ರಶ್ನೆಗಳು ಇವು: ಏನು ಉತ್ಪಾದಿಸಬೇಕು? ಎಷ್ಟು ಉತ್ಪಾದಿಸಬೇಕು? ಉತ್ಪಾದಿಸಿದ್ದು ಹೋಗುವುದು ಯಾರಿಗೆ? ಇಡೀ ದೇಶದ ಪರವಾಗಿ ಮಾಡಬೇಕಾದ ತೀರ್ಮಾನಗಳು ಇವು. ಬಂಡವಾಳವಾದಿ ದೇಶಗಳಲ್ಲಿ ಪ್ರತಿ ಬಂಡವಾಳ ಗಾರನೂ ತನ್ನ ಬಂಡವಾಳವನ್ನು ಒಂದು ಉದ್ಯಮದಲ್ಲಿ ಹಾಕುವ ಮುನ್ನ ಇದೇ ರೀತಿಯ ಕೆಲವು ತೀರ್ಮಾನ ಕೈಕೊಳ್ಳಬೇಕು. ತನ್ನ ಹಣವನ್ನು ಮೋಟಾರುಕಾರು ಕಾರ್ಖಾನೆ ಯಲ್ಲಿ ಹಾಕಬೇಕೆ? ಅಥವಾ ರೈಲ್ವೆ ನಿರ್ಮಾಣ ಮಾಡಬೇಕೆ? ಅಥವಾ ವಸ್ತ್ರ ತಯಾರಿಸಬೇಕೆ? ಅವನು ಎಷ್ಟು ಉತ್ಪಾದಿಸಬೇಕು? ತನ್ನ ಕೆಲಸಗಾರರಿಗೆ ಎಷ್ಟು ಕೊಡ ಬೇಕು? ಇಂಥ ಸಹಸ್ರಾರು ಲಕ್ಷ ಸಣ್ಣ ತೀರ್ಮಾನಗಳ ಪರಿಣಾಮಗಳು ಸೇರಿ ಒಟ್ಟು ಉತ್ಪಾದನೆಯಾಗುತ್ತದೆ. ಆದರೆ ಈ ನಾನಾ ಭಾಗಗಳು ಒಂದಕ್ಕೊಂದು ಹೊಂದಿ ಕೊಳ್ಳುವುವೆಂಬ ಭರವಸೆಯೇನೂ ಇಲ್ಲ. ಈ ಭಾಗಗಳ ಸಮನ್ವಯವಾಗದಾಗ, ಪ್ರತಿ ಕೆಲವು ವರ್ಷಕ್ಕೊಮ್ಮೆ, ಕುಸಿತ ಸಂಭವಿಸುವುದನ್ನು ನಾವೆಲ್ಲ ಅನುಭವದಿಂದ ಅರಿತಿದ್ದೇವೆ.

ಸಮಾಜವಾದಿ ರಾಜ್ಯದಲ್ಲಿ ಸರಕಾರ ಬಂಡವಾಳಗಾರನ ಸ್ಥಾನ ಪಡೆಯುತ್ತದೆ. ಆದರೆ ಇದರ ಗಾತ್ರ, ಜವಾಬ್ದಾರಿ ಸಾವಿರ ಮಡಿ ಹೆಚ್ಚು—ಎಂದರೆ, ಬಂಡವಾಳದ ಸಂಪೂರ್ಣ ಸ್ವಾಮ್ಯ ಇದರದೇ. **ಪ್ರತಿಯೊಂದು** ತೀರ್ಮಾನವನ್ನೂ ಇದೇ ಮಾಡಬೇಕಾಗುತ್ತದೆ. ಎಲ್ಲ ವಿವಿಧ ಭಾಗಗಳನ್ನೂ, ಸಾವಿರದೆಂಟು ಬಗೆಯ ಜಟಿಲ ಆರ್ಥಿಕ ಚಟುವಟಿಕೆಗಳನ್ನೂ ಸಾಮರಸ್ಯ ಹೊಂದುವಂತೆ ಕೂಡಿಸುವ, ಒಂದು ಇನ್ನೊಂದರೊಡನೆ ಸುಸೂತ್ರವಾಗಿ ಕೆಲಸ ಮಾಡುವಂತೆ ಜೋಡಿಸುವ ಯತ್ನ ಮಾಡುತ್ತದೆ ಸಮಾಜವಾದಿ ಸರಕಾರ. ಈ ಕೆಲಸವನ್ನು ಸಮರ್ಪಕವಾಗಿ ಮಾಡಲು

ರಷ್ಯಕ್ಕೊಂದು ಯೋಜನೆ ಇದೆ.

---

[1] *New York Times*, April 22, 1936.

"ಸೋವಿಯೆಟ್ ಕಮ್ಯೂನಿಸಮ್ಮಿನ ಎಲ್ಲ ಪ್ರವೃತ್ತಿಗಳ ಪೈಕಿ ಬಹು ಪ್ರಧಾನವಾದದ್ದೆಂದರೆ ಇಡೀ ರಾಷ್ಟ್ರದ ಉತ್ಪಾದನೆ ವಿತರಣೆ ವಿನಿಮಯಗಳ ಎಚ್ಚರಿಕೆಯ ಯೋಜನೆ—ಕೆಲವರ ಲಾಭ ಹಿಗ್ಗಿಸುವುದಕ್ಕಾಗಿ ಅಲ್ಲ, ಇಡೀ ಸಮಾಜದ ಅನುಭೋಗ ವೃದ್ಧಿಗಾಗಿ....

"ಲಾಭಾನ್ವೇಷಣೆಯ ಉತ್ಪಾದನೋದ್ದೇಶವುಳ್ಳ ಖಾಸಗಿ ಒಡೆತನ ಒಮ್ಮೆ ತ್ಯಜಿಸಲ್ಪಟ್ಟಾಗ, ಪ್ರತಿಯೊಂದು ಉದ್ಯಮವೂ ಉತ್ಪಾದಿಸಬೇಕಾದ್ದರ ಬಗ್ಗೆ ನಿಷ್ಕೃಷ್ಟ ನಿರ್ದೇಶನ ಕೊಡಬೇಕಾಗುತ್ತದೆ. ಸಮಷ್ಟಿ ರಾಜ್ಯದಲ್ಲಿ ಯಾವುದಾದರೊಂದು ಬಗೆಯ ಸಾಮಾನ್ಯ ಯೋಜನೆ ಅತ್ಯಂತ ಅವಶ್ಯವೆನಿಸುತ್ತದೆ."[1]

ರಷ್ಯದ ಪಂಚವಾರ್ಷಿಕ ಯೋಜನೆಯ ಮಾತನ್ನು ನೀವು ಪದೇ ಪದೇ ಕೇಳಿದ್ದೀರಿ. ಅದು ಪೂರೈಸಿದಾಗ, ಅವರು ತಮ್ಮ ದ್ವಿತೀಯ ಪಂಚವಾರ್ಷಿಕ ಯೋಜನೆಯನ್ನಾರಂಭಿಸಿದರು. ಹೀಗೆಯೇ ಇದು ಮುಂದುವರಿಯುತ್ತದೆ—ಎಂದಿಗೂ, ಎಂದೆಂದಿಗೂ, ರಷ್ಯ ಸಮಾಜವಾದಿಯಾಗಿರುವ ವರೆಗೂ. ಏಕೆಂದರೆ, ಸಿಡ್ನಿ ಹಾಗೂ ಬೀಟ್ರಿಸ್ ವೆಬ್ ಅವರು ಮೇಲೆ ಉದ್ಧರಿಸಿಕೊಟ್ಟಿರುವ ವಾಕ್ಯಪುಂಜದಲ್ಲಿ ಹೇಳಿರುವಂತೆ, ಸಮಷ್ಟಿಯ ರಾಜ್ಯಕ್ಕೆ ಒಂದು ಯೋಜನೆ ಇರಬೇಕು. ಸಮಾಜವಾದಿ ಅರ್ಥವ್ಯವಸ್ಥೆ ಯೋಜಿತ ಅರ್ಥವ್ಯವಸ್ಥೆಯಾಗಿರುವುದು ಅತ್ಯಗತ್ಯ.

ಯೋಜಿತ ಅರ್ಥವ್ಯವಸ್ಥೆಯನ್ನು ಹೊಂದಿರುವ ದೇಶ ಪ್ರಪಂಚದಲ್ಲಿ ರಷ್ಯಾ ಒಂದೇ. ಆದ್ದರಿಂದ ಇಂಥ ಅರ್ಥವ್ಯವಸ್ಥೆ ಕೆಲಸ ಮಾಡುವ ಬಗೆಯನ್ನರಿಯಬೇಕಾದರೆ ರಷ್ಯದ ಈ ಮಾದರಿಯನ್ನೇ ನಾವು ಪರಿಶೀಲಿಸಬೇಕು.

ಯೋಜನೆಯಲ್ಲಿ ಅಂತರ್ಗತವಾದದ್ದು ಯಾವುದು? ನೀವೋ ನಾನೋ ಯೋಜನೆಯೊಂದನ್ನು ನಿರ್ಮಿಸಿದಾಗ, ಯಾರಾದರೂ ಒಂದು ಯೋಜನೆ ನಿರ್ಮಿಸಿದಾಗ, ಅದರಲ್ಲಿ ಅಡಕವಾಗಿರುವ ಮುಖ್ಯಾಂಶ ಎರಡು— **ಏತಕ್ಕಾಗಿ** ಮತ್ತು **ಹೇಗೆ**. ಒಂದು ಉದ್ದೇಶ, ಒಂದು ವಿಧಾನ. ನಿಲುಕಬೇಕಾದ ಗುರಿಯೇ ನಮ್ಮ ಯೋಜನೆಯ ಒಂದು ಮುಖ; ಅವನ್ನು ತಲಪುವುದು ಹೇಗೆಂಬುದು ಇನ್ನೊಂದು ಮುಖ.

ಸಮಾಜವಾದಿ ಯೋಜನೆಯ ಬಗ್ಗೆ ಈ ಮಾತು ನಿಜ. ಇದಕ್ಕೊಂದು ಗುರಿಯಿದೆ; ಇದಕ್ಕೊಂದು ವಿಧಾನವಿದೆ. ಆದರೆ ಸಮಾಜವಾದಿ ಯೋಜನೆಯ ಗುರಿಗಳು ಬಂಡವಾಳವಾದಿ ದೇಶಗಳಲ್ಲಿ ಅರಸುವ ಗುರಿಗಳಿಗಿಂತ ಭಿನ್ನವಾದವುಗಳು. ವೆಬ್ ದಂಪತಿಗಳು ಸೋವಿಯೆಟ್ ಒಕ್ಕೂಟದ ಬಗ್ಗೆ ಬರೆದಿರುವ ಶ್ರೇಷ್ಠಕೃತಿಯಾದ "ಸೋವಿಯೆಟ್ ಕಮ್ಯೂನಿಸಮ್ : ಒಂದು ಹೊಸ ನಾಗರಿಕತೆಯೆ?" ಎಂಬ ಪುಸ್ತಕದಲ್ಲಿ ಇದನ್ನು ಬಹು ಚೆನ್ನಾಗಿ ವಿವರಿಸಿದ್ದಾರೆ: "ಬಂಡವಾಳವಾದಿ ಸಮಾಜದಲ್ಲಿ, ತನ್ನ ಒಡೆಯರು ಅಥವಾ ಷೇರುದಾರರು ಗಳಿಸುವ ಧನಲಾಭವೇ ಉದ್ದೇಶ—ಅತ್ಯಂತ ಹಿರಿಯ ಖಾಸಗಿ ಉದ್ಯಮದ

[1] Sidney and Beatrice Webb, *Soviet Communism : A New Civilization?* 2 vols., vol. II, pp. 602, 630. Charles Scribner's Sons, N.Y., 1936.

ಉದ್ದೇಶ ಕೂಡ ಇದೇ....ಸೋವಿಯೆಟ್ ಒಕ್ಕೂಟದಲ್ಲಿ, ಶ್ರಮಜೀವಿ ವರ್ಗದ ಸರ್ವಾಧಿಕಾರವೆಂಬುದು ಇರುವಲ್ಲಿ, ಅರಸಬೇಕಾದ ಗುರಿ ಬೇರೆ ಬಗೆ. ಲಾಭ ಪಡೆಯಬೇಕಾದ ಒಡೆಯರಾಗಲಿ, ಷೇರುದಾರರಾಗಲಿ ಇಲ್ಲಿಲ್ಲ. ಧನಲಾಭದ ದೃಷ್ಟಿಯೇ ಇಲ್ಲ. ಅಂತಿಮವಾಗಿ ಇಡೀ ಜನಾಂಗದ ಪರಮಾವಧಿ ಸೌಖ್ಯ ನೆಮ್ಮದಿಗಳೇ ಏಕಮಾತ್ರ ಗುರಿ."[1]

ಒಳ್ಳೆಯದೇ ಆಯಿತು. ಇದು ಸಾಮಾನ್ಯೋದ್ದೇಶ—ಸ್ಥೂಲವಾಗಿ. ಆದರೆ ಇದಕ್ಕೆ ಮೂರ್ತ ಸ್ವರೂಪ ದೊರಕಿಸಬೇಡವೆ? ಈ ಇಚ್ಛಿತೋದ್ದೇಶಕ್ಕೆ ಅನುರೂಪವಾದ ವಿಶಿಷ್ಟ ನೀತಿಗಳನ್ನು ಜಾರಿಗೆ ತರಬೇಕು. ಆದರೆ ನೀತಿಗೆ ಆಧಾರಭೂತವಾಗಬೇಕು—ಸಾಧ್ಯತೆ. ಈ ಸಾಧ್ಯತೆಯ ಅಳತೆಯಾದರೂ, ದೇಶದ ನಿಷ್ಕೃಷ್ಟ ಚಿತ್ರ ಸಾಕಾರವಾಗಿ ನಿಂತಾಗಲೇ ಸಾಧ್ಯ.

ಇದು ಯೋಜನಾ ಸಮಿತಿಯ (ಗೋಸ್ಪ್ಲಾನ್) ಕರ್ತವ್ಯ.

ಸೋವಿಯೆಟ್ ಒಕ್ಕೂಟದಲ್ಲಿ ಪ್ರತಿಯೊಂದರ ಬಗ್ಗೆಯೂ ಯಾರು-ಏನು-ಎಲ್ಲಿ-ಹೇಗೆಗಳನ್ನು ಪತ್ತೆ ಹಚ್ಚುವುದು ಇದರ ಮೊದಲ ಕಾರ್ಯಭಾರ. ಶ್ರಮಗಾರರ ಪಡೆಯ ಪ್ರಮಾಣವೆಷ್ಟು? ಸಮಷ್ಟಿ ಯಂತ್ರದ ಸ್ಥಿತಿ ಏನು? ಪ್ರಕೃತಿದತ್ತ ಸಾಧನಗಳು ಯಾವುವು? ಮಾಡಿರುವ ಕೆಲಸವೇನು? ಮಾಡಬಹುದಾದ್ದು ಎಷ್ಟು? ಇರುವುದೇನು? ಬೇಕಾದ್ದು ಏನು?

ಅಂಶ–ಅಂಕಿ. ವಿವರ. ಬೆಟ್ಟದಷ್ಟು ಬೇಕು.

ಸೋವಿಯೆಟ್ ಒಕ್ಕೂಟದ ವಿಶಾಲ ಪ್ರದೇಶದ ಪ್ರತಿಯೊಂದು ಸಂಸ್ಥೆಯಿಂದಲೂ, ಪ್ರತಿಯೊಂದು ಕಾರ್ಖಾನೆ, ಹೊಲ, ಗಿರಣಿ, ಗಣಿ, ಆಸ್ಪತ್ರೆ, ಶಾಲೆ ಸಂಶೋಧನಾಲಯ, ಕಾರ್ಮಿಕ ಸಂಘ, ಸಹಕಾರ ಸಂಘ, ನಾಟಕ ಮಂಡಲಿಯಿಂದಲೂ, ಇವೆಲ್ಲವುಗಳಿಂದಲೂ, ಎಲ್ಲೆಲ್ಲಿಂದಲೂ, ಈ ಪ್ರಚಂಡ ಪ್ರದೇಶದ ಅಭುಕ್ತ ಮೂಲೆಮೂಲೆಯಿಂದಲೂ, ಬರುತ್ತದೆ ಉತ್ತರ, ಈ ಪ್ರಶ್ನೆಗಳಿಗೆ: ನೀವು ಹೋದ ವರ್ಷ ಮಾಡಿದ್ದೇನು? ಈ ವರ್ಷ ಮಾಡುತ್ತಿರುವುದೇನು? ಮುಂದಿನ ವರ್ಷ ಮಾಡಬಹುದಾದ್ದೇನು? ನಿಮಗೆ ಏನು ಸಹಾಯ ಬೇಕು? ನೀವೇನು ಸಹಾಯ ಮಾಡಬಲ್ಲಿರಿ? ಇಂಥ ನೂರು ಪ್ರಶ್ನೆ.

ಗೋಸ್ಪ್ಲಾನಿನ ಕಚೇರಿಗೆ ಈ ಎಲ್ಲ ವಿವರದ ಹೊಳೆ ಹರಿಯುತ್ತದೆ. ಇದನ್ನೆಲ್ಲ ಪ್ರವೀಣರು ಇಲ್ಲಿ ಸಂಗ್ರಹಿಸಿ, ಕ್ರೋಢೀಕರಿಸಿ, ಅಧ್ಯಯನ ಮಾಡುತ್ತಾರೆ. "ಸೋವಿಯೆಟ್ ಒಕ್ಕೂಟದ ಗೋಸ್ಪ್ಲಾನಿನ ಇಡೀ ಸಿಬ್ಬಂದಿ ಹತ್ತಿರ ಹತ್ತಿರ ಎರಡು ಸಾವಿರ ನುರಿತ ಅಂಕ ಶಾಸ್ತ್ರಜ್ಞರು, ನಾನಾ ಬಗೆಯ ವೈಜ್ಞಾನಿಕ ತಾಂತ್ರಿಕರು; ಜತೆಗೆ ಇನ್ನೆರಡು ಸಾವಿರ ಕಾರಕೂನರು. ಇಡೀ ಪ್ರಪಂಚದಲ್ಲೇ ಇದರಂಥ ಸುಸಜ್ಜಿತ ಹಾಗೂ ವ್ಯಾಪಕ ಶಾಶ್ವತ ಅಂಕ ಸಂಗ್ರಹ ಶೋಧನೆಯ ಸಂಸ್ಥೆ ಇನ್ನಿಲ್ಲ."[2]

ಈ ಪ್ರವೀಣರು ಈ ಸಂಗ್ರಹಿತ ಅಂಕಿ ಅಂಶಗಳ ವಿಂಗಡಣೆ, ಜೋಡಣೆ, ಪರೀಕ್ಷೆಗಳ ಕಾರ್ಯ ಮುಗಿಸಿದ ಮೇಲೆ, ಈಗ ಇರುವ ಪರಿಸ್ಥಿತಿಯ ಚಿತ್ರ ಅವರ ಕಣ್ಣ ಮುಂದೆ

---

[1] *Ibid.*, p. 631.
[2] *Ibid.*, p. 625.

ನಿಲ್ಲುತ್ತದೆ. ಮುಂದೆ ಹೇಗಿರಬಹುದೆಂಬ ಚಿತ್ರದ ಚಿಂತನೆಗೆ ಅವರೀಗ ತಮ್ಮ ಮನಸ್ಸು ಹಚ್ಚಬೇಕು. ಈ ಘಟ್ಟದಲ್ಲಿ ಯೋಜಕರು ಸರಕಾರದ ಮುಖ್ಯಸ್ಥರೊಡನೆ ಕಲೆತು ಸಮಾಲೋಚಿಸಬೇಕು. "ಯೋಜನಾ ಸಮಿತಿಯ ತೀರ್ಮಾನಗಳೂ ಅದರ ಕಾರ್ಯಕ್ರಮಗಳೂ ಸರಕಾರದ ಒಪ್ಪಿಗೆಗೆ ಬದ್ಧವಾಗಿದ್ದುವು. ಯೋಜನೆಯ ಕಾರ್ಯ ನಾಯಕತ್ವದ ಕಾರ್ಯದಿಂದ ಪ್ರತ್ಯೇಕಿಸಲ್ಪಟ್ಟಿತ್ತು. ಎರಡನೆಯದು ಮೊದಲನೆಯದಕ್ಕೆ ಅಧೀನವಾಗಿರಲಿಲ್ಲ."[1]

ಯೋಜನೆಯ ಅಡಿಯಲ್ಲಿ ಕಾರ್ಯಗತ ಮಾಡಬೇಕಾದ ನೀತಿ ನಿರ್ಣಯದ ಅಗತ್ಯ ಯೋಜನೆಯಲ್ಲಿಲ್ಲವೆಂದು ಹೇಳಲಾಗುವುದಿಲ್ಲ. ಸರಕಾರದ ಮುಖ್ಯಾಧಿಕಾರಿಗಳಿಂದ ನೀತಿಯ ನಿರ್ಣಯವಾಗುತ್ತದೆ. ತಾವು ಸಂಗ್ರಹಿಸಿರುವ ಅಂಕ ಸಾಮಗ್ರಿಯ ಆಧಾರದ ಮೇಲೆ ಈ ನೀತಿಯನ್ನು ಅತ್ಯಂತ ಸಮರ್ಪಕವಾದ ರೀತಿಯಲ್ಲಿ ಕಾರ್ಯರೂಪಗೊಳಿಸುವ ವಿಧಾನವನ್ನು ಕಂಡುಹಿಡಿಯುವುದೇ ಯೋಜಕರ ಕೆಲಸ. ಗೋಸ್ಪ್ಲಾನ್ ಮಂಡಲಿಗೂ ನಾಯಕರಿಗೂ ನಡುವೆ ಚರ್ಚೆ ನಡೆದು, ಯೋಜನೆಯ ಪ್ರಥಮ ಕರಡು ಹೊರಬರುತ್ತದೆ.

ಆದರೆ ಇದು ಪ್ರಥಮ ಕರಡು ಮಾತ್ರ. ಇದು ಇನ್ನೂ ಯೋಜನೆಯಲ್ಲ. ಸಮಾಜವಾದಿ ಯೋಜನಾಬದ್ಧ ಅರ್ಥವ್ಯವಸ್ಥೆಯಲ್ಲಿ ಕೇವಲ ಬುದ್ಧಿವಂತ ಮಂಡಲಿಯ ಯೋಜನೆಯೇ ಸಾಲದು. ಇದನ್ನು ಸಮಸ್ತ ಜನಕೋಟಿಗೂ ಒಪ್ಪಿಸಬೇಕು. ಅದು ಮುಂದಣ ಹೆಜ್ಜೆ. ಯೋಜನೆಯ ತಯಾರಿಕೆಯಲ್ಲಿ ಈ ಎರಡನೆಯ ಘಟ್ಟವನ್ನು ಇಂಗ್ಲೆಂಡಿನಲ್ಲಿದ್ದ ರಷ್ಯನ್ ರಾಯಭಾರಿ ಐ. ಮೇಯಸ್ಕಿ ಈ ರೀತಿ ಬಣ್ಣಿಸುತ್ತಾರೆ: "ಜನರ ನಾನಾ ನಿಯೋಗಿ ಮಂಡಲಿಗಳಿಗೂ (Commissariats) ರಾಷ್ಟ್ರೀಯ ಅರ್ಥವ್ಯವಸ್ಥೆಯನ್ನು ಕುರಿತು ವಿಚಾರಮಾಡುವ ಕೇಂದ್ರ ಸಂಸ್ಥೆಗಳಿಗೂ ಅವುಗಳ ಅವಗಾಹನೆ ಹಾಗೂ ವಿಮರ್ಶೆಗಾಗಿ ಈ "ಮೂಲಾಂಕ"ಗಳನ್ನು ಒಪ್ಪಿಸಲಾಗುವುದು. ಭಾರಿ ಕೈಗಾರಿಕೆ, ಲಘು ಕೈಗಾರಿಕೆ, ವಾಣಿಜ್ಯ, ಸಾರಿಗೆ, ವಿದೇಶಿ ವ್ಯಾಪಾರ ಇವುಗಳ 'ನಿಯೋಗಿ ಮಂಡಲಿ'ಗಳು ಇಂಥವುಗಳಲ್ಲಿ ಕೆಲವು. ಪ್ರತಿ ಕೇಂದ್ರ ಅಧಿಕಾರ ವಿಭಾಗವೂ ತನ್ನ ಯೋಜನೆಯ ವಿವಿಧ ಭಾಗಗಳನ್ನು ಅಧಿಕಾರದಲ್ಲಿ ತನಗಿಂತ ಒಂದು ಮೆಟ್ಟಲು ಕೆಳಗೆ ಇರುವ ಸಂಸ್ಥೆಗೆ ಕಳುಹಿಸಿಕೊಡುತ್ತದೆ. ಹೀಗೆ ಕೊನೆಗೆ ಈ ಯೋಜನೆಯು ಆಯಾ ಭಾಗ ಆಯಾ ಕಾರ್ಖಾನೆ ಅಥವಾ ಕೃಷಿ ಕ್ಷೇತ್ರಕ್ಕೆ ಚರ್ಚೆಗಾಗಿ ಬರುತ್ತದೆ. ಪ್ರತಿ ಘಟ್ಟದಲ್ಲೂ ಈ 'ಮೂಲಾಂಕ' ಗಳು ಕೂಲಂಕಷ ವಿಮರ್ಶೆ ಪರಿಶೀಲನೆಗಳಿಗೆ ಒಳಪಡುತ್ತವೆ. ಈ ಅಂಕಗಳು ರಾಷ್ಟ್ರದ ಯೋಜನಾ ಸಮಿತಿಯಿಂದ ಕಾರ್ಖಾನೆ ಅಥವಾ ಸಮಷ್ಟಿ ಕೃಷಿ ಕ್ಷೇತ್ರದ ವರೆಗಿನ ಪ್ರಯಾಣದ ಕೊನೆಯ ನಿಲ್ದಾಣ ಮುಟ್ಟಿದಾಗ, ಎಲ್ಲ ಉತ್ಸಾಹಶಾಲಿ ಕಾರ್ಮಿಕರೂ ರೈತರೂ ಈ ಯೋಜನೆಯ ಚರ್ಚೆ ಪರಿಶೀಲನೆಗಳಲ್ಲಿ ಆಸಕ್ತಿಯಿಂದ ಪಾತ್ರ ವಹಿಸುವರು, ಸೂಚನೆ ಸಲಹೆಗಳನ್ನು ನೀಡುವರು. ಇದಾದ ಅನಂತರ ಈ 'ಮೂಲಾಂಕ'ಗಳು ಮತ್ತೆ ಬಂದ ಹಾದಿಯಲ್ಲೇ ಮೇಲಕ್ಕೆ ಕಳಿಸಲ್ಪಡುತ್ತವೆ. ಪರಿಷ್ಕೃತ ಅಥವಾ ಅನುಬಂಧಿತ

---

[1] *Socialist Planned Economy in the Soviet Union.* p. 24. Martin Lawrence, London, 1932.

ರೂಪದಲ್ಲಿ ಅವು ಅಂತಿಮವಾಗಿ ರಾಷ್ಟ್ರದ ಯೋಜನಾ ಸಮಿತಿಯನ್ನು ತಲಪುತ್ತವೆ."[1]

ಯೋಜನೆಯ ತಪ್ಪು ಒಪ್ಪುಗಳ ಬಗ್ಗೆ ಕಾರ್ಖಾನೆಯ ಕಾರ್ಮಿಕರೂ ಕೃಷಿ ಕ್ಷೇತ್ರದ ರೈತರೂ ತಮ್ಮ ಅಭಿಪ್ರಾಯಗಳನ್ನು ಸೂಚಿಸುವರು. ರಷ್ಯನರು ಸಹಜವಾಗಿ ಹೆಮ್ಮೆ ಪಟ್ಟುಕೊಳ್ಳುವ ವಿಚಾರವಿದು. ಎಷ್ಟೋ ಸಾರಿ ಈ ಕಾರ್ಮಿಕರೂ ರೈತರೂ ತಮ್ಮ ವಿಶಿಷ್ಟ ಕೆಲಸಕ್ಕೆ ದೊರೆತಿರುವ ಸ್ಥಾನದ ಬಗ್ಗೆ ಈ ಮೂಲಾಂಕಗಳ ಬಗ್ಗೆ, ಅಸಮ್ಮತಿ ಸೂಚಿಸುವುದೂ ಉಂಟು. ತಮ್ಮಿಂದ ನಿರೀಕ್ಷಿಸಿದ ಉತ್ಪಾದನೆಯನ್ನು ತಾವು ಹೆಚ್ಚಿಸುವುದು ಸಾಧ್ಯವೆಂದು ತೋರಿಸಲು ತಮ್ಮದೇ ಆದ ಅಂಕಿ-ಅಂಶ ಕೊಟ್ಟು ಪ್ರತಿಯೋಜನೆಯನ್ನೂ ಇವರು ಸಲ್ಲಿಸುವುದುಂಟು. ಈ ತಾತ್ಕಾಲಿಕ ಯೋಜನೆಯ ವಿಚಾರವಾಗಿ ಲಕ್ಷಾಂತರ ಸೋವಿಯೆಟ್ ಪ್ರಜೆಗಳು ಎಲ್ಲೆಲ್ಲೂ ಮಾಡುವ ಚರ್ಚೆ ವಿಚಾರ ವಿನಿಮಯಗಳಲ್ಲಿ ರಷ್ಯನರು ನಿಜವಾದ ಪ್ರಜಾಪ್ರಭುತ್ವವನ್ನೇ ಕಾಣುವರು. ಮಾಡಬೇಕಾದ ಕೆಲಸದ, ನಿಲುಕಬೇಕಾದ ಗುರಿಯ, ಯೋಜನೆ—ಇದು ಮೇಲಿಂದ ವಿಧಿಸಿದ್ದಲ್ಲ. ಕಾರ್ಮಿಕರಿಗೂ ರೈತರಿಗೂ ಇದರ ಬಗ್ಗೆ ಮಾತಾಡುವ ಹಕ್ಕುಂಟು, ಪರಿಣಾಮವೇನು ? ಯೋಗ್ಯ ನಿರೀಕ್ಷಕನೊಬ್ಬ ಇದರ ಬಗ್ಗೆ ಕೊಟ್ಟಿರುವ ಉತ್ತರ ಇದು: "ನೀವು ಎಲ್ಲಿಗೆ ಹೋದರೂ—ಕನಿಷ್ಠ ಪಕ್ಷ ನಾನು ರಷ್ಯದಲ್ಲಿ ನೋಡಿದ ಭಾಗದಲ್ಲಾದರೂ—'ಇದು **ನಮ್ಮ** ಕಾರ್ಖಾನೆ : ಇದು **ನಮ್ಮ** ಆಸ್ಪತ್ರೆ ; ಇದು **ನಮ್ಮ** ವಿಶ್ರಾಂತಿಗೃಹ,' ಎಂದು ಹೇಳುವುದನ್ನು ಕಾಣುವಿರಿ. ಅವರು ವೈಯಕ್ತಿವಾಗಿ ಇವುಗಳ ಒಡೆಯರೆಂದಲ್ಲ ; ಇವುಗಳು ಕೆಲಸ ಮಾಡುವುದು, ಉತ್ಪಾದಿಸುವುದು ನೇರವಾಗಿ ತಮ್ಮ ಅನುಕೂಲಕ್ಕಾಗಿ ; ಈ ವಿಚಾರ ಅವರಿಗೆ ಗೊತ್ತು ; ಅಲ್ಲದೆ, ಭಾಗಶಃವಾಗಿಯಾದರೂ, ಇವು ಸಮರ್ಪಕ ಸ್ಥಿತಿಯಲ್ಲಿರುವಂತೆ ಮಾಡಲು ತಮ್ಮ ಜವಾಬ್ದಾರಿಯೂ ಉಂಟು—ಎಂಬ ಧ್ವನಿ ಅವರ ಮಾತಿನಲ್ಲಿತ್ತು."[2]

ಹೀಗೆ ಹಿಂದಕ್ಕೆ ಬಂದ ಅಂಕಿಗಳ ಅಂತಿಮ ಪರಿಶೀಲನೆಯೇ ಯೋಜನೆಯ ರಚನೆಯಲ್ಲಿ ಮೂರನೆಯ ಘಟ್ಟ. ಗೋಸ್ಪ್ಲಾನ್ ಹಾಗೂ ಸರಕಾರದ ಮುಖ್ಯರುಗಳು ಈ ಸಲಹೆಗಳನ್ನೂ ತಿದ್ದುಪಾಟುಗಳನ್ನೂ ಪರಿಶೀಲಿಸುವರು, ಅಗತ್ಯ ಬದಲಾವಣೆಗಳನ್ನು ಮಾಡುವರು, ಅನಂತರವೇ ಯೋಜನೆ ಸಿದ್ಧವಾಗುತ್ತದೆ. ಈ ಅಂತಿಮ ರೂಪದಲ್ಲಿ ಇದು ನಾಡಿನಾದ್ಯಂತ ಇರುವ ಕಾರ್ಮಿಕರಿಗೂ ರೈತರಿಗೂ ಕಳುಹಿಸಲ್ಪಡುತ್ತದೆ ; ಇಡೀ ರಾಷ್ಟ್ರ ಈ ಕಾರ್ಯಭಾರ ನಿರ್ವಹಿಸಲು ತನ್ನ ಶಕ್ತಿಯನ್ನೆಲ್ಲ ವಿನಿಯೋಗಿಸುತ್ತದೆ. ಸಮಷ್ಟಿ ಹಿತಕ್ಕಾಗಿ ಸಮಷ್ಟಿಕಾರ್ಯ ವಾಸ್ತವವಾಗುತ್ತದೆ.

ಆದರೆ ಸಮಷ್ಟಿ ಹಿತ ಎಂದರೆ ಏನು ? ಮೊದಲು ಆಗಬೇಕಾದ್ದೆಂದು—ಅವಶ್ಯವೆಂದು—ಸರಕಾರದ ಮುಖ್ಯರು ಭಾವಿಸಿದ ನೀತಿಗಳು ಯಾವುವು ? ಕೆಲವು ಸಾಮಾನ್ಯ ಗುರಿಗಳು ತಕ್ಷಣ ಹೊಳೆದುವು. ಸೋವಿಯೆಟ್ ರಾಜ್ಯದ ಬಹು ಸಂಖ್ಯಾತರು ನಿರಕ್ಷರರಾಗಿದ್ದರು,

[1] Quoted in *Social and Economic Planning*, by C. A. Macartney, p. 19, League of Nations Union, London, 1935.

[2] "Life in Soviet Russia." M. I. Cole in *The Highway*, Dec, 1932, p. 15.

ಅವಿದ್ಯಾವಂತರಾಗಿದ್ದರು. ಎಲ್ಲರಿಗೂ ಉಚಿತ ಶಿಕ್ಷಣ—ವಿಶ್ವವಿದ್ಯಾಲಯದಲ್ಲಿ ವ್ಯಾಸಂಗ ಮಾಡುವ ವಿದ್ಯಾರ್ಥಿಗಳ ಉಚಿತ ನಿರ್ವಹಣೆ—ದೊರಕಿಸಲಾಯಿತು. ಆರೋಗ್ಯ ನೈರ್ಮಲ್ಯಗಳ ಬಗ್ಗೆ ಸೋವಿಯೆಟ್ ಪ್ರಜೆಗಳಿಗೆ ಬಹುಶಃ ಏನೇನೂ ಗೊತ್ತಿರಲಿಲ್ಲ. ಆದ್ದರಿಂದ ಜೀವನಮಟ್ಟ ಹೆಚ್ಚಿಸುವ ಚಳವಳಿ, ನುರಿತ ವೈದ್ಯರು ದಾದಿಗಳು ಶಿಕ್ಷಕರಿಂದ ಕೂಡಿದ ಆಸ್ಪತ್ರೆ ಶಿಶುಸಂಗೋಪನಾಲಯ ಶಿಶುವಿಹಾರ ಮುಂತಾದವುಗಳ ಸ್ಥಾಪನೆ ಈ ಯೋಜನೆಯಲ್ಲಿ ಸೇರಬೇಕಾದ್ದು ಅವಶ್ಯ. ಕಾರ್ಮಿಕರ ವಿಶ್ರಾಂತಿಗೃಹ, ಉದ್ಯಾನವನ, ವಿವಿಧವಸ್ತು ಸಂಗ್ರಹಾಲಯ, ವಿಹಾರಸಂಘ—ಇವೂ, ಇಂಥ ಇತರ ಸೌಕರ್ಯಗಳೂ ಈ ಯೋಜನೆಯ ಅಂಗವಾಗಬೇಕು. ವಿಜ್ಞಾನ ಶಾಲೆಗಳು, ವಿಜ್ಞಾನ ಸಂಶೋಧನೆಗಾಗಿ ಪ್ರಯೋಗಾಲಯಗಳು—ಇವೂ ಕೂಡ ಯೋಜನೆಯಲ್ಲಿ ಅಂತರ್ಗತವಾಗಬೇಕು. ಇವುಗಳ, ಇಂಥ ಹಲವು ಅವಶ್ಯಕತೆಗಳ ಬಗ್ಗೆ ಸಂಶಯವೇ ಇಲ್ಲ. ಆದ್ದರಿಂದ ಇವೆಲ್ಲ ಯೋಜನೆಯಲ್ಲಿ ಸೇರಿದುವು. ಆದರೆ ಮುಂದೆ ಕೊಟ್ಟಿರುವಂಥ ಪ್ರಶ್ನೆಗಳಿಗೆ ಏನು ಉತ್ತರ ಕೊಡಬೇಕು ?—

೧. ಜನರು ಈಗಲೇ ತಿನ್ನಬಹುದಾದ, ಉಡಬಹುದಾದ, ಭೋಗಿಸಬಹುದಾದ ಪದಾರ್ಥಗಳ ಉತ್ಪಾದನೆಗೆ ಹೆಚ್ಚು ಗಮನ ಕೊಡುವುದು ಉಚಿತ ನೀತಿಯೆ ? ಅಥವಾ ಕಾರ್ಖಾನೆ, ವಿಶ್ವವಿದ್ಯಾನಿಲಯ, ರೈಲ್ವೆ ಮುಂತಾದುವುಗಳ ನಿರ್ಮಾಣಕ್ಕೆ ಹೆಚ್ಚು ಗಮನ ಕೊಡುವುದು ಉಚಿತವೊ ? ಹೀಗೆ ಮಾಡಿದರೆ ಜನರಿಗೆ ಈಗ ಸ್ವಲ್ಪವೇ ಲಭ್ಯ. ಮುಂದೆ ಅವರಿಗೆ ಹೆಚ್ಚು ದೊರಕುವುದು. ಉಪಭೋಗವಸ್ತು ಉತ್ಪಾದಕ ಯಂತ್ರ ಸ್ಥಾಪಿಸುವುದೆಂದರೆ ಸದ್ಯಕಾಲದಲ್ಲಿ ಜನರಿಗೆ ಹೆಚ್ಚು ಸೌಖ್ಯ. ಉತ್ಪಾದಕ ವಸ್ತು ಉತ್ಪಾದಕ ಯಂತ್ರ ಸ್ಥಾಪಿಸುವುದೆಂದರೆ ನಾಳೆ ಹೆಚ್ಚು ಸುಭದ್ರವಾಗುವುದು. ಈ ಎರಡು ಮಾರ್ಗಗಳಲ್ಲಿ ಯಾವುದು ಶ್ರೇಷ್ಠ ?

೨. ಯಾವ ಪದಾರ್ಥದ ಉತ್ಪಾದನೆಯನ್ನು ದೇಶ ಅತ್ಯಂತ ಸಮರ್ಪಕವಾಗಿ ಮಾಡಬಲ್ಲುದೋ ಅದರ ಉತ್ಪಾದನೆಗೆ ಹೆಚ್ಚು ಗಮನ ನೀಡಿ, ಯಾವುದನ್ನು ಅದು ಸುಲಭವಾಗಿ ತಯಾರಿಸಲಾರದೋ, ಯಾವುದರ ಕೊರತೆಯಿದೆಯೋ ಅಂಥದನ್ನು ಆಯಾತ ಮಾಡಿಕೊಳ್ಳುವುದು ಉತ್ತಮ ನೀತಿಯಲ್ಲವೆ ? ಅಥವಾ, ದೇಶಕ್ಕೆ ಬೇಕಾದ ವಸ್ತುವನ್ನೆಲ್ಲಾ ದೇಶದಲ್ಲೇ ಪಡೆಯಲು ಯತ್ನಿಸುವುದು ಹೆಚ್ಚಿನ ವಿವೇಕವೆ ?

ಈ ಪ್ರಶ್ನೆಗಳಿಗೆ ಸೋವಿಯೆಟ್ ಉತ್ತರ ಹೇಗಿರಬೇಕು ? ಅದು ಸಮಾಜವಾದಿ ರಾಷ್ಟ್ರವಾಗಿದ್ದುದರಿಂದ, ಬಂಡವಾಳವಾದಿ ಪ್ರಪಂಚದ ಆಕ್ರಮಣ ಭೀತಿ ಅದಕ್ಕಿದ್ದುದರಿಂದ, ಇದಕ್ಕನುಗುಣವಾಗಿ ಅದು ಈ ಪ್ರಶ್ನೆಗಳಿಗೆ ಉತ್ತರ ಹುಡುಕಬೇಕಾಗಿತ್ತು. ಈ ಭೀತಿ ಬರೀ ಊಹೆಯಾಗಿರಲಿಲ್ಲ. ಹೀಗೆಯೇ ಆಗಿತ್ತು. ೧೯೧೮ರಿಂದ ೧೯೨೦ರ ವರೆಗೆ ಸಂಯುಕ್ತ ಸಂಸ್ಥಾನವೂ ಸೇರಿ ಅರ್ಧ ಡಜನ್ ಬಂಡವಾಳವಾದಿ ರಾಷ್ಟ್ರಗಳು ಬಲ ಪ್ರಯೋಗದಿಂದ ಬಾಲ್ಷೆವಿಕರನ್ನು ಕೆಳಗುರುಳಿಸಬೇಕೆಂದು ಯತ್ನಿಸಿದ್ದುವು. ಮತ್ತೆ ಇದೇ ರೀತಿ ಆಗುವುದೆಂದು ರಷ್ಯನರು ಖಂಡಿತವಾಗಿ ತಿಳಿದಿದ್ದರು. ಅದರಲ್ಲೂ, ಅವರು ಸಮಾಜವಾದಿ

ವ್ಯವಸ್ಥೆಯ ನಿರ್ಮಾಣದಲ್ಲಿ ಯಶಸ್ಸು ಗಳಿಸಿದರಂತೂ ಇದು ಶತಸ್ಸಿದ್ಧ. ಏಕೆಂದರೆ ಆಗ ಎಲ್ಲೆಲ್ಲೂ ಬಂಡವಾಳಿಗರು ಎಂದಿಗಿಂತ ಹೆಚ್ಚು ಹೆದರುವರು. ರಷ್ಯದ ಕಾರ್ಮಿಕ ವರ್ಗದ ಮಾರ್ಗವನ್ನೇ ತಮ್ಮ ದೇಶದ ಕಾರ್ಮಿಕರೂ ಅನುಸರಿಸಿ ತಮ್ಮನ್ನು ಅಧಿಕಾರ ಗದ್ದುಗೆಯಿಂದ ಒದ್ದು ಕೆಡವುವರೆಂದು ಅವರು ಅಂಜುವರು.

ಇದೊಂದು ಕಾರಣ. ಇನ್ನೂ ಹಲವು ಕಾರಣ. ಉದಾಹರಣೆಗೆ, ಕೈಗಾರಿಕೆಯ ರಾಷ್ಟ್ರದಷ್ಟು ಉನ್ನತ ಜೀವನ ಮಟ್ಟವನ್ನು ವ್ಯವಸಾಯನಿರತ ರಾಷ್ಟ್ರ ಮುಟ್ಟಲಾರದೆಂಬುದು ಇಂಥ ಇನ್ನೊಂದು ಕಾರಣ. ಇಂಥ ಹಲವು ಕಾರಣಗಳಿಂದ ರಷ್ಯನರು ಕೈಗಾರಿಕೆ ಬೆಳವಣಿಗೆಯ ಕಾರ್ಯದಲ್ಲಿ ನಿರತರಾದರು.

ಇದು ಸುಲಭವಾಗಿ ಏನೂ ಇರಲಿಲ್ಲ. ಭವಿಷ್ಯಕ್ಕಾಗಿ ಈಗಿನ ಸುಖ ತ್ಯಾಗ ಮಾಡುವುದೇ ಈ ತೀರ್ಮಾನ. ಜನರಿಗೆ ತಕ್ಷಣವೇ ವಾಸಕ್ಕೆ ಮನೆ, ತಿನ್ನಲು ಆಹಾರ, ಉಡಲು ಬಟ್ಟೆ ಒದಗಿಸದ ಬಂಡವಾಳವಸ್ತು ಉತ್ಪಾದಿಸುವ ಯಂತ್ರಕ್ಕಾಗಿ, ಇರುವ ಸಾಧನಗಳಲ್ಲಿ ಬಹುಭಾಗವನ್ನು ಬಳಸಬೇಕಾಗಿ ಬಂತು. ಒಂದು ಅವಧಿಯಲ್ಲಿ, ಉದಾಹರಣೆಗೆ ಒಂದು ವರ್ಷ ಕಾಲದಲ್ಲಿ, ಉಪಯೋಗಕ್ಕೆ ತರಬಹುದಾದ ದುಡಿಮೆ ಹಾಗೂ ಬಂಡವಾಳ ಕ್ಲುಪ್ತವಾಗಿರುತ್ತದೆ. ಇಟ್ಟಿಗೆ ತಯಾರಿಸಲು, ಮನೆ ಕಟ್ಟಲು, ಗೋಧಿ ಬೆಳೆಯಲು, ರೊಟ್ಟಿ ಸುಡಲು, ಹತ್ತಿ ಬೆಳೆಯಲು, ಬಟ್ಟೆ ನೇಯಲು ತನ್ನ ಎಲ್ಲ ಕಾರ್ಮಿಕರನ್ನೂ ಅದು ನಿಯೋಜಿಸಬಹುದು. ಆಗ ಇವೆಲ್ಲ ಪ್ರತಿಯೊಬ್ಬರಿಗೂ ಧಾರಾಳವಾಗಿ ದೊರಕುತ್ತವೆ. ಆದರೆ ಹೀಗೆ ಮಾಡಿದರೆ, **ಮುಂದೆ ಎಂದೂ ಈಗ ಇರುವುದಕ್ಕಿಂತ ಇವು ಹೆಚ್ಚಾಗಿರುವುದಿಲ್ಲ.** ಇವನ್ನು ಇನ್ನೂ ಅಧಿಕವಾಗಿ ಹೊಂದಬೇಕಾದರೆ, ಅದು ತನ್ನ ಕಾರ್ಮಿಕರಲ್ಲಿ ಕೆಲವರನ್ನು ಯಂತ್ರ ಮಾಡಲು, ರೈಲು ಹಳಿ ಹಾಕಲು, ಕಾರ್ಖಾನೆ ಕಟ್ಟಲು—ಇಂಥ ಹಲವು ಕೆಲಸ ಮಾಡಲು—ಉತ್ಪಾದಕ ವಸ್ತು ನಿರ್ಮಾಣ ಮಾಡಲು—ನಿಯೋಜಿಸಬೇಕು. ಹೀಗೆ ಮಾಡಿದರೆ ಮುಂದಿನ ವರ್ಷವೋ, ಅಥವಾ ಮುಂದಣ ವರ್ಷಗಳಲ್ಲೋ ಅದು ಹೆಚ್ಚು ರೊಟ್ಟಿ, ಹೆಚ್ಚು ಬಟ್ಟೆ ತಯಾರಿಸಲು, ಹೆಚ್ಚು ಮನೆ ನಿರ್ಮಿಸಲು ಸಾಧ್ಯವಾಗುವುದು. ನೀವು ಭವಿಷ್ಯಕ್ಕಾಗಿ ಯಾವ ಪ್ರಮಾಣದಲ್ಲಿ ಹಣ ವಿನಿಯೋಗಿಸಬೇಕೆಂದು ತೀರ್ಮಾನಿಸುವಿರೋ ಅದರಿಂದ ನೀವು ಇಂದು ತಿನ್ನಲು ಉಡಲು ಬೇಕಾದ ವಸ್ತುಗಳಿಗಾಗಿ ಎಷ್ಟು ಹಣ ವೆಚ್ಚ ಮಾಡುವುದು ಸಾಧ್ಯವೆಂಬುದು ನಿರ್ಣಯವಾಗುತ್ತದೆ. ಮನೆಯಲ್ಲಿ ಶಾಖ ಕಲ್ಪಿಸಲು ಹೆಚ್ಚು ಕಲ್ಲಿದ್ದಲು ಬಳಸಬಹುದಾಗಿತ್ತು; ಇಲ್ಲವೇ, ಶೀಘ್ರವಾಗಿ, ಧಾರಾಳವಾಗಿ ಬಟ್ಟೆ ತಯಾರಿಸಲು ಸ್ವಯಂಚಾಲಿತ ಮಗ್ಗ ತಯಾರಿಸುವ, ಯಂತ್ರ ತಯಾರಿಸುವ, ಉಕ್ಕು ತಯಾರಿಸುವ ಊದು ಕುಲುಮೆಗಾಗಿ ಹೆಚ್ಚು ಕಲ್ಲಿದ್ದಲು ಬಳಸಬಹುದಾಗಿತ್ತು. ಆದರೆ ಇವೆರಡನ್ನೂ ಹೊಂದುವುದು ಸಾಧ್ಯವಿರಲಿಲ್ಲ. ಎರಡನೆಯದನ್ನೇ ಅದು ಆರಿಸಿಕೊಂಡಿತು. ಅನುಭೋಗವಸ್ತುಗಳ ತ್ಯಾಗ ಮಾಡಿ ಉತ್ಪಾದಕವಸ್ತು ಕೈಗಾರಿಕೆ ಅಭಿವೃದ್ಧಿಗೊಳಿಸಬೇಕಾಯಿತು. ಇದು ಕೈಗಾರಿಕೆ ಅಭಿವೃದ್ಧಿಯ ಹಾದಿಯಾಗಿತ್ತು. ಇದು ಸುಲಭವಾಗಿರಲಿಲ್ಲ.

೧೯೩೬ರ ಮಾರ್ಚ್ ಒಂದನೆಯ ದಿನಾಂಕದಂದು ಸ್ಕ್ರಿಪ್ಸ್-ಹೊವಾರ್ಡ್ ಸುದ್ದಿ ಸಂಸ್ಥೆಯ ರಾಯ್ ಹೊವಾರ್ಡ್‌ಗೆ ನೀಡಿದ ಸಂದರ್ಶನದಲ್ಲಿ ಜೋಸೆಫ್ ಸ್ಟಾಲಿನ್ ಹೇಳಿದ ಮಾತು ಗಮನಾರ್ಹ. ಕೈಗಾರಿಕೆ ಅಭಿವೃದ್ಧಿಯ ಹಾದಿ ದುರ್ಗಮವಾಗಿದ್ದರೂ, ಸೋವಿಯೆಟ್ ಗುರಿಯ ಕಡೆಗೆ ಅದು ಕೊಂಡೊಯ್ಯುತ್ತದೆಯೆಂದು ಆತ ಹೇಳಿದ. "ನೀವು ಮನೆ ಕಟ್ಟಬೇಕಾದರೆ, ನೀವು ಮಿತವೆಚ್ಚ ಮಾಡಬೇಕು, ತ್ಯಾಗ ಮಾಡಲು ಸಿದ್ಧವಿರಬೇಕು. ಒಂದು ಹೊಸ ಸಮಾಜ ಸೃಷ್ಟಿಸಬೇಕಾದರೆ ಈ ಮಾತು ಇನ್ನೂ ಹೆಚ್ಚು ಸತ್ಯ."

"ಅಗತ್ಯವಾದ ಸಾಧನಗಳನ್ನು ಶೇಖರಿಸಿಕೊಳ್ಳಲು ತಾತ್ಕಾಲಿಕವಾಗಿ ನಾವು ನಮ್ಮ ಕೆಲವು ಬೇಡಿಕೆಗಳನ್ನು ಮಿತಿಗೆ ಒಳಪಡಿಸಬೇಕು. ಉತ್ತಮ ರೀತಿಯ ನಿಜವಾದ ಸ್ವಾತಂತ್ರ್ಯ ಬೆಳಸಲು ನಿಶ್ಚಿತೋದ್ದೇಶಕ್ಕಾಗಿ ನಾವು ಈ ತ್ಯಾಗ ಮಾಡಿದ್ದೇವೆ."[1]

ತಕ್ಷಣದ ಅನುಭೋಗಕ್ಕಾಗಿ ಉತ್ಪಾದನೆ ಮಾಡುವುದನ್ನು ಕಡಮೆ ಮಾಡಿ ಬಂಡವಾಳ ಪದಾರ್ಥಗಳ ಉತ್ಪಾದನ ಕಾರ್ಯ ವಿಸ್ತರಿಸಲು ರಷ್ಯನರು ತೀರ್ಮಾನಿಸಿದ ಪರಿಣಾಮವಾಗಿ ಅವರು ಮಾಡಬೇಕಾದ ಕೆಲವು "ತ್ಯಾಗಗಳು" ಯಾವುವು ? ಒಂದು ಪರಿಣಾಮವೆಂದರೆ– ಪ್ರಸಕ್ತ ಅಗತ್ಯ ಪೂರೈಸಲು ಅಗತ್ಯವಾದಷ್ಟು ವಸ್ತುವನ್ನು ತಯಾರಿಸಲು ಬೇಕಾದಷ್ಟು ದುಡಿಮೆ ಬಂಡವಾಳಗಳಿರಲಿಲ್ಲ. ರಷ್ಯದಲ್ಲಿ ಅನುಭೋಗ ವಸ್ತುಗಳಿಗೆಲ್ಲ ಬಹು ತೀವ್ರ ಅಭಾವವಿತ್ತು. ಸೋವಿಯೆಟ್ ಒಕ್ಕೂಟಕ್ಕೆ ಭೇಟಿ ನೀಡಿದ ಅಸ್ನೇಹಪರರು ಈ ಅಂಶವನ್ನು ಗಮನಿಸದೆ ಇರಲಿಲ್ಲವೆಂಬುದನ್ನು ನೀವು ಬಲ್ಲಿರಿ. ಅಲ್ಲಿ ಟೀ ಮಾಡುವ ಪಾತ್ರೆಗಿಂತ ಟ್ರಾಕ್ಟರ್ ಕೊಳ್ಳುವುದು ಸುಲಭವಾಗಿತ್ತು ; ಕಂಬಳಿ ಕೊಳ್ಳುವುದಕ್ಕಿಂತ ರೈಲು ಕಂಬಿಯ ಅಡಿಯ ಮರದ ದಿಮ್ಮಿ ಕೊಳ್ಳುವುದು ಸುಲಭವಾಗಿತ್ತು. ಆದ್ದರಿಂದ ಅವರು ನಿರ್ಮಿಸುತ್ತಿದ್ದ ಎಲ್ಲ ಟ್ರಾಕ್ಟರುಗಳಿಗಾಗಿ, ಕಾರ್ಖಾನೆಗಳಿಗಾಗಿ, ಎಂಜಿನುಗಳಿಗಾಗಿ, ವಿದ್ಯುದಾಲಯಗಳಿಗಾಗಿ ಹಣ ಕೊಡಲು ಅವರು ತಮ್ಮ ನಡುಪಟ್ಟಿಯನ್ನು ಕೊನೆಯ ರಂಧ್ರದ ವರೆಗೂ ಬಿಗಿಗೊಳಿಸಬೇಕಾಯಿತು—ಕೆಲವು ಸಂದರ್ಭಗಳಲ್ಲಿ ಅವು ಇನ್ನೂ ತುಂಬಾ ಸಡಿಲವಾಗಿಯೇ ಇದ್ದುವು.

ಅಂತೂ ಈಗ, ೧೯೩೬ನೆಯ ಮಾರ್ಚ್ ೨೭ರ ನ್ಯೂಯಾರ್ಕ್ ಟೈಮ್ಸ್ ಸುದ್ದಿಯ ಪ್ರಕಾರ, ಸೋವಿಯೆಟ್ ಪ್ರಜೆಗಳಿಗೆ ಒಳ್ಳೆಯ ದಿನಗಳು ಕಾದಿವೆಯೆನ್ನುವ ಸೂಚನೆಗಳಿವೆ. "ಈ ವರ್ಷ, ಕ್ರಾಂತಿಯ ಅನಂತರ ಮೊಟ್ಟ ಮೊದಲ ಬಾರಿಗೆ, ಉತ್ಪಾದನ ಸಾಧನ ತಯಾರಿಕೆಗಿಂತ ಹೆಚ್ಚಾಗಿ ಅನುಭೋಗ ವಸ್ತು ತಯಾರಿಕೆಗೆ ಪ್ರಾಮುಖ್ಯ ನೀಡಿದೆಯೆಂದು ಹೇಳಲಾಗಿದೆ. ಸಮಾಜವಾದಿ ಅರ್ಥವ್ಯವಸ್ಥೆಯ ನಿರ್ಮಾಣದ ಮೊದಲ ಘಟ್ಟದಲ್ಲಿ ಉತ್ಪಾದನ ಸಾಧನಕ್ಕೆ ಉಳಿದೆಲ್ಲಕ್ಕಿಂತ ಹೆಚ್ಚು ಪ್ರಾಧಾನ್ಯ ದೊರಕಿತ್ತು.

"ಈ ವರ್ಷದ ಯೋಜನೆಯಲ್ಲಿ....ಅನುಭೋಗ ವಸ್ತು ಶೇಕಡ ೩೩ರಷ್ಟು, ಉತ್ಪಾದನ ಸಾಧನ ಶೇಕಡ ೨೫ರಷ್ಟು ಹೆಚ್ಚಲಿದೆ."[2]

---

[1] *New York World-Telegram*, March 4, 1936.
[2] *New York Times*, March 27, 1936.

ಒಂದು ವಿಚಾರ ಸ್ಪಷ್ಟವಾಗಿ ನೆನಪಿನಲ್ಲಿಡಿ. ಅನುಭೋಗ ವಸ್ತುವಿಗಿಂತ ಉತ್ಪಾದಕ ವಸ್ತುವಿಗೆ ನೀಡಿದ ಈ ಪ್ರಾಧಾನ್ಯ ರಾಷ್ಟ್ರೀಯ ಯೋಜನೆಯಲ್ಲಿ ಅಂತರ್ಗತವಾದದ್ದಲ್ಲ, ಅನಿವಾರ್ಯವಲ್ಲ. ಉದಾಹರಣೆಗೆ, ಸಂಯುಕ್ತ ಸಂಸ್ಥಾನವೇನಾದರೂ ಸಮಾಜವಾದಿ ರಾಷ್ಟ್ರೀಯ ಯೋಜನೆಯ ತೀರ್ಮಾನ ಮಾಡಿದರೆ, ಈ ಕ್ರಮ ಅಲ್ಲಿ ಅನಗತ್ಯ. ಸೋವಿಯೆಟ್ ಒಕ್ಕೂಟಕ್ಕೇ ವಿಶಿಷ್ಟವಾದ ಪರಿಸ್ಥಿತಿಗಳಿಂದ ಇದು ಸೋವಿಯೆಟ್ ಯೋಜನೆಯಲ್ಲಿ ಅಗತ್ಯವಾದ ಅಂಶವಾಯಿತು. ಅಮೆರಿಕದಲ್ಲಿ ಬಂಡವಾಳ ಸಾಮಗ್ರಿ ಯಥೇಚ್ಛವಾಗಿದೆ. ಆದ್ದರಿಂದ ಅಲ್ಲಿ ರೂಪಿಸಬಹುದಾದ ಯೋಜನೆಯಲ್ಲಿ ಆತುರದ ಉದ್ವೇಗದಲ್ಲಿ ಮಹಾತ್ಯಾಗ ಮಾಡಿ ನಿರ್ಮಾಣ ಕಾರ್ಯ ಮಾಡುವುದು ಅಗತ್ಯವೆನಿಸುವುದಿಲ್ಲ.

ರೈಲ್ವೆ, ಯಂತ್ರ, ಕಾರಖಾನೆ, ಎಲ್ಲ ಬಗೆಯ ಯಂತ್ರಸ್ಥಾವರ—ಇವುಗಳಲ್ಲಿ ರಷ್ಯ ಬಹು ಬಡರಾಷ್ಟ್ರವಾಗಿತ್ತು. ಜಾಗತಿಕಯುದ್ಧಕ್ಕೆ ಹಿಂದೆ ಅದು ಹೊಂದಿದ್ದ ಅಲ್ಪಸ್ವಲ್ಪವೂ ಕೂಡ, ಆ ಯುದ್ಧದಲ್ಲೂ, ಅಂತರ್ಯುದ್ಧದಲ್ಲೂ, ಅನಂತರ ಇತರ ರಾಷ್ಟ್ರಗಳು ನಡುವೆ ಪ್ರವೇಶಿಸಿ ಕಿರುಕುಳ ಕೊಟ್ಟ ಕಾಲದಲ್ಲೂ ಹೆಚ್ಚು ಕಡಮೆ ಸಂಪೂರ್ಣವಾಗಿ ನಷ್ಟವಾಗಿ ಹೋಯಿತು. ಆದ್ದರಿಂದ ಕ್ರಾಂತಿಯ ಅನಂತರ ರಷ್ಯಾ ಹೆಚ್ಚು ಕಡಮೆ ಮೊದಲಿಂದ ಆರಂಭಿಸಬೇಕಿತ್ತು. ಇಂಗ್ಲೆಂಡು ಜರ್ಮನಿ ಅಮೆರಿಕಗಳಿರಲಿ, ಇಟಲಿ ಸ್ವೀಡನ್ ಆಸ್ಟ್ರೇಲಿಯಾಗಳಂಥ ದೇಶಗಳಷ್ಟು ಪ್ರಗತಿ ಸಾಧಿಸಲೂ ಅದು ಬಹು ದೂರ ಸಾಗಬೇಕಿತ್ತು. ಇವುಗಳನ್ನು ಹಿಡಿಯುವುದು ಸಾಧ್ಯವೇ ಇಲ್ಲವೋ ಎನ್ನುವಷ್ಟು ದೂರ ಅದು ಸಾಗಬೇಕಿತ್ತು. ಆದರೆ ರಷ್ಯಾ ಈ ದೇಶಗಳನ್ನು ಹಿಡಿದೇತೀರುವುದು, ಅದೂ ಶೀಘ್ರವಾಗಿ—ಎಂದು ರಷ್ಯನರು ತೀರ್ಮಾನಿಸಿದರು. ಕೇಂಬ್ರಿಜಿನ ಪ್ರಮುಖ ಅರ್ಥಶಾಸ್ತ್ರಜ್ಞನ ಅಭಿಪ್ರಾಯವಾಗಿತ್ತು ಇದು. ೧೯೩೨ರಷ್ಟು ಹಿಂದೆ ಈತ ಈ ಮಾತು ಹೇಳಿದ (ರಷ್ಯಾ ಕ್ರಮಿಸುತ್ತಿರುವ ಅಗಾಧವೇಗವನ್ನು ಗಮನಿಸಿದ್ದೇ ಆದರೆ ಇದು ಬಹು ಹಿಂದೆ—ಎನ್ನಬೇಕು.): “ಅದು ತನ್ನ ಮುಂದಿಟ್ಟುಕೊಂಡ ಗುರಿ ಎಷ್ಟು ಮಹತ್ತರವಾದದ್ದೆಂದರೆ, ಇಡೀ ಬಂಡವಾಳ ಜಗತ್ತು ಇದಕ್ಕೆ ನೀಡಿದ ಸ್ವಾಗತವೆಂದರೆ ತಿರಸ್ಕಾರ, ನಗೆ. ಬಂಡವಾಳ ಜಗತ್ತು ಗಳಿಸಿರುವ ಸಾಧನೆಗಳ ದೃಷ್ಟಿಯಲ್ಲಿ ಇದರ ಗುರಿಗಳು ನಿಜಕ್ಕೂ ಒಂದು ಹುಚ್ಚು ಕನಸು—ಯುಟೋಪಿಯದ ಕನಸು. ಯುದ್ಧಪೂರ್ವದ ಬ್ರಿಟನ್ನಿನಂಥ ಒಂದು ಸಂಪದ್ಯುಕ್ತ ರಾಷ್ಟ್ರ ತನ್ನ ರಾಷ್ಟ್ರೀಯ ವರಮಾನದಲ್ಲಿ ಸುಮಾರು ಶೇಕಡ ೧೪ರಷ್ಟನ್ನು ಹೊಸ ಬಂಡವಾಳವಾಗಿ ಯುದ್ಧ ಪೂರ್ವಕಾಲದಲ್ಲಿ ಹೂಡುತ್ತಿತ್ತು. ಪಂಚವಾರ್ಷಿಕ ಯೋಜನೆಯ ಅಡಿಯಲ್ಲಿ ಸೋವಿಯೆಟ್ ರಷ್ಯಾ ತನ್ನ ರಾಷ್ಟ್ರೀಯ ವರಮಾನದಲ್ಲಿ ಸುಮಾರು ಶೇಕಡ ೩೦ರಷ್ಟನ್ನು ಹೂಡಲು ಯೋಜಿಸಿದೆ. ಬ್ರಿಟನ್ನಿನೊಡನೆ ಹೋಲಿಸಿದರೆ ಬಹು ಬಡದೇಶವಾದ ರಷ್ಯ ತನ್ನ ವರಮಾನದಲ್ಲಿ ಇಷ್ಟೊಂದು ಅಗಾಧ ಭಾಗವನ್ನು ಹೂಡಲಾರದು. ಜಗತ್ತಿನ ಉತ್ಪಾದನೆ ವಾರ್ಷಿಕವಾಗಿ ಸುಮಾರು ಶೇಕಡ ಮೂರರಷ್ಟು ಹೆಚ್ಚಿದರೆ, ಬಂಡವಾಳ ವ್ಯವಸ್ಥೆಯ ಕೈಗಾರಿಕೆಗೆ ಇದು ಸಹಜವೆನಿಸುವುದು. ೧೯೦೭ರಿಂದ ೧೯೧೩ರ ವರೆಗಿನ ಆರು ವರ್ಷಗಳಲ್ಲಿ ಬ್ರಿಟನ್ನಿನಲ್ಲಿ ವಾರ್ಷಿಕವಾಗಿ ಶೇಕಡ ಒಂದೂವರೆಗಿಂತಲೂ ಕಡಮೆ ಪ್ರಮಾಣದಲ್ಲಿ ಇದು ಹೆಚ್ಚಿತು. ೧೯೨೮-೨೯ರ ಉತ್ಕರ್ಷೆಯ

ನಾಲ್ಕು ವರ್ಷಗಳಲ್ಲಿ ಬಹು ಶೀಘ್ರವಾಗಿ ವರ್ಧಿಸುತ್ತಿದ್ದ ರಾಷ್ಟ್ರಗಳಾದ ಪೋಲೆಂಡ್ ಫ್ರಾನ್ಸ್ ಗಳಲ್ಲಿ ಕೂಡ ಅದು ಶೇಕಡ ೯ ಕ್ಕಿಂತ ಹೆಚ್ಚಿರಲಿಲ್ಲ. ಸಂಯುಕ್ತ ಸಂಸ್ಥಾನದಲ್ಲೂ ಬ್ರಿಟನ್ನಿನಲ್ಲೂ ಇದು ಶೇಕಡ ೪ ಕ್ಕೂ ಕಡಮೆಯಿತ್ತು. ದೊಡ್ಡ ಪ್ರಮಾಣದ ಸರ್ಕಾರಿ ಉದ್ಯಮದಲ್ಲಿ ವರ್ಷಕ್ಕೆ ಶೇಕಡ ೨೦ ಕ್ಕೂ ಮಿಗಿಲಾಗಿಯೂ, (ದೊಡ್ಡ ಸಣ್ಣ) ಎಲ್ಲ ಕೈಗಾರಿಕೆಯಲ್ಲೂ ಶೇಕಡ ೧೭-೧೮ರಷ್ಟು ಇದು ಹೆಚ್ಚಬೇಕೆಂದು ಪಂಚವಾರ್ಷಿಕ ಯೋಜನೆಯಲ್ಲಿ ನಿರ್ಧರಿಸಿದೆ."[1]

ಇದು ತುಂಬಾ ಅಚ್ಚರಿಯ ವಿಚಾರ. ಏಕೆಂದರೆ, ಕೈಗಾರಿಕೆ ಬೆಳವಣಿಗೆಯ ಈ ಕಾಲದಲ್ಲಿ ಸಾಮಾನ್ಯವಾದ ರೀತಿಯಲ್ಲಿ ಇತರ ದೇಶಗಳಿಂದ ಸಾಲವೂ ಉದರಿಯೂ ದೊರಕುತ್ತಿರಲಿಲ್ಲ. ಕೈಗಾರಿಕೆ ಬೆಳವಣಿಗೆಯ ಹಾದಿಯಲ್ಲಿ ನಡೆಯುತ್ತಿದ್ದ ಪ್ರತಿಯೊಂದು ಅನ್ಯ ರಾಷ್ಟ್ರಕ್ಕೂ ವಿದೇಶೀಯ ಬಂಡವಾಳದ ನೆರವು ದೊರೆತಿದೆ. ಇದರಿಂದ ಅದು ಉಕ್ಕು, ಯಂತ್ರ ಮುಂತಾದುವನ್ನು ಕೊಳ್ಳಲು ಸಾಧ್ಯವಾಗಿದೆ. ಇದೇ ಕಾಲಕ್ಕೆ ಅದು ಈ ಪದಾರ್ಥಗಳನ್ನು ತಯಾರಿಸಲು ತನ್ನದೇ ಆದ ಕಾರ್ಖಾನೆಗಳನ್ನು ನಿರ್ಮಿಸಿಕೊಳ್ಳಲು ಆರಂಭಿಸಿದೆ. ಸಂಯುಕ್ತ ಸಂಸ್ಥಾನದ ಕೈಗಾರಿಕಾಕರಣದಲ್ಲಿ ಬ್ರಿಟಿಷ್ ಬಂಡವಾಳ ಹಿರಿಯ ಪಾತ್ರ ವಹಿಸಿತು. ದಕ್ಷಿಣ ಆಫ್ರಿಕದಲ್ಲಿ ಬ್ರಿಟಿಷ್ ಜರ್ಮನ್ ಮತ್ತು ಅಮೆರಿಕನ್ ಸಾಲಗಳು ದೊರೆತುವು. ನಾವು ಹತ್ತೊಂಬತ್ತನೆಯ ಅಧ್ಯಾಯದಲ್ಲಿ ನೋಡಿದಂತೆ, ಹೆಚ್ಚುವರಿ ಬಂಡವಾಳ, ಹೂಡಿಕೆಯ ಅವಕಾಶಕ್ಕಾಗಿ ಎಲ್ಲೆಲ್ಲೂ ಅರಸುತ್ತಿತ್ತು—ರಷ್ಯಾ ಒಂದು ದೇಶ ಬಿಟ್ಟು. ದುಷ್ಟ ಬಾಲ್ಷೆವಿಕರು ಬಂಡವಾಳಿಗರ ದೃಷ್ಟಿಯಲ್ಲಿ ನಿರುಪಯೋಗಿ ಜನ. ಅವರಿಗೆ ಹಣವಿಲ್ಲ. ಈ ನಿಷೇಧದ ಕೋಟೆ ಮುರಿದು, ಅಗತ್ಯವಾದ ಸ್ವಲ್ಪ ಉದರಿ ಪಡೆಯಲು ರಷ್ಯನರಿಗೆ ಕೊನೆಗೂ ಸಾಧ್ಯವಾದಾಗ, ಷರತ್ತುಗಳು ಬಲು ಬಿಗಿಯಾಗಿದ್ದುವು—ಅದೂ ಹೇಗೆ!

ಹಾಗಾದರೆ ಹೊರ ದೇಶಗಳಿಂದ ಬಂದ ಅಗತ್ಯ ವಸ್ತುಗಳಿಗೆ ಹಣ ಕೊಟ್ಟದ್ದು ಯಾವ ರೀತಿ? ಸೋವಿಯೆಟ್ ರಾಜ್ಯದಲ್ಲಿ ಕೈಗಾರಿಕೆ ಬೆಳಸಲು ಬಹು ಅಗತ್ಯವಾಗಿ ಬೇಕಾಗಿದ್ದ ಬಂಡವಾಳ ಶೇಖರಣೆಯ ಮೂಲ ಯಾವುದು? ಇದೊಂದು ಮುಖ್ಯ ಪ್ರಶ್ನೆ—ಇದಕ್ಕೊಂದು ಮುಖ್ಯ ಉತ್ತರವಿದೆ.

ಈ ಹಣದಲ್ಲಿ ಒಂದು ಭಾಗ ಸೋವಿಯೆಟ್ ಕೈಗಾರಿಕೆಯಿಂದಲೇ ಬಂದಿತು.

ಬಂಡವಾಳವಾದಿ ಸಮಾಜದಲ್ಲಿ ಶೇಖರಣೆ ವೈಯಕ್ತಿಕ (ಇಲ್ಲಿ 'ವೈಯಕ್ತಿಕ' ಎಂದರೆ ಗುಂಪುಗಳದೂ ಸೇರುತ್ತದೆ—ಉದಾಹರಣೆ: ಸಂಸ್ಥೆಗಳು, ಬ್ಯಾಂಕುಗಳು ಮುಂತಾದವುಗಳ ಮೀಸಲು ನಿಧಿ.) ಆದರೆ ಸಮಾಜವಾದಿ ವ್ಯವಸ್ಥೆಯಲ್ಲಿ ಉತ್ಪಾದನೆಯಂತೆ ಬಂಡವಾಳ ಶೇಖರಣೆಯೂ ಸಾಮಾಜಿಕ. ಪ್ರತಿ ಕೈಗಾರಿಕೆಯ ನಿವ್ವಳ ಉತ್ಪನ್ನದಲ್ಲೂ ಒಂದು ನಿಷ್ಕೃಷ್ಟಭಾಗ ಕೇಂದ್ರ ಹಣಕಾಸಿನ ಸಂಸ್ಥೆಗಳಿಗೆ ವರ್ಗವಾಗುತ್ತದೆ. ಅಭಿವೃದ್ಧಿಗೆ ಒದಗಿಬರುವ ಇಡೀ ಸಾಧನಗಳ ಮೇಲಣ ಏಕೈಕ ಸಂಯುಕ್ತ ಅಧಿಕಾರ ಈ ಸಂಸ್ಥೆಗಳ ಕೈಯಲ್ಲಿರುತ್ತದೆ. ಸೋವಿಯೆಟ್ ಒಕ್ಕೂಟದ ಯೋಜನೆಯಲ್ಲಿ ಬಂಡವಾಳ ಸಮಾಜಕ್ಕೆ ಚಿರಪರಿಚಿತನಾದ, ಕೂಪನ್ ಕತ್ತರಿಸಿ ಜೀವಿಸುವವನಿಗೆ—ಕೈಗಾರಿಕೆಯ ಲಾಭದಿಂದಲೇ

[1] "Economist" in *The Highway*, Dec., 1932, p. 19.

ಬಮುಕುವ ಆಜೀವ ಲಾಭಾಂಶ ಜೀವಿಗೆ—ಇಲ್ಲಿ ಸ್ಥಾನವಿಲ್ಲ. ಸೋವಿಯೆಟ್ ಒಕ್ಕೂಟದಲ್ಲಿ ಸರಕಾರವೇ ಆರ್ಥಿಕ ಚಟುವಟಿಕೆಯ ಲಾಭವನ್ನು ಸಂಗ್ರಹಿಸುತ್ತದೆ. ಈ ಹಣವನ್ನು ಯೋಜನೆಗೆ ಅನುಸಾರವಾಗಿ, ಅದು ಎಲ್ಲಿ ತುಂಬಾ ಉಪಯುಕ್ತವೋ ಆ ಮಾರ್ಗಗಳಲ್ಲಿ, ವಿನಿಯೋಗಿಸುತ್ತದೆ.

"ಪ್ರತಿ ಕೈಗಾರಿಕೆಯ ಬೆಳೆವಣಿಗೆಯ ಒಂದು ಭಾಗ ಸ್ವಯಂಚಾಲಿತ. ಪ್ರತಿ ಕೈಗಾರಿಕೆಯೂ ತನ್ನ ಲಾಭದಲ್ಲಿ ಉಳಿಸಿಕೊಂಡ ಭಾಗದಿಂದ ಈ ಬೆಳೆವಣಿಗೆಗೆ ಹಣ ಒದಗುತ್ತದೆ. ಆದರೆ ಪ್ರತಿ ಕೈಗಾರಿಕೆಯೂ ಸಂಪಾದಿಸಿದ ಲಾಭದ ಉಳಿದ ಭಾಗ ಒಟ್ಟಾಗಿ ಸೇರುತ್ತದೆ. ಇದೇ ರೀತಿ ಕೇಂದ್ರದಲ್ಲಿ ಶೇಖರವಾದ ಇತರ ಹಣದೊಂದಿಗೆ ಇದೂ ಸೇರಿ, ಉದ್ದೇಶಪೂರ್ವಕವಾಗಿ ನಿರ್ದೇಶಿತವಾದ ಉತ್ಪಾದನ ವಿತರಣಗಳ ಇಡೀ ವ್ಯವಸ್ಥೆಯ ಬೆಳೆವಣಿಗೆಗಾಗಿ ಉಪಯೋಗಿಸಲ್ಪಡುತ್ತದೆ. ಆರ್ಥಿಕ ಅಭಿವೃದ್ಧಿಯ ಈ ನಿಯಂತ್ರಣ, ಕೇಂದ್ರೀಯ ಯೋಜನೆಯ ಸಂಘಟನೆಯ ಬಹು ಮುಖ್ಯ ಅಂಶಗಳಲ್ಲಿ ಒಂದಾಗಿದೆ."[1]

ಅಲ್ಲಿ ವೈಯಕ್ತಿಕವಾಗಿ ಶೇಖರಿಸಿದ ಹಣವೂ ಸ್ವಲ್ಪ ಇದೆ, ನಿಜ. ಆದರೆ ಉಳಿತಾಯವೆಲ್ಲ ಮುಖ್ಯವಾಗಿ ಲಾಭಗಳಿಂದಲೇ ಬರುವುದರಿಂದ, ವೈಯಕ್ತಿಕವೆಂಬ ಅರ್ಥದಲ್ಲಿ ಲಾಭವೇ ಅಲ್ಲಿ ಇಲ್ಲದಿರುವುದರಿಂದ, ಸೋವಿಯೆಟ್ ರಾಜ್ಯದಲ್ಲಿ ಉಳಿತಾಯವೆಂಬುದು ಜನಾಂಗದ ಕ್ರಿಯೆ, ಬಂಡವಾಳವಾದಿ ನೇಣು ಹುರಿಯಲ್ಲ.

ಬಂಡವಾಳ ಶೇಖರಣೆಯ ಒಂದು ಮೂಲವಾಗಿತ್ತು ಇದು. ಕೈಗಾರಿಕೆಗೆ ಬೇಕಾದ ಪದಾರ್ಥಗಳನ್ನು ಪಡೆಯಲು ಇನ್ನೊಂದು ಮುಖ್ಯ ಮಾರ್ಗವೆಂದರೆ ವಿದೇಶಿ ವ್ಯಾಪಾರ.

ರಷ್ಯದ ಗೋಧಿ, ತೈಲ, ಖನಿಜ, ದಿಮ್ಮಿ, ತುಪ್ಪುಳು ಇವನ್ನು ಕೊಟ್ಟು, ಇದು ಸ್ವಾವಲಂಬಿಯಾಗಲು ಅತ್ಯಂತ ಆವಶ್ಯಕವಾಗಿದ್ದ ಕಾರು, ಟ್ರಾಕ್ಟರು, ಎಂಜಿನು, ಯಂತ್ರ ಮಾಡುವ ಯಂತ್ರ ಮುಂತಾದುವನ್ನು ಇತರ ದೇಶಗಳಿಂದ ಪಡೆಯಬಹುದಿತ್ತು. ತೀವ್ರ ಕೈಗಾರಿಕೆ ಬೆಳವಣಿಗೆಯಾಗಬೇಕೆಂದ ಮಾತ್ರಕ್ಕೆ ರಷ್ಯನರು ಗೋಧಿ ಬೆಳೆಯುವುದನ್ನಾಗಲಿ, ತೈಲ ಖನಿಜಗಳನ್ನು ನೆಲದಿಂದ ತೆಗೆಯುವುದನ್ನಾಗಲಿ, ಮರ ಕಡಿದು ಉರುಳಿಸುವುದನ್ನಾಗಲಿ, ತುಪ್ಪುಳು ಮೃಗಗಳನ್ನು ಹಿಡಿಯುವುದನ್ನಾಗಲಿ ನಿಲ್ಲಿಸಬೇಕೆಂದು ಅರ್ಥವಲ್ಲ. ಪ್ರತಿಯಾಗಿ, ಈ ಕೆಲಸಗಳು ಇನ್ನೂ ವ್ಯಾಪಕವಾದುವು. ದೊಡ್ಡ ಪ್ರಮಾಣದ ಸುಧಾರಣೆಗಳಾದುವು. ಹತ್ತೊಂಬತ್ತನೆಯ ಶತಮಾನದ ಅಸಮರ್ಪಕ ವಿಧಾನಗಳನ್ನು ಬಿಟ್ಟುಕೊಟ್ಟು ಇಪ್ಪತ್ತನೆಯ ಶತಮಾನದ ಆಧುನಿಕ ತಂತ್ರಗಳನ್ನು ಜಾರಿಗೆ ತರಲಾಯಿತು. ಕೈಗಾರಿಕೆಯಲ್ಲಿ ಜಾರಿಗೆ ತಂದ ಯಂತ್ರೀಕರಣ ಹಾಗೂ ವೈಜ್ಞಾನಿಕ ವಿಧಾನಗಳು ವ್ಯವಸಾಯ ಗಣಿಗಾರಿಕೆಗಳಿಗೂ ಬಂದುವು. ಉತ್ಪತ್ತಿ ಹೆಚ್ಚಿಸಲು ಎಲ್ಲೆಲ್ಲೂ ಈ ನಿಟ್ಟಿನಲ್ಲಿ ಮನಃಪೂರ್ವಕ ಯತ್ನ ಸಾಗಿತು. ರಷ್ಯದ 'ಪ್ರಾಕೃತಿಕ' ಪದಾರ್ಥಗಳ ನಿರ್ಯಾತದಿಂದಲೇ ಕೈಗಾರಿಕೆಗೆ ಅಗತ್ಯವಾದ ಪದಾರ್ಥಗಳ ಆಯಾತ ಸಾಧ್ಯವಾಯಿತು.

ಆದ್ದರಿಂದ ವಿದೇಶಿ ವ್ಯಾಪಾರವನ್ನು ನಿಯಂತ್ರಣಗೊಳಿಸಿ, ಒಟ್ಟು ಯೋಜನೆಯಲ್ಲಿ

[1] Emile Burns, *Russia's Productive System*, p. 234. Gollancz, London, 1930.

ಇದನ್ನೂ ಸೇರಿಸಬೇಕಾಯಿತು. ಹಾಗೇ ಆಯಿತು. ವಿದೇಶಗಳಿಂದ ಸೋವಿಯೆಟ್ ಒಕ್ಕೂಟಕ್ಕೆ ಏನೇನು ಬರಬೇಕು, ಇಲ್ಲಿಂದ ಹೊರ ದೇಶಗಳಿಗೆ ಏನೇನು ಹೋಗಬೇಕು— ಎಂಬುದನ್ನು ಗೋಸ್ಪ್ಲಾನು ಖಚಿತವಾಗಿ, ಸಂಪೂರ್ಣವಾಗಿ ತೀರ್ಮಾನಿಸುತ್ತದೆ. ಸಮಷ್ಟಿ ಕೃಷಿ ಕ್ಷೇತ್ರಗಳು ಸಂಯುಕ್ತ ಸಂಸ್ಥಾನದಿಂದ ವ್ಯವಸಾಯ ಯಂತ್ರ ಕೊಂಡರೆ, ವಿದ್ಯುತ್‌ಕೈಗಾರಿಕೆ ಜರ್ಮನಿಯಿಂದ ತನಗೆ ಬೇಕಾದ ಉಪಕರಣ ಪಡೆದರೆ, ಹತ್ತಿ ಗಿರಣಿಗಳು ಇಂಗ್ಲೆಂಡಿನಿಂದ ತನಗೆ ಅವಶ್ಯವಾದ ಕದಿರುಗಳನ್ನು ಕೊಂಡುಕೊಂಡರೆ—ದೇಶದ ಒಟ್ಟು ಹಿತವನ್ನು ಅನುಲಕ್ಷಿಸದೆ ಇವು ತನುತಮಗೆ ತೋಚಿದಂತೆ ಕೊಂಡರೆ—ಆಗ ಎಲ್ಲವೂ ನಾಶವಾಗುವುದು. ಉತ್ಪಾದನೆಯ ಯೋಜನೆಯೊಂದು ಗೋಸ್ಪ್ಲಾನಿಗಿದೆ. ವಿದೇಶೀಯ ವ್ಯಾಪಾರ ಈ ಯೋಜನೆಯ ಅವಿಭಾಜ್ಯ ಅಂಗ. ರಾಷ್ಟ್ರೀಯ ಅರ್ಥ ವ್ಯವಸ್ಥೆಯ ಪರಿವೆಯಿಲ್ಲದೆ ತಮಗೆ ಬೇಕಾದ್ದು ಕೊಳ್ಳುವ, ಸಾಧ್ಯವಾದದ್ದು ಮಾರಾಟ ಮಾಡುವ ಹಲವು ವಿವಿಧ ಗುಂಪುಗಳಿಗೆ ಇದನ್ನು ಬಿಟ್ಟುಬಿಡಬಾರದು. ಆದ್ದರಿಂದ ಬ್ಯಾಂಕು ರೈಲ್ವೆಗಳ, ಎಲ್ಲ ಬಗೆಯ ಉತ್ಪಾದನ ಸಾಧನಗಳ ಹತೋಟಿಯ ವಿಧಾನವನ್ನು ಯೋಜನೆಯಲ್ಲಿ ಅಳವಡಿಸಿರುವಂತೆಯೇ ವಿದೇಶಿ ವ್ಯಾಪಾರದಲ್ಲಿ ಸರಕಾರದ ಏಕಸ್ವಾಮ್ಯವನ್ನೂ ಸೇರಿಸಿದೆ.

ಫ್ರೆಂಚ್ ಮಹಾಕ್ರಾಂತಿಯ ಸಮಯದಲ್ಲಿ ಕಮ್ಯೂನಿಸ್ಟ್ ರಾಜ್ಯದ ಯೋಜನೆ ರಚಿಸಿದ ಬೆಬ್ಯೂ ಎಂಬಾತ ವಿದೇಶಿ ವ್ಯಾಪಾರದಲ್ಲಿ ಸರಕಾರದ ಏಕಸ್ವಾಮ್ಯವಿರಬೇಕೆಂಬುದಾಗಿಯೂ ಹೇಳಿದ್ದನೆಂಬುದು ಗಮನಾರ್ಹ. "ವಿದೇಶಗಳೊಡನೆ ಎಲ್ಲ ಖಾಸಗಿ ವ್ಯಾಪಾರವೂ ವರ್ಜ್ಯ. ಹೀಗೆ ದೇಶವನ್ನು ಹೊಗುವ ಎಲ್ಲ ಪದಾರ್ಥಕ್ಕೂ ಮುಟ್ಟುಗೋಲಾಗಬೇಕು; ರಾಷ್ಟ್ರಹಿತಕ್ಕಾಗಿ ಇದನ್ನು ಬಳಸಿಕೊಳ್ಳಬೇಕು. ತನ್ನಲ್ಲಿರುವ ಹೆಚ್ಚುವರಿ ಪದಾರ್ಥಗಳನ್ನು ಇತರ ದೇಶಗಳಿಗೆ ಕೊಟ್ಟು ಅವುಗಳಿಂದ ತನ್ನ ಜನಾಂಗ ಹಿತಕ್ಕಾಗಿ ಅಗತ್ಯವಾದ ಪದಾರ್ಥಗಳನ್ನು ಈ ಲೋಕ ರಾಜ್ಯ ಪಡೆಯುತ್ತದೆ."[1]

ಸಮಾಜವಾದಿ ಯೋಜಿತ ಅರ್ಥವ್ಯವಸ್ಥೆಯ ಮುಖ್ಯಾಂಗವಾಗಿ ವಿದೇಶಿ ವ್ಯಾಪಾರದ ಏಕಸ್ವಾಮ್ಯ ಹೊಂದಿದ್ದರೂ ಕೂಡ, ಸೋವಿಯೆಟ್ ಒಕ್ಕೂಟ ಸರಕಾರ ತನ್ನ ಆಯಾತ ನಿರ್ಯಾತಗಳ ಗುಣ ಪ್ರಮಾಣಗಳ ಸಂಪೂರ್ಣ ಹತೋಟಿ ಹೊಂದಿಲ್ಲ. ವಿದೇಶಗಳ ಯೋಜನಾರಹಿತ ಅರ್ಥವ್ಯವಸ್ಥೆಗಳೊಡನೆ ಇದು ವ್ಯಾಪಾರ ಮಾಡುತ್ತಿರಬೇಕಾಗಿರುವವರೆಗೂ ಇದೇ ಸ್ಥಿತಿ ಮುಂದುವರಿದೇ ತೀರುವುದು. ರಷ್ಯನರು ತಮ್ಮ ಪ್ರಪಂಚದಲ್ಲಿ ಏನಾಗುವುದೆಂಬುದನ್ನು ನಿರ್ದೇಶಿಸಬಹುದು. ಆದರೆ ಜಗತ್ತಿನ ಇತರ ಪ್ರದೇಶಗಳಲ್ಲಿ ನಡೆಯುವುದನ್ನು ಇವರು ನಿಯಂತ್ರಿಸಲಾರರು. ಪ್ರಥಮ ಪಂಚವಾರ್ಷಿಕ ಯೋಜನೆಯ ಕಾಲದಲ್ಲಿ ಈ ಸತ್ಯ ಸ್ಪಷ್ಟವಾಯಿತು.

---

[1] E. Belfort Bax, *The Last Episode of the French Revolution, Being a History of Gracchus, Babeuf and the Conspiracy of Equals*, p. 132. Grant Richards, London, 1911.

ಗೋಸ್ಪ್ಲಾನು ವಿದೇಶಗಳಲ್ಲಿ ಕೆಲವು ಯಂತ್ರ ಕೊಳ್ಳಬೇಕೆಂದು ತೀರ್ಮಾನಿಸಿತ್ತು. ಆ ಕಾಲದಲ್ಲಿದ್ದ ಬೆಲೆಗಳಲ್ಲಿ ಇವುಗಳಿಗಾಗಿ ಅದು ಆದೇಶ ನೀಡಿತು. ಮುಂಬರಲಿದ್ದ ಕೆಲವು ವರ್ಷಗಳಲ್ಲಿ, ತನ್ನ ದೇಶೀಯ ಉತ್ಪಾದನೆಯಲ್ಲಿ ಒಂದು ಭಾಗವನ್ನು ಈ ಯಂತ್ರ ಸಾಧನಕ್ಕಾಗಿ ಪಾವತಿ ಮಾಡಲು ತೆಗೆದಿಡಬೇಕೆಂದು ಗೊತ್ತುಮಾಡಿಕೊಂಡಿತ್ತು.

ಇದೇನೋ ಸರಿ. ತಮಗೆ ಬೇಕಾದ ಪದಾರ್ಥಕ್ಕಾಗಿ ಇವರು ಕರಾರಿಗೆ ರುಜು ಹಾಕಿದ್ದರು. ಇವಕ್ಕೆ ಕೊಡಬೇಕಾದ ಹಣಕ್ಕೆ ಏರ್ಪಾಟು ಮಾಡಿಕೊಂಡಿದ್ದರು. ಎಲ್ಲವೂ ಅನುಕೂಲಕರವಾಗಿಯೇ ಕಂಡಿತು.

ಆದರೆ—ಈ ಕರಾರಿನ ಅವಧಿ ಪೂರೈಸುವ ಮೊದಲೇ—೧೯೨೯ರ ಬಿಕ್ಕಟ್ಟು ಜಗತ್ತಿನ ಬಂಡವಾಳವಾದಿ ರಾಷ್ಟ್ರಗಳಿಗೆ ಬಂತು. ಇದರ ಪರಿಣಾಮವಾಗಿ ರಷ್ಯಾ ನಿರ್ಯಾತ ಮಾಡುತ್ತಿದ್ದ ಪದಾರ್ಥಗಳ ಬೆಲೆಗಳು ಅಗಾಧವಾಗಿ ಕುಸಿದುವು. ಗೋಸ್ಪ್ಲಾನು ಆದೇಶ ನೀಡಿದ್ದ ಒಂದು ಯಂತ್ರಕ್ಕೆ ೧,೦೦,೦೦,೦೦೦ ಡಾಲರು ಕೊಡಲು ಒಪ್ಪಿತ್ತೆಂದು ಭಾವಿಸೋಣ. ಇದಕ್ಕೆ ಪ್ರತಿಯಾಗಿ ಅದು ಈ ಪದಾರ್ಥಗಳನ್ನು ನಿರ್ಯಾತ ಮಾಡಬೇಕೆಂದು ತೀರ್ಮಾನಿಸಿಕೊಂಡಿತ್ತೆಂದೂ ಭಾವಿಸಿಕೊಳ್ಳೋಣ:

| | ದರ | ಡಾಲರ್ |
|---|---|---|
| ೨೦,೦೦,೦೦೦ ಬುಷೆಲ್ ಗೋಧಿ | ಬುಷೆಲ್ಲಿಗೆ ೧ ಡಾಲರ್ | ೨೦,೦೦,೦೦೦ |
| ೧೦,೦೦,೦೦೦ ತುಪ್ಪುಳ | ಒಂದಕ್ಕೆ ೩ ಡಾಲರ್ | ೩೦,೦೦,೦೦೦ |
| ೨೫,೦೦,೦೦೦ ಪೀಪಾಯಿ ಎಣ್ಣೆ | ಒಂದಕ್ಕೆ ೨ ಡಾಲರ್ | ೫೦,೦೦,೦೦೦ |
| | ಒಟ್ಟು ಡಾಲರು | ೧,೦೦,೦೦,೦೦೦ |

ಈಗ ಬಿಕ್ಕಟ್ಟಿನ ಫಲವಾಗಿ ಗೋಧಿಯ ಬೆಲೆ ೫೦ ಸೆಂಟಿಗೆ (ಅರ್ಧ ಡಾಲರ್‌ಗೆ) ಇಳಿದರೆ, ಅಂತೆಯೇ ಇತರ ಪದಾರ್ಥಗಳ ಬೆಲೆಗಳೂ ಇಳಿದರೆ, ಹೆಚ್ಚು ಕಡಮೆ ಇವನ್ನು ಮುಫತ್ತಾಗಿ ಕೊಟ್ಟರೆ ವಿನಾ ಜನ ಇವನ್ನು ಕೊಳ್ಳ ಬಯಸುವುದಿಲ್ಲ. ಹಿಂದೆಂದೂ ಕೇಳದ ಮಟ್ಟಕ್ಕೆ ಇವುಗಳ ಬೆಲೆಗಳು ಇಳಿದುವು.

ಸೋವಿಯೆಟ್ ಸರಕಾರ ಏನು ಮಾಡಬೇಕಿತ್ತು? ಅದಕ್ಕೆ ಯಂತ್ರ ಬೇಕಿತ್ತು. ನಿರ್ಯಾತದ ಮೂಲಕ ಹಣ ಕೊಡಬೇಕಿತ್ತು. (ಕರಾರು ಹಿಂದಣ ಅಧಿಕ ಬೆಲೆಗಳ ಮಟ್ಟದಲ್ಲೇ ಈಗಲೂ ಇರಲಿಲ್ಲ, ನಿಜ. ಆದರೆ ರಷ್ಯಾ ಮಾರಬೇಕಾಗಿದ್ದ ಪದಾರ್ಥಗಳ ಬೆಲೆಗಳು ಇಳಿದಷ್ಟು ವೇಗವಾಗಿ, ಅಥವಾ ಅಷ್ಟೊಂದು ಅಗಾಧವಾಗಿ, ಕೈಗಾರಿಕೆ ಪದಾರ್ಥಗಳ ಬೆಲೆಗಳು ಇಳಿಯಲಿಲ್ಲ.) ಅದು ಹಿಂದೆ ಗೊತ್ತುಮಾಡಿಕೊಂಡಿದ್ದಕ್ಕಿಂತ ಎರಡರಷ್ಟು ನಿರ್ಯಾತ ಮಾಡಬೇಕಾಯಿತು. ಅದು ರಷ್ಯದ ಜನರಿಗೆ ಹೀಗೆ ಹೇಳಿಕೊಳ್ಳ ಬೇಕಾಯಿತು. "ನೀವು ನಿಮ್ಮ ನಡುಪಟ್ಟಿ ಇನ್ನೂ ಬಿಗಿಯಬೇಕು. ಈ ಬಂಡವಾಳಿಗರು ತಮ್ಮ ವ್ಯವಸ್ಥೆಯನ್ನು ಇನ್ನೂ ಹೊಲಸು ಮಾಡಿಕೊಂಡಿದ್ದಾರೆ. ಇದರಿಂದ ಜಗತ್ತಿನಾದ್ಯಂತ ಬೆಲೆಗಳು ದೊಪ್ಪನೆ ಕೆಳಗೆ ಬಿದ್ದಿವೆ. ನಮಗೆ ಅವರು ಹಿಂದೆ ಕೊಡುತ್ತಿದ್ದುದರ

ಬೆಲೆಯ ಅರ್ಧವನ್ನು ಮಾತ್ರ ಈಗ ಕೊಡುತ್ತಾರೆ. ಆದ್ದರಿಂದ ಈಗ ನಾವು ಹಿಂದೆ ಕಳುಹಿ
ಸುತ್ತಿದ್ದುದರ ಎರಡರಷ್ಟು ನಿರ್ಯಾತ ಮಾಡಬೇಕಾಗಿದೆ."

ಆದದ್ದು ಹೀಗೆ—ಸ್ಥೂಲವಾಗಿ, ಸೋವಿಯೆಟ್ ಒಕ್ಕೂಟ ತನ್ನ ದೇಶದಲ್ಲಿ ಬಿಕ್ಕಟ್ಟಿನ
ನಿವಾರಣೆಗಾಗಿ ಯೋಜನೆ ರಚಿಸಿಕೊಂಡಿದ್ದರೂ, ಬಂಡವಾಳವಾದಿ ದೇಶಗಳಲ್ಲಿನ ಬಿಕ್ಕಟ್ಟಿನ
ಫಲವಾಗಿ ಅದು ಕಷ್ಟ ಅನುಭವಿಸಬೇಕಾಯಿತು. ರಷ್ಯದ ಹೊರಗಡೆ ಇದ್ದ ಬಿಕ್ಕಟ್ಟು
ಅದರ ಸಮತೂಕ ತಪ್ಪಿಸಿದ್ದು ಒಂದು ಬಾಹ್ಯ ಕಾರಣ.

ಆದರೆ ಆಂತರಿಕವಾಗಿ ಉದ್ಭವಿಸುವ ಹಲವು ಪರಿಸ್ಥಿತಿಗಳ ಫಲವಾಗಿ ಸಂಭವಿಸುವ
ಏರುಪೇರು ಇನ್ನೂ ಹೆಚ್ಚು ಆತಂಕಕಾರಿ. ಈ ಪರಿಸ್ಥಿತಿಗಳಲ್ಲಿ ಕೆಲವು ಪರಿಹಾರ್ಯ, ಇನ್ನು
ಕೆಲವು ಅಪರಿಹಾರ್ಯ. ಎಲ್ಲ ಆರ್ಥಿಕ ಚಟುವಟಿಕೆಗಳ ಉದ್ದೇಶಪೂರ್ವಕ ಯೋಜನೆ
ಯಲ್ಲಿ ಪ್ರತಿಯೊಂದು ಅಂಗವೂ ಇನ್ನೊಂದಕ್ಕೆ ಕೂಡಿಕೊಂಡಿರುತ್ತದೆ. ಈ ಚಕ್ರದಲ್ಲಿ ಒಂದು
ಹಲ್ಲು ಮುರಿದರೂ ಉಳಿದ ಒಂದೊಂದು ಚಕ್ರವೂ ಇದರಿಂದ ತೊಂದರೆಗೆ ಈಡಾಗುವುದು
ಖಂಡಿತ, ಅನಿವಾರ್ಯ. ಉದಾಹರಣೆಗೆ, ಹತ್ತಿಯ ಹುಳು ಅಲ್ಲಿನ ಹತ್ತಿ ಬೆಳೆಯ ಬಹು
ಭಾಗವನ್ನು ನಷ್ಟಪಡಿಸುವುದೆನ್ನಿ. ತಕ್ಷಣವೇ ಇದರಿಂದ ಜವಳಿ ಗಿರಣಿಯ ಮೇಲೆ ಪರಿಣಾಮ
ವುಂಟುಮಾಡುತ್ತದೆ. ಹತ್ತಿಯ ನಿರ್ಯಾತವೂ ಯೋಜನೆಯಲ್ಲಿ ಸೇರಿದ್ದರೆ, ದೇಶದ ವಿದೇಶಿ
ವ್ಯಾಪಾರಕ್ಕೂ ಇದರಿಂದ ಧಕ್ಕೆ ತಗಲುತ್ತದೆ. ನಿರೀಕ್ಷಿಸಿದ್ದಷ್ಟು ಹತ್ತಿ ಪದಾರ್ಥ ಪೇಟೆಗೆ
ಬಾರದೆ ಹೋದರೆ, ಕೂಲಿ-ಬೆಲೆಗಳ ಸಂಬಂಧಕ್ಕೂ ಇದರಿಂದ ಆಘಾತ ಒದಗುತ್ತದೆ.
ಸೋವಿಯೆಟ್ ಅರ್ಥಶಾಸ್ತ್ರಜ್ಞರು ಅನುಭವದಿಂದ ಕಲಿತ ಪಾಠ ಇದು: "ರಾಷ್ಟ್ರೀಯ
ಅರ್ಥವ್ಯವಸ್ಥೆಯ ಎಲ್ಲ ಅಂಗಗಳ ನಿಕಟ ಬಾಂಧವ್ಯದ ಫಲವಾಗಿ, ಎಲ್ಲಾದರೂ ಒಂದೆಡೆ
ಒಡಕು ಸಂಭವಿಸಿದರೆ, ಅಥವಾ ಒಂದು ಕ್ಷೇತ್ರದಲ್ಲಿ ಯೋಜನೆಯಲ್ಲಿ ಹಿಂದೆ ಸರಿದರೆ,
ಇತರ ಹಲವು ಕ್ಷೇತ್ರಗಳಲ್ಲಿ ಹಿನ್ನಡೆಯಬೇಕಾಗುತ್ತದೆ. ಈ ಕ್ಷೇತ್ರಗಳು ಎಷ್ಟೇ ಚೆನ್ನಾಗಿ
ಕೆಲಸ ಮಾಡುತ್ತಿರಲಿ, ಈ ಹಿನ್ನಡೆ ತಪ್ಪಿಸುವುದು ಅಸಾಧ್ಯ. ಯಾವುದಾದರೂ ಒಂದು
ಎಡೆಯಲ್ಲಿ ಯೋಜನೆ ದಾರಿ ತಪ್ಪಿದರೂ ಇನ್ನೊಂದು ಎಡೆಯಲ್ಲಿ ಇವನ್ನು ಸರಿ ಹೊಂದಿಸುವ
ಕ್ರಮ ಕೈಕೊಳ್ಳಬೇಕಾಗುತ್ತದೆ."[1]

ಇದು ಅಪಾಯ—ಹಾಗೂ ಉಪಾಯ. ಆಘಾತ ಒದಗಿದಾಗ, ಅದನ್ನು ತಡೆಗಟ್ಟಲು
ಒಂದು ಮೆತ್ತೆ ಪಟ್ಟಿಯ ಕಾವಲು ವ್ಯವಸ್ಥೆಯನ್ನು ಯೋಜಕರು ಹೊಂದಿರಬೇಕು.
ಆಕಸ್ಮಿಕಗಳನ್ನು ಎದುರಿಸಲು ವ್ಯವಸ್ಥೆ ಇರಬೇಕು. ಗತಕಾಲದ ಘಟನೆಗಳ ಮೇಲು-ಕೆಳಗು
ತೋರಿಸುವ ಅಂಕಿ-ಅಂಶ ಸಂಗ್ರಹಿಸಬೇಕು. ಈ ವಿವರದ ತಳಹದಿಯ ಮೇಲೆ ಮುಂದೇ
ನಾಗಬಹುದೆಂಬುದನ್ನು ಊಹಿಸಬೇಕು. ಆದರೆ ಇಷ್ಟೇ ಸಾಲದು. ಒಂದು ಪಕ್ಷ ನಿರೀಕ್ಷಿಸಿ
ದಂತೆ ಆಗದಿದ್ದರೆ, "ಸುಸಂಘಟನೆಯ ಕ್ರಮ" ಕೈಕೊಳ್ಳಲು ಸಿದ್ಧವಿರಬೇಕು.

ಕಾಗದದ ಮೇಲೆ ಇವನ್ನೆಲ್ಲ ಗುರುತು ಮಾಡಿಕೊಳ್ಳುವುದು ಸುಲಭ. ಆದರೆ ವಾಸ್ತವ
ವಾಗಿ ಈ ಸುಸಂಘಟನೆಯ ಕಾರ್ಯ ಬಲು ಕಷ್ಟ. ಇದನ್ನು ಸಾಧಿಸಲಾಗದುದಕ್ಕಾಗಿ

[1] *Socialist Planned Economy, op. cit.*, pp. 46, 47.

ಷ್ಯನರು ಪದೇ ಪದೇ ದಂಡ ತೆತ್ತರು. ವೆಬ್ ದಂಪತಿಗಳು ಒಂದು ದೃಷ್ಟಾಂತ ನೀಡು
ತ್ತಾರೆ: "[ಗಾರ್ಕಿಯಲ್ಲಿ ಮೋಟಾರು ಕಾರು ತಯಾರಿಸುವ] ಕಾರ್ಖಾನೆಯನ್ನು ೧೯೩೨ರ
ಮೇ ಒಂದರಂದು ತುಂಬಾ ಪ್ರಚಾರದೊಡನೆ ಪ್ರಾರಂಭಿಸಲಾಯಿತು. ಆದರೆ ಇಡೀ
ಉದ್ಯಮ ಮೊಂಡು ಹಿಡಿದು ನಿಂತಿತು. ಡಿಟ್ರಾಯಿಟ್‌ನಲ್ಲಿರುವ ಫೋರ್ಡ್ ಸಂಸ್ಥೆಗಳ
ಮಾದರಿಯಲ್ಲಿ ಇದನ್ನು ನಿರ್ಮಿಸಲಾಗಿತ್ತು. ಇದರಲ್ಲಿ ಬಹು ಬೆಲೆಯ ಹಲವು ಯಂತ್ರ
ಗಳಿದ್ದುವು. ಹಲವು ಸಹಸ್ರ ಕಾರ್ಮಿಕರನ್ನು ಸಂಗ್ರಹಿಸಿ ನೇಮಿಸಿಕೊಂಡಿತ್ತು. ಆದರೆ ಶಕ್ತಿ
ವಹನ ಪಟ್ಟಿ (Conveyor) ಚಲಿಸಲು ನಿರಾಕರಿಸಿತು. ಭದ್ರವಿಲ್ಲದ ಅಸ್ತಿಭಾರದ ಫಲವಾಗಿ
ಅದರ ತಳ ಹಲವು ಎಡೆಯಲ್ಲಿ ಕುಸಿಯಿತು....ಶಕ್ತಿವಹನ ವ್ಯವಸ್ಥೆ ಚಲಿಸುವಂತೆ
ಮಾಡುವುದು ಸಾಧ್ಯವಾಗಿದ್ದರೂ, ಈ ಮಹಾ ಪಟ್ಟಿ ಮುಂಬರಿದಾಗ ಒಂದಕ್ಕೊಂದು
ಹೊಂದಿಕೊಂಡು ನಡೆಯಬೇಕಾಗಿದ್ದ ನಾನಾ ಅಂಗಗಳ ಸಂಪೂರ್ಣ ವ್ಯವಸ್ಥೆಯೇ
ಇರಲಿಲ್ಲ."[1]

ಅವಕ್ಷತೆಯ, ನಿರ್ದೇಶನ ರಾಹಿತ್ಯದ, ಸಂಘಟನೆಯ ಅಭಾವದ ಮಹತ್ತರ ಉದಾ
ಹರಣೆ ಇವು. ಆದರೆ ಇವಕ್ಕಾಗಿ ರಾಷ್ಟ್ರೀಯ ಯೋಜನೆಯನ್ನೇ ಹಳಿಯುವುದು ಸರಿಯೆ?
ಕೈಗಾರಿಕೆಯಲ್ಲಿ ರಷ್ಯನರ ಅನನುಭವವೇ ಇದಕ್ಕೆ ಕಾರಣವಲ್ಲವೆ? ಕ್ರಮೇಣ ರಷ್ಯನರು
ಪಾಠ ಕಲಿತರು. ಈಗ ರಷ್ಯದಲ್ಲಿ ಕಾರ್ಖಾನೆಗಳು ಅವು ಆರಂಭವಾದಂದಿನಿಂದಲೇ
ಸಮರ್ಪಕವಾಗಿ ಕೆಲಸ ಮಾಡುತ್ತವೆ. ಹೀಗೆಂದು ವೆಬ್ ದಂಪತಿಗಳು ಹೇಳುತ್ತಾರೆ.
ಸಂಯುಕ್ತ ಸಂಸ್ಥಾನಕ್ಕೆ ರಾಷ್ಟ್ರೀಯ ಯೋಜನೆಯೇನಾದರೂ ಬಂದರೆ, ಅಲ್ಲಿ ಈ ಸಂಘಟನ
ಶಕ್ತಿಯ ಅಭಾವವಿರುವುದಿಲ್ಲವೆಂದು ಸುಲಭವಾಗಿ ನಿರೀಕ್ಷಿಸಬಹುದು. ಸಂಯುಕ್ತ ಸಂಸ್ಥಾ
ನದ ಉಕ್ಕಿನ ಸಂಸ್ಥೆಗೆ ಸೇರಿದ ಕೇವಲ ಎರಡು ಕಂಪೆನಿಗಳು, "೧೯೩೪ರಲ್ಲಿ ಇಂಗ್ಲೆಂಡು
ಜರ್ಮನಿಗಳು ಕೂಡಿ ಉತ್ಪಾದಿಸಿದಷ್ಟನ್ನು"[2] ಉತ್ಪಾದಿಸಬಹುದೆಂಬುದಾಗಿ 'ಫಾರ್ಚೂನ್'
ಪತ್ರಿಕೆಯ ಸಂಪಾದಕರು ನೀಡಿದ ಹೇಳಿಕೆಯಿಂದ, ಈ ಸಂಘಟನಶಕ್ತಿ ಧಾರಾಳವಾಗಿ
ಅಲ್ಲಿದೆಯೆಂಬುದು ವ್ಯಕ್ತವಾಗುತ್ತದೆ. ಕೈಗಾರಿಕೆ ವ್ಯವಸ್ಥೆಯಲ್ಲಿ ಅತ್ಯಂತ ಕ್ಲಿಷ್ಟ ಸಮಸ್ಯೆ
ಯನ್ನು ಪರಿಹರಿಸಬಲ್ಲ ಸಂಘಟನ ಸಾಮರ್ಥ್ಯ ಸಂಯುಕ್ತ ಸಂಸ್ಥಾನದ ಉಕ್ಕಿನ ಸಂಸ್ಥೆ
ಯಲ್ಲಿ ಇಲ್ಲದಿದ್ದರೆ ಈ ಕೆಲಸ ಸಾಧ್ಯವಾಗುತ್ತಿರಲಿಲ್ಲ. ಆದ್ದರಿಂದ, ಎಲ್ಲ ಅಂಗಗಳನ್ನೂ
ಒಂದುಗೂಡಿಸುವ ಕೆಲಸ ಬಹು ಕಷ್ಟಕರವಾದದ್ದರಿಂದ ರಾಷ್ಟ್ರೀಯ ಯೋಜನೆಯೇ
ಅಸಾಧ್ಯವೆಂಬ ವಾದದಲ್ಲಿ ಹುರುಳಿಲ್ಲ.

ಆದರೆ ಇತರ ವಾದಗಳೂ ಉಂಟು. "ಸಮಾಜೀಕೃತ ರಾಷ್ಟ್ರೀಯ ಯೋಜನೆ" ಎಂಬ
ಪದಪುಂಜದಲ್ಲಿ "ಸಮಾಜೀಕೃತ" ಎಂಬ ಪದದ ಬಗ್ಗೆ ಇರುವ ಆಕ್ಷೇಪಣೆ ಒಂದು.
"ರಾಷ್ಟ್ರೀಯ ಯೋಜನೆ" ಎಂಬುದನ್ನು ಕುರಿತ ಆಕ್ಷೇಪಣೆ ಇನ್ನೊಂದು.

ಲಾಭದೃಷ್ಟಿ ಇಲ್ಲದಿರುವುದರಿಂದ, ಜನರು ಪರಮಾವಧಿ ಶ್ರಮ ವಹಿಸಲು, ಹೊಸ

[1] Webbs, *op. cit.*, vol. II, p. 786.
[2] *Fortune*, March, 1936, p. 200.

ವಿಧಾನಗಳನ್ನು ಪ್ರಯೋಗಿಸಲು, ಸಾಹಸಕಾರ್ಯ ಕೈಕೊಳ್ಳಲು ಅವರಿಗೆ ಯಾವ ಪ್ರೇರಣೆಯೂ ಇರುವುದಿಲ್ಲ. ತತ್ಫಲವಾಗಿ ಆರ್ಥಿಕಜೀವನ ಸ್ತಬ್ಧವಾಗುತ್ತದೆ.

ಇದೆಲ್ಲಾ ಬರೀ ಅಸಂಬದ್ಧ—ಎನ್ನುತ್ತಾರೆ ರಷ್ಯನರು. ಬಂಡವಾಳವಾದಿ ಸಮಾಜದಲ್ಲಿ ಲಾಭ ಗಳಿಸುವ ಅವಕಾಶವೇ ಇಲ್ಲದ ಜನ, ಕೇವಲ ಕೂಲಿಗಾಗಿ ಹಗಲೂ ರಾತ್ರಿ ದುಡಿಯುವ ಜನ, ಹೆಚ್ಚು ಭಾಗದ ಕೆಲಸ ಮಾಡುತ್ತಾರೆ. ಜೀವನೋಪಾಯ ಗಳಿಸಬೇಕೆಂಬ ಕಾರಣದಿಂದಲೇ ಹಲವರು ದುಡಿಯುತ್ತಾರೆ. ಇದು ಎಲ್ಲ ಕಡೆಗಳಿಗೂ—ರಷ್ಯಕ್ಕೂ ಬಂಡವಾಳವಾದಿ ಜಗತ್ತಿಗೂ—ಅನ್ವಯಿಸುತ್ತದೆ. ಇದರ ಜತೆಗೆ, ರಷ್ಯದಲ್ಲಿ, ಸಾಮಾಜಿಕ ಒತ್ತಾಯ, ಸಾಮಾಜಿಕ ಗೌರವ, ಒಳ್ಳೆಯ ಕೆಲಸಗಾರರಿಗೆ ದೊರಕುವ ಮರ್ಯಾದೆ—ಇವೆಲ್ಲ ಸೇರಿ ಕಾರ್ಮಿಕನಿಗೆ ಅತ್ಯುತ್ತಮ ರೀತಿಯಲ್ಲಿ ಕೆಲಸ ನಿರ್ವಹಿಸಲು ಪ್ರಚೋದನೆ ನೀಡುತ್ತವೆ. ಆರ್ಥಿಕಕ್ಷೇತ್ರದಲ್ಲಿ ತಲೆದೋರಬಹುದಾದ ದುರ್ಬಲ ಕ್ಷೇತ್ರಗಳನ್ನು ಸರಿಪಡಿಸಲು ನಾನಾ ಶ್ರೇಣಿಯ ಕಾರ್ಮಿಕರು ತಾವಾಗಿಯೇ ಮುಂದೆ ಬರುವುದನ್ನು ರಷ್ಯನರು ಬಹು ಹೆಮ್ಮೆಯಿಂದ ತೋರಿಸುತ್ತಾರೆ. ಈ ಹೆಮ್ಮೆ ನ್ಯಾಯವಾದದ್ದೇ. ೧೯೧೯ರಲ್ಲಿ "ಸಬ್-ಬಾಟ್ನಿಕರು" ಈ ರೀತಿ ಮಾಡಿದ್ದು ಲೆನಿನ್ನನನ್ನು ಮೆಚ್ಚಿಸಿತು. "ಕಮ್ಯೂನಿಸ್ಟ 'ಸಬ್‌ಬಾಟ್ನಿಕರಿಗೆ' ಮಹಾ ಐತಿಹಾಸಿಕ ಪ್ರಾಧಾನ್ಯವಿದೆ....ಹೊಸ ಸಾಮಾಜಿಕ ವ್ಯವಸ್ಥೆಯ ಗೆಲವಿಗೆ ಕಾರ್ಮಿಕ ಉತ್ಪಾದನ ಶಕ್ತಿಯೇ ಅಂತಿಮವಾಗಿ ಬಹು ಮಹತ್ವವಾದ, ಬಹು ಮುಖ್ಯವಾದ ಅಂಶ. ಜೀತಗಾರ ವ್ಯವಸ್ಥೆಯಲ್ಲಿ ಕಂಡರಿಯದಷ್ಟು ಹೆಚ್ಚಿನ ಪ್ರಮಾಣದಲ್ಲಿ ಕಾರ್ಮಿಕರ ಉತ್ಪಾದನ ಶಕ್ತಿಯನ್ನು ಬಂಡವಾಳ ವ್ಯವಸ್ಥೆ ನಿರ್ಮಿಸಿದೆ. ಸಮಾಜವಾದ ಇದಕ್ಕೂ ನವೀನವಾಗಿ, ಮಿಗಿಲಾಗಿ, ಕಾರ್ಮಿಕರ ಉತ್ಪಾದನ ಶಕ್ತಿಯ ನಿರ್ಮಾಣ ಮಾಡುವುದರಿಂದ, ಕೊನೆಗೆ ಬಂಡವಾಳ ವ್ಯವಸ್ಥೆಯ ಉಚ್ಚಾಟನೆಯಾಗಬಹುದು, ಆಗಿಯೇ ಆಗುತ್ತದೆ. ಇದು ಬಹು ಕಷ್ಟದ ಕೆಲಸ. ಇದಕ್ಕಾಗಿ ದೀರ್ಘಕಾಲವೇ ಬೇಕು....ಕಮ್ಯೂನಿಸಂ ಎಂದರೆ ಬಂಡವಾಳ ವ್ಯವಸ್ಥೆಯಲ್ಲಿ ಇರುವುದಕ್ಕಿಂತಲೂ ಹೆಚ್ಚಾಗಿ ಕಾರ್ಮಿಕರಲ್ಲಿ ಉತ್ಪಾದನ ಶಕ್ತಿ. ಸ್ವಪ್ರೇರಿತ, ಪ್ರಜ್ಞಾಯುತ, ಸಂಘಟಿತ ಕಾರ್ಮಿಕರು ಪ್ರಗತಿಪರ ತಂತ್ರಪ್ರಯೋಗ ಮಾಡುವುದರಿಂದ ಇದು ಸಾಧ್ಯ."[1]

"ಸಮಾಜವಾದಿ ಸ್ಪರ್ಧೆ"—ದುಡಿಮೆಯ ಉತ್ಪಾದನ ಶಕ್ತಿ ಹೆಚ್ಚಿಸಲು ಇದು ಇನ್ನೊಂದು ವಿಧಾನ. ಉತ್ಪನ್ನ ಹೆಚ್ಚಿಸುವ ಉದ್ದೇಶದಿಂದ ಕಾರ್ಮಿಕ ತಂಡಗಳು ತಮ್ಮ ತಮ್ಮಲ್ಲೇ ಸ್ನೇಹಪರ ಸ್ಪರ್ಧೆ ನಡೆಸುತ್ತವೆ. ಸ್ಪರ್ಧೆ ಮುಗಿದ ಮೇಲೆ, ಜಯಶೀಲ ಪಕ್ಷ ಬೇರೆ ಯಾವೆಡೆಯ ಜಯಶೀಲ ಪಕ್ಷವೂ ಮಾಡದ್ದನ್ನು ಮಾಡುತ್ತದೆ—ಸೋತವರಿಗೆ ಸಹಾಯ ಮಾಡಲು ಮುಂಬರುತ್ತದೆ, ಮುಂದಿನ ಸಾರಿ ಜಯ ಗಳಿಸಲು ಏನು ಮಾಡಬೇಕೆಂಬುದನ್ನು ಹೇಳಿಕೊಡುತ್ತದೆ. ಹಣದ ಲಾಭ ಬಾರದಿದ್ದಲಾಗಲೂ ಜನ ಕೆಲಸ ಮಾಡುತ್ತಾರೆ! ಏನಾದರಾಗಲಿ, ಸಮಾಜವಾದಿ ಯೋಜಿತ ಅರ್ಥವ್ಯವಸ್ಥೆಯಲ್ಲಿ ಒಳ್ಳೆಯ ಯತ್ನಕ್ಕೆ ಉಚಿತಾರ್ಥ (ಬೋನಸ್), ಪಾರಿತೋಷಿಕ, ಉಚಿತ ರಜಾ ಮುಂತಾದವುಗಳ ರೂಪದಲ್ಲಿ

[1] Quoted in Webbs, *op. cit.*, vol. II, p. 758.

ಬಹುಮಾನ ಕೊಡದಿರಲು ಯಾವ ಕಾರಣವೂ ಇಲ್ಲ—ಎಂಬುದಾಗಿ ರಷ್ಯನರು ಹೇಳುತ್ತಾರೆ. ರಷ್ಯದ ಆರ್ಥಿಕ ಜೀವನದಲ್ಲಿ ಇವೆಲ್ಲಾ ಸಾಮಾನ್ಯ.

ಲಾಭದ ಪ್ರೇರಣೆ ಇಲ್ಲದೆ ಜನರಿಂದ ಕೆಲಸ ಮಾಡಿಸುವ ಯತ್ನದಲ್ಲಿ ರಷ್ಯನ್ನರು ಯಶಸ್ವಿಯಾಗುತ್ತಿದ್ದಾರೆಂದು 'ಮ್ಯಾಂಚೆಸ್ಟರ್ ಗಾರ್ಡಿಯನ್' ಪತ್ರಿಕೆಗಂತೂ ಮನವರಿಕೆಯಾಗಿದೆ. ೧೯೩೬ರ ಫೆಬ್ರುವರಿ ೨೦ರಂದು ಅದರ ಸಂಪಾದಕೀಯದಲ್ಲಿ ಇದರ ಪ್ರಸ್ತಾಪವಿದೆ. "ಸಾಮೂಹಿಕ (ಸಮಷ್ಟಿ) ಒಡೆತನ ಬದುಕುತ್ತಿದೆ. ಕಾರ್ಮಿಕರಿಗೆ ಹೊಸ ಬಗೆಯ ರಾಷ್ಟ್ರ ಪ್ರೇಮವನ್ನು, ಹೊಸ ಬಗೆಯ ಪ್ರೇರಣೆಗಳನ್ನು ಅದು ಕಲಿಸುತ್ತಿದೆ. ಈ ಮಾತನ್ನು ಸಂಶಯಾತ್ಮ ಜಗತ್ತು ಒಪ್ಪಿಕೊಳ್ಳಲೇಬೇಕು. ಸಮಾಜವಾದ ಜನಕರ ಅಥವಾ ಪ್ರವಾದಿಗಳ ಸಮಾಜವಾದವಲ್ಲದಿರಬಹುದು ಇದು. ಆದರೆ ಇದು ಕೆಲಸ ಮಾಡುತ್ತಿದೆ."[1]

ಮೇಲಾಟ ಇಲ್ಲದಿದ್ದರೆ ಪ್ರಯೋಗ, ಸಾಹಸ, ನೂತನ ವಿಧಾನದ ಅನ್ವಯ—ಇವಕ್ಕೆ ಪ್ರಚೋದನೆಯೇ ಇರುವುದಿಲ್ಲವೆಂಬ ವಾದಕ್ಕೆ ಉತ್ತರವಾಗಿ ರಷ್ಯನರು ಇಷ್ಟು ಮಾತ್ರ ಹೇಳುವರು: "ನಮ್ಮ ಸಾಧನೆಯನ್ನು ನೋಡಿ." ರಷ್ಯದಲ್ಲಿ ಪ್ರತಿ ಕ್ಷೇತ್ರದಲ್ಲೂ ಪ್ರಯೋಗ ಪರಿಶೀಲನೆಗಾಗಿ ವೆಚ್ಚಮಾಡುತ್ತಿರುವಷ್ಟು ಹಣ, ಕೈಕೊಳ್ಳುತ್ತಿರುವ ಶ್ರಮ—ಇವು ಬೇರೆ ಯಾವ ದೇಶದಲ್ಲೂ ಇಲ್ಲ. ಆರ್ಥಿಕ ಜೀವನದ ಮೇಲೆ ತಾವು ಸಂಪೂರ್ಣ ಹತೋಟಿ ಹೊಂದಿರುವುದರಿಂದ, ಬಂಡವಾಳವಾದಿ ರಾಷ್ಟ್ರಗಳಲ್ಲಿ ಸಾಮಾನ್ಯವಾಗಿ ಮಾಡಲು ಧೈರ್ಯವಿಲ್ಲದ ಹೊಸ ವಿಚಾರ, ಹೊಸ ವಿಧಾನಗಳನ್ನು ಜಾರಿಮಾಡುವ ಸಾಹಸ ಕೈಕೊಳ್ಳಬಹುದು—ಎಂಬುದಾಗಿ ಅವರ ಭಾವನೆ. ವೆಬ್ ದಂಪತಿಗಳು ಹೇಳಿರುವ ಈ ದೊಡ್ಡ ಮಾತು ಈ ವಾದವನ್ನೇ ಸಿದ್ಧಪಡಿಸುತ್ತದೆ: "ದೊಡ್ಡ ಸಣ್ಣ ವಿಚಾರಗಳಲ್ಲಿ ಉತ್ಸಾಹ ಹೀನತೆಯಿಲ್ಲ. ಹೊಸ ಬೆಳವಣಿಗೆಗಳಲ್ಲಿ ನಷ್ಟ ಸಂಭವವನ್ನೆದುರಿಸುವ ಎದೆಗಾರಿಕೆ ಇಲ್ಲದಿಲ್ಲ. ಸೋವಿಯೆಟ್ ಕಮ್ಯೂನಿಸಮ್ಮು ಎಲ್ಲ ಕ್ಷೇತ್ರಗಳಲ್ಲೂ ಸಂಭ್ರಮದಿಂದ ತೊಡಗುವ ಉತ್ಸಾಹ ಹೊಂದಿರುವುದು ಸ್ಪಷ್ಟವಾಗಿದೆ....ಕೈಗಾರಿಕೆ, ವಿಜ್ಞಾನ, ಕಲೆಯ ನಾನಾ ಪ್ರಕಾರ, ಸಾಮಾಜಿಕವ್ಯವಸ್ಥೆ ಇವುಗಳಲ್ಲಿ ಬದಲಾವಣೆಯ ಇಚ್ಛೆಯ, ಸಾಹಸಪ್ರಿಯತೆಯ ಅತಿರೇಕವನ್ನೇ ಕಾಣಬಹುದು. ಈ ವಿಚಾರದಲ್ಲಿ ಈ ದೇಶ ಸಂಯುಕ್ತಸಂಸ್ಥಾನವನ್ನೂ ಮೀರಿಸುತ್ತದೆ."[2]

ರಾಷ್ಟ್ರೀಯ ಯೋಜನೆಯ ಬಗ್ಗೆ ಅರ್ಥಶಾಸ್ತ್ರಜ್ಞರ ಆಕ್ಷೇಪಣೆ ಬೇರೆ ರೀತಿಯದು. ರಾಷ್ಟ್ರೀಯ ಯೋಜನೆ ಇದ್ದಲ್ಲಿ ನಿರುಪಾಧಿಕ ಪೇಟೆ ಇರಲಾರದು—ಎಂದು ಅವರ ವಾದ. ನಿರುಪಾಧಿಕ ಪೇಟೆ ಇಲ್ಲದ್ದರಿಂದ ಬೆಲೆಯ ವ್ಯವಸ್ಥೆ ಅಸಾಧ್ಯ. ಬೆಲೆಯ ವ್ಯವಸ್ಥೆ ಇಲ್ಲದಿದ್ದರೆ ವಿವೇಚನಾಯುಕ್ತ ಅರ್ಥವ್ಯವಸ್ಥೆಗೆ ಸಲಾಮು ಹೊಡೆದಂತೆ. ಪದಾರ್ಥಗಳ ಬೇಡಿಕೆಗೆ ಅನುಗುಣವಾಗಿ ಅವುಗಳ ದುರ್ಲಭತೆಯ ಅಳತೆ ಮಾಡುವ ಸಾಧನ ಬೆಲೆ ವ್ಯವಸ್ಥೆ. ಇಲ್ಲದಿದ್ದರೆ ಯಾವ ಪದಾರ್ಥ ಎಷ್ಟು ತಯಾರಿಸಬೇಕೆಂಬ ತೀರ್ಮಾನ ಕೇವಲ ನಿಷ್ಪ್ರಮಾಣಕ,

[1] *Manchester Guardian*, Feb. 20, 1936.
[2] Webbs, *op. cit.*, pp. 794, 795.

ಅವ್ಯವಸ್ಥಿತ, ಆದ್ದರಿಂದ ಅಲಾಭಕರ. ಬೆಲೆಗಳ ಕೈಮುರ ಇಲ್ಲದ್ದರಿಂದ, ಇತರ ಪದಾರ್ಥಗಳಷ್ಟು ಜರೂರಿಲ್ಲದ ಪದಾರ್ಥಗಳನ್ನೇ ತಯಾರಿಸಬಹುದು. ಬಂಡವಾಳ ವ್ಯವಸ್ಥೆಯಲ್ಲಿ ಯಾದರೋ, ದೀರ್ಘಕಾಲದಲ್ಲಿ, ಪೇಟೆ ಬೆಲೆಗೆ ಅನುಸಾರವಾಗಿ ಉತ್ಪಾದನ ಕಾರ್ಯ ಸಾಗುತ್ತದೆ. ಒಂದು ಪದಾರ್ಥದ ಬೇಡಿಕೆ ಹೆಚ್ಚಾದರೆ ಬೆಲೆ ಏರುತ್ತದೆ; ಕಡಮೆಯಾದರೆ ಬೆಲೆ ಇಳಿಯುತ್ತದೆ. ಎಂದರೆ, ಜನರ ಅಗತ್ಯಕ್ಕೆ ಅನುಸಾರವಾಗಿ ಪದಾರ್ಥಗಳನ್ನು ತಯಾರಿಸುವ, ಬಿಡುವ ತೀರ್ಮಾನ ಸಾಧ್ಯ. ಈ ಬಗೆಯ ಬೆಲೆಯ ವ್ಯವಸ್ಥೆ ಇಲ್ಲದಾಗ, ಜನರ ಅಪೇಕ್ಷೆ ಪೂರೈಸಲು ನಿಮ್ಮ ಬಂಡವಾಳ ಎಲ್ಲಿ ಹೂಡಬೇಕೆಂಬುದನ್ನು ಹೇಗೆ ನಿರ್ಣಯಿಸುವಿರಿ ?—ಎಂದು ಕೇಳುತ್ತಾರೆ ಅರ್ಥಶಾಸ್ತ್ರಜ್ಞರು.

ಬೆಲೆ ವ್ಯವಸ್ಥೆ ಏನು ಮಾಡುತ್ತಿದೆಯೆಂದು ಇಂದು ಹೇಳುವರೋ ಆ ಕೆಲಸವನ್ನು ಅದು ಇಂದು ಮಾಡುತ್ತಿಲ್ಲ—ಎಂದು ರಾಷ್ಟ್ರೀಯ ಯೋಜಕರು ಈ ಟೀಕೆಗೆ ಉತ್ತರ ನೀಡುತ್ತಾರೆ. ಎಲ್ಲ ಜನಕ್ಕೂ ಏನು ಬೇಕೋ ಎಷ್ಟು ಬೇಕೋ ಅದಕ್ಕೆ ಅನುಗುಣವಾಗಿ ಬೆಲೆಗಳು ಚಲಿಸುವುದಿಲ್ಲ. ಕೆಲವು ಜನರು ಎಷ್ಟು ಕೊಡಬಲ್ಲರೋ ಅದಕ್ಕನುಗುಣವಾಗಿಯೇ ಬೆಲೆಯ ಚಲನೆ—ಎಂದು ಇವರ ವಾದ. ತಮಗೆ ಬೇಕಾದ್ದಕ್ಕೆ ಕೊಡಲು ಹಣ ಇರುವ ಜನರ ಅಗತ್ಯ ಪೂರೈಸುವುದು ಮಾತ್ರ ಬೆಲೆ ವ್ಯವಸ್ಥೆಯ ಕೆಲಸ—ಎಂಬುದಾಗಿ ಇವರು ಹೇಳುವರು.

ಪೇಟೆಯ ಬೆಲೆ—ಎಂದರೆ ಇರತಕ್ಕ ಸಾಧನಗಳ ವಿವೇಚನಾಯುಕ್ತ ಬಳಕೆ—ಬಂಡವಾಳ ವ್ಯವಸ್ಥೆಯಲ್ಲಿ ಏರುಪೇರಾಗುತ್ತದೆ, ಎಂದು ರಾಷ್ಟ್ರೀಯ ಯೋಜಕರು ಹೇಳುವರು. ಅಧಿಕ ಸುಂಕ, ಸಹಾಯದ್ರವ್ಯ, ಏಕಸ್ವಾಮ್ಯ—ಮುಂತಾದವುಗಳ ಹಾವಳಿಯ ಪರಿಣಾಮವಾಗಿ ಹತೋಟಿಗೆ ಒಳಪಟ್ಟ ಬೆಲೆಗಳಿಂದ ಹೀಗಾಗುತ್ತದೆ. ಪ್ರತಿಯೊಂದೂ ಸರಳವಾಗಿ ಕೆಲಸ ಮಾಡುವ ಬೆಲೆಯ ವ್ಯವಸ್ಥೆ ಇರುವ ಶುದ್ಧ ಬಂಡವಾಳ ವ್ಯವಸ್ಥೆ ವಾಸ್ತವ ಜೀವನದಲ್ಲಿ ಸಾಧ್ಯವೇ ಇಲ್ಲ. ಬೂರ್ಷ್ವಾ ಅರ್ಥಶಾಸ್ತ್ರಜ್ಞರ ಪುಸ್ತಕದಲ್ಲಿ ಮಾತ್ರ ಇದು ಸಾಧ್ಯ. ಇದು ಅಷ್ಟೊಂದು ಸಮರ್ಪಕವಾಗಿ ಕೆಲಸ ಮಾಡಿದ್ದರೆ, ಬಿಕ್ಕಟ್ಟುಗಳೇ ಸಂಭವಿಸುತ್ತಿರಲಿಲ್ಲ.

ಇನ್ನು ವಾಸ್ತವವಾಗಿ ಏನು ಸಾಧ್ಯವೆಂಬುದನ್ನು ರಾಷ್ಟ್ರೀಯ ಯೋಜಕರು ಹೇಳುತ್ತಾರೆ. ಬೇಡಿಕೆಗೆ ತಕ್ಕಂತೆ ಸರಬರಾಯಿಯನ್ನು ಹೊಂದಿಸುವ ವಿಧಾನವೊಂದು ತಮ್ಮಲ್ಲಿದೆಯೆಂದು ಇವರು ಹೇಳುವರು. ಜನಕ್ಕೆ ಏನು ಬೇಕು ? ಅವರಿಗೆ ಏನು ದೊರಕುತ್ತದೆ ?—ಎಂಬುದನ್ನು ಕುರಿತ, ಇವೆರಡಕ್ಕೂ ಸಂಬಂಧಿಸಿದ ವರದಿಗಳನ್ನು ಗೋಸ್ಪ್ಲಾನು ದೇಶದ ಎಲ್ಲೆಡೆಗಳಿಂದಲೂ ತಿಂಗಳಿಗೊಮ್ಮೆ, ವಾರಕ್ಕೊಮ್ಮೆ, ದಿನದಿನವೂ ಕೂಡ, ಪಡೆಯುತ್ತದೆ. ಇಪ್ಪತ್ತು ಲಕ್ಷ ಜತೆ ಪಾದರಕ್ಷೆ ಹಾಗೂ ಐದು ಲಕ್ಷ ಹೊಸ ಮನೆ ಕಟ್ಟಬೇಕೆಂದು ಯೋಜನೆಯಲ್ಲಿ ನಿರ್ದೇಶಿಸಿದೆಯೆನ್ನಿ. ಜನಕ್ಕೆ ಬೇಕಿದ್ದಷ್ಟು ಪಾದರಕ್ಷೆಗಳಿಲ್ಲವೆಂದೂ, ಹೊಸ ಮನೆಗಳಿಗೆ ಹೋಗುವ ತೆರಿಗೆ ಲಾಭಯನ್ನು ವಹಿಸಲು ಜನ ಒಪ್ಪರೆಂದೂ ಆಕ್ಷೇಪಣೆಗಳು ಬಂದವೆನ್ನಿ. ಯೋಜನೆಯಲ್ಲಿ ಧಾರಾಳವಾದ ಸ್ಥಿತಿಸ್ಥಾಪಕತೆ ಇದೆ. ಅದು ಕಾಠಿಣ್ಯಕ್ಕೇ ನಿಷ್ಠುರತೆಗೇ ಜೋತುಬೀಳಬೇಕಾಗಿಲ್ಲ. ಗೃಹನಿರ್ಮಾಣದಿಂದ ಪಾದರಕ್ಷೆಯ ತಯಾರಿಕೆಯ ಕೆಲಸಕ್ಕೆ ಕಾರ್ಮಿಕರನ್ನೂ ಬಂಡವಾಳವನ್ನೂ ವರ್ಗಾಯಿಸಬಹುದು. ಇದು ಒಮ್ಮೆಗೇ ಸಾಧ್ಯ

ವಾಗುವುದಿಲ್ಲ. ಆದರೆ ಬಂಡವಾಳವಾದಿ ಸಮಾಜದಲ್ಲಿ ಸಾಧ್ಯವಾಗುವಷ್ಟೇ ವೇಗವಾಗಿ ಇದು ಸಾಧ್ಯ.

ಬಂಡವಾಳವಾದಿ ಟೀಕಾಕಾರರು ಪ್ರಶ್ನೆ ಕೇಳಲು ಇನ್ನೊಂದು ಅವಕಾಶವಿದೆ. ವಿದ್ಯುತ್ ಚಾಲಿತ ಕಲ್ಲಿದ್ದಲು ಅಗೆವ ಯಂತ್ರ, ಸ್ವಯಂ ಚಾಲಿತ ಮಗ್ಗ—ಇವೆರಡಕ್ಕೂ ಅಗತ್ಯ ವಾದಷ್ಟು ಬಂಡವಾಳ ಇಲ್ಲದಾಗ, ಕಲ್ಲಿದ್ದಲು ಅಗೆವ ಯಂತ್ರವನ್ನೇ ಸ್ಥಾಪಿಸಲು ಗೋಸ್ಪ್ಲಾನು ತೀರ್ಮಾನ ಕೈಕೊಳ್ಳುವಂತೆ ಮಾಡುವುದು ಯಾವುದು ? ಇರುವ ಮಿತ ಸಾಧನಗಳನ್ನು ಪರಸ್ಪರ ಸ್ಪರ್ಧಿಸುವ ಉದ್ದೇಶಗಳಿಗಾಗಿ ಹಂಚುವ ಸಮಸ್ಯೆಯನ್ನು ಕೇಂದ್ರಾಧಿಕಾರ ತೀರ್ಮಾನಿಸಬೇಕು. ರಷ್ಯನರು ಈ ಮಾತು ಒಪ್ಪಲೇಬೇಕು. ಸಮಾಜವಾದಿ ರಾಷ್ಟ್ರೀಯಯೋಜನೆ ಹಾಗೂ ನಿರುಪಾಧಿಕ ಪೇಟೆ—ಇವೆರಡನ್ನೂ ಹೊಂದಿರುವುದು ಸಾಧ್ಯವಿಲ್ಲದೇ ಹೋದರೂ, ನಿರುಪಾಧಿಕ ಪೇಟೆ ಇಲ್ಲದ್ದರಿಂದ ಸಾಧನಗಳನ್ನು ಬಹು ಉಪ ಯುಕ್ತವಾದ ರೀತಿಯಲ್ಲಿ ಬಳಸುವುದು ಸಾಧ್ಯವಿಲ್ಲವೆಂದೇ ಒಪ್ಪಿಕೊಂಡರೂ, ಇತರ ಹಲವು ಪ್ರಯೋಜನಗಳು ಇದರಿಂದ ಉಂಟು—ಎಂಬುದಾಗಿ ಅವರು ವಾದಿಸುವರು. ಕೇವಲ ಕೆಲವರಿಗಾಗಿ ಲಾಭ, ಅದು ಎಷ್ಟೇ ಹೆಚ್ಚಿನ ಪ್ರಮಾಣದಲ್ಲಿ ಬರಲಿ, ಅದಕ್ಕಿಂತ, ಹಲವರಿಗೆ ಸುಭದ್ರತೆ, ಸಮತೆ, ಶೋಷಣೆಯ ನಿವಾರಣೆ ಇವು ಹೆಚ್ಚು ಒಳ್ಳೆಯದಲ್ಲವೆ? ಯೋಜನೆಯ ವ್ಯವಸ್ಥೆಯ ಅಡಿಯಲ್ಲಿ ಸುರಕ್ಷಿತವಾದ, ವಿವೇಕಯುತವಾದ, ಸುವ್ಯವಸ್ಥಿತವಾದ ಜೀವನ, ಯೋಜನಾರಹಿತ ಅರ್ಥವ್ಯವಸ್ಥೆಯ ಬಿಕ್ಕಟ್ಟು ಉತ್ಕರ್ಷಗಳಿಗಿಂತ ಮೇಲಲ್ಲವೆ ? ಹೀಗೆನ್ನು ವರು ಅವರು.

೧೯೩೦ರಲ್ಲಿ ಸಂಭವಿಸಿದ ಕುಸಿತವನ್ನು 'ಜಾಗತಿಕ ಬಿಕ್ಕಟ್ಟು' ಎಂದು ಸಾಮಾನ್ಯವಾಗಿ ಹೇಳುವುದುಂಟು. ಜನಜಂಗುಳಿಯಲ್ಲಿ ನಿರುದ್ಯೋಗ ಸಂಕಟಗಳನ್ನು ತಂದ ಈ ಉತ್ಪಾದನೆಯ ಪಾರ್ಶ್ವವಾಯು ಭೂಗೋಳದ ಎಲ್ಲ ಭಾಗಗಳಿಗೂ ಸಾಂಕ್ರಾಮಿಕವಾಗಿ ಬಡಿಯಿತು—ಎಂಬುದಾಗಿ ನಾವು ಕೇಳಿದ್ದೇವೆ. ಆದರೆ ರಷ್ಯನರು ಈ ಮಾತು ನಿಜವಲ್ಲವೆಂದು ವಾದಿಸು ತ್ತಾರೆ. ಸಮುದ್ರದ ಉಬ್ಬರದಂತೆ ಈ ಬಿಕ್ಕಟ್ಟು ಎಲ್ಲ ದೇಶಗಳನ್ನೂ ಗುಡಿಸಿತು—ಒಂದು ದೇಶವನ್ನು ಮಾತ್ರ ಬಿಟ್ಟು. ಸೋವಿಯೆಟ್ ಒಕ್ಕೂಟದ ತೀರವನ್ನೂ ಇದು ಬಡಿಯಿತು—ಆದರೆ ಹಿಂತಿರುಗಿತು. ಸಮಾಜವಾದಿ ಯೋಜಿತ ಅರ್ಥವ್ಯವಸ್ಥೆಯ ಅಡ್ಡಕಟ್ಟೆಯ ಹಿಂದೆ—ಕಾಪುಗೋಡೆಯ ಹಿಂದೆ—ರಷ್ಯನರು ಸುರಕ್ಷಿತವಾಗಿದ್ದರು.

* * *

ಈ ಅಧ್ಯಾಯ ಬರೆಯುತ್ತಿದ್ದ ಸಮಯದಲ್ಲಿ, ಸೋವಿಯೆಟ್ ಒಕ್ಕೂಟದ ಹೊಸ ಸಂವಿಧಾನ ರಚನೆ ಮುಗಿಯಿತೆಂಬ ಸುದ್ದಿ ಬಂತು. ಈ ಹೊಸ ಸಂವಿಧಾನ ತಕ್ಷಣವೇ ಜಾರಿಗೆ ಬರಲಿಲ್ಲ. ಚರ್ಚೆ ವಿಮರ್ಶೆ ತಿದ್ದುಪಡಿಗಳಿಗಾಗಿ ಸೋವಿಯೆಟ್ ಒಕ್ಕೂಟದ ಆದ್ಯಂತ ಎಲ್ಲ ಜನಕ್ಕೂ ಇದನ್ನು ಮೊದಲು ಒಪ್ಪಿಸಲಾಯಿತು. ಅದರ ಮೊದಲ ಕರಡಿನಲ್ಲಿ ಇದ್ದ ಕೆಲವು ಮುಖ್ಯ ನಿಬಂಧನೆಗಳಿವು :

"ನಿಬಂಧನೆ ೧: ಸೋವಿಯೆಟ್ ಸಮಾಜವಾದಿ ಲೋಕರಾಜ್ಯಗಳ ಒಕ್ಕೂಟ, ಕಾರ್ಮಿಕರ ಹಾಗೂ ರೈತರ ಸಮಾಜವಾದಿ ರಾಜ್ಯ.

"ನಿಬಂಧನೆ ೪: ಬಂಡವಾಳವಾದಿ ಅರ್ಥವ್ಯವಸ್ಥೆಯ ವಿಸರ್ಜನೆ, ಉತ್ಪಾದನ ಸಾಧನ ಸಲಕರಣೆಗಳ ಖಾಸಗಿ ಒಡೆತನದ ರದ್ದು, ಮನುಷ್ಯನಿಂದ ಮನುಷ್ಯನ ಶೋಷಣೆಯ ನಿವಾರಣೆ—ಇವುಗಳ ಮೇಲೆ ಭದ್ರವಾಗಿ ಸ್ಥಾಪಿತವಾದ, ಉತ್ಪಾದನ ಸಾಧನ ಸಲಕರಣೆಗಳ ಸಾಮಾಜಿಕ ಒಡೆತನವೇ ಸೋವಿಯೆಟ್ ಒಕ್ಕೂಟದ ಆರ್ಥಿಕ ಅಸ್ತಿಭಾರ.

"ನಿಬಂಧನೆ ೧೧: ಸಾರ್ವಜನಿಕ ಸಂಪತ್ತನ್ನು ಅಧಿಕಗೊಳಿಸುವ ಉದ್ದೇಶದಿಂದ, ದುಡಿಮೆಗಾರರ ಭೌತಿಕ ಸಾಂಸ್ಕೃತಿಕ ಮಟ್ಟವನ್ನು ಕ್ರಮವಾಗಿ ಮೇಲೇರಿಸಲು, ಸೋವಿಯೆಟ್ ಒಕ್ಕೂಟದ ಸ್ವಾತಂತ್ರ್ಯವನ್ನೂ ಅದರ ರಕ್ಷಣಾ ಶಕ್ತಿಯನ್ನೂ ಹೆಚ್ಚಿಸಲು, ರಚಿತವಾದ ರಾಷ್ಟ್ರೀಯ ಆರ್ಥಿಕ ಸರಕಾರಿ ಯೋಜನೆಯು ಸೋವಿಯೆಟ್ ಒಕ್ಕೂಟದ ಆರ್ಥಿಕ ಜೀವನವನ್ನು ನಿರ್ಧರಿಸಿ ನಿರ್ದೇಶಿಸುತ್ತದೆ.

"ನಿಬಂಧನೆ ೧೧೮ : ಸೋವಿಯೆಟ್ ಒಕ್ಕೂಟದ ಪ್ರಜೆಗಳು ಕೆಲಸ ಮಾಡುವ ಹಕ್ಕು ಪಡೆದಿರುತ್ತಾರೆ. ಮಾಡಿದ ಕೆಲಸದ ಗುಣ ಪ್ರಮಾಣಾನುಗುಣ ಸಂಭಾವನೆಯೊಡನೆ ಖಾತರಿಯಾದ ಕೆಲಸ ಪಡೆಯುವ ಹಕ್ಕು ಹೊಂದಿದ್ದಾರೆ.

"ರಾಷ್ಟ್ರೀಯ ಅರ್ಥವ್ಯವಸ್ಥೆಯ ಸಮಾಜವಾದಿ ಸಂಘಟನೆ, ಸೋವಿಯೆಟ್ ಸಮಾಜದ ಉತ್ಪಾದಕ ಬಲಗಳ ದೃಢವಾದ ಬೆಳೆವಣಿಗೆ, ಆರ್ಥಿಕ ಬಿಕ್ಕಟ್ಟುಗಳ ನಿವಾರಣೆ, ನಿರುದ್ಯೋಗದ ನಾಶ—ಇವುಗಳೇ ಈ ಕೆಲಸದ ಹಕ್ಕಿನ ಹಿಂದೆ ಇರುವ ಭರವಸೆ."[1]

[1] *New York Times*, June 26, 1936.

## ೨೨. ಅವರು ಸಕ್ಕರೆಯ ಮುಷ್ಟಿ ಬಿಡುವರೆ?

'ಸಮೃದ್ಧಿಯ ನಡುವೆ ಬಡತನ' ಎಂಬ ವಿರೋಧಾಭಾಸವನ್ನು ಪಾಶ್ಚಾತ್ಯ ಜಗತ್ತು ಎದುರಿಸಬೇಕಾಗಿತ್ತು.

ಈ ಬಗ್ಗೆ ಏನು ಮಾಡಲಾದೀತು?

ಬಂಡವಾಳ ವ್ಯವಸ್ಥೆಯ ಕುಸಿತದಿಂದ ಸಂಭವಿಸಿದ ಅವ್ಯವಸ್ಥೆಯಿಂದ ಸುವ್ಯವಸ್ಥೆಯನ್ನು ಏರ್ಪಡಿಸಲು ಏನಾದರೂ ಮಾಡಬೇಕಿತ್ತು; ಈ ಕುಸಿತ ತುಂಬಾ ಸಂಪೂರ್ಣವಾಗಿತ್ತು— ಉದರಿ ವ್ಯವಸ್ಥೆ ಚೂರಾಗಿತ್ತು; ಕೈಗಾರಿಕೆಗೆ ಲಕ್ವಾ ಬಡಿದಿತ್ತು; ಲಕ್ಷಾಂತರ ಮಂದಿ ನಿರುದ್ಯೋಗಿಗಳಾಗಿದ್ದರು; ರೈತರು ನಿರ್ಗತಿಕರಾಗಿದ್ದರು; ಸಮೃದ್ಧಿಯ ನಡುವೆ ಬಡತನ— ಅಹುದು, ಏನಾದರೂ ಮಾಡಬೇಕಿತ್ತು. ಹಳೆಯ ವ್ಯವಸ್ಥೆ 'ಲೇಸೆ ಫೇರಿನ'ಮೇಲೆ, ಸರಕಾರದ ತಾಟಸ್ಥ್ಯನೀತಿಯ ಮೇಲೆ, ರಚಿತವಾಗಿತ್ತು. ಈ ಹಳೆಯ ವ್ಯವಸ್ಥೆ ನಾಶವಾಗಿತ್ತು. ಬದಲಾವಣೆ ಅಗತ್ಯವಾಗಿತ್ತು. 'ಲೇಸೆ ಫೇರಿ'ನ ಬದಲು, ತಾಟಸ್ಥ್ಯನೀತಿಯ ಬದಲು, ವ್ಯವಸ್ಥಿತ ನಿಬಂಧನೆ, ನಿಯಂತ್ರಣ. ತನ್ನ ಹಾದಿ ಹೋಗಲು ಬಿಟ್ಟ ಅರ್ಥಜೀವನವು, ವಿನಾಶದಲ್ಲಿ ಕೊನೆಗೊಂಡಿತ್ತು. ಅದನ್ನು ಅವರ ಗೊಡವೆಗೆ ಬಿಡುವುದು ಇನ್ನು ಸಾಧ್ಯವಿಲ್ಲ. ಅದನ್ನು ಕೈ ಹಿಡಿದು ನಡಸಬೇಕು.

"ನಾವು ಯೋಜನೆ ಹಾಕಿಕೊಳ್ಳಬೇಕು!"

ಸಮೃದ್ಧಿಯ ನಡುವೆ ಬಡತನದ ವಿರೋಧಾಭಾಸ ಎದುರಿಸಬೇಕಾಗಿದ್ದ ಪಾಶ್ಚಾತ್ಯ ಜಗತ್ತು, ರಷ್ಯದಂತೆ, ಯೋಜನೆಯ ಕಡೆಗೆ ಕಣ್ಣು ಹೊರಳಿಸಿತು. ಆದರೆ ಒಂದು ವ್ಯತ್ಯಾಸ.

ಸೋವಿಯೆಟ್ ಒಕ್ಕೂಟದಲ್ಲಿ, ಬಳಸುವುದಕ್ಕಾಗಿ ಪದಾರ್ಥದ ಉತ್ಪಾದನೆ. ಬಂಡವಾಳವಾದಿ ದೇಶಗಳಲ್ಲಿ ಲಾಭಕ್ಕಾಗಿ ಉತ್ಪಾದನೆ. ಸೋವಿಯೆಟ್ ಒಕ್ಕೂಟದಲ್ಲಿ ಉತ್ಪಾದನ ಸಾಧನಗಳ ಖಾಸಗಿ ಒಡೆತನ ವರ್ಜ್ಯ, ಬಂಡವಾಳವಾದಿ ದೇಶಗಳಲ್ಲಿ ಉತ್ಪಾದನ ಸಾಧನಗಳ ಖಾಸಗಿ ಒಡೆತನ ಪವಿತ್ರ. ಸೋವಿಯೆಟ್ ರಾಜ್ಯದಲ್ಲಿ ಯೋಜನೆ ಸರ್ವವ್ಯಾಪಕ—ಆರ್ಥಿಕ ಚಟುವಟಿಕೆಯ ಎಲ್ಲ ಕ್ಷೇತ್ರಗಳನ್ನೂ ಆಲಿಂಗಿಸುವಂಥದು. ಬಂಡವಾಳವಾದಿ ರಾಷ್ಟ್ರಗಳಲ್ಲಿ ಯೋಜನೆ ತೇಪೆಯ ಕೆಲಸ, ಇತರ ಭಾಗಗಳನ್ನು ಬಿಟ್ಟು ಒಂದೊಂದಕ್ಕೇ ಸಂಬಂಧಿಸಿದ್ದು. ಸೋವಿಯೆಟ್ ಒಕ್ಕೂಟದಲ್ಲಿ ಯೋಜನೆಯ ರಚಕರು ಅನುಭೋಕ್ತೃಗಳೇ —ಗ್ರಾಹಕರೇ—ಅನುಭೋಕ್ತೃಗಳಿಗಾಗಿಯೇ ಯೋಜನೆಯನ್ನು ರಚಿಸುವರು. ಬಂಡವಾಳವಾದಿ ರಾಷ್ಟ್ರಗಳಲ್ಲಿ ಯೋಜನೆಯ ರಚಕರು ಉತ್ಪಾದಕರು, ಉತ್ಪಾದಕರಿಗಾಗಿ ಯೋಜನೆ ರಚಿಸುವರು.

ಸಮೃದ್ಧಿಯ ನಡುವೆ ಬಡತನದ ವಿರೋಧಾಭಾಸದಿಂದ ದಂಗುಬಡಿದ ಬಂಡವಾಳವಾದಿ ದೇಶಗಳು ಈ ಸಮಸ್ಯಾಪರಿಹಾರಕ್ಕಾಗಿ ಒಂದು ಯೋಜನೆ ರಚಿಸಿದುವು.

**ಸಮೃದ್ಧಿಯ ನಾಶವೇ** ಈ ಯೋಜನೆಯ ಉದ್ದೇಶ.

"ಹತ್ತಿ ಬೆಳೆಯನ್ನು ಉತ್ತು ಹಾಕಿದರು," "ಸಾವಿರಾರು ಹಂದಿ ಮರಿಗಳ ಕೊಲೆ," "ಗೋಧಿ ಬೆಳೆಯ ಪ್ರದೇಶದ ಇಳಿತಾಯ," "ಕಬ್ಬಿನ ಗದ್ದೆಗಳಲ್ಲಿ ಉತ್ಪಾದನೆಯ ಕಡಿತ," —ಮುಂತಾಗಿ ಪತ್ರಿಕೆಗಳ ತಲೆಬರಹಗಳನ್ನು ನೀವು ಓದಿದ ನೆನಪಿರಬಹುದು. ಇದನ್ನೆಲ್ಲ ಮಾಡಿದ್ದು ಯೋಜನೆಗೆ ಅನುಸಾರವಾಗಿಯೇ. 'ವ್ಯವಸಾಯ ಸುಧಾರಣಾ ಕಾರ್ಯ ನಿರ್ವಹಣ ವ್ಯವಸ್ಥೆ'ಯು ಸಂಯುಕ್ತ ಸಂಸ್ಥಾನದಾದ್ಯಂತ ಹತ್ತಿ, ಗೋಧಿ, ಧಾನ್ಯ, ಹಂದಿ, ಹೊಗೆಸೊಪ್ಪು, ಸಕ್ಕರೆ ಮುಂತಾದ ನಾನಾ ಬೆಳೆಗಳ ಉತ್ಪಾದಕರೊಡನೆ ಒಪ್ಪಂದ ಮಾಡಿಕೊಂಡಿತು. ಇವರು ತಮ್ಮ ಉತ್ಪಾದನೆ ಕಡಿಮೆ ಮಾಡಿದರೆ—ಎಂದರೆ ಇವರು **ಸಮೃದ್ಧಿನಾಶ** ಮಾಡುವ ಯೋಜನೆಗೆ ಅನುಗುಣವಾಗಿ ನಡೆದರೆ—ಇವರಿಗೆ ಹಣ ದೊರಕುತ್ತಿತ್ತು.

ವಸ್ತುನಾಶ ಅಥವಾ ಮಿತಿ ಕಲ್ಪನೆಯ ಇಂಥ ಯೋಜನೆಗಳು ಇತರ ದೇಶಗಳಲ್ಲೂ ಜಾರಿಗೆ ಬಂದುವು. ೧೯೩೬ರ ಜೂಲೈ ೩ರಂದು ದಕ್ಷಿಣ ಅಮೆರಿಕದ ಈ ಸುದ್ದಿಯನ್ನು ನ್ಯೂಯಾರ್ಕ್ ಟೈಮ್ಸ್ ಪತ್ರಿಕೆ ಪ್ರಕಟಿಸಿತು :

> **ಬ್ರೆಜಿಲ್ಲು ತನ್ನ ಕಾಫಿ ಬೆಳೆಯಲ್ಲಿ ಶೇ. ೩೦ ರಷ್ಟು ನಾಶಗೊಳಿಸಲಿದೆ**
>
> **ಸರ್ಕಾರ ಪಡೆದುಕೊಂಡ ೬೬,೦೦,೦೦೦ ಮೂಟೆಗಳಿಗೆ ಬೆಳೆಗಾರರಿಗೆ ಮೂಟೆಗೆ ಐದು ಮಿಲ್ರೇಸ್‌ನಂತೆ ಹಣ**
>
> ರೈಯೋ ಡೀ ಜನೀರೋ, ಜೂಲೈ ೨—ಕಳೆದ ವರ್ಷದ ಉಳಿಕೆಯಾದ ನಲವತ್ತು-ಐವತ್ತು ಲಕ್ಷ ಮೂಟೆಯ ಜತೆಗೆ ೧೯೩೬-೩೭ ರಲ್ಲಿ ೨,೨೦,೦೦,೦೦೦ ಮೂಟೆ ಕಾಫಿ ಬೆಳೆಯುವ ನಿರೀಕ್ಷೆ ಇರುವುದರಿಂದ ಇಲ್ಲಿನ ರಾಷ್ಟ್ರೀಯ ಕಾಫಿ ಇಲಾಖೆಯು ಇದರಲ್ಲಿ ಶೇಕಡ ೩೦ ರಷ್ಟನ್ನು ನಾಶ ಮಾಡಬೇಕೆಂದು ಗೊತ್ತು ಮಾಡಿದೆ. ಹೀಗೆ ನಾಶ ಮಾಡಿದ ಕಾಫಿಗೆ ಮೂಟೆಗೆ ಐದು ಮಿಲ್ರೇಸ್‌ನಂತೆ ಬೆಳೆಗಾರರಿಗೆ ಇದು ಪಾವತಿ ಮಾಡುತ್ತಿದೆ.[1]

ಸಾಗರದಿಂದೀಚೆ, ಯೂರೋಪಿನಲ್ಲೂ, ಇದೇ ಕತೆ. ಇಂಗ್ಲೆಂಡಿನ ಈ ಕತೆ ಪತ್ರಿಕೆಯ ಮೊದಲ ಪುಟದ ಸುದ್ದಿ :

---

[1] *New York Times*, July 3, 1936.

**ಸಂಯುಕ್ತ ಸಂಸ್ಥಾನದಂತೆ ಬ್ರಿಟನ್ನಿನಲ್ಲೂ ಉತ್ಪಾದನೆಯ ಕಡಿತ: ಬೆಲೆ ಹೆಚ್ಚಿಸುವ ಸಲುವಾಗಿ ಜವಳಿ ಉತ್ಪಾದನೆ ಕಡಿಯಲು ಮುಸೂದೆ**

**ಚಾರ್ಲ್ಸ್ ಎ. ಸೆಲ್ಡನ್‌ರಿಂದ**

ಲಂಡನ್, ಫೆ ೪—ಅನಾವಶ್ಯಕವಾದ ಹತ್ತಿ ಕದಿರುಗಳನ್ನು ತೆಗೆದುಹಾಕಲು ಮುಸೂದೆಯೊಂದರ ದ್ವಿತೀಯ ಪಠನಕ್ಕೆ ಕಾಮನ್ಸ್ ಸಭೆಯು ಒಪ್ಪಿಗೆಯೊಂದಿಗೆ ಗ್ರೇಟ್ ಬ್ರಿಟನ್ನೂ ಕೂಡ ಈಗ ಅಧಿಕ ಬೆಲೆಗಳ ಸ್ಥಾಪನೆಗಾಗಿ ಪ್ರೆಸಿಡೆಂಟ್ ರೂಸ್‌ವೆಲ್ಟರ ನೀತಿಯನ್ನೇ ಅನುಸರಿಸಲಾರಂಭಿಸಿದೆ....

ಹೆಚ್ಚುವರಿಯ ನಿವಾರಣೆಗಾಗಿ ಈ ದೇಶದಲ್ಲಿ ಹಿಂದೆಯೂ ಯತ್ನಗಳು ನಡೆದಿವೆ. ಉದಾಹರಣೆಗೆ ಹಡಗು ಹಾಗೂ ಕಲ್ಲಿದ್ದಲು ಕೈಗಾರಿಕೆ. ಆದರೆ ಈ ಯತ್ನಗಳ ಹಿಂದೆ ಶಾಸನದ ಬಲವಿರಲಿಲ್ಲ. ಹತ್ತಿ ಕದಿರು ಮುಸೂದೆ ಈ ಬಲ ದೊರಕಿಸಿಕೊಡುತ್ತದೆ. ಹತ್ತಿ ಜವಳಿ ಕೈಗಾರಿಕೆಯ ಸರ್ವತೋಮುಖ ಹಿತದೃಷ್ಟಿಯಿಂದ ಎಷ್ಟು ಅಗತ್ಯವೋ ಅದಕ್ಕಿಂತ ಹೆಚ್ಚಾಗಿರುವ ಕದಿರುಗಳ ಬಳಕೆ ತಪ್ಪಿಸಿ ಅವನ್ನು ಕೊಳ್ಳಲು ಅಧಿಕಾರ ಹೊಂದಿರುವ ಸರಕಾರಿ ಮಂಡಲಿಯೊಂದನ್ನು ಈ ಮುಸೂದೆಯಲ್ಲಿ ಸೂಚಿಸಲಾಗಿದೆ.

ತಾತ್ಕಾಲಿಕ ಅಂದಾಜುಗಳ ಪ್ರಕಾರ, ಸುಮಾರು ೧,೦೦,೦೦,೦೦೦ ಕದಿರುಗಳನ್ನು—ಎಂದರೆ ಈಗ ಕಾರ್ಯನಿರತವಾಗಿರುವ ಸಂಖ್ಯೆಯಲ್ಲಿ ಕಾಲು ಭಾಗವನ್ನು ತೆಗೆದು ಹಾಕಲಾಗುವುದು.....

ಲ್ಯಾಂಕಷೈರಿನ ಬಹು ಮಂದಿ ಉತ್ಪಾದಕರು ಈ ಮುಸೂದೆಗೆ ಸಮ್ಮತಿ ಸೂಚಿಸಿದ್ದಾರೆ. ಆದರೆ ಕಾರ್ಮಿಕರೂ ಪಾರ್ಲಿಮೆಂಟಿನ ಸದಸ್ಯರೂ ಇದನ್ನು ನಿಷೇಧಿಸಿದ್ದಾರೆ. ಈ ಮುಸೂದೆ ಜಾರಿಗೆ ಬಂದರೆ ಕೆಲಸ ಕಳೆದುಕೊಳ್ಳಬಹುದಾದವರ ಬಗ್ಗೆ ಯಾವ ಕ್ರಮವೂ ಇದರಲ್ಲಿ ಇಲ್ಲವೆಂದು ಇವರ ಆಕ್ಷೇಪಣೆ.[1]

[1] *New York Times*, February 5, 1936.

ಆದರೆ ಏಕೆ ?

ಸಮೃದ್ಧಿ ನಿವಾರಣೆಯ ಈ ಎಲ್ಲ ಯೋಜನೆಗಳ ಉದ್ದೇಶವಾದರೂ ಏನು ?

ಲೇಸೇ-ಫೇರ್ ಬಂಡವಾಳ ವ್ಯವಸ್ಥೆಯ—ಸರಕಾರದ ತಾಟಸ್ಥ್ಯ ನೀತಿಯ ಬಂಡವಾಳ ವ್ಯವಸ್ಥೆಯ—ಉದ್ದೇಶ ಲಾಭಸಂಪಾದನೆಯೆಂಬುದು ನಿಮ್ಮ ನೆನಪಿನಲ್ಲಿರಬಹುದು. ನಿರುಪಾಧಿಕ ಬಂಡವಾಳ ವ್ಯವಸ್ಥೆ ಮುರಿಸುಬಿತ್ತು. ಯೋಜನೆಯ ಯತ್ನಗಳು ನಡೆದುವು. ಯೋಜಿತ ಬಂಡವಾಳ ವ್ಯವಸ್ಥೆಯ ಉದ್ದೇಶ ಅದೇ—ಲಾಭ ಸಂಪಾದನೆ. ಸಮೃದ್ಧಿಯ ವ್ಯವಸ್ಥೆಯಲ್ಲಿ, ಅನುಭೋಗಕ್ಕಿಂತ ಉತ್ಪಾದನೆ ಮುಂದೆ ನಡೆದಾಗ, ಸರಬರಾಯಿ ಮಿತಗೊಳಿಸುವುದರಿಂದಲೇ ಲಾಭ ಸಂಪಾದನೆ ಸಾಧ್ಯ. ಅನುಭೋಗಕ್ಕಾಗಿ ಹೆಚ್ಚು ಪದಾರ್ಥ ಸೃಷ್ಟಿಸುವುದರಿಂದ ಬೆಲೆಗಳು ಇಳಿಯುವುವು. ಪ್ರತಿಯಾಗಿ, ಉತ್ಪಾದನೆಯ ಮೇಲೆ ನಿರ್ಬಂಧ ಹಾಕುವುದರಿಂದ ಬೆಲೆಗಳು ಏರುವುವು, ಲಾಭ ಹೆಚ್ಚುವುದು. ಆದ್ದರಿಂದ ಬಂಡವಾಳವಾದಿ ಯೋಜನೆಯೆಂದರೆ ಅಭಾವದ ಯೋಜನೆ.

ಈ ಮಾತು ನಿಜವಾಗಿರುವುದರಿಂದಲೇ, ಸ್ಟೋಲ್‌ಬರ್ಗ್ ಮತ್ತು ವಿಂಟನ್ ಎಂಬವರು ಅಮೆರಿಕದ 'ನ್ಯೂ ಡೀಲ್' ಅಥವಾ 'ಹೊಸ ಹಂಚಿಕೆ'ಯ ಬಗ್ಗೆ ಮಾಡಿದ ಅಪಹಾಸದಲ್ಲಿ ಸ್ವಲ್ಪ ಔಚಿತ್ಯವಿದೆ. "ಹೊಸ ಹಂಚಿಕೆಯಲ್ಲಿ ಇದುವರೆಗೆ ಮಾಡಿದ್ದೆಲ್ಲ ಭೂಕಂಪದಿಂದ ಇನ್ನೂ ಚೆನ್ನಾಗಿ ಆಗುತ್ತಿತ್ತು. ಇಂಥ ಕೆಲಸ ಬಿಟ್ಟು ಇದು ಬೇರೇನನ್ನೂ ಮಾಡಿಲ್ಲ. ಪಶ್ಚಿಮ ತೀರದಿಂದ ಪೂರ್ವ ತೀರದ ವರೆಗೆ ಒಂದು ಪಕ್ಕಾ ಭೂಕಂಪ ಆಗಿದ್ದಿದ್ದರೆ, ಅಭಾವ ಪರಿಸ್ಥಿತಿ ಇನ್ನೂ ಚೆನ್ನಾಗಿ ಪುನರ್ ಸ್ಥಾಪಿಸಲ್ಪಡುತ್ತಿತ್ತು. ಉಳಿದುಕೊಂಡ ಎಲ್ಲ ಜನರನ್ನೂ 'ಬೃಹತ್ ವ್ಯಾಪಾರ'ದ ಕೀರ್ತಿಕಲಶಸ್ಥಾಪನೆಯ ಕೆಲಸದಲ್ಲಿ ಹೆಚ್ಚು ಸಮರ್ಪಕವಾದ ರೀತಿಯಲ್ಲಿ ಹಚ್ಚಬಹುದಿತ್ತು. 'ಹೊಸ ಹಂಚಿಕೆ'ಗಿಂತ ಇದು ಹೆಚ್ಚು ಶೀಘ್ರವಾಗಿ, ಅಷ್ಟೊಂದು ಗಲಭೆಯಿಲ್ಲದೆ, ಈ ಕೆಲಸ ಮಾಡಬಹುದಿತ್ತು."[1]

ಬಂಡವಾಳವಾದಿ ಯೋಜನೆಗೆ ಇನ್ನೊಂದು ಮುಖ್ಯ ಲಕ್ಷಣವಿದೆ. ಅದು ತೇಪೆಯ ಯೋಜನೆ.

ರಾಷ್ಟ್ರೀಯ ಪುನರುದ್ಧಾರಕಾರ್ಯ ವಾಷಿಂಗ್ಟನ್ನಿನಲ್ಲಿ ನಡೆಯುತ್ತಿದ್ದಾಗ 'ಅಮೆರಿಕನ್ ಗಾರ್ಡಿಯನ್' ಪತ್ರಿಕೆಯ ಚತುರ ಸಂಪಾದಕ 'ಆಸ್ಕಾರ್ ಅಮೆರಿಂಜರ'ನ ಬಗ್ಗೆ ಒಂದು ಮನೋರಂಜಕ ಹಾಗೂ ಬೋಧಪ್ರದ ಕತೆ ಪ್ರಚಾರವಾಗುತ್ತಿತ್ತು. ಈ ಪುನರುದ್ಧಾರ ಕಾರ್ಯಕ್ಕೆ ಸಂಬಂಧಿಸಿದ ಒಬ್ಬ ಮುಖ್ಯ ಅಧಿಕಾರಿಯ ಕಚೇರಿಯಲ್ಲಿ ಬೆಳಗಿನಲ್ಲಿ ನಡೆಯುತ್ತಿದ್ದ ಕೆಲಸವನ್ನು ಬಹು ಆಸಕ್ತಿಯಿಂದ ಈತ ವೀಕ್ಷಿಸುತ್ತಿದ್ದ. ಕೈಗಾರಿಕೋದ್ಯಮಿಗಳ ಒಂದು ಅವ್ಯಾಹತ ಪ್ರವಾಹವೇ ಕಚೇರಿಗೆ ಬರುತ್ತಿತ್ತು. ಇವರು ತಮ್ಮ ವ್ಯಾಪಾರ ಕುಸಿದ ಕತೆಯನ್ನು ತೋಡಿಕೊಳ್ಳುತ್ತಿದ್ದರು. ಹೆಣಕ್ಕೆ ಜೀವ ಬರಿಸುವ ಉದ್ದೇಶದಿಂದ ರಚಿತವಾದ 'ಯೋಜನೆ'ಗಳನ್ನು ಕುರಿತ ಮಾತನ್ನು ಇವನು ಆಸಕ್ತಿಯಿಂದ ಆಲಿಸಿದ. ಮೌನವಾಗಿ

---

[1] B. Stolberg and W. J. Vinton, *The Economic Consequences of the New Deal,* p. 85. Harcourt, Brace and Company, N.Y., 1935.

ಇವನ್ನೆಲ್ಲ ಕೆಲವು ಘಂಟೆಗಳ ಕಾಲ ಈತ ವೀಕ್ಷಿಸಿದ ಮೇಲೆ, ಅವನು ಇನ್ನು ಸುಮ್ಮನೆ ಕುಳಿತಿರಲಾರದೆ ಹೋದ. ಆತ ನೆಗೆದು ನಿಂತು, ಯೋಜನಾಧಿಕಾರಿಯನ್ನು ಸಂಬೋಧಿಸಿ ಕೂಗಿ ಹೇಳಿದ: "ರೋಗಿಗೆ ಸಿಡುಬು ಎದ್ದಿದೆ. ನೀವು ಒಂದೊಂದು ಗುಳ್ಳೆಗೂ ಔಷಧಿ ಮಾಡುತ್ತಿದ್ದೀರಲ್ಲಾ!"

ಇಡೀ ರಾಷ್ಟ್ರೀಯ ಅರ್ಥವ್ಯವಸ್ಥೆಯ ಸಮಗ್ರ ಯೋಜನೆ ಅಗತ್ಯವೆಂದು ಅವೆರಿಂಜರ್ ನಂಬಿದ್ದ. ಅದಕ್ಕೆ ಪ್ರತಿಯಾಗಿ "ಹಡಗು ಸಾಗಣೆ ಕೈಗಾರಿಕೆಗೇ ಒಂದು ಯೋಜನೆ," "ವ್ಯವಸಾಯಗಾರರಿಗೇ ಒಂದು ಯೋಜನೆ," "ಕಾರ್ಮಿಕರಲ್ಲಿ ಕೊಳ್ಳುವ ಶಕ್ತಿ ಹೆಚ್ಚಿಸಲೇ ಒಂದು ಯೋಜನೆ"—ಹೀಗೆ ಬೇರೆ ಬೇರೆ ಯೋಜನೆ ಇದ್ದದ್ದನ್ನು ಆತ ಕಂಡ. ರಾಷ್ಟ್ರದ ಸಾವಿರದೊಂದು ಕಲಾಪಗಳನ್ನೂ ಒಂದು ಸ್ವಾವಲಂಬಿ ಸಮಗ್ರ ಚೌಕಟ್ಟಿನಲ್ಲಿ ಅಳವಡಿಸುವ ಉದ್ದೇಶಪೂರ್ವಕ ಪ್ರಯತ್ನವಾದ ರಷ್ಯದ ಯೋಜನೆಯ ಮಾದರಿಗೆ ಸ್ವಲ್ಪವಾದರೂ ಹೋಲುವ ಯೋಜನೆ ಅಮೆರಿಕದಲ್ಲಾಗಲಿ, ಬೇರಾವ ದೇಶದಲ್ಲಾಗಲಿ, ಇರಲಿಲ್ಲ.

ರಷ್ಯದಲ್ಲಿ ಇದು ಸಾಧ್ಯವಾಗಿರುವುದಕ್ಕೆ ಒಂದೇ ಕಾರಣ: ಉತ್ಪಾದನ ಸಾಧನಗಳ ಖಾಸಗಿ ಒಡೆತನ ಇಲ್ಲಿ ರದ್ದಾಗಿದೆ. ಶ್ರೀಮಾನ್ ಆಸ್ತಿಯೊಡೆಯನ ಕಾಲು ತುಳಿಯುವ ಭಯದಿಂದ, ಏನನ್ನೂ ಮಾಡುವ ಸ್ವಾತಂತ್ರ್ಯ ಯೋಜನಾಮಂಡಲಿಗೆ ಇಲ್ಲದಲ್ಲಿ ವ್ಯಾಪಕ ಯೋಜನೆ ಅಸಾಧ್ಯ. ಸೋವಿಯೆಟ್ ಒಕ್ಕೂಟದಲ್ಲಿ ಗೋಸ್ಪ್ಲಾನು ಮಾಡಿದ ಒಂದು ತೀರ್ಮಾನ ಪರಿಣಾಮಕಾರಿಯಾಗಿರುತ್ತದೆ. ಏಕೆಂದರೆ ಆ ತೀರ್ಮಾನ ಆಗಿರುವುದು ಒಂದೇ ಒಂದು ಸಂಸ್ಥೆಯ ಪರವಾಗಿ—ಆ ಸಂಸ್ಥೆಯೆಂದರೆ ಇಡೀ ಸೋವಿಯೆಟ್ ರಾಷ್ಟ್ರೀಯ ಅರ್ಥವ್ಯವಸ್ಥೆ. ಬಂಡವಾಳವಾದಿ ದೇಶದಲ್ಲಿ ಮಾಡಿದ ಒಂದು ತೀರ್ಮಾನ ಪರಿಣಾಮ ರಹಿತ. ಏಕೆಂದರೆ ಅದು ಆಸ್ತಿಯೊಡೆಯರ ಒಂದು ಗುಂಪಿಗೆ—ಉದಾಹರಣೆಗೆ ಕ್ಯೂಬಾದಿಂದ ಸಕ್ಕರೆ ಆಯಾತ ಮಾಡುವವರಿಗೆ—ಅನುಕೂಲಕರವಾಗಿದ್ದರೆ, ಆಸ್ತಿಯೊಡೆಯರ ಇನ್ನೊಂದು ಗುಂಪು—ಅಮೆರಿಕದ ಸಕ್ಕರೆ ಉತ್ಪಾದಕರು—ಇದನ್ನು ವಿರೋಧಿಸುತ್ತದೆ. ರಾಷ್ಟ್ರದ ಆಡಳಿತ ವ್ಯವಸ್ಥೆಗೆ ವಿಧೇಯತೆಯನ್ನು ಒತ್ತಾಯಪಡಿಸುವ ಶಕ್ತಿ ಇಲ್ಲದ್ದರಿಂದ, ಅದು ಅತ್ತಿತ್ತ ತೂಗಾಡಬೇಕಾಗುತ್ತದೆ. ಒಮ್ಮೆ ಈ ಗುಂಪಿಗೆ ಅಷ್ಟು ರಿಯಾಯಿತಿಯನ್ನೂ, ಇನ್ನೊಮ್ಮೆ ಇನ್ನೊಂದು ಗುಂಪಿಗೆ ಅಷ್ಟನ್ನೂ ಕೊಡುತ್ತಿರಬೇಕಾಗುತ್ತದೆ.

"ಯೋಜನೆಯೋ, ಇಲ್ಲವೋ?" ಎಂಬ ಪುಸ್ತಕದಲ್ಲಿ ಶ್ರೀಮತಿ ಬಾರ್ಬರಾ ವುಟ್ಟನ್ ಎಂಬಾಕೆ, ಉತ್ಪಾದನ ಸಾಧನಗಳು ಖಾಸಗಿ ಒಡೆತನದಲ್ಲೇ ಉಳಿದರೆ ಏನಾದೀತೆಂಬುದನ್ನು ವಿವರಿಸಿದ್ದಾಳೆ: "ಉತ್ಪಾದನೆಯ ಸಾಧನಗಳೂ ತತ್ಫಲವಾದ ಪದಾರ್ಥಗಳೂ, ಈ ಸಾಧನ ಗಳನ್ನು ಬಳಸಿದ್ದರಿಂದಲೂ ಪದಾರ್ಥಗಳನ್ನು ಮಾರಿದ್ದರಿಂದಲೂ ದೊರಕುವ ಆರ್ಥಿಕ ಲಾಭದಲ್ಲಿ ಆಸಕ್ತಿ ಹೊಂದಿರುವವರ ಕೈಯಲ್ಲಿರುವ ವರೆಗೂ—ಖಾಸಗಿ ಜನರ ಒಡೆತನಕ್ಕೆ ಸೇರಿರುವ ವರೆಗೂ—ಪ್ರಮುಖ ಆರ್ಥಿಕ ತೀರ್ಮಾನಗಳನ್ನೆಲ್ಲಾ ಸಂಸ್ಥೆ ಸಂಸ್ಥೆಗೂ ಪ್ರತಿ ಕೈಗಾರಿಕೆಗೂ ಬೇರೆ ಬೇರೆಯಾಗಿ—ಇವುಗಳನ್ನಾಳುವ ಜನ ತಂತಮ್ಮ ಕೈಗಾರಿಕೆ ಅಥವಾ ಸಂಸ್ಥೆಗಳಿಗೆ ಅನುಕೂಲಕರವಾದ ಮಾರ್ಗ ಯಾವುದೆಂಬುದರ ಬಗ್ಗೆ ಹೊಂದಿರುವ

ಅಭಿಪ್ರಾಯಗಳಿಗೆ ಅನುಸಾರವಾಗಿ, ಕೈಕೊಳ್ಳಬೇಕಾಗುತ್ತದೆ....ಉಕ್ಕಿನ ಕಾರ್ಖಾನೆಗಳಿಗೆ ಸ್ವರ್ಗ ಸೃಷ್ಟಿಸುವ ದೃಷ್ಟಿಯಿಂದಲೇ ಉಕ್ಕಿನ ಉತ್ಪನ್ನದ ಯೋಜನೆ ರಚಿತವಾಗುತ್ತದೆ. ಮದ್ಯ ತಯಾರಕನಿಗೆ ಸ್ವರ್ಗ ಸೃಷ್ಟಿಸುವ ದೃಷ್ಟಿಯಿಂದಲೇ ಬಿಯರ್ ಮದ್ಯದ ಉತ್ಪನ್ನದ ಯೋಜನೆ ರಚಿತವಾಗಬೇಕು. ಕಲಾವಿದರಿಗೆ ಭೂಸ್ವರ್ಗ ಕಲ್ಪಿಸುವ ದೃಷ್ಟಿಯಿಂದಲೇ ಚಿತ್ರ ನಿರ್ಮಾಣ ಯೋಜನೆ ನಿಷ್ಕರ್ಷೆಯಾಗುತ್ತದೆ. ಇವೆಲ್ಲದರ ಅಂತಿಮ ಪರಿಣಾಮ ವೇನು? ಯೋಜನಾಬದ್ಧ ಸಮಾಜದ ಬದಲು ಯೋಜನಾ ವಿರುದ್ಧ ಸಮಾಜವೆಂದು ಇದನ್ನು ಬಣ್ಣಿಸಬಹುದು.

ಬಂಡವಾಳಿಗರ ಹಿತ ದೃಷ್ಟಿಯಿಂದಲೇ ರಚಿತವಾದ ಕೇಂದ್ರೀಯ ಯೋಜನೆಯ ಹಾದಿ ಯಲ್ಲೇ ಖಾಸಗಿ ಒಡೆತನ ಪ್ರತಿಬಂಧಕವೆನಿಸಿದರೆ, ಇಡೀ ರಾಷ್ಟ್ರದ ಹಿತ ದೃಷ್ಟಿಯಿಂದ ಕೈಕೊಂಡ ಯೋಜನಾ ಕಾರ್ಯವನ್ನು ಇದು ಎಷ್ಟರ ಮಟ್ಟಿಗೆ ತಡೆಯಬಹುದೆಂಬುದನ್ನು ಊಹಿಸಿ! ಹೊಲಸು ಕೇರಿಯ ನಿರ್ಮೂಲೀಕರಣದ ವಿಚಾರವನ್ನೇ ತೆಗೆದುಕೊಳ್ಳಿ—ಉದಾ ಹರಣೆಗೆ. ಹೊಲಸು ಕೇರಿಯ ನಿರ್ಮೂಲೀಕರಣ ಅಗತ್ಯವೆಂದು ಪ್ರತಿಯೊಬ್ಬರೂ ಒಪ್ಪಿ ಯಾರು. ಅದೇನೋ ಸರಿ. ಹಾಗಿದ್ದರೆ ಅದರ ನಿರ್ಮೂಲೀಕರಣ ಏಕಾಗುತ್ತಿಲ್ಲ? ಈ ಸ್ಪಷ್ಟ ಸಾರ್ವಜನಿಕಾವಶ್ಯಕತೆಯ ಹಾದಿಯಲ್ಲಿನ ಅಡಚಣೆ ಯಾವುದು? ಇದಕ್ಕೆ ಉತ್ತರ ಸುಲಭ. ಖಾಸಗಿ ಒಡೆತನ—ವೈಯಕ್ತಿಕಲಾಭ. ಹೊಲಸು ಕೇರಿಯಲ್ಲಿನ ಮನೆಗಳ ಬಾಡಿಗೆಯಿಂದ ಹಣ ಗಳಿಸುವ ಕೆಲವು ಮನೆಯೊಡೆಯರಿದ್ದಾರೆ. ಹೊಲಸು ಕೇರಿಯಲ್ಲಿನ ಜನ ವಾಸಿಸಲು ಹೊಸ ಹಾಗೂ ಉತ್ತಮ ಗೃಹಗಳ ನಿರ್ಮಾಣ ಆದರೆ ತಮ್ಮ ಬಾಡಿಗೆ ಕಡಮೆಯಾಗುವ ಮನೆಯೊಡೆಯರೂ ಇದ್ದಾರೆ. ಆದ್ದರಿಂದಲೇ ಹೊಲಸು ಕೇರಿಯ ನಿರ್ಮೂಲೀಕರಣಕ್ಕೆ ಅಡಚಣೆ. ಅಥವಾ, ಅದು ಜಾರಿಗೆ ಬಂದರೂ ಕೂಡ, ಅದು ನಿಂತು ನಿಂತು, ನಿಧಾನವಾಗಿ, ಆದರೆ ಎಂದಿಗೂ ಅಸಂಪೂರ್ಣವಾಗಿ, ನಿರ್ವಹಿಸಲ್ಪಡುತ್ತದೆ. ಹೀಗೆ ಖಾಸಗಿ ಒಡೆತನದ ಹಿತಾಸಕ್ತಿಗಳಿಂದ ಸಾಮುದಾಯಕ ಅನುಕೂಲಕ್ಕೆ ಅಡ್ಡಿ.

ಯೋಜನಾಬದ್ಧ ಅರ್ಥವ್ಯವಸ್ಥೆಯಲ್ಲಿ ಇದು ಎಷ್ಟೊಂದು ಭಿನ್ನವಾಗಿ ಕೆಲಸ ಮಾಡುವು ದೆಂಬುದನ್ನು ನೋಡಿ. ಒಂದು ನಗರದ ನಕ್ಷೆಯನ್ನು ಯೋಜಕರು ತಮ್ಮ ಮುಂದೆ ಇಟ್ಟು ಕೊಳ್ಳುತ್ತಾರೆ. ಈ ನಕ್ಷೆಯಲ್ಲಿ ಒಂದು ಭಾಗ ಕಪ್ಪು—ಜನರು ಬಹು ಹೀನವಾದ ಅನಾ ರೋಗ್ಯಕರವಾದ ಪರಿಸ್ಥಿತಿಯಲ್ಲಿ ವಾಸಿಸುವ ಹೊಲಸು ಕೊಂಪೆಯ ಪ್ರದೇಶ ಅದು. ಇದಕ್ಕೇನು ಮಾಡಬೇಕು? ಹೊಲಸು ಕೊಂಪೆಯ ನಿರ್ಮೂಲವಾಗಬೇಕು. ಒಳ್ಳೆಯದು. ಕಪ್ಪು ಬಣ್ಣದ ಪ್ರದೇಶಕ್ಕೆ ಅಡ್ಡಲಾಗಿ ಸೀಸದ ಕಡ್ಡಿಯಲ್ಲಿ ಗೆರೆ ಎಳೆಯಿರಿ. ತಪ್ಪು ಗುರುತು ಹಾಕಿ. ಹೊಲಸು ಕೇರಿಗೆ ಧಿಕ್ಕಾರ! ತಕ್ಷಣ ಕಾರ್ಯಾರಂಭ. ಖಾಸಗಿ ಒಡೆತನ ಇದರ ಹಾದಿಯಲ್ಲಿ ಇಲ್ಲದಿದ್ದಾಗ, ಅಗತ್ಯದ ಮನವರಿಕೆಯಾದ ತಕ್ಷಣವೇ, ಅದರ ಹಿಂದೆಯೇ, ಕ್ರಮ—ಯೋಜನೆಯ ರಚನೆ.

ಖಾಸಗಿ ಒಡೆತನ ಹಾದಿಗೆ ಅಡ್ಡ ಬಂದಾಗ, ಅದರ ಹಿತಕ್ಕೆ ಅನುಸಾರವಾಗಿರುವ ಕೆಲಸವೇ ಮೊದಲು. ರಾಷ್ಟ್ರಹಿತ ಕಾರ್ಯ ಕಾಡಿಗೆ ಹೋಗಲಿ. ಯಾರಿಗೆ ಬೇಕು? ೧೯೩೭ರ

ಆಗಸ್ಟ್ ೨೮ ರಂದು 'ಲಂಡನ್ ಟೈಮ್ಸ್' ಪತ್ರಿಕೆ ತನ್ನ ಸಂಪಾದಕೀಯದಲ್ಲಿ ಈ ನೀತಿಯನ್ನು ಖಂಡಿಸಿತು. ಕೆಲಸ ಬಯಸುತ್ತಿದ್ದ ಅಸಂಖ್ಯಾತ ನಿರುದ್ಯೋಗಿಗಳು ಇದ್ದ ಉತ್ತರ ಇಂಗ್ಲೆಂಡಿನಿಂದ ದಕ್ಷಿಣಕ್ಕೆ ಕಾರ್ಖಾನೆಗಳನ್ನು ವರ್ಗಾಯಿಸುವುದರಿಂದ, "ಮೈದಾನ ಹೊಲ ಕಾಡುಗಳನ್ನು" ಆವರಿಸಿಕೊಳ್ಳುವ ಈ ಹೊಸ ಕಾರ್ಖಾನೆಗಳಿಂದ, "ಗ್ರಾಮಾಂತರ ಪ್ರದೇಶದ ಸೌಂದರ್ಯ" ಹಾಳಾಗುವುದೆಂಬ ಕಾರಣದಿಂದ ಈ ವರ್ಗಾವಣೆಯ ಬಗ್ಗೆ ಈ ಪತ್ರಿಕೆ ಆತಂಕಗೊಂಡಿತ್ತು. ಟೈಮ್ಸ್ ಪತ್ರಿಕೆ ಈ ರೀತಿ ಕಳವಳ ವ್ಯಕ್ತಪಡಿಸಿತು. "ಕೈಗಾರಿಕೆಯ ಪ್ರದೇಶಗಳನ್ನೂ ಅಲ್ಲಿನ ಜನರನ್ನೂ ಆರ್ಥಿಕವಾಗಿ ಧ್ವಂಸಮಾಡಿ, ಇತರ ಪ್ರದೇಶಗಳ ಜನರೂ ಹೊಸ ಕೈಗಾರಿಕೆಗಳಿಂದ ಸಂಪತ್ತು ಗಳಿಸುವುದೂ ವರ್ಧಿಸುವುದೂ ಸಾಮಾನ್ಯವಾಗಿದೆ. ಅಸ್ಪಷ್ಟವಾದರೂ ಪ್ರಧಾನವಾದ ರಾಷ್ಟ್ರೀಯ ಹಿತ ಯಾವುದು ?—ಎಂಬುದನ್ನು ಸ್ಥಾಪಿಸಲು ಯಾವ ಕೇಂದ್ರೀಕೃತ ನಿರ್ದೇಶನವೂ ಇಲ್ಲ.

"ಹೆಚ್ಚು-ಸಂಖ್ಯೆಯ ಜನರ ನೇಮಕ ಮಾಡಿಕೊಳ್ಳಬಹುದಾದ, ಉತ್ಪಾದನೆ ಯಾವ ಒಂದು ವಿಶಿಷ್ಟ ಪ್ರದೇಶಕ್ಕೇ ಗಂಟುಬೀಳಬೇಕಾಗಿಲ್ಲದ, ಹೊಸ ಕೈಗಾರಿಕೆಯೊಂದನ್ನು ಕಂಡುಹಿಡಿದಿದ್ದೇ ಆದರೆ, ಆ ಕೈಗಾರಿಕೆಯನ್ನು ಮುಗ್ಗಟ್ಟಿಗೆ ಒಳಗಾದ ಪ್ರದೇಶದಲ್ಲಿ ಸ್ಥಾಪಿಸುವುದು ಉಚಿತ. **ಕೈಗಾರಿಕೆಯನ್ನು ಎಲ್ಲಿ ಸ್ಥಾಪಿಸಬೇಕೆಂಬ ತೀರ್ಮಾನ ಕೈಕೊಳ್ಳುವವರು ಸಾಮಾಜಿಕ ಅನುಕೂಲ್ಯಗಳಿಗೆ ಮಹತ್ವ ಕೊಡುವುದಿಲ್ಲವೆಂದು ಕಾಣುತ್ತದೆ.**"[1]

ಘರ್ಷಣೆ ಇರುವುದು ಇಲ್ಲೇ. ಪ್ರತಿಯೊಂದು ಕ್ಷೇತ್ರದಲ್ಲೂ, ಸಮಾಜಕ್ಕೆ ಒಳ್ಳೆಯದೆನಿಸಿದ್ದಕ್ಕೆ ಖಾಸಗಿ ಒಡೆತನದ ಹಿತಾಸಕ್ತಿಗಳಿಂದ ಅಡ್ಡಿ ಬರಬಹುದು. ಕೆಲವರಿಗೆ ಇವೇನೂ ಅಷ್ಟು ಮುಖ್ಯವಲ್ಲ. ಉತ್ಪಾದನ ಸಾಧನಗಳ ಖಾಸಗಿ ಒಡೆತನ ಹಾಗೂ ಹತೋಟಿಯ ಅನುಕೂಲಗಳು ಪ್ರತಿಕೂಲಗಳಿಗಿಂತ ಬಹು ಹೆಚ್ಚು—ಎನ್ನುತ್ತಾರೆ ಇವರು. ಕಳೆದ ೧೫೦ ವರ್ಷಗಳಲ್ಲಿ ಇಷ್ಟೊಂದು ಅಗಾಧ ಪ್ರಮಾಣ ವೈವಿಧ್ಯಗಳ ಪದಾರ್ಥಗಳನ್ನು ತಯಾರಿಸುವುದರಲ್ಲಿ (ಮುಖ್ಯವಾಗಿ ಸಂಯುಕ್ತ ಸಂಸ್ಥಾನದಲ್ಲಿ) ಜನಸಮೂಹಕ್ಕೆ ಅಷ್ಟೊಂದು ಉನ್ನತ ಜೀವನ ಮಟ್ಟ ಸ್ಥಾಪಿಸುವುದರಲಿ, ಬಂಡವಾಳ ವ್ಯವಸ್ಥೆ ಗಳಿಸಿರುವ ಅದ್ಭುತ ವಿಜಯವತ್ತ ಅವರು ಬೆಟ್ಟು ಮಾಡಿ ತೋರಿಸುವರು. ಉತ್ಪಾದಕರ ರಾಷ್ಟ್ರೀಯ ಸಂಸ್ಥೆ ಪ್ರಕಟಿಸಿರುವ, 'ಅಮೆರಿಕನ್ ಕೈಗಾರಿಕೆಗೆ ಪ್ರೋತ್ಸಾಹ' ಎಂಬುದರಲ್ಲಿ ಕಂಡುಬರುವ ಈ ಘೋಷಣೆಯಲ್ಲಿ ಆ ಸಂಸ್ಥೆ ಖಾಸಗಿ ಒಡೆತನದ ಕಂಭಕ್ಕೆ ತನ್ನ ಬಾವುಟ ಸಿಕ್ಕಿಸಿದೆ: "ಉತ್ಪಾದನ ವಿತರಣ ಜೀವನ ಸೌಲಭ್ಯಗಳ ಖಾಸಗಿ ಒಡೆತನ ಹಾಗೂ ಹತೋಟಿ ಅಗತ್ಯ. ವ್ಯಕ್ತಿ ಸ್ವಾತಂತ್ರ್ಯ ಹಾಗೂ ಪ್ರಗತಿಯನ್ನು ಉಳಿಸಿಕೊಳ್ಳಬೇಕಾದರೆ ಇದು ಬೇಕು. ಈ ಸೌಲಭ್ಯಗಳ ಒಡೆತನ ಅಥವಾ ಹತೋಟಿಯನ್ನು ಸರಕಾರ ಹೊಂದುವುದರಿಂದ ಯೋಜನಾಬದ್ಧ ಅರ್ಥವ್ಯವಸ್ಥೆ ಏರ್ಪಡುತ್ತದೆ. ಇಂಥ ಸಮಾಜ ಜಡವಾಗುತ್ತದೆ, ನಿರಂಕುಶ ಪ್ರಭುತ್ವವೆನಿಸುತ್ತದೆ....

[1] *London Times*, August 28, 1935.

"ಸರ್ಕಾರ ರಾಷ್ಟ್ರೀಯ ಆರ್ಥಿಕ ಯೋಜನೆ ಕೈಕೊಳ್ಳುವುದರಿಂದ ಕೆಲವರ ಕೈಯಲ್ಲಿ ಅಧಿಕಾರ ಕೇಂದ್ರೀಕರಿಸಿ, ಆ ಮೂಲಕ ಉತ್ಪಾದನೆ ಅನುಭೋಗಗಳ ಸಮತೂಕ ಏರ್ಪಡಿಸಲು ಯತ್ನಿಸುತ್ತದೆ. ಆದರೆ ಅಸಂಖ್ಯಾತ ಜನರ ವೈಯಕ್ತಿಕ ತೀರ್ಮಾನಗಳಿಂದ ನಿರ್ದೇಶಿಸಲ್ಪಟ್ಟ ಉದ್ಯಮಕ್ಕೆ ಇಡೀ ಜನಾಂಗದ ಕೌಶಲ ಬುದ್ಧಿಜ್ಞಾನಗಳ ಲಾಭ ದೊರಕುತ್ತದೆ. ಇಂಥ ವ್ಯವಸ್ಥೆಯಿಂದ ಆರ್ಥಿಕ ಸಾಮಾಜಿಕ ಪ್ರಗತಿ ಹೆಚ್ಚಾಗಿ ಸಾಧ್ಯವಾಗಿದೆ. ಎಲ್ಲ ಜನರ ಚಟುವಟಿಕೆಗಳನ್ನೂ ಯೋಜಿಸಿ, ನಿರ್ದೇಶಿಸಿ, ಪ್ರೋತ್ಸಾಹಿಸುವ ವಿವೇಕಪೂರಿತ ದೃಷ್ಟಿ ವಿವೇಚನೆಗಳು ಕೆಲವೇ ಜನರ ಗುಂಪಿಗೆ ಲಭಿಸುವುದು ಅಸಾಧ್ಯ...."[1]

ತಾವು ಜಗತ್ತಿನ ಮಹಾ ಯೋಜಕರೆಂದು ಹೇಳಿಸಿಕೊಳ್ಳುವ ಉತ್ಪಾದಕರು ಮೇಲೆ ಕೊಟ್ಟಿರುವ ಕೊನೆಯ ವಾಕ್ಯವನ್ನಾಡಿರುವುದು ನಿಜಕ್ಕೂ ಸೋಜಿಗವೇ ಸರಿ. ವ್ಯಾಪಾರ ಸಂಘಟನೆ ಯೋಜನೆಗಳ ಪವಾಡವನ್ನೇ ಸಾಧಿಸುವ ಕೈಗಾರಿಕೆನಾಯಕರು ಇವರು. ಪ್ರತ್ಯೇಕವಾಗಿ ತೆಗೆದುಕೊಂಡದ್ದೇ ಆದರೆ, ಇವರಲ್ಲಿ ಒಬ್ಬೊಬ್ಬರೂ ಜಗತ್ತಿನ ಹಲವು ರಾಷ್ಟ್ರಗಳ ಸಂಪತ್ತಿಗಿಂತ ಹೆಚ್ಚು ಬಂಡವಾಳ ಸಂಪತ್ತು ಹೊಂದಿರುವವರು. ಭೂಗೋಳದಲ್ಲೆಲ್ಲ ಹಬ್ಬಿರುವ ವ್ಯವಹಾರದ ಬಲೆ ಹರಡಿರುವವರು ಇವರು. ಈ ಜನ—ಪ್ರಮುಖ ಬಂಡವಾಳವಾದಿ ದೇಶದ ಪ್ರಮುಖ ಯೋಜನಾ ಪ್ರವೀಣರು—ತಮ್ಮ ಕೈಗಾರಿಕೆಗಳಿಗಾಗಿ ತಾವು ಬಹು ಜಾಣತನದಿಂದ ಏನನ್ನು ಮಾಡಿದ್ದಾರೋ ಅದನ್ನೇ ಇಡೀ ದೇಶದ ಎಲ್ಲ ಕೈಗಾರಿಕೆಗೂ ಮಾಡುವುದನ್ನು ಇಷ್ಟು ತೀವ್ರವಾಗಿ ವಿರೋಧಿಸುವುದು ಸೋಜಿಗವಲ್ಲವೆ ?

ರಾಷ್ಟ್ರೀಯ ಯೋಜನಾಬದ್ಧ ಅರ್ಥವ್ಯವಸ್ಥೆಯನ್ನು ಈ ಬಂಡವಾಳಿಗರು ಇಷ್ಟೊಂದು ವಿರೋಧಿಸುವುದಾದರೂ ಏಕೆ ?

ರಾಷ್ಟ್ರೀಯ ಯೋಜನಾಬದ್ಧ ಅರ್ಥವ್ಯವಸ್ಥೆಯಿಂದ ಅಂತಿಮವಾಗಿ ಖಾಸಗಿ ಆಸ್ತಿಯ—ತಮ್ಮ ಖಾಸಗಿ ಆಸ್ತಿಯ—ವಿಸರ್ಜನೆಯಾಗುವುದೆಂಬ ಕಾರಣದಿಂದ ಇವರ ಈ ವಿರೋಧವೆ ? ಜಿ. ಡಿ. ಎಚ್. ಕೋಲ್ ಎಂಬುವರು ತಮ್ಮ ಪುಸ್ತಕವಾದ "ಆರ್ಥಿಕ ಯೋಜನೆಯ ತತ್ವಗಳು" ಎಂಬುದರಲ್ಲಿ ಹೀಗೆ ಹೇಳಿದ್ದಾರೆ. "ಯೋಜನಾಬದ್ಧ ವ್ಯವಸ್ಥೆಯನ್ನು ಪ್ರತಿಪಾದಿಸುವ ತಮ್ಮ ಸಹ ಬಂಡವಾಳಿಗರು ಅಪಾಯಕಾರಿ ಪಾಷಂಡಿಗಳೆಂದು—ಸಂಪ್ರದಾಯ ಬಾಹಿರರೆಂದು—ಹಲವು ಬಂಡವಾಳಿಗರು ಭಾವಿಸುತ್ತಾರೆ....ಹಲವು ಮಾತುಗಾರ ಬಂಡವಾಳಿಗರು ಯೋಜನಾರಹಿತ ಅರ್ಥವ್ಯವಸ್ಥೆಯನ್ನು ಬಹು ತೀವ್ರವಾಗಿ ಪ್ರತಿಪಾದಿಸುತ್ತಾರೆ. ಏಕೆಂದರೆ, ಇದರ ಕುಂದುಗಳೇನೇ ಇರಲಿ, ಆಸ್ತಿಯ ಹಕ್ಕುಗಳನ್ನು ಎತ್ತಿ ಹಿಡಿಯುವ ಭರವಸೆ ನೀಡುವ ವ್ಯವಸ್ಥೆ ಇದೊಂದೇ ಎಂದು ಅವರ ಭಾವನೆ."[2]

ಸ್ಟೋಲ್‌ಬರ್ಗ್ ಮತ್ತು ವಿಂಟನ್ ಇವರು ಇದೇ ವಿಚಾರವನ್ನು ತಮ್ಮ ಚಟು ಶೈಲಿಯಲ್ಲಿ ಈ ರೀತಿ ಮನ ಹೊಗುವಂತೆ ಹೇಳುತ್ತಾರೆ : "ನಮ್ಮೆಲ್ಲರ ವಿರುದ್ಧವಾಗಿ, ತನಗೆ

---

[1] *New York Times*, Dec. 6, 1935.

[2] G. D. H. Cole, *Principles of Economic Planning*, p. 222. Macmillan and Company, Ltd., London, 1935.

ಅನುಕೂಲವಾಗಿ, ತೀರ್ಮಾನ ಕೈಕೊಳ್ಳುವ ಸ್ವಾತಂತ್ರ ಹೊಂದಿರುವ ಸಲುವಾಗಿ ಕೈಗಾರಿಕೆಯ ಮೇಲೆ ಸಮಾಜ ವಿರುದ್ಧವಾದ ಹತೋಟಿ ಹೊಂದಿ ಸುರಕ್ಷಿತವಾಗಿರಬೇಕೆಂಬ ಕಾರಣದಿಂದ, ಈ ಮಹಾ ಒಡೆತನ ಸಮಾಜದ ಮೇಲೆ ತಾನು ಹೊಂದಿರುವ ಹತೋಟಿಯ ಬಗ್ಗೆ ಯಾವ ಸಂಧಾನಕ್ಕೂ ಎಡೆ ಕೊಡಲೊಲ್ಲದು. ವೇರ್, ಟೀಗ್ಲ್, ಸ್ಲೋನ್ ಮುಂತಾದ ಹಿರಿಯ ಸಂಸ್ಥೆಗಳು 'ಸಾಮಾಜಿಕ ಯೋಜನೆ'ಯ ಎಲ್ಲ ಯತ್ನಗಳನ್ನೂ ತಬ್ಬಿಬ್ಬುಗೊಳಿಸಿ ಹಾನಿಗೊಳಿಸಬೇಕೆಂಬುದನ್ನು ಅರಿತಿವೆ. ಅವಕ್ಕೆ ಎಷ್ಟೇ ಸಾಮಾಜಿಕ ಒರಟುತನ ಹಾಗೂ ಆರ್ಥಿಕ ಅಜ್ಞಾನವಿದ್ದರೂ ಕೂಡ, ಅಧಿಕೃತ ಸಾಮಾಜಿಕ ಯೋಜನೆಯೆಂದರೆ ಸಾಮಾಜಿಕ ಅಭಿವೃದ್ಧಿ, ಅದು ಬಂಡವಾಳವಾದಿ ಪುನಶ್ಚೇತನವಲ್ಲ—ಎಂಬುದನ್ನು ಅವು ಅರಿಯಬಲ್ಲುವು. ಅವುಗಳ ಅರಿವು ಸರಿ."[1]

ರಾಷ್ಟ್ರೀಯ ಯೋಜನೆಯನ್ನು ಬಂಡವಾಳಿಗರು ವಿರೋಧಿಸಲು ಬಹುಶಃ ಇನ್ನೂ ಒಂದು ಕಾರಣವಿದೆ. ವರಮಾನದ ಹಂಚಿಕೆಯೇ ಈ ಯೋಜನೆಯಲ್ಲಿ ಬಹು ಮುಖ್ಯವಾಗುತ್ತದೆ. ಬಂಡವಾಳವಾದಿ ಸಿದ್ಧಾಂತದಲ್ಲಿ ವರಮಾನದ ಹಂಚಿಕೆಗೆ 'ಸಹಜ ನಿಯಮ'ದ ಪರಿಣಾಮವೆಂಬ ಕಾರಣದಿಂದ ಒಪ್ಪಿಗೆಯ ಮುದ್ರೆ ದೊರಕಿತ್ತು. ಇದು ಅಸಮವೆಂಬ ಪ್ರಶ್ನೆಯೇ ಇರಲಿಲ್ಲ. ಪ್ರೊ|| ಜಾನ್ ಬೇಟ್ಸ್ ಕ್ಲಾರ್ಕ್ ಎಂಬ ಪ್ರಮುಖ ಅಮೆರಿಕನ್ ಅರ್ಥಶಾಸ್ತ್ರಜ್ಞ ಈ ವಿಚಾರವನ್ನು ಸಮರ್ಥಿಸುತ್ತಾರೆ. ತಮ್ಮ ಪ್ರಸಿದ್ಧ ಗ್ರಂಥವಾದ 'ಸಂಪತ್ತಿನ ಹಂಚಿಕೆ' ಎಂಬುದರ ಮುನ್ನುಡಿಯಲ್ಲಿ ಇವರು ಹೀಗೆ ಬರೆಯುತ್ತಾರೆ. "ಸಮಾಜದ ವರಮಾನದ ಹಂಚಿಕೆಯನ್ನೂ ನಿಯಂತ್ರಿಸುವ ಸಹಜ ನಿಯಮವೊಂದಿದೆ. ಈ ನಿಯಮವನ್ನು ಘರ್ಷಣೆಯಿಲ್ಲದೆ ನಡೆಯಗೊಡಬೇಕು. ಹಾಗೆ ಮಾಡಿದ್ದೇ ಆದರೆ ಉತ್ಪಾದನೆಯ ಪ್ರತಿಯೊಂದು ಅಂಶಕ್ಕೂ ಆ ಅಂಶ ಎಷ್ಟು ಸಂಪತ್ತನ್ನು ಸೃಷ್ಟಿಸುತ್ತದೆಯೋ ಅಷ್ಟನ್ನು ದೊರಕಿಸುವುದು ಸಾಧ್ಯವಾದೀತು. ಈ ವಿಚಾರವನ್ನು ಸಿದ್ಧಪಡಿಸಿ ತೋರಿಸುವುದು ಈ ಪುಸ್ತಕದ ಉದ್ದೇಶ.

"ದುಡಿಮೆ ಎಷ್ಟನ್ನು ಸೃಷ್ಟಿಸುತ್ತದೋ ಅಷ್ಟನ್ನು ದುಡಿಮೆಗೂ, ಬಂಡವಾಳ ಎಷ್ಟನ್ನು ಸೃಷ್ಟಿಸುತ್ತದೋ ಅಷ್ಟನ್ನು ಬಂಡವಾಳಕ್ಕೂ, ಸಂಘಟನ ಕ್ರಿಯೆಯಿಂದ ಎಷ್ಟು ಸೃಷ್ಟಿಯಾಗುವುದೋ ಅಷ್ಟನ್ನು ಸಂಘಟನೆಗೂ ಸಹಜವಾಗಿ ದೊರಕಿಸುವ ಪ್ರವೃತ್ತಿ ನಿರುಪಾಧಿಕ ಮೇಲಾಟಕ್ಕಿದೆ....ಪ್ರತಿ ಅಂಶಕ್ಕೂ ಉತ್ಪಾದನೆಯಲ್ಲಿ ಒಂದು ಮುಖ್ಯ ಪಾತ್ರ, ಪ್ರತಿಯೊಂದಕ್ಕೂ ಅದದರ ಶ್ರಮಕ್ಕೆ ತಕ್ಕ ಫಲ—ಇದು ಹಂಚಿಕೆಯ ಸಹಜ ನಿಯಮ."

ವರಮಾನದ ಹಂಚಿಕೆ ಬಹು ಅಸಮಂಜಸ, ಅನ್ಯಾಯ—ಎಂಬ ಅಪವಾದವನ್ನು ಎದುರಿಸಬೇಕಾಗಿ ಬಂದ ಬಂಡವಾಳಿಗರು ಭುಜ ಕುಲುಕಿಸಿ, "ನಮ್ಮನ್ನು ದೂಷಿಸಿ ಏನು ಫಲ? ಪ್ರತಿಯೊಬ್ಬನೂ ಅವನು ಸಂಪಾದಿಸಿದ್ದನ್ನು ಪಡೆಯುತ್ತಾನೆ. ಇದು ಸಹಜ ನಿಯಮ," ಎನ್ನಬಹುದಿತ್ತು. ಆದರೆ ರಾಷ್ಟ್ರೀಯ ಯೋಜನಾಬದ್ಧ ಸಮಾಜದಲ್ಲಿ ವರಮಾನದ ಹಂಚಿಕೆಯ ಪ್ರಶ್ನೆಯನ್ನು ಇಷ್ಟು ಸುಲಭವಾಗಿ ತಳ್ಳಿಹಾಕುವುದಿಲ್ಲ. ಅದೊಂದು ಜ್ವಲಂತ ಪ್ರಶ್ನೆ. ವ್ಯಕ್ತಿ ಸಂಬಂಧವಿಲ್ಲದ ಶಕ್ತಿಗಳು ಇವನ್ನು ನಿರ್ಧರಿಸುವುದಿಲ್ಲ. ಕೇಂದ್ರ

[1] Stolberg and Vinton, *op. cit.*, pp. 20, 21.

ಸಂಘಟನ ಸಂಸ್ಥೆಯ ಮುಖ್ಯ ಕಾರ್ಯವಿದು. ಪ್ರಜಾಸತ್ತಾತ್ಮಕ ದೇಶಗಳಲ್ಲಿ ಈ ಸಂಸ್ಥೆಯ ಮೇಲೆ ಜನಜಂಗುಳಿಯ ಮನೋಭಾವಗಳು ಪ್ರಭಾವ ಬೀರುತ್ತವೆ. ಆದ್ದರಿಂದ ಇಂದು ಹಂಚಿಕೆಯಾಗುತ್ತಿರುವ ವರಮಾನಗಳ ಅಂತರ ತಕ್ಕಮಟ್ಟಿಗೆ ಕಡಿಮೆಯಾಗುವುದರಲ್ಲಿ ಸಂಶಯವಿಲ್ಲ. ಜನಜಂಗುಳಿಯ ಹೆಚ್ಚು ವರಮಾನ; ಬಂಡವಾಳಿಗರಿಗೆ ಕಡಮೆ ವರಮಾನ —ಇದು ಯೋಜನೆಯ ಆಶಯ.

ಇಂಥ ಎಲ್ಲ ಅಭಿವೃದ್ಧಿ ಕಾರ್ಯಗಳ ವಿರೋಧದ ನಾಯಕರು ಬಂಡವಾಳಿಗರಾಗಿರುವುದು ಈ ಕಾರಣಗಳಿಂದ. ಇದರಲ್ಲಿ ಆಶ್ಚರ್ಯವಿಲ್ಲ.

ಆದರೂ ಕೆಲವು ದೇಶಗಳಲ್ಲಿ ಇವರು ತಮ್ಮ ಹಿತವನ್ನೂ ಕೂಡ ತಾವೇ ಸಾಧಿಸಿಕೊಳ್ಳಲಾರರು. ಆರ್ಥಿಕ ಜೀವನದ ಕುಸಿತ ಎಷ್ಟು ವ್ಯಾಪಕವಾದದ್ದೂ, ಕಾರ್ಮಿಕವರ್ಗದ ಮುನ್ನಡೆ ಎಷ್ಟು ಎದೆ ನಡುಗಿಸುವಂಥದೂ ಆಗುವುದೆಂದರೆ, ಬಂಡವಾಳಿಗರು ಒಂದು ಕೇಂದ್ರ ಸಂಘಟನ ವ್ಯವಸ್ಥೆಯ ಅಗತ್ಯವನ್ನು ಕಂಡುಕೊಳ್ಳುವರು. ಆದರೆ ಇದು ತಮ್ಮ ವ್ಯವಸ್ಥೆಯಾಗಬೇಕು; ತಮ್ಮ ಹಿತಗಳಿಗಾಗಿ ಕೆಲಸಮಾಡಬೇಕು—ಇದನ್ನು ಅವರು ನೋಡಿಕೊಳ್ಳುವರು. ಕಾರ್ಮಿಕ ವರ್ಗದ ಹೋರಾಟ ಶಕ್ತಿಗಳ ದಮನದಿಂದ ಇದು ಸಾಧ್ಯ. ಆದ್ದರಿಂದ ಬಂಡವಾಳಿಗರು ಫ್ಯಾಸಿಸಮ್ಮಿನ ಮಾರ್ಗವನ್ನು—ಸರ್ವಾಧಿಕಾರ ಮಾರ್ಗವನ್ನು—ಅನುಸರಿಸುವರು.

ರಷ್ಯದಲ್ಲಿ ಕಾರ್ಮಿಕವರ್ಗದ ಕ್ರಾಂತಿ ಯಶಸ್ವಿಯಾಗಿತ್ತು. ಆದರೆ ವಿನಾಶಕಾರಿ ಜಾಗತಿಕ ಯುದ್ಧದ ಫಲವಾಗಿ ಸಂಭವಿಸಿದ ಭ್ರಮ ನಿರಸನ, ಉಪವಾಸ, ಸಂಕಟ ಇವುಗಳಿಂದ ಹಲವು ಹೊಸ ಕೆಲಸಗಾರರು ಎಲ್ಲೆಲ್ಲೂ ಕ್ರಾಂತಿಕಾರಿ ಮನೋಭಾವ ಹೊಂದಿದವರ ಗುಂಪಿಗೆ ಸೇರಿದರು. ತಮ್ಮ ಸ್ಥಿತಿ ಉತ್ತಮಗೊಳ್ಳುವ ಅವಕಾಶ ಶೀಘ್ರವಾಗಿ ಕರಗಿಹೋಗುತ್ತಿದ್ದುದರಿಂದ, ಮಧ್ಯಮ ವರ್ಗದ ಜನರೂ ಕೂಡ ಅತೃಪ್ತಿಹೊಂದಿದರು. ಜಾರಿಯಲ್ಲಿದ್ದ ವ್ಯವಸ್ಥೆ ಉರುಳದಿದ್ದರೂ, ಅದು ಅಲುಗಾಡುತ್ತಿದ್ದದ್ದಂತೂ ನಿಜ.

ಇಟಲಿ ಜರ್ಮನಿಗಳಲ್ಲಿ ಇದು ಮುಖ್ಯವಾಗಿ ನಿಜವಾಗಿತ್ತು. ಈ ದೇಶಗಳ ಬಂಡವಾಳಿಗರ ಅಧಿಕಾರ ಕಿತ್ತುಕೊಳ್ಳುವ ಬೆದರಿಕೆ ಹಾಕುತ್ತಿದ್ದ ಕ್ರಾಂತಿಕಾರಿ ಕಾರ್ಮಿಕವರ್ಗವನ್ನು ಇವರು ಎದುರಿಸಬೇಕಾಗಿತ್ತು. ಆದ್ದರಿಂದ—ಬರಲಿದ್ದ ಸಹಾಯಗಳಿಗಾಗಿ ಮುಸ್ಸೋಲಿನಿಯ ಕಪ್ಪು ಷರ್ಟಿಗರಿಗೂ, ಹಿಟ್ಲರನ ಕಂದು ಷರ್ಟಿಗರಿಗೂ ಹಣವನ್ನೂ ಸಹಾಯವನ್ನೂ ನೀಡಿದರು. ಸಂಘಟಿತ ಕಾರ್ಮಿಕವರ್ಗ ಚಳವಳಿಯ ದಮನವೇ ಇವರು ಪ್ರತಿಯಾಗಿ ಬಯಸಿದ ದೊಡ್ಡ ಸಹಾಯ. ಈ ಇಬ್ಬರು ನಾಯಕರೂ ನಿರೀಕ್ಷೆಯಂತೆ ನಡೆದರು. ಹೀಗೆ, ಇಟಲಿಗೆ ಬಂದ ಫ್ಯಾಸಿಸ್ಟ್ ವ್ಯವಸ್ಥೆಯೂ, ಜರ್ಮನಿಗೆ ಬಂದ ರಾಷ್ಟ್ರೀಯ ಸಮಾಜವಾದವೂ ಕ್ರಾಂತಿ ವಿರೋಧ ಚಳವಳಿಗಳಾಗಿದ್ದುವು. ತತ್ಫಲವಾಗಿ, ಹಳೆಯ ವ್ಯವಸ್ಥೆ—ಬಂಡವಾಳದ ಅಧಿಕಾರ ಹಾಗೂ ಹಕ್ಕು—ಸುರಕ್ಷಿತವಾಯಿತು.

ಈ ಕೆಲಸ ಸುಲಭವಾಗಿರಲಿಲ್ಲ. ಸಮಾಜವಾದಿ ಧ್ಯೇಯ ಹೊಂದಿದ್ದ ಜನಜಂಗುಳಿಯನ್ನು ತಪ್ಪು ಹಾದಿಗೆ ಒಯ್ಯುವ ಪ್ರಚಾರ ಕಾರ್ಯವನ್ನು ಬಹು ಉಪಾಯದಿಂದ ನಡಸಬೇಕಾ

ಗಿತ್ತು. ಅದು ಹಾಗೇ ನಡೆಯಿತು. ರಾಷ್ಟ್ರೀಯ ಸಮಾಜವಾದಿ ಜರ್ಮನ್ ಕಾರ್ಮಿಕ ಪಕ್ಷದ ಧೋರಣೆಯಲ್ಲಿ, ಅತೃಪ್ತ ಜನರನ್ನು ಆಕರ್ಷಿಸಲು ಸಮಾಜವಾದಿ ಹಿಡಿನುಡಿಗಳನ್ನೇ (Catchwords) ಬಳಸಿತ್ತು. ಇಪ್ಪತ್ತೈದು ಅಂಶಗಳ ಪ್ರಸಿದ್ಧ ನಾಜಿ ಕಾರ್ಯಕ್ರಮದಲ್ಲಿ ಮೂರನ್ನು ಉದಾಹರಣೆಗಾಗಿ ಇಲ್ಲಿ ಕೊಟ್ಟಿದೆ:

"ಅಂಶ ೧೧. ದುಡಿಮೆಯಿಂದ ಸಂಪಾದಿಸದ ವರಮಾನ ರದ್ದು.

"ಅಂಶ ೧೨. ಎಲ್ಲ ಯುದ್ಧ ಲಾಭಗಳೂ ನಿರ್ದಾಕ್ಷಿಣ್ಯವಾಗಿ ಮುಟ್ಟುಗೋಲಾಗಬೇಕು.

"ಅಂಶ ೧೩. ಇದುವರೆಗೂ ಕಂಪೆನಿಗಳಾಗಿ (ಟ್ರಸ್ಟುಗಳಾಗಿ) ಕೆಲಸ ಮಾಡುತ್ತಿದ್ದ ಎಲ್ಲ ವ್ಯವಹಾರಗಳೂ ರಾಷ್ಟ್ರೀಕರಣವಾಗಬೇಕೆಂಬುದು ನಮ್ಮ ಕೇಳಿಕೆ."[1]

ಇದು ವಾಗ್ದಾನ. ಇದು ಆಚರಣೆಗೆ ಬಂತೆ? ಲಂಡನ್ನಿನ 'ಇಕಾನಮಿಸ್ಟ್' ಪತ್ರಿಕೆಯ ಬರ್ಲಿನ್ ವರದಿಗಾರ ೧೯೩೬ರ ಫೆಬ್ರುವರಿ ಒಂದರಂದು ಹೀಗೆ ಉತ್ತರಿಸಿದ: "ಪಕ್ಷದ ಕಾರ್ಯಕ್ರಮದ ಬಗ್ಗೆ ನೈಪುಣ್ಯ ಪೂರ್ಣ ಜಡತೆಯ—ಕಾರ್ಯಾಭಾವದ—ಧೋರಣೆಯ ಫಲವಾಗಿ ಕಳೆದ ವರ್ಷದ ಶಾಂತಿ ಸಾಧ್ಯವಾಯಿತು. ಈ ಕಾರ್ಯಕ್ರಮವನ್ನು ತೀವ್ರವಾಗಿ ಜಾರಿಗೆ ತಂದಿದ್ದರೆ ಹಲವು ಹಿತಾಸಕ್ತಿಗಳ ನಡುವೆ ಅಪಾಯಕರ ಘರ್ಷಣೆಗಳು ಸಂಭವಿಸುತ್ತಿದ್ದುವು....ಸಮಾಜವಾದ—ಬಂಡವಾಳವಾದಗಳ ನಡುವಣ ವಿವಾದದ ಫಲವಾಗಿ ಒಮ್ಮೆ ಪಕ್ಷಕ್ಕೆ ಹಲವು ದಲಿತರು ಸೇರಿದ್ದರು. ಆದರೆ ಈಗ ಈ ವಿವಾದ ಕೇವಲ ಹಿಡಿನುಡಿಗಳ ಪರಸ್ಪರ ವಿನಿಮಯವಾಗಿ ಪರಿಣಮಿಸಿದೆ. ಸಮಾಜವಾದ ಬರಲಿದೆ—ಎಂಬ ಭರವಸೆ ಒಂದು ಕಡೆ. (ಬಂಡವಾಳ ವ್ಯವಸ್ಥೆ ಹೋಗಿ ಸಮಾಜವಾದ ಸ್ಥಾಪಿತವಾಗಿದೆಯೆಂದೇ ಈ ವಾರ ಅಧಿಕೃತವಾಗಿ ಹೇಳಲಾಗಿದೆ.) ಭೂಮಿ ಕೈಗಾರಿಕೆಗಳಲ್ಲಿ ಖಾಸಗಿ ಬಂಡವಾಳ ಹಾಗೆಯೇ ಉಳಿಯಬೇಕಷ್ಟೇ ಅಲ್ಲ, ಅದು ಲಾಭಪ್ರದವಾಗುವಂತೆಯೂ ಮಾಡಬೇಕು—ಎಂಬ ಒತ್ತಾಯವನ್ನೂ ಹಾಕಲಾಗುತ್ತಿದೆ."[2]

ನಾಜಿ ಆಡಳಿತದ ಸಮರ್ಥನೆ ಮಾಡುವವರು, ಈ ಪಕ್ಷದ ಕಾರ್ಯಕ್ರಮ ಜಾರಿಗೆ ತರಲು ಮೂರು ವರ್ಷ ತೀರ ಅಲ್ಪ ಅವಧಿ ಎನ್ನಬಹುದು. ಇದು ಸಮಂಜಸ ವಾದ. ಆದರೆ ಅದು ಯಾವ ದಿಕ್ಕಿನಲ್ಲಿ ಜಾರುತ್ತಿದೆಯೆಂಬುದು ಸ್ವಯಂಸ್ಪಷ್ಟ. ಕಾರ್ಮಿಕ ಸಂಘಗಳನ್ನು ಮುರಿಯಲು, ಅವುಗಳ ನಿಧಿ ಕಸಿದುಕೊಳ್ಳಲು, ಅವುಗಳ ನಾಯಕರನ್ನು ಜೈಲಿಗೆ ಎಸೆಯಲು, ನಾಜಿಗಳಿಗೆ ಮೂರು ವರ್ಷ ಸಾಕಾಗಿತ್ತು. ಕೂಲಿ ಇಳಿಸಲು, ಸಮಾಜ ಸೌಲಭ್ಯ ಕಾರ್ಯ ಕಡಮೆಮಾಡಲು—ಒಟ್ಟಿನಲ್ಲಿ ಬೃಹತ್ ಉದ್ಯಮದ ಇಚ್ಛೆಗೆ ಅನುಗುಣವಾಗಿ ರಾಷ್ಟ್ರೀಯ ವರಮಾನ ಹಂಚಲು ನಾಜಿಗಳಿಗೆ ಇದು ಸಾಕಷ್ಟು ಕಾಲವಾಗಿತ್ತು.

ಇಟಲಿಯಿಂದಲೂ ಇದೇ ಕತೆ. ಫ್ಯಾಸಿಸಮ್ಮಿನ ಹಿರಿಮೆಯನ್ನು ಮುಸೋಲಿನಿ ಹೀಗೆ

---

[1] G. Feder, *The Programme of the N.S.D.A.P. and Its General Conceptions*, p. 19. Translated by E. T. S. Dugdale, Munich, 1932.

[2] *The Economist*, February 1, 1936.

ಸಾರಿದ: "ಈ ಅರ್ಥವ್ಯವಸ್ಥೆಯಲ್ಲಿ ಕಾರ್ಮಿಕರೂ ಬಂಡವಾಳದೊಡನೆ ಸಮಭಾಗಿಗಳಾಗ ಬೇಕು—ಸಮಾನ ಹಕ್ಕು ಸಮಾನ ಕರ್ತವ್ಯ ಪಡೆಯಬೇಕು."[1]

ಇದು ಮಾತಿನ ಮಂಟಪ. ಆದರೆ ವಾಸ್ತವ ಸ್ಥಿತಿ ಹೇಗಿತ್ತು? ಜಾನ್ ಗಂಥರರ 'ಯೂರೋಪಿನ ಅಂತರಂಗ' ಎಂಬ ಪುಸ್ತಕದಲ್ಲಿ ಈ ಪ್ರಶ್ನೆಗೆ ಉತ್ತರ ದೊರಕುತ್ತದೆ. "ಈ ರಾಜ್ಯದಲ್ಲಿ ಬಂಡವಾಳದ ವಿರುದ್ಧ ಪ್ರವೃತ್ತಿಗಳ ದೊಡ್ಡ ಪಟ್ಟಿಯನ್ನೇ ತಯಾರಿಸಬಹುದು —ತೋರಿಕೆಗೆ ಮಾತ್ರ. ಸರ್ಕಾರದ ಒಪ್ಪಿಗೆಯಿಲ್ಲದೆ ಯಾವ ಯಜಮಾನನೂ ಕಾರ್ಮಿಕ ರನ್ನು ವಜಾ ಮಾಡಲಾರ. ಕಾರ್ಖಾನೆಯ ವಿಸ್ತರಣೆ ಮುಂತಾದ ಸಣ್ಣ ಪುಟ್ಟ ಸ್ವತಂತ್ರ ಕ್ರಮ ಕೈಕೊಳ್ಳಲೂ ಕೂಡ ಸರಕಾರದ ಮಂಜೂರಾತಿ ಬೇಕು....ಕಾರ್ಖಾನೆಯ ಒಡೆಯ ಸರಕಾರದ ಅನುಮತಿಯಿಲ್ಲದೆ ತನ್ನ ವ್ಯಾಪಾರ ವಿಸರ್ಜಿಸಲಾರ. ಆತನ ಉದ್ದರಿಯ ಮೂಲ ಗಳೆಲ್ಲಾ ಸರಕಾರದ ಕೈಯಲ್ಲಿ. ಆತನ ವರಮಾನದ ಬಹುದೊಡ್ಡ ಭಾಗವನ್ನು ಅದು ನಿರ್ದಾಕ್ಷಿಣ್ಯವಾಗಿ ತೆರಿಗೆಯ ರೂಪದಲ್ಲಿ ವಸೂಲು ಮಾಡುತ್ತದೆ.

"ಪ್ರತಿಯಾಗಿ, ಫ್ಯಾಸಿಸ್ಟ್ ವ್ಯವಸ್ಥೆಯಲ್ಲಿ ಕಾರ್ಮಿಕರ ತೊಂದರೆಗಳು ಬಹು ತೀವ್ರ. ಕಾರ್ಮಿಕರ ಚೌಕಾಯಿಸಿಯ ಹಕ್ಕು ಹೋಗಿದೆ. ಕಾರ್ಮಿಕ ಸಂಘಗಳು ಮುಚ್ಚಲ್ಪಟ್ಟಿವೆ. ಶಾಸನದ ಮೂಲಕ ಅವರ ಕೂಲಿಯನ್ನು ನಿರ್ದಯೆಯಿಂದ ಕಡಮೆ ಮಾಡಬಹುದು. (ಕಡಮೆ ಮಾಡಿದ್ದೂ ಉಂಟು.) ಎಲ್ಲಕ್ಕಿಂತ ಮಿಗಿಲಾಗಿ, ಅವರ ಮುಷ್ಕರದ ಹಕ್ಕು ಕಳೆದು ಹೋಗಿದೆ. ಆದರೆ ಬಂಡವಾಳಿಗನಾದರೋ, ಸ್ವಲ್ಪ ಅನನುಕೂಲಕ್ಕೆ ಗುರಿಯಾಗಿ ದ್ದರೂ ಕೂಡ, ಖಾಸಗಿ ಲಾಭ ಪಡೆಯುವ ಮೂಲಭೂತ ಹಕ್ಕನ್ನು ಉಳಿಸಿಕೊಂಡಿದ್ದಾನೆ. ಬಂಡವಾಳವಾದಿ ವ್ಯವಸ್ಥೆಯನ್ನು ಎತ್ತಿ ನಿಲ್ಲಿಸುವ **ನಿಶ್ಚಿತೋದ್ದೇಶ**ದಿಂದ ಮುಸ್ಸೋಲಿನಿ ಫ್ಯಾಸಿಸಮ್ಮನ್ನು ತರಲಿಲ್ಲ. ಆದರೆ ಅದರ ಪರಿಣಾಮ ಮಾತ್ರ ಇದೇ ಆಯಿತು. 'ದುಡಿಮೆ ಗಾರರ ಕೇಳಿಕೆಯ ವಿರುದ್ಧ ಸಂಪೂರ್ಣ ರಕ್ಷಣೆ ಪಡೆಯಲು ಬಂಡವಾಳಿಗರು ಕೊಡಲೊಪ್ಪಿದ ಬೆಲೆಯೇ' ಬಂಡವಾಳ ವ್ಯವಸ್ಥೆಯ ಚಲನೆಯ ಸ್ವಾತಂತ್ರ್ಯದ ಮೇಲೆ ಹಾಕಿದ್ದ ಪ್ರತಿ ಬಂಧಕ. ರಷ್ಯದೊಡನೆ ಹೋಲಿಸಿದರೆ, ಫ್ಯಾಸಿಸ್ಟ್ ಕ್ರಾಂತಿಯ ಬಣ್ಣ, ಬಿರುಸು—ಎಲ್ಲಾ ಪ್ರತಿಗಾಮಿಯೇ."[2]

"ಸಮಾನ ಹಕ್ಕು, ಸಮಾನ ಕರ್ತವ್ಯ" ಮುಂತಾದ ಪದ ಪುಂಜಗಳನ್ನೇ ಮುಸ್ಸೋಲಿನಿ ಒದರುತ್ತಾನೆ. ಆದರೆ ನಿಜವಾಗಿ ಏನು ನಡೆಯಿತೆಂಬುದರ ಬಗ್ಗೆ ಗಂಥರ್ ಕೊಟ್ಟಿರುವ ಚಿತ್ರ ಇವಕ್ಕಿಂತ ಸಂಪೂರ್ಣ ಭಿನ್ನ. ಬಂಡವಾಳಿಗರಿಗೆ ಕೆಲವು ಅನುಕೂಲಗಳು ತಪ್ಪಿದು ವಾದರೂ, ಖಾಸಗಿ ಲಾಭ ಸಂಪಾದನೆಯ ಮುಖ್ಯ ಹಕ್ಕು ಉಳಿದುಕೊಂಡೇ ಬಂತು. ಆದರೆ ಕಾರ್ಮಿಕರ ಕತೆ ಬೇರೆ. ಕಾರ್ಮಿಕ ಸಂಘಗಳು ಮುಚ್ಚಿದುವು. ಮುಷ್ಕರ ಸ್ವಾತಂತ್ರ್ಯ ಹೋಯಿತು. ಕೂಲಿ ಇಳಿಯಿತು.

ಇಷ್ಟಾದರೂ, ಇಟಲಿ ಜರ್ಮನಿಗಳೆರಡರಲ್ಲೂ ಬಂಡವಾಳ-ಕಾರ್ಮಿಕರ ವರ್ಗಗಳೆರಡರ

---

[1] *New York Times*, March 24, 1936.

[2] John Gunther, *Inside Europe*, Harper & Brothers, 1936, p. 189.

ಮೇಲೂ ಬಲವತ್ತರ ಪರಿಣಾಮ ಆಗುತ್ತಿದೆ. ಈ ಎರಡು ರಾಷ್ಟ್ರಗಳಲ್ಲೂ ಸರಕಾರ ಅಸಾಧಾರಣ ರೀತಿಯಲ್ಲಿ ಬಂಡವಾಳಿಗರ ಮೇಲೆ ಅಧಿಕಾರ ಚಲಾಯಿಸುತ್ತಿದೆ. ಖಾಸಗಿ ಆಸ್ತಿಯ ವಿಸರ್ಜನೆಯಾಗಿಲ್ಲ, ನಿಜ. ಲಾಭವೇ ಕೈಗಾರಿಕೆಯನ್ನು ನಡಸುವ ಉದ್ದೇಶವಾಗಿ ಉಳಿದುಕೊಂಡು ಬಂದಿದೆ. ಆದರೆ, ಒಂದು ರೀತಿಯಲ್ಲಿ, ವೈಯಕ್ತಿಕ ಬಂಡವಾಳಿಗರ ರೆಕ್ಕೆ ಕತ್ತರಿಸಲ್ಪಡುತ್ತಿದೆ. ಬಂಡವಾಳಿಗರ ಹಕ್ಕುಗಳನ್ನು ನಿರ್ಬಂಧಿಸುತ್ತಿರುವುದರ ಉದ್ದೇಶ ವಾದರೂ ಏನು? ವ್ಯವಸಾಯಕ್ಕೆ ನೆರವು, ಸ್ವಸಂಪೂರ್ಣತೆಯ ಚಳವಳಿ, ಆಯಾತದ ಕಟು ನಿಯಂತ್ರಣ, ನಿರ್ಯಾತಕ್ಕೆ ಸಹಾಯ ದ್ರವ್ಯ, ಸರಕಾರದಿಂದ ಬ್ಯಾಂಕುಗಳ ಸಂಪತ್ತಿನ ವಶೀಕರಣ—ಹೀಗೆ ಫ್ಯಾಸಿಸ್ಟ್ ದೇಶಗಳೆರಡರಲ್ಲೂ ನಡೆಯುತ್ತಿರುವ ಈ ಎಲ್ಲ ಚಟುವಟಿಕೆಗಳ ಹಿಂದಣ ಉದ್ದೇಶವಾದರೂ ಏನು? ಈ ಪ್ರಶ್ನೆಗೆ ಉತ್ತರ ಮೊಟಕು, ಆದರೆ ಭಯಂಕರ—**ಯುದ್ಧ**.

ಪುನಶ್ಶಸ್ತ್ರೀಕರಣ, ಯುದ್ಧ ಸಿದ್ಧತೆ—ಇದೇ ಸರಕಾರದ ಉದ್ವೇಗ ಪೂರ್ಣ ಚಟುವಟಿಕೆಗಳ ಹಿಂದಣ ಪ್ರೇರಕಶಕ್ತಿ. ಇದು ಸರ್ವಜನ ವಿದಿತ. ಈ ಫ್ಯಾಸಿಸ್ಟ್ ಸರಕಾರಗಳೆರಡೂ ಈ ಮಾತನ್ನು ನಿರಾಕರಿಸಿಲ್ಲ—ತದ್ವಿರುದ್ಧವಾಗಿ, ಅವುಗಳು ಹೀಗೆಯೆ ಬಡಾಯಿ ಕೊಚ್ಚಿಕೊಳ್ಳುತ್ತಿವೆ.

ಹಿಟ್ಲರ್ ಮುಸ್ಸೊಲಿನಿಗಳಿಬ್ಬರೂ ಯುದ್ಧಾನುರಾಗಿಗಳು. ಮುಸ್ಸೊಲಿನಿಯ ಮಾತು ಕೇಳಿ: "ಎಲ್ಲಕ್ಕಿಂತ ಮಿಗಿಲಾಗಿ, ಶಾಶ್ವತ ಶಾಂತಿ ಸಾಧ್ಯವೆಂದಾಗಲಿ, ಉಪಯುಕ್ತವೆಂದಾಗಲಿ, ಫ್ಯಾಸಿಸಮ್ಮು ನಂಬುವುದಿಲ್ಲ. ಮಾನವ ಚೇತನವನ್ನೆಲ್ಲ ಪರಮಾವಧಿಯ ಸ್ಥಿತಿಗೆ ತರುವುದು ಯುದ್ಧವೊಂದೇ. ಇದನ್ನು ಎದುರಿಸುವ ಧೀರೋದಾತ್ತರ ಕೀರ್ತಿ ಬೆಳಗುವುದು ಈ ಸಂದರ್ಭದಲ್ಲಿಯೇ. ಶಾಂತಿಯ ಅಪಾಯಕರ ನಂಬಿಕೆಯ ಮೇಲೆ ರೂಪಿತವಾದ ಸಿದ್ಧಾಂತವನ್ನು ಫ್ಯಾಸಿಸಮ್ಮು ವಿರೋಧಿಸುತ್ತದೆ."[1]

ಆದರೆ ಇದೆಲ್ಲ ಬರೀ ಮಾತು. ಈ ಮೂಲಗಳಿಂದ ಬರುವ ಮಾತು ನಂಬಿಕೆಗೆ ಅರ್ಹವಲ್ಲವೆಂಬುದನ್ನು ನಾವು ಅರಿತಿದ್ದೇವೆ. ಆದರೆ ವಾಸ್ತವವಾಗಿ ನಡೆದಿರುವುದೇನು?

ಮೇಲೆ ಹೇಳಿದ ಮಾತನ್ನು ಮುಸ್ಸೊಲಿನಿ ಬರೆದದ್ದು ೧೯೩೩ ರಲ್ಲಿ. ೧೯೩೫-೩೬ ರಲ್ಲಿ ಫ್ಯಾಸಿಸ್ಟ್ ಸೈನ್ಯ ಎಥಿಯೋಪಿಯವನ್ನು ಆಕ್ರಮಿಸಿತು. ಮಾಡಿದ್ದ ಪ್ರತಿಜ್ಞೆ ಫಲ ಕೊಟ್ಟಿತು.

ಇದೇ ವಿಚಾರವಾಗಿ ಹಿಟ್ಲರ್ ಉವಾಚ: "ಶಾಶ್ವತ ಯುದ್ಧದಲ್ಲಿ ಮಾನವಕುಲ ಹಿರಿಮೆಯ ಕಲಶವನ್ನೇ ಏರಿದೆ—ಶಾಶ್ವತ ಶಾಂತಿಯಲ್ಲಿ ಮಾನವಕುಲ ನಾಶ ಹೊಂದೀತು."[2]

ಈ ಪುಸ್ತಕ ಬರೆಯುತ್ತಿದ್ದ ಕಾಲಕ್ಕೆ, ನಾಜಿ ಸೇನೆ ಇನ್ನೂ ಜೈತ್ರಯಾತ್ರೆ ಆರಂಭಿಸಿಲ್ಲ. ಆದರೆ ಅನತಿಕಾಲದಲ್ಲೇ ಇದು ಆರಂಭವಾದೀತೆಂಬುದರಲ್ಲಿ ಯಾರಿಗೂ ಸಂಶಯವಿಲ್ಲ.

---

[1] Benito Mussolini, *The Political and Social Doctrine of Fascism. Political Quarterly* (London), July-September, 1933, pp. 344, 345.

[2] Adolf Hitler, *Mein Kampf*, p. 149. Verlag Franz Eber Nachfolger, München 2 No. 1930 (VI Auflage).

ಪುನಶ್ಶಸ್ತ್ರೀಕರಣದ ನಿಟ್ಟಿನಲ್ಲಿ, ಅದರ ಹಿಂದೆಯೇ ಬರಲಿರುವ ಯುದ್ಧಕ್ಕಾಗಿ, ಎಲ್ಲ ಬಲವನ್ನೂ ವಿನಿಯೋಗಿಸುತ್ತಿದೆ; ಏನೆಲ್ಲ ತ್ಯಾಗ ಮಾಡುತ್ತಿದೆ; ದುಃಖ ಅನುಭವಿಸುತ್ತಿದೆ; ಶತ ಪ್ರಯತ್ನ ನಡಸುತ್ತಿದೆ—ಇದೆಲ್ಲದರ ಭೀಕರ ಚಿತ್ರ ಜರ್ಮನಿ. ೧೯೩೬ ರ ಮಾರ್ಚಿ ೨೨ ರಂದು 'ನ್ಯೂಯಾರ್ಕ್ ಟೈಮ್ಸ್' ಪತ್ರಿಕೆಯ ವರದಿಗಾರ ಇದನ್ನೆಲ್ಲ ಸಂಗ್ರಹವಾಗಿ ಹೀಗೆ ಹೇಳಿದ: ಪುನಶ್ಶಸ್ತ್ರೀಕರಣಕ್ಕೆ ಹಣ ಒದಗಿಸುವುದು ಹೇಗೆ?—ಎಂಬ ಪ್ರಶ್ನೆಯ ಸುತ್ತ ಜರ್ಮನಿಯ ಆರ್ಥಿಕ ಪರಿಸ್ಥಿತಿ ಮುಖ್ಯವಾಗಿ ಬಳಸು ಹಾಕುತ್ತಿದೆ," ಎಂದು ಬರೆದ.[1]

ಫ್ಯಾಸಿಸಮ್ ಎಂದರೆ ಯುದ್ಧ.

ಈ ಎರಡು ದೇಶಗಳ ನಾಯಕರೂ ಯುದ್ಧ ಮಾಡುವ ಇಚ್ಛೆ ಹೊಂದಿರುವರೆಂಬ ಕಾರಣಕ್ಕಾಗಿಯೇ ಯುದ್ಧವಲ್ಲ. ಫ್ಯಾಸಿಸ್ಟ್ ಅರ್ಥವ್ಯವಸ್ಥೆ ಎಂದರೆ ಬಂಡವಾಳದ ಅರ್ಥವ್ಯವಸ್ಥೆ—ಎಂಬ ಕಾರಣದಿಂದ ಯುದ್ಧ. ಬಂಡವಾಳ ವ್ಯವಸ್ಥೆಯ ಸಾಮ್ರಾಜ್ಯ ಯುಗದಲ್ಲಿ ಏನಿತ್ತೋ ಅದೆಲ್ಲಾ ಈಗಲೂ ಉಂಟು. ವಿಸ್ತರಣ, ಆಕ್ರಮಣ, ಪೇಟೆಯ ಹಾಹಾಕಾರ—ಎಲ್ಲಾ ಉಂಟು. ಆದ್ದರಿಂದಲೇ ಯುದ್ಧ.

ಬಂಡವಾಳ ವ್ಯವಸ್ಥೆ ಮುರಿದುಬಿದ್ದು, ಕಾರ್ಮಿಕವರ್ಗ ಅಧಿಕಾರದತ್ತ ನುಗ್ಗಿದಾಗ, ಬಂಡವಾಳಿಗರು ಹುಡುಕಿದ ಉಪಾಯ ಫ್ಯಾಸಿಸಮ್. ಆದರೆ ಫ್ಯಾಸಿಸಮ್ಮು ಅವರ ಸಮಸ್ಯೆಯನ್ನು ಪರಿಹರಿಸಲಾರದು. ಏಕೆಂದರೆ, ಆರ್ಥಿಕ ದೃಷ್ಟಿಯಿಂದ ನೋಡಿದ್ದಾದರೆ, ಮುಖ್ಯವಾದ ಬದಲಾವಣೆಗಳೇನೂ ಇದರಿಂದ ಸಂಭವಿಸುವುದಿಲ್ಲ. ಬಂಡವಾಳದ ಅರ್ಥವ್ಯವಸ್ಥೆಯಂತೆಯೇ ಫ್ಯಾಸಿಸ್ಟ್ ಅರ್ಥವ್ಯವಸ್ಥೆಯಲ್ಲೂ ಕೂಡ ಉತ್ಪಾದನ ಸಾಧನಗಳ ಖಾಸಗಿ ಒಡೆತನ ಇರುತ್ತದೆ, ಲಾಭದ ದೃಷ್ಟಿಯೂ ಇರುತ್ತದೆ; ಇವೆರಡೂ ಮೂಲಭೂತ.

ಪೂರ್ವ ಇಂಡಿಯನರು ಕೋತಿ ಹಿಡಿಯುವ ವಿಧಾನವನ್ನು ಆರ್ಥರ್ ಮಾರ್ಗನ್ ಎಂಬವರು ಬಣ್ಣಿಸಿದ್ದಾರೆ. ಇದರಿಂದ ಬಂಡವಾಳಿಗರು ಕಲಿಯಬಹುದಾದ ನೀತಿಯಿದೆಯೇನು? ಓದಿ ನೋಡಿ: "ಇದು ಕತೆ; ಅವರು ಒಂದು ತೆಂಗಿನಕಾಯಿ ತೆಗೆದುಕೊಳ್ಳುವರು. ಅದರಲ್ಲಿ ಕೋತಿಯ ಬರಿಗೈ ಹೋಗುವಷ್ಟು ಮಾತ್ರ ಅಗಲವುಳ್ಳ ರಂಧ್ರ ಮಾಡುವರು. ಅದರಲ್ಲಿ ಸ್ವಲ್ಪ ಕಲ್ಲುಸಕ್ಕರೆ ತುಂಬಿ ತೆಂಗಿನ ಕಾಯಿಯನ್ನು ಮರಕ್ಕೆ ಕಟ್ಟುವರು. ಕೋತಿ ತನ್ನ ಕೈಯನ್ನು ತೆಂಗಿನ ಬುರುಡೆಯೊಳಕ್ಕೆ ತುರುಕಿ, ಸಕ್ಕರೆಯನ್ನು ಬಾಚಿ ಹಿಡಿಯುವುದು. ಅನಂತರ ತನ್ನ ಬಿಗಿಮುಷ್ಟಿಯನ್ನು ಹೊರಗೆಳೆದುಕೊಳ್ಳಲು ಯತ್ನಿಸುವುದು. ಆದರೆ ಅದರ ಬಿಗಿಮುಷ್ಟಿ ಹೊರಗೆ ಬರುವಷ್ಟು ದೊಡ್ಡದಾಗಿರುವುದಿಲ್ಲ—ಆ ರಂಧ್ರ. ದುರಾಸೆಯಿಂದಲೇ ಅದಕ್ಕೆ ಅವಸಾನಪ್ರಾಪ್ತಿ. ಏಕೆಂದರೆ ಅದು ತಾನು ಹಿಡಿದದ್ದನ್ನು ಎಂದಿಗೂ ಬಿಡುವುದಿಲ್ಲ."[2]

[1] *New York Times*, March 22, 1936.

[2] Arthur Morgan, "Power and the New Deal," *The Forum*, March, 1935.

ಈ ಪುಸ್ತಕದ್ದು ದ್ವೈತೋದ್ದೇಶ. ಇತಿಹಾಸವನ್ನು ಆರ್ಥಿಕ ಸಿದ್ಧಾಂತದ ಮೂಲ
ಆರ್ಥಿಕ ಸಿದ್ಧಾಂತವನ್ನು ಇತಿಹಾಸದ ಮೂಲಕವೂ ವಿವರಿಸುವ ಯತ್ನವಿದು. ಈ
ಮುಖ್ಯ—ಅಲ್ಲದೆ ಅಗತ್ಯ. ಆರ್ಥಿಕ ವಿಚಾರಕ್ಕೆ ಹೆಚ್ಚು ಗಮನವನ್ನೇ ಕೊಡದಿದ್ದ
ಹಾಸದ ಬೋಧನೆ ಅಪೂರ್ಣ, ಕಳಂಕಪೂರ್ಣ. ಅರ್ಥಶಾಸ್ತ್ರವನ್ನು 'ಭೀಕರ
ಎನ್ನುವುದುಂಟು. ಅರ್ಥಶಾಸ್ತ್ರವನ್ನು ಇತಿಹಾಸದ ಗಂಧವೇ ಇಲ್ಲದ ರೀತಿಯಲ್ಲಿ
ಸಿದರೆ, ಅಭ್ಯಾಸ ಮಾಡಿದರೆ, ಇದು ಇನ್ನೂ ಭೀಕರವೆನಿಸೀತು. ರಿಕಾರ್ಡೊ
ಗೇಣಿಯ ನಿಯಮವನ್ನು ಪ್ರತ್ಯೇಕವಾಗಿ ತೆಗೆದುಕೊಂಡದ್ದೇ ಆದರೆ, ಅದು ಬಹು
ನೀರಸ. ಆದರೆ ಅದನ್ನು ಚರಿತ್ರೆಯ ಕುಂದಣದಲ್ಲಿ ಇಟ್ಟು ನೋಡಿ ; ಹತ್ತೊಂಬತ್ತ
ಶತಮಾನದ ಪೂರ್ವಭಾಗದ ಇಂಗ್ಲೆಂಡಿನಲ್ಲಿ ನೆಲದೊಡೆಯರಿಗೂ ಕೈಗಾರಿಕೆ ಧ
ರಿಗೂ ನಡೆದ ಘರ್ಷಣೆಯಲ್ಲಿನ ಒಂದು ಕದನವಿದೆಂಬುದನ್ನು ಗುರುತಿಸಿ ; ಅ
ನಿಯಮ ಬಹು ಉದ್ರೇಕಕರವೂ ಅರ್ಥಪೂರ್ಣವೂ ಎನಿಸೀತು.

ಈ ಪುಸ್ತಕ ಸಮಗ್ರವೆಂದು ಹೇಳಿಕೊಳ್ಳುವುದಿಲ್ಲ. ಇದು ಆರ್ಥಿಕ ಇತಿಹಾಸವೂ
ಅರ್ಥವಿಚಾರದ—ಅರ್ಥಚಿಂತನದ—ಇತಿಹಾಸವೂ ಅಲ್ಲ; ಇವೆರಡರ ಮಿಶ್ರಣ. ಆ
ಸಂಸ್ಥೆಗಳ ಬೆಳವಣಿಗೆಯ ಹಿನ್ನೆಲೆಯಲ್ಲಿ ಕೆಲವು ಸಿದ್ಧಾಂತಗಳು ಏಕೆ ಉದ್ಭವಿಸಿ
ಆಗಲೇ ಏಕೆ ಉದ್ಭವಿಸಿದುವು, ಸಾಮಾಜಿಕ ಜೀವನದ ಚೌಕಟ್ಟಿನಲ್ಲೇ ಅವು
ಹುಟ್ಟಿಕೊಂಡುವು, ಅವು ಹೇಗೆ ಬೆಳೆದುವು, ಪರಿವರ್ತನೆಗೊಂಡುವು, ಈ ಚೌಕ
ಸ್ವರೂಪ ಬದಲಾದಾಗ ಅವು ಹೇಗೆ ವಿಸರ್ಜಿಸಲ್ಪಟ್ಟುವು—ಎಂಬುದನ್ನು ಈ ಪು
ವಿವರಿಸಲು ಯತ್ನಿಸುತ್ತದೆ.

—ಲಿಯೋ ಹ್ಯೂಬರ್‌ಮನ್,
ಇಂಗ್ಲಿಷ್ ಮೂಲಕೃತಿಯ ಮುನ್ನುಡಿಯ